ಶ್ರೀ ಜಯಚಾಮರಾಜೇಂದ್ರಗ್ರಂಥರತ್ನಮಾಲಾ

ಪುಷ್ಪರತ್ನಸಂಖ್ಯಾ ೫-೯

# ಶ್ರೀದೇವೀಭಾಗವತಂ

## ಮಹಾಪುರಾಣಂ

(ಸಂಸ್ಕೃತಮೂಲ, ಕನ್ನಡದಲ್ಲಿ ಅರ್ಥಾನುವಾದ, ವಿವರಣೆಗಳೊಡನೆ.)

ಒಂಬತ್ತನೆಯ ಸ್ಕಂಧ

**ಭಾಗ ೨**

**ಅಧ್ಯಾಯಗಳು ೨೬—೫೦**

ಅನುವಾದಕ

ಆಸ್ಥಾನ ಮಹಾವಿದ್ವಾನ್,

ಎಡತೊರೆ ಚಂದ್ರಶೇಖರಶಾಸ್ತ್ರೀ, ಎಂ.ಎ.,

ಸಾಹಿತ್ಯವಿದ್ವಾನ್

ಮೈಸೂರು

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

೧೯೪೫

# ಮುನ್ನುಡಿ

॥ ಶ್ರೀಗಣೇಶಶಾರದಾಗುರುಭ್ಯೋ ನಮಃ ॥

ಪುರಾಣಶಬ್ದಕ್ಕೆ ಹಿಂದೆ ನಡೆದ ಸಂಗತಿ ಎಂದು ಅರ್ಥವಾಗುತ್ತದೆ. ಆದರೆ ಪುರಾಣವೆಂದು ಪ್ರಸಿದ್ಧವಾಗಿರುವ ಗ್ರಂಥಗಳೆಲ್ಲವೂ ಬಹು ಹಿಂದಿನಕಾಲದಲ್ಲಿ ಬರೆಯಲ್ಪಟ್ಟವುಗಳು ಅಥವಾ ಕ್ರೋಡೀಕರಿಸಲ್ಪಟ್ಟವುಗಳು ಎಂಬ ಅರ್ಥವನ್ನು ತಿಳಿಸುವುದಿಲ್ಲ. ಪುರಾಣಗಳೆಂದರೆ ಹದಿನೆಂಟು ಮಹಾಪುರಾಣಗಳೂ, ಹದಿನೆಂಟು ಉಪಪುರಾಣಗಳೂ, ಎಂದೂ ವ್ಯವಹಾರವಿದೆ. ಮಹಾಪುರಾಣಗಳೇ ನಾಲ್ಕು ಲಕ್ಷ ಶ್ಲೋಕಗಳನ್ನು ಒಳಗೊಂಡಿವೆ ಎಂದು ಈ ದೇವೀಭಾಗವತ (ಸ್ಕಂಧ ೧ ಅಧ್ಯಾಯ ೩)ದಲ್ಲಿಯೂ, ಸೂತಸಂಹಿತಾ ಅಧ್ಯಾಯ ೧ ರಲ್ಲೂ, ಕೂರ್ಮಪುರಾಣ ಅಧ್ಯಾಯ ೧ ರಲ್ಲೂ, ಇನ್ನೂ ಇತರ ಪುರಾಣಗಳಲ್ಲೂ ಹೇಳಿದೆ. ಈ ಪುರಾಣಗ್ರಂಥಗಳ ಪ್ರಾಚೀನತೆಯು ಅವುಗಳ ರಚನಾಕಾಲದ ಪ್ರಾಚೀನತೆಯನ್ನು ಅವಲಂಬಿಸಿಲ್ಲವು. ಮತ್ತೇನೆಂದರೆ ಭಾರತಾರ್ಯರು ತಮ್ಮ ಐಹಲೌಕಿಕವಾದ ಮತ್ತು ಪಾರಲೌಕಿಕವಾದ, ಹಾಗೆಯೇ ಆಧ್ಯಾತ್ಮಿಕವಾದ, ಯೋಗಕ್ಷೇಮಗಳ ಸಾಧನೆಗಾಗಿ ಅನಾದಿಕಾಲದಿಂದಲೂ ಅನುಸರಿಸುತ್ತಿರುವ, ಅವರ ಜೀವನಕ್ರಮವನ್ನು ಮಾರ್ಪಡಿಸಿ ಮೇಲ್ಪಡಿಸುತ್ತಾ ಬಂದಿರುವ, ಪದ್ಧತಿಗಳು, ಐತಿಹ್ಯಗಳು, ನಡೆ, ನುಡಿ, ಭಾವಗಳು ಇವೇ ಮುಂತಾದವುಗಳ ಪ್ರಾಚೀನತೆ ಮತ್ತು ಪ್ರಶಸ್ತತೆಗಳನ್ನು ಅವಲಂಬಿಸಿದೆ. ಆದುದರಿಂದ ಒಟ್ಟಿನಲ್ಲಿ ಈ ಎಲ್ಲ ಪುರಾಣಗಳೂ ಭಾರತಾರ್ಯರ ಸಂಸ್ಕೃತಿಯನ್ನು ಯಥಾವತ್ತಾಗಿ ಪ್ರತಿಬಿಂಬಿಸುತ್ತಿವೆ ಎಂಬ ಕಾರಣದಿಂದ ಇವಕ್ಕೆ ಸಾಹಿತ್ಯದಲ್ಲಿ ಒಂದು ಉತ್ತಮಸ್ಥಾನವು ದೊರೆತಿರುತ್ತದೆ. ಇವೆಲ್ಲದರ ಗ್ರಂಥಸಂಖ್ಯೆಯು ಸುಮಾರು ಆರೇಳು ಲಕ್ಷ ಶ್ಲೋಕಗಳಷ್ಟಾಗುತ್ತದೆ.

ಈ ಪುರಾಣಗಳ ಪ್ರಾರಂಭವನ್ನು ಬಹು ಹಿಂದಿನಕಾಲದಲ್ಲೂ ಕಾಣಬಹುದು. ವೇದಗಳಲ್ಲಿ ಸಂಕ್ಷೇಪವಾಗಿ ಹೇಳಿರುವ ಕಥೆಗಳನ್ನೇ ಪುರಾಣಗಳಲ್ಲಿ ಹೆಚ್ಚು ವಿಸ್ತಾರವಾಗಿಯೂ, ಕೆಲವು ಸಂದರ್ಭಗಳಲ್ಲಿ ಮೇಲಾದ ರೀತಿಯಲ್ಲಿಯೂ, ಹೇಳಿದೆ. ಅಲ್ಲದೆ ಇತರ ಕಥೆಗಳನ್ನೂ ಹೇರಳವಾಗಿ ಈ ಪುರಾಣಗಳಲ್ಲಿ ಸೇರಿಸಿ ವಿವರಿಸಲಾಗಿದೆ. ಪುರಾಣಗಳ ಈ ಬೆಳವಳಿಗೆಯಲ್ಲಿ ಗ್ರಂಥಕಾರರ, ಅಥವಾ ಈ ಎಲ್ಲ ಪುರಾಣಗಳನ್ನೂ ವ್ಯಾಸರೇ ರಚಿಸಿದರೆಂದು ಒಪ್ಪುವುದಾದರೆ, ಈ ಪುರಾಣಗಳನ್ನು ಆಗಾಗ್ಗೆ ಕಾಲಕ್ರಮದಲ್ಲಿ ಪ್ರತಿಗಳನ್ನು ಬರೆದು, ಬರೆಯಿಸಿ ಪ್ರಚಾರಮಾಡಿದವರ, ಸಂಸ್ಕೃತಿ ರುಚಿಗಳಿಗೆ ತಕ್ಕಂತೆ

ಬದಲಾವಣೆಗಳು ಸಂಭವಿಸಿವೆ. ಇದರಿಂದ ಅನೇಕ ಗ್ರಂಥಗಳನ್ನು ಹೊಸದಾಗಿ ಸೇರಿಸಲಾಗಿದೆ. ಅಷ್ಟೇ ಅಲ್ಲದೆ ಮತಾಭಿಮಾನಿಗಳು ತಮ್ಮ ಮತಕ್ಕೆ ಬೇಕಾದು ವನ್ನು ಹೊಸದಾಗಿ ಸೇರಿಸಿಯೂ, ಬೇಡವಾದುವುಗಳನ್ನು ತೆಗೆದುಹಾಕಿಯೂ, ಮಾರ್ಪಡಿಸುತ್ತಾ ಬಂದಿರುವುದೂ ಕಂಡುಬರುತ್ತದೆ. ಕಲ್ಕತ್ತಾ, ಕಾಶೀ, ಬೊಂಬಾಯಿ, ಮದ್ರಾಸು ಈ ಸ್ಥಳಗಳಲ್ಲಿ ಮುದ್ರಿತವಾಗಿರುವ, ದೇವನಾಗರೀ, ಆಂಧ್ರ, ಗ್ರಂಥಲಿಪಿ ಗಳಲ್ಲಿ ಅಚ್ಚಾಗಿರುವ, ಪ್ರತಿಗಳನ್ನು ನೋಡಿದರೆ ಅಧ್ಯಾಯಸಂಖ್ಯೆಯೂ, ಗ್ರಂಥ ಸಂಖ್ಯೆಯೂ ವ್ಯತ್ಯಾಸವನ್ನು ಹೊಂದಿರುವುದು ಕಂಡುಬರುತ್ತದೆ. ಭವಿಷ್ಯೋತ್ತರ ಪುರಾಣವೂ, ಸ್ಕಾಂದಪುರಾಣವೂ, ಕಾಲಕ್ರಮದಲ್ಲಿ ಹೆಚ್ಚಾಗಿ ಬೆಳೆದಿರುವುದು ಗೊತ್ತಾ ಗುತ್ತದೆ.

ಈ ಅಂತರಗಮಕಗಳ ಜೊತೆಗೆ ಬಾಹ್ಯಗಮಕಗಳನ್ನೂ ಕೆಲವನ್ನು ಉದಾ ಹರಿಸಬಹುದು. ಅವು ನಾನಾಬಗೆಯಾಗಿವೆ. ಅನೇಕಪುರಾಣಗಳು ಹದಿನೆಂಟು ಮಹಾಪುರಾಪುರಾಣಗಳ ಹೆಸರುಗಳನ್ನೂ, ಅವುಗಳ ಗ್ರಂಥಸಂಖ್ಯೆಯ ಪರಿಮಾಣ ಗಳನ್ನೂ ಹೇಳುತ್ತವೆ. ಆದರೆ ಇದು ಎಲ್ಲಕ್ಕೂ ಸಾಧ್ಯವಲ್ಲವು. ಪುರಾಣಗಳನ್ನೆಲ್ಲ ವನ್ನೂ ರಚಿಸಿ ಮುಗಿಸಿದ ಮೇಲೆ ಮಾತ್ರ ಇದನ್ನು ಹೇಳಲು ಸಾಧ್ಯವಾಗುತ್ತದೆ. ಅಥವಾ ಅಂತಹ ಶ್ಲೋಕಗಳು ಈಚಿನಕಾಲದಲ್ಲಿ ಪ್ರಕ್ಷಿಪ್ತವಾಗಿರಬಹುದು. ಪದ್ಮ ಪುರಾಣವನ್ನು ಸೂತನು ಹೇಳಿದಂತೆ ಇದ್ದರೂ, ಅದರ ನಾಲ್ಕನೆಯ ಸ್ಕಂಧವನ್ನು ಸೂತಪುತ್ರನು ಹೇಳಿದಂತೆ ಉಲ್ಲೇಖವಿದೆ. ಅಲ್ಲದೆ ಒಂದೇ ವಿಷಯವನ್ನು ಅನೇಕಾ ವೃತ್ತಿ ಹೇಳಿರುತ್ತದೆ. ಮಾರ್ಕಂಡೇಯ ಪುರಾಣದಲ್ಲಿ ಸೂರ್ಯನು ಮತ್ತು ಜಲಂಧರ ಇವರ ಕಥೆಗಳನ್ನು ಎರಡಾವೃತ್ತಿ ಹೇಳಿದೆ. ಕೆಲವು ಕಥೆಗಳು ಅರ್ವಾಚೀನಗಳಾಗಿರು ತ್ತವೆ. ಉದಾಹರಣೆಗಾಗಿ ಕ್ಷೇತ್ರಮಹಿಮೆಗಳನ್ನು ತಿಳಿಸುವ ಕಥೆಗಳನ್ನು ನೋಡಿದರೆ ಈ ಅಂಶವು ಗೊತ್ತಾಗುತ್ತದೆ. ಇಷ್ಟೇ ಅಲ್ಲದೆ ಕೆಲವು ಪುರಾಣಗಳಲ್ಲಿ ಭಾಷಾಶೈಲಿ ಗಳು ಭಿನ್ನವಾಗಿರುವುದು ಕಂಡುಬರುತ್ತದೆ. ಉದಾಹರಣೆಗಾಗಿ ಈ ದೇವೀಭಾಗವತ ಮಹಾಪುರಾಣದಲ್ಲಿ ಒಂಬತ್ತನೆಯ ಸ್ಕಂಧದಲ್ಲಿ ಕಾಣಬರುವ ಭಾಷಾಶೈಲಿಗಳು ಇತರ ಸ್ಕಂಧದಲ್ಲಿನ ಭಾಷಾಶೈಲಿಗಳಿಗಿಂತ ಭಿನ್ನವಾಗಿರುವುದು ಗೊತ್ತಾಗುತ್ತದೆ. ಅಲ್ಲದೆ ಇಲ್ಲಿರುವ ಉಪದೇಶಗಳಲ್ಲೂ ಭೇದವಿದೆ. ಈ ಅಂಶವನ್ನು ಈ ಸ್ಕಂಧದ ಮೊದಲ ನೆಯ ಅರ್ಧದ ಸಂಪುಟದಲ್ಲಿರುವ ಮುನ್ನುಡಿಯಲ್ಲಿ ಸೂಚಿಸಿದ್ದೇನೆ. ಈ ಭೇದವು ವಿವರಗಳಲ್ಲಿ ಕಾಣಬರುತ್ತದೆಯೇ ಹೊರತು, ದೇವಿಯ ಪರಮೋತ್ಕರ್ಷ, ಶಕ್ತಿಯ ಸರ್ವೋತ್ತಮತ್ವ ಮುಂತಾದ ಮುಖ್ಯವಾದ ಸಿದ್ಧಾಂತಗಳಲ್ಲಿ ಭೇದವಿಲ್ಲವು.

ಕಾಲಕ್ರಮದಲ್ಲಿ ಇತರ ಗ್ರಂಥಗಳ ಪ್ರಕ್ಷೇಪಗಳೂ ಆಗಿರುವಂತಿದೆ. ಗರುಡ ಪುರಾಣದಲ್ಲಿ ಮಾರ್ಕಂಡೇಯ ಪುರಾಣದಿಂದಲೂ, ಯಾಜ್ಞವಲ್ಕ್ಯಸ್ಮೃತಿಯಿಂದಲೂ ಗ್ರಂಥಗಳನ್ನು ತೆಗೆದು ಸೇರಿಸಲಾಗಿದೆ. ಅಲ್ಲದೆ ಭವಿಷ್ಯೋತ್ತರಪುರಾಣವು ಮುಂದಿನ ಸಂಗತಿಗಳನ್ನೂ ತಿಳಿಸಲು ಹೊರಟಿರುವುದರಿಂದ, ಅದರ ಬೋಂಬಾಯಿನ ಮುದ್ರಣ ದಲ್ಲಿ ಕ್ರಿಶ್ಚಿಯನ್ನರ ಬೈಬಲ್ಲಿನ ಅರ್ಥಾನುವಾದವನ್ನು, ಆದಮ (Adam)ನ ಕಥೆ ಯಿಂದ ಅಬ್ರಹಾಮ (Abraham) ನ ಕಥೆಯ ವರೆಗಿನ ಮುಖ್ಯ ಸಾರಾಂಶವನ್ನು ಉಲ್ಲೇಖಿಸಿರುತ್ತದೆ. ಇಷ್ಟೇ ಅಲ್ಲದೆ ಈ ದೇವೀಭಾಗವತದ ಒಂಬತ್ತನೆಯ ಸ್ಕಂಧಕ್ಕೂ, ಬ್ರಹ್ಮವೈವರ್ತಪುರಾಣದ ಪ್ರಕೃತಿಖಂಡಕ್ಕೂ, ಅಧ್ಯಾಯಗಳಲ್ಲೂ ಗ್ರಂಥದ ಅನುಪೂರ್ವಿಯಲ್ಲೂ ಹೋಲಿಕೆಯೂ ಇದೆ. ಇಂತಹ ಹೋಲಿಕೆಗಳು ಇನ್ನೂ ಹಲ ವೆಡೆಗಳಲ್ಲಿ ಕಾಣಬರುತ್ತಿವೆ. ಹೇಗೆಂದರೆ—ಶಿವರಹಸ್ಯದಲ್ಲಿ ಹೇಳಿರುವ ಪ್ರದೋಷ ಪೂಜೆಯ ಅಧ್ಯಾಯಕ್ಕೂ, ಬ್ರಹ್ಮೋತ್ತರಖಂಡದಲ್ಲಿರುವ ಪ್ರದೋಷಪೂಜೆಯ ಅಧ್ಯಾಯಕ್ಕೂ ಹೋಲಿಕೆಯಿದೆ. ಹಾಗೆಯೇ ನಾರದಪುರಾಣದಲ್ಲಿರುವ ಮಂತ್ರಖಂಡ ದಲ್ಲಿನ ಗ್ರಂಥಗಳಿಗೂ, ತಂತ್ರರಾಜದಲ್ಲಿರುವ ಗ್ರಂಥಗಳಿಗೂ ಹೋಲಿಕೆಯು ಇದೆ. ಎಂದು ಈ ಪುರಾಣದ ವ್ಯಾಖ್ಯಾನದಲ್ಲೂ ಉಲ್ಲೇಖಿಸಲಾಗಿದೆ.

ಒಂದು ಪುರಾಣದಲ್ಲಿರುವ ವಿಷಯಗಳು ಇನ್ನೊಂದು ಪುರಾಣದಲ್ಲೂ ಬಂದಿ ರುತ್ತವೆ. ಇದು ಪರಸ್ಪರವಾಗಿ ಅನುಕರಣದಿಂದ ಆಗಿರಬಹುದು. ಅಥವಾ ಇವೆರ ಡಕ್ಕೂ ಮೂಲಭೂತವಾದ ಒಂದೇ ಆಕರಗ್ರಂಥದಿಂದ ತೆಗೆದುಕೊಂಡಿರುವುದರಿಂದಲೂ ಆಗಿರಬಹುದು. ಅಲ್ಲದೆ ವಾಮನಪುರಾಣದಲ್ಲಿ ಮುಮ್ಮಡಿಯಾದ ರಚನೆ ಇರುವಂತಿದೆ. ಇದು ಒಂದೇ ಹೆಸರಿನ ಅನೇಕ ಪುರಾಣಗಳು ಇದ್ದುದರಿಂದ ಆಗಿರಬಹುದು. ಅಥವಾ ಒಂದೇ ಪುರಾಣದ ಅನೇಕಪಾಠಗಳಿದ್ದು ಅವೆಲ್ಲವನ್ನೂ ಈಚಿನ ಕಾಲದಲ್ಲಿ ಒಟ್ಟು ಗೂಡಿಸುವುದರಿಂದ ಆಗಿರಬಹುದು. ಹೇಗೆಲ್ಲ ಇದ್ದರೂ ಭಾರತತಾಚಾರ್ಯರ ಗಮನವು ಗ್ರಂಥಗಳಲ್ಲಿ ಪ್ರತಿಪಾದಿಸಿರುವ ವಿಷಯಗಳಲ್ಲಿ ಹೆಚ್ಚು ಆದರದಿಂದ ಮುಂದುವರಿದಿದೆ ಎಂಬುದನ್ನು ಮರೆಯಬಾರದು. ಬ್ರಹ್ಮಾಂಡಪುರಾಣದಲ್ಲಿ ೩-೭೪ರಲ್ಲೂ, ವಾಯು ಪುರಾಣದಲ್ಲಿ ೯೯-೧೦೧ ರಲ್ಲೂ ಗ್ರಂಥವು ಲುಪ್ತವಾಗಿರುವಂತಿದೆ. ಅಲ್ಲದೆ ಪುರಾಣ ಗಳಲ್ಲಿ ವಿವರಿಸಿರುವ ವಿಷಯಗಳ ಕ್ರಮದಲ್ಲಿ ಪೂರ್ವಾಪರಸಂಬಂಧದಿಂದ, ಅಂಗಾಂಗಿ ಭಾವಸಂಬಂಧದಿಂದ, ಬೆಳೆಯುತ್ತಾ ಮುಂದುವರಿಯುವುದು ಕಾಣಬರುವುದಿಲ್ಲ. ಒಂದು ವಿಷಯವಾದ ಮೇಲೆ ಮತ್ತೊಂದನ್ನು ಸುಮ್ಮನೆ ಸೇರಿಸಿರುವಂತಿದೆ. ಕೆಲವು ಪುರಾಣಗಳಲ್ಲಿ ವಿಷಯಗಳ ಉದ್ದೇಶಕ್ರಮವೂ ಕಂಡುಬರುತ್ತದೆ. ಈ ದೇವೀಭಾಗ

ವ್ರತದಲ್ಲಿ ಮೊದಲಿನ ಏಳು ಸ್ಕಂಧಗಳಲ್ಲಿ ಈ ಕ್ರಮವಿದೆ. ಮುಂದೆ ಹಾಗಿರುವಂತಿಲ್ಲ. ಇವೆಲ್ಲವೂ ಬರಿಯ ಊಹೆಯಾಗಿದೆ. ಪ್ರತಿಯಾಗಿಯೂ ವಾದಮಾಡಲು ಸಾಧ್ಯ ವಾಗುತ್ತದೆ. ಇದು ಹಾಗಿರಲಿ.

ಪುರಾಣಗಳಲ್ಲಿ ಪ್ರತಿಪಾದ್ಯವಿಷಯಗಳಲ್ಲಿ ನಮ್ಮ ಗಮನವು ಆದರದೊಡನೆ ಮುಂದುವರಿಯುವಂತೆ ಮಾಡುವುದರಿಂದ ನಮಗೆ ಹೆಚ್ಚು ಪ್ರಯೋಜನವಾಗುತ್ತದೆ. ಮಾನವನು ಆಶಿಸಿ ಪಡೆಯಬೇಕಾದ ಪುರುಷಾರ್ಥಗಳ ಸ್ವರೂಪ ಮತ್ತು ಅವನ್ನು ಸಾಧಿಸುವ ಮಾರ್ಗಗಳು ಇವೇ ಮುಂತಾದ ವಿಷಯಗಳನ್ನು ಪುರಾಣಗಳಲ್ಲಿ ಹೆಚ್ಚು ಹೆಚ್ಚಾಗಿ ವರ್ಣಿಸಿ ವಿವರಿಸಿದೆ. ಪುರುಷಾರ್ಥವೆಂದರೆ ಮಾನವರು, ಗಂಡಸರೂ ಹೆಂಗುಸರೂ, ಆಶಿಸುತ್ತಾ ಪಡೆಯುತ್ತಿರುವ, ಅನುಭವ, ವಿವೇಚನೆಗಳಿಂದ ಪಡೆಯಬೇಕಾದ, ಫಲ, ಪ್ರಯೋಜನಗಳೆಂದು ಅರ್ಥವು. ಪುರಾಣಗಳಲ್ಲಿ ಜನರು ಎಂದರೆ, ಪಂಡಿತರು, ಪಾಮರರು, ರಾಜರು, ಪ್ರಜೆಗಳು, ಧನಿಕರು, ಬಡವರು, ಶಕ್ತರು, ಅಶಕ್ತರು, ಗಂಡಸರು, ಹೆಂಗುಸರು, ಚಿಕ್ಕವರು, ದೊಡ್ಡವರು, ಎಲ್ಲರೂ ಏನನ್ನು ಆಶಿಸಿ ಪಡೆದರು? ಅನುಭವವಿವೇಚನೆಗಳಿಂದ ಯಾವುದನ್ನು ಬಿಟ್ಟು, ಏನನ್ನು ಅಪೇಕ್ಷಿಸಿ ಪಡೆದು, ಕೃತಾರ್ಥರಾದರು? ಎಂದು ಮುಂತಾದ ವಿಷಯಗಳನ್ನು ಬಗೆಬಗೆಯ ಉದಾಹರಣೆಗಳಿಂದ ತಿಳಿಯಹೇಳಿದೆ. ಧರ್ಮ, ಅರ್ಥ, ಕಾಮ, ಮೋಕ್ಷಗಳೆಂದು ಪುರುಷಾರ್ಥಗಳು ನಾಲ್ಕುಬಗೆಯಾಗಿವೆ ಎಂದು ಹೇಳುತ್ತಾರೆ. ಆದರೆ ಅರ್ಥ (wealth), ಕಾಮ (Love, desire), ಎಂಬ ಎರಡು ವಿಷಯಗಳನ್ನೇ ನಾವೆಲ್ಲರೂ ಆಶಿಸಿ ಪಡೆಯಲು ದುಡಿಯುತ್ತಿರುತ್ತೇವೆ. ಧರ್ಮ (duty, religion, law, justice etc.,)ವು ಅತೀಂದ್ರಿಯವಾದುದು ಮತ್ತು ಅದು ಪ್ರಾರಂಭದಲ್ಲಿ ಕಷ್ಟಕರವೂ ಕಹಿಯೂ ಆಗಿರುತ್ತದೆ. ಹಾಗೆಯೇ ಮೋಕ್ಷ (Liberation, beatitude)ವು ಜ್ಞಾನ, ವೈರಾಗ್ಯಗಳನ್ನು ಅವಲಂಬಿಸಿರುವುದರಿಂದ, ವಿಷಯಗಳನ್ನು ಆಶಿಸುತ್ತಿರುವವರಿಗೆ ಅಸಹ್ಯವಾಗಿರುತ್ತದೆ. ಆದುದರಿಂದ ಪುರಾಣಗಳ ಉದ್ದೇಶವು ಹೀಗಿದೆ. ಏನೆಂದರೆ ಅರ್ಥ, ಕಾಮಗಳಲ್ಲಿ ಆಸಕ್ತರಾಗಿ ದುಡಿದು ಬಳಲುತ್ತಿರುವ, ಅಲ್ಪಸಿದ್ಧಿಗಳು, ಸುಖಾಭಾಸಗಳು ಇವನ್ನು ಪಡೆದು ತೃಪ್ತಿ, ಶಾಂತಿ ಮತ್ತು ನಿತ್ಯಶುದ್ಧಾನಂದವನ್ನು ಪಡೆಯಲಾರದೆ ಆಶಾಭಂಗದಿಂದ ಸಂಕಟಪಡುತ್ತಿರುವ ಜನರನ್ನು ಧರ್ಮ, ಮೋಕ್ಷಗಳಲ್ಲಿ ಆದರವುಳ್ಳವರಾಗುವಂತೆಯೂ, ಅವಕ್ಕಾಗಿ ದುಡಿದು ಧನ್ಯತೆ, ಕೃತಾರ್ಥತೆಗಳನ್ನು ಪಡೆದು ಸುಖಿಗಳಾಗುವಂತೆಯೂ, ಮಾಡುವುದು ಪುರಾಣಗಳ ಉದ್ದೇಶವಾಗಿದೆ.

ಈ ಸ್ಕಂಧದ ಮೊದಲನೆಯ ಭಾಗದಲ್ಲಿ ಮೂಲಪ್ರಕೃತಿಯು ದುರ್ಗಾ, ರಾಧಾ, ಲಕ್ಷ್ಮೀ, ಸರಸ್ವತೀ ಎಂದು ಐದು ರೂಪಾದುದನ್ನು ಹೇಳಿರುವುದರಿಂದಲೂ, ಗೋಲೋಕವು ವೈಕುಂಠಕ್ಕಿಂತ ಮಿಗಿಲಾದ ಲೋಕವೆಂದೂ, ಅದಕ್ಕೆ ಅಧಿಪತಿಯು ಕೃಷ್ಣನೆಂದೂ, ಗೋಪಾಲಸುಂದರೀ ನಾಮಕನಾದ ಆ ಕೃಷ್ಣನಿಂದಲೇ ಈ ಪ್ರಪಂಚದ ಮತ್ತು ತ್ರಿಮೂರ್ತಿಗಳೂ ಅವರ ಸಹಧರ್ಮಿಣಿಯರೂ ಇವರೇ ಮುಂತಾದ ಎಲ್ಲ ಜೀವರ ಸಂಸಾರಕ್ಕಾಗಿ ಈ ಸೃಷ್ಟಿ ಸ್ಥಿತಿ ಲಯಗಳು ನೆರವೇರುತ್ತಿರುವುವೆಂದೂ, ಶಿವ, ವಿಷ್ಣು, ಕೃಷ್ಣ, ಶಕ್ತಿ, ಈ ತತ್ವಗಳಿಗೆ ವಾಸ್ತವವಾಗಿ ಭೇದವಿಲ್ಲವೆಂದೂ ವಿವರಿಸಿ ತಿಳಿಯಹೇಳಿರುವುದರಿಂದಲೂ, ಈ ಪುರಾಣದ ಮುಖ್ಯವಾದ ಉದ್ದೇಶವನ್ನು ಗೊತ್ತು ಮಾಡಬಹುದು. ಹಿಂದೆ ಮೂರನೆಯ ಸ್ಕಂಧದಲ್ಲಿ ಬ್ರಹ್ಮಾ, ವಿಷ್ಣು, ಶಂಕರ ಎಂಬ ತ್ರಿಮೂರ್ತಿಗಳು ಮಣಿದ್ವೀಪಕ್ಕೆ ಪ್ರಯಾಣಮಾಡುತ್ತಾ ದಾರಿಯಲ್ಲಿ ಈ ನಮ್ಮ ಪ್ರಪಂಚದಂತಹ ಇತರ ಅನೇಕ ಬ್ರಹ್ಮಾಂಡಗಳನ್ನೂ ಅಲ್ಲಿಯೂ ಇಂತಹ ತ್ರಿಮೂರ್ತಿಗಳು ಅಧಿಕಾರಿಗಳಾಗಿದ್ದುದನ್ನೂ ಗಮನಿಸಿ ತಮ್ಮ ಅಹಂಕಾರಖಂಡನೆಯನ್ನು ಪಡೆಯುತ್ತಾರೆ. ಮತ್ತು ಹೃದಯವೈಶಾಲ್ಯವನ್ನು ಕಡೆಗೆ ಪಡೆದು ಬ್ರಹ್ಮತತ್ವವು ಇವೆಲ್ಲಕ್ಕೂ ಮೇಲಾದ ಶಕ್ತಿತತ್ವಕ್ಕೆ ಅಭಿನ್ನವಾದ ಅಧಿಷ್ಠಾನವೆಂದು ಮನಗಾಣುತ್ತಾರೆ. ಇದಕ್ಕನುಸಾರವಾಗಿ ಈ ಸ್ಕಂಧದ ಈ ಎರಡನೆಯ ಭಾಗದಲ್ಲಿಯೂ ಗಂಗಾ, ಸರಸ್ವತೀ ದೇವಿಯರೂ ಶ್ರೀಕೃಷ್ಣನ ಪತ್ನಿಯರೆಂದೂ, ಹರಿಹರರು ಅಭಿನ್ನರೆಂದೂ ಹೇಳಿರುವುದಲ್ಲದೆ ವಿರಾಟ್ಪುರುಷರು ಒಂದೊಂದು ಬ್ರಹ್ಮಾಂಡಕ್ಕೆ ಒಬ್ಬರಂತೆ ಇರುತ್ತಾರೆ. ಇವರೆಲ್ಲರಿಗೂ ಅಧಿಪತಿಯಾದವನು ಮಹಾವಿರಾಟ್ಪುರುಷನು ಎಂಬ ನಿರೂಪಣೆಯೂ ಬಂದಿದೆ. ಕಡೆಗೆ ಮಣಿದ್ವೀಪದಲ್ಲಿ ಎಲ್ಲ ಪ್ರಪಂಚಗಳ ಅಧಿಷ್ಠಾತ್ರಿಯಾದ ದೇವಿಯು ಪರಾಶಕ್ತಿ ಎಂದೂ, ಈ ಎಲ್ಲ ತ್ರಿಮೂರ್ತಿಗಳ ಮತ್ತು ಅವರ ಸಹಧರ್ಮಿಣಿಯರಾದ ಶಕ್ತ್ಯಂಶರ ಮೂಲತತ್ವವು ಒಂದೇ ಎಂಬುದು ಸಿದ್ಧವಾಗುತ್ತದೆ. ಮಾರ್ಕಂಡೇಯ ಪುರಾಣದ ದುರ್ಗಾಸಪ್ತಶತಿಯ ಪ್ರಾಧಾನಿಕರಹಸ್ಯದಲ್ಲೂ ಈ ತತ್ವವನ್ನೇ ವರ್ಣಿಸಲಾಗಿದೆ. ಇದರಿಂದ ಈ ದಂಪತಿಗಳ, ವ್ಯಕ್ತಿಗಳ, ಸ್ವರೂಪವಿಶೇಷಗಳನ್ನು ವ್ಯಾಪಿಸಿ, ಅವೆಲ್ಲವನ್ನೂ ಮೀರಿ, ಇರುವ ಪರಾಶಕ್ತಿತತ್ವವೇ ಏಕತತ್ವವು. ಎಂಬ ಮೇಲಿನ ವಿಶಾಲಭಾವಕ್ಕೆ ಓದುಗರನ್ನು ತಲಪಿಸುವ ಉದ್ದೇಶವು ನೆರವೇರುತ್ತದೆ. ಸತ್ವ ರಜಸ್ ತಮಸ್ ಎಂಬ ತ್ರಿಗುಣಗಳ ಪರಸ್ಪರ ಸಮ್ಮೇಳನದಿಂದ ಪ್ರಪಂಚವೆಂದೂ, ಅವುಗಳ ಸಾಮ್ಯಾವಸ್ಥೆಯೇ ಮೂಲಪ್ರಕೃತಿ ಎಂದೂ, ಈ ಪ್ರಕೃತಿಶಕ್ತಿಯೂ ಸೃಷ್ಟಿಗೆ ಉನ್ಮುಖವಾಗಿ ಬಹಿರ್ಮುಖವಾಗಿರುವುದನ್ನು ಬಿಟ್ಟು ಕಾರ್ಯಗಳೆಲ್ಲವೂ ಕಾರಣಗಳಲ್ಲಿ

ಲೀನವಾಗುತ್ತಾ, ಎಲ್ಲವೂ ಪರಮಕಾರಣವಾದ ಶಕ್ತಿತತ್ವದಲ್ಲಿ ಲೀನವಾಗಲು, ಈ ಶಕ್ತಿಯೂ ಶುದ್ಧಪರಬ್ರಹ್ಮತತ್ವದ ಪ್ರಥಮಸ್ಪಂದರೂಪವಾದುದರಿಂದ ಈ ಶಿವ, ಶಕ್ತಿ,ತತ್ವಗಳು ಪರಸ್ಪರ ಅವಿನಾಭಾವದಿಂದ ಅಭಿನ್ನವಾಗಿರುವುದರಿಂದ, ಶಕ್ತಿಯು ಎಲ್ಲಕ್ಕೂ ಅಧಿಷ್ಠಾನವಾದ ಬ್ರಹ್ಮತತ್ವದಲ್ಲಿ ಲಯವಾಗಿ, ಈ ಮಾಯೆಯೂ ಬ್ರಹ್ಮ ತತ್ವದಲ್ಲಿ ಅಂತರ್ಮುಖವಾಗಿ ಅಡಗುತ್ತದೆ. ಇವೆಲ್ಲವೂ ಕಲ್ಪಿತವೂ, ಔಪಾಧಿಕವೂ, ಆದುದರಿಂದ, ಭೇದಕಸಾಮಗ್ರಿಯು ನಿತ್ಯವಾಗಿ ನಿಜವಾಗಿಲ್ಲದಿರುವುದರಿಂದ, ಅದ್ವೈತ ಪರಮಾತ್ಮತತ್ವವು ಒಂದೇ. ಎಂಬ ಸಿದ್ಧಾಂತನಿರೂಪಣೆಯು ಅಬಾಧಿತವಾಗಿ ಎಂದಿನಂತೆ ನಿತ್ಯವಾಗಿ ಉಳಿಯುತ್ತದೆ. ಇದೇ ಎಂದರೆ ಈ ಪರಮತತ್ವದ ಅಪರೋಕ್ಷಾನುಭವರೂಪವಾದ ಸಾಕ್ಷಾತ್ಕಾರವೇ ಮೋಕ್ಷವು. ಎಂಬ ವೇದಾಂತಸಿದ್ಧಾಂತವೂ ಇದಕ್ಕೆ ಅನುಗುಣವಾಗಿದೆ. ಅಲ್ಲದೆ ಮೋಕ್ಷವನ್ನು ಅಪೇಕ್ಷಿಸಿದ ಮಾತ್ರಕ್ಕೇ ಸಂಸಾರವನ್ನು ತ್ಯಜಿಸಿ ಓಡಬೇಕಾಗಿಲ್ಲ. ಅದು ಅಸಾಧ್ಯವೂ ಅನುಚಿತವೂ ಆಗಿದೆ. ಆದರೆ ಜ್ಞಾನ ವಿವೇಚನೆಗಳಿಂದ ಅಭಿಮಾನವನ್ನು ತ್ಯಾಗಮಾಡಿ ಜನಕ, ಶುಕ ಮುಂತಾದವರಂತೆ ಜೀವನ್ಮುಕ್ತಸ್ಥಿತಿಯನ್ನು ಪಡೆಯುವುದರಿಂದ ನಿತ್ಯನಂದಾನುಭವವು ಕರ್ಮಯೋಗ ದಿಂದ ದೊರೆಯುತ್ತದೆ. ಎಂಬುದನ್ನು ಮನಗಾಣಬಹುದು. ಆದುದರಿಂದ ಇಂತಹ ಮೇಲಾದ ಮಹತ್ವಪೂರಿತವಾದ ಉಪದೇಶವನ್ನು ಮನಗಾಣಿಸುವ ಈ ಪುರಾಣವು ಮಹಾಪುರಾಣವೆನ್ನಿಸಿಕೊಳ್ಳಲು ತುಂಬ ಅರ್ಹವಾಗಿದೆ ಎಂಬುದು ಗೊತ್ತಾಗುತ್ತದೆ.

ಇಂತಹ ಪರಮಪುರುಷಾರ್ಥವನ್ನು ಪಡೆಯಲು ಕರ್ಮ, ಭಕ್ತಿ, ಧ್ಯಾನ, ಜ್ಞಾನಗಳು ಸಾಧನಗಳಾಗಿವೆ. ಸತ್ಕರ್ಮಾಚರಣೆ, ಭಕ್ತಿ, ಧ್ಯಾನ, ಜ್ಞಾನಗಳು ಕ್ರಮವಾಗಿ ಉಂಟಾಗಲು ದೇವಿಯು ಪೂಜಾ ಉಪಾಸನೆಗಳನ್ನು ಹೇಳಿದೆ. ತಾಯಿಯಲ್ಲಿ ಮಕ್ಕಳು ತಮ್ಮ ಕೋರಿಕೆಗಳನ್ನು ಪಡೆದುಕೊಳ್ಳುವುದು ಸ್ವಾಭಾವಿಕವಾದುದೂ, ಸುಲಭವೂ, ಶೀಘ್ರಫಲಕಾರಿಯೂ ಆಗಿದೆ. ಆದುದರಿಂದ ಇದಕ್ಕಾಗಿಯೇ ಮೂರನೆಯ ಮತ್ತು ಈ ಒಂಬತ್ತನೆಯ ಸ್ಕಂಧಗಳಲ್ಲಿ ಶ್ರೀವಿದ್ಯೆ, ಪಂಚದಶೀ, ಷೋಡಶೀ, ಮಹಾವಿದ್ಯೆ, ನವಾರ್ಣ ಮುಂತಾದ ಉತ್ತಮವಾದ ಉಪಾಸನಾರೂಪವಾದ ಸಾಧನಗಳ ಉಪದೇಶಗಳನ್ನು ಮಾಡಿದೆ. ಇದರಿಂದ ತಕ್ಕ ಯೋಗ್ಯತೆಯನ್ನು ಪಡೆದು ಎಲ್ಲರೂ ಮೋಕ್ಷದ ನಿತ್ಯಾನಂದವನ್ನು ಅನುಭವಿಸಬಹುದಾಗಿದೆ. ಸಗುಣಸಾಕಾರ ಮೂರ್ತಿಯ ಉಪಾಸನೆಯು ಉಪಾಸಕನಿಗೆ ಸುಲಭವು. ಆದರಿಂದ ಕ್ರಮವಾಗಿ ಅವನಿಗೆ ಆ ಇಷ್ಟದೇವತೆಯ ಸಾಕ್ಷಾತ್ಕಾರವಾಗುತ್ತದೆ. ಇದೇ ದ್ವೈತ, ವಿಶಿಷ್ಟಾದ್ವೈತಸಿದ್ಧಾಂತಗಳಲ್ಲಿ ವರ್ಣಿಸಿರುವ ಮೋಕ್ಷವು. ಆ ಮೇಲೆ ಸಗುಣನಿರಾಕಾರ

ತತ್ವಕ್ಕೆ ಉಪಾಸಕನ ಮನಸ್ಸು ವೇದಾಂತಶ್ರವಣ, ಮನನ, ನಿದಿಧ್ಯಾಸನಗಳಿಂದ ಏರುತ್ತದೆ. ಆಗ ಸಮ್ಯಗ್ದರ್ಶನವಾಗಿ, ಉಪಾಸಕ, ಉಪಾಸ್ಯ, ಉಪಾಸನೆ ಎಂಬ ತ್ರಿಪುಟಿಯ ಭಾನವೂ ನಷ್ಟವಾಗುತ್ತದೆ. ಆಗ ನಿರ್ಗುಣ ನಿರಾಕಾರ ಪರತತ್ವವು ಒಂದೇ ಅಖಂಡಚೈತನ್ಯವಾಗಿ ಉಳಿಯುತ್ತದೆ. ಇದೇ ಅದ್ವೈತಮೋಕ್ಷವು. ಹೀಗೆಂಬ ಉಪದೇಶವನ್ನು ಈ ಪುರಾಣದಲ್ಲಿ ತುಂಬ ಹೃದಯಂಗಮವಾಗಿರುವ ರೀತಿಯಲ್ಲಿ ಅನೇಕಾವೃತ್ತಿ ನಿರೂಪಿಸಲಾಗಿದೆ. ಎಂಬ ಅಂಶವನ್ನು ಮನಗಾಣಬಹುದು.

ಭಾರತಾರ್ಯರ ಸಂಸ್ಕೃತಿಯು ಮೊದಲಿನಿಂದಲೂ ಧಾರ್ಮಿಕವಾದುದು ಎಂಬ ಅಂಶವನ್ನು ಹಿಂದಿನ ಸಂಪುಟಗಳ ಮುನ್ನುಡಿಗಳು ಮತ್ತು ಅಲ್ಲಲ್ಲಿ ಕೊಟ್ಟಿರುವ ಟಿಪ್ಪಣಿಗಳು, ಇವುಗಳಲ್ಲಿ ಸ್ವಲ್ಪಮಟ್ಟಿಗೆ ವಿವರಿಸಿರುತ್ತೇನೆ. ಧಾರಣಾದ್ಧರ್ಮ ಇತ್ಯಾಹುಃ ಧರ್ಮೋ ಧಾರಯತಿ ಪ್ರಜಾಃ । ವಿದ್ವದ್ಭಿಃ ಸೇವಿತಸ್ಸದ್ಭಿಃ ನಿತ್ಯಮದ್ವೇಷರಾಗಿಭಿಃ । ಹೃದಯೇನಾಭ್ಯನುಜ್ಞಾತಃ ಯೋ ಧರ್ಮಸ್ತಂ ನಿಬೋಧತ ॥ ಧರ್ಮಏವ ಹತೋ ಹಂತಿ ಧರ್ಮೋರಕ್ಷತಿ ರಕ್ಷಿತಃ । ನ ಹಿ ಕಲ್ಯಾಣಕೃತ್ ಕಶ್ಚಿತ್ ದುರ್ಗತಿಂ ತಾತಗಚ್ಛತಿ ॥ ಎಂಬಿವೇ ಮುಂತಾದ ಹಿತೋಪದೇಶಗಳನ್ನು ಧರ್ಮತತ್ವದ ವಿವರಣೆಗಳನ್ನೂ ಹಿಂದೆ ವಿವರಿಸಲಾಗಿದೆ. ಐಹಿಕವಾದ ನಿಜವಾದ ಸುಖಕ್ಕೆ ಧರ್ಮವೇ ಸಾಧನವು; ಆಮುಷ್ಮಿಕವಾದ ಸದ್ಗತಿಗೆ ಧರ್ಮವು ಸೇತುವೆಯಂತಿದೆ. ಸಂಸಾರ ಸಾಗರವನ್ನು ದಾಟಿ ನಿತ್ಯಾನಂದವನ್ನು ಪಡೆಯುವುದಕ್ಕೆ ಧರ್ಮವನ್ನು ಆಚರಿಸಲು ಒಲಿದರೆ ಈ ಶರೀರವೇ ಹಡಗಿನಂತಾಗುತ್ತದೆ. ಮಹತಾಪುಣ್ಯಪಣ್ಯೇನ ಕ್ರೀತೇಯಂ ಕಾಯನೌಸ್ತ್ವಯಾ । ಸಂಸಾರಾಂಭೋನಿಧೇಃ ಪಾರಂ ತರ ಯಾವನ್ನ ಭಿದ್ಯತೇ ॥ ಎಂದು ಮುಂತಾದ ಬುದ್ಧಿವಾದಗಳನ್ನು ಈ ದೇವೀಭಾಗವತವು ಹೃದಯಂಗಮವಾದ ರೀತಿಯಲ್ಲಿ ಸಾರಿ ಹೇಳುತ್ತಿದೆ. ಈ ಧರ್ಮವನ್ನು ಪ್ರವೃತ್ತಿಧರ್ಮ ನಿವೃತ್ತಿಧರ್ಮವೆಂದೂ, ವರ್ಣಧರ್ಮ ಆಶ್ರಮಧರ್ಮವೆಂದೂ, ಸ್ವಧರ್ಮ ಪರಧರ್ಮವೆಂದೂ, ಸಾಮಾನ್ಯಧರ್ಮ ವಿಶೇಷಧರ್ಮವೆಂದೂ, ವೈಯಕ್ತಿಕಧರ್ಮ ಸಾಮಾಜಿಕಧರ್ಮವೆಂದೂ, ಕುಲಧರ್ಮ, ದೇಶಧರ್ಮ, ರಾಷ್ಟ್ರಧರ್ಮ, ಅಂತರರಾಷ್ಟ್ರೀಯ ಧರ್ಮ, ವಿಶ್ವಧರ್ಮವೆಂದೂ ವಿವೇಚಿಸಿ ಪುರಾಣಗಳು ತಿಳಿಯ ಹೇಳುತ್ತಿವೆ. ವೈದಿಕಸಾಹಿತ್ಯದಲ್ಲಿ ಋತ, ಸತ್ಯ, ಧರ್ಮಗಳಿಗೆ ಮೂಲಗಳಿವೆ. ಪುರಾಣಗಳಲ್ಲಿ ಧರ್ಮವೃಕ್ಷವು ಪುಷ್ಪಿಸಿ ಫಲಿಸಿರುತ್ತದೆ.

ಇಂತಹ ಧರ್ಮದ ತಿಳಿವಳಿಕೆಯೂ, ಆಚರಣೆಯೂ ಜನಸಾಮಾನ್ಯದಲ್ಲಿ ದಿನಗಟ್ಟಲೆಯ ಜೀವನಕ್ರಮದಲ್ಲಿ ಹಾಸುಹೊಕ್ಕುಗಳಂತೆ ವ್ಯಾಪಿಸಿ ಸುಖಶಾಂತಿ

ಗಳನ್ನು ಇತೋಽಪ್ಯತಿಶಯವಾಗಿ ಕೊಡುವಂತಾಗಲಿ ಎಂಬ ಘನವಾದ ಉದ್ದೇಶದಿಂದ ನಮ್ಮನ್ನಾಳುತ್ತಿರುವ ಮಹಾಪ್ರಭುಗಳಾದ **ಶ್ರೀಜಯಚಾಮರಾಜೇಂದ್ರ ಒಡೆಯರ್ ಬಹದೂರ್ ಜಿ. ಸಿ. ಎಸ್. ಐ.,** ಮಹಾಸ್ವಾಮಿಯವರು ಎಲ್ಲ ಪುರಾಣಗಳಲ್ಲಿರುವ ತತ್ವಗಳನ್ನು ಕನ್ನಡಿಗರೆಲ್ಲರಿಗೂ ತಿಳಿಸಲು ಅನುಕೂಲವಾಗುವಂತೆ ಶ್ರೀಜಯಚಾಮರಾಜೇಂದ್ರ ಗ್ರಂಥರತ್ನಮಾಲೆಯಲ್ಲಿ ಈ ಪುರಾಣಗಳನ್ನು ಕನ್ನಡ ಅರ್ಥಾನುವಾದವಿವರಣೆಗಳೊಡನೆ ಮುದ್ರಿಸಿ ಪ್ರಕಟಿಸಲು ಅಪ್ಪಣೆಮಾಡಿದಾರೆ. ಈ ಮಹಾಶಯರ ಉದಾರವಾದ ಉದ್ದೇಶವು ಸರ್ವದಾ ನೆರವೇರುತ್ತಿರುವಂತಾಗಲೆಂದು ತ್ರಿಪುರಸುಂದರೀ ಭುವನೇಶ್ವರೀ ಚಾಮುಂಡೇಶ್ವರೀ ಮಹಾತಾಯಿಯನ್ನು ಪ್ರಾರ್ಥಿಸುತ್ತಿದೇನೆ.

ತಾರಣಸಂವತ್ಸರದ
ಮಾಘ ಶುಕ್ಲಷಷ್ಠೀ ಶುಕ್ರವಾರ,
19—1—1945.



**ಎಡತೊರೆ ದೇವಯ್ಯದೀಕ್ಷಿತರ ಮಗ**
**ಚಂದ್ರಶೇಖರಶಾಸ್ತ್ರೀ.**

# ದೇವೀಭಾಗವತಮಹಾಪುರಾಣದಲ್ಲಿನ ಒಂಬತ್ತನೆಯ ಸ್ಕಂಧದ ವಿಷಯಸೂಚಿಕೆ

---

ಅಧ್ಯಾಯ | ವಿಷಯ | ಪುಟಸಂಖ್ಯಾ

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ನವಮಸ್ಕಂಧೇ

### || ಷಡ್ವಿಂಶೋಽಧ್ಯಾಯಃ ||

### ಇಪ್ಪತ್ತಾರನೆಯ ಅಧ್ಯಾಯವು

|| ನಾರದ ಉವಾಚ ||

**ತುಲಸ್ಯುಪಾಖ್ಯಾನಮಿದಂ ಶ್ರುತಂ ಚಾಽತಿಸುಧೋಪಮಂ ।**
**ತತಃ ಸಾವಿತ್ರ್ಯುಪಾಖ್ಯಾನಂ ತನ್ಮೇ ವ್ಯಾಖ್ಯಾತುಮರ್ಹಸಿ ||೧||**

**ಪುರಾ ಕೇನ ಸಮುದ್ಭೂತಾ ಸಾ ಶ್ರುತಾ ಚ ಶ್ರುತೇಃ ಪ್ರಸೂಃ ।**
**ಕೇನ ವಾ ಪೂಜಿತಾ ಲೋಕೇ ಪ್ರಥಮೇ ಕೈಶ್ಚ ವಾ ಪರೇ ||೨||**

|| ಶ್ರೀನಾರಾಯಣ ಉವಾಚ ||

**ಬ್ರಹ್ಮಣಾ ವೇದಜನನೀ ಪ್ರಥಮೇ ಪೂಜಿತಾ ಮುನೇ ।**
**ದ್ವಿತೀಯೇ ಚ ವೇದಗಣೈಸ್ತತ್ಪಶ್ಚಾದ್ವಿದುಷಾಂ ಗಣೈಃ ||೩||**

---

ಅಮೃತಕ್ಕೆ ಸಮಾನವಾದ ತುಲಸಿಯ ಉಪಾಖ್ಯಾನವನ್ನು ಕೇಳಿದೆನು. ಅನಂತರದಲ್ಲಿ ವಿಸ್ತಾರವಾದ ಸಾವಿತ್ರಿಯ ಉಪಾಖ್ಯಾನವನ್ನು ನನಗೆ ಹೇಳಬೇಕು. ವೇದಗಳಿಗೆ ತಾಯಿಯಾದ ಆ ಸಾವಿತ್ರೀದೇವಿಯು ಯಾವ ಕಾರಣದಿಂದ ಮನುಷ್ಯ ದೇಹವನ್ನು ಪಡೆದಳು. ಈ ಲೋಕದಲ್ಲಿ ಮೊದಲು ಯಾರು ಆ ದೇವಿಯನ್ನು ಪೂಜಿಸಿದರು ? ಆ ಮೇಲೆ ಯಾರು ಪೂಜಿಸಿದರು ? ಇದನ್ನು ವಿವರಿಸಬೇಕು. ಎಂದು ನಾರದನು ನಾರಾಯಣಮುನಿಯನ್ನು ಕುರಿತು ಕೇಳಿದನು. ||೧-೨||

ನಾರಾಯಣಮುನಿಯು ಹೇಳಿದನು— ವೇದಕ್ಕೆ ತಾಯಿಯಾದ ಸಾವಿತ್ರೀ ದೇವಿಯನ್ನು ಬ್ರಹ್ಮನು ಮೊದಲು ಪೂಜಿಸಿದನು. ಆಮೇಲೆ ವೇದಾಭಿಮಾನಿದೇವತೆಗಳ

ತದಾ ಚಾಽಶ್ವಪತಿರ್ಭೂಪಃ ಪೂಜಯಾಮಾಸ ಭಾರತೇ ।
ತತ್ಪಶ್ಚಾತ್ಪೂಜಯಾಮಾಸುರ್ವರ್ಣಾಶ್ಚತ್ವಾರ ಏವ ಚ ॥೪॥

॥ ನಾರದ ಉವಾಚ ॥

ಕೋ ವಾ ಸೋಽಶ್ವಪತಿರ್ಬ್ರಹ್ಮನ್ ಕೇನ ವಾ ತೇನ ಪೂಜಿತಾ ।
ಸರ್ವಪೂಜ್ಯಾ ಚ ಸಾ ದೇವೀ ಪ್ರಥಮೇ ಕೈಶ್ಚ ವಾ ಪರೇ ॥೫॥

॥ ಶ್ರೀನಾರಾಯಣ ಉವಾಚ ॥

ಮದ್ರದೇಶೇ ಮಹಾರಾಜೋ ಬಭೂವಾಽಶ್ವಪತಿರ್ಮುನೇ ।
ವೈರಿಣಾಂ ಬಲಹರ್ತಾ ಚ ಮಿತ್ರಾಣಾಂ ದುಃಖನಾಶನಃ ॥೬॥

ಆಸೀತ್ತಸ್ಯ ಮಹಾರಾಜ್ಞೀ ಮಹಿಷೀ ಧರ್ಮಚಾರಿಣೀ ।
ಮಾಲತೀತಿ ಸಮಾಖ್ಯಾತಾ ಯಥಾ ಲಕ್ಷ್ಮೀರ್ಗದಾಭೃತಃ ॥೭॥

ಸ ಚ ರಾಜ್ಞೀ ಚ ವಂಧ್ಯಾ ಚ ವಸಿಷ್ಠಸ್ಯೋಪದೇಶತಃ ।
ಚಕಾರಾರಾಧನಂ ಭಕ್ತ್ಯಾ ಸಾವಿತ್ರ್ಯಾಶ್ಚೈವ ನಾರದ ॥೮॥

---

ಸಮೂಹವು ಪೂಜಿಸಿತು. ಬಳಿಕ ವಿದ್ವಾಂಸರು ಪೂಜಿಸಿದರು. ತರುವಾಯ ಅಶ್ವಪತಿ ರಾಜನೂ ಅನಂತರದಲ್ಲಿ ನಾಲ್ಕು ವರ್ಣದವರೂ ಭಾರತದಲ್ಲಿ ಪೂಜಿಸಿದರು. ॥೩-೪॥

ನಾರದನು ಹೇಳಿದನು—ಎಲೈ ನಾರಾಯಣ ಮುನಿಯೇ, ಅಶ್ವಪತಿರಾಜ ನಾರು? ಯಾವ ಕಾರಣದಿಂದ ಅವನು ಸಾವಿತ್ರೀದೇವಿಯನ್ನು ಪೂಜಿಸಿದನು? ಸಮಸ್ತರಿಗೂ ಪೂಜ್ಯಳಾದ ಆ ದೇವಿಯನ್ನು ಮೊದಲು ಯಾರು ಪೂಜಿಸಿದರು? ಆ ಮೇಲೆ ಯಾರು ಪೂಜಿಸಿದರು? ॥೫-೬॥

ನಾರಾಯಣನು ಹೇಳಿದನು—ನಾರದನೇ ಕೇಳು. ಮದ್ರದೇಶದಲ್ಲಿ ಅಶ್ವಪತಿ ಎಂಬ ರಾಜನಿದ್ದನು. ಅವನು ಶತ್ರುಗಳನ್ನು ಜಯಿಸಿ ಮಿತ್ರರನ್ನು ಕಾಪಾಡುತ್ತಿದ್ದನು. ಅವನಿಗೆ ಧರ್ಮಮಾರ್ಗದಲ್ಲಿ ನಡೆಯುವ ಮಾಲತೀ ಎಂಬ ಪಟ್ಟದ ರಾಣಿಯು, ವಿಷ್ಣುವಿಗೆ ಲಕ್ಷ್ಮಿಯಂತೆ, ಇದ್ದಳು. ಅವಳು ಬಂಜೆಯಾಗಿದ್ದಳು. ವಸಿಷ್ಠರ ಉಪದೇಶದಿಂದ ಸಾವಿತ್ರಿಯ ಪೂಜೆಯನ್ನು ಅವಳು ಭಕ್ತಿಯಿಂದ ಮಾಡಿದಳು. ॥೬-೭-೮॥

ಪ್ರತ್ಯಾದೇಶಂ ನ ಸಾ ಪ್ರಾಪ್ತಾ ಮಹಿಷೀ ನ ದದರ್ಶ ತಾಂ ।
ಗೃಹಂ ಜಗಾಮ ದುಃಖಾರ್ತಾ ಹೃದಯೇನ ವಿದೂಯತಾ ॥೯॥

ರಾಜಾ ತಾಂ ದುಃಖಿತಾಂ ದೃಷ್ಟ್ವಾ ಬೋಧಯಿತ್ವಾ ನಯೇನ ವೈ ।
ಸಾವಿತ್ರ್ಯಾಸ್ತಪಸೇ ಭಕ್ತ್ಯಾ ಜಗಾಮ ಪುಷ್ಕರಂ ತದಾ ॥೧೦॥

ತಪಶ್ಚಕಾರ ತತ್ರೈವ ಸಂಯತಃ ಶತವತ್ಸರಂ ।
ನ ದದರ್ಶ ಚ ಸಾವಿತ್ರ್ಯಾಃ ಪ್ರತ್ಯಾದೇಶೋ ಬಭೂವ ಚ ॥೧೧॥

ಶುಶ್ರಾವಾಕಾಶವಾಣೀಂ ಚ ನೃಪೇಂದ್ರಶ್ಚಾಽಶರೀರಿಣೀಂ ।
ಗಾಯತ್ರ್ಯಾ ದಶಲಕ್ಷಂ ಚ ಜಪಂ ತ್ವಂ ಕುರು ನಾರದ ॥೧೨॥

ಏತಸ್ಮಿನ್ನಂತರೇ ತತ್ರ ಆಜಗಾಮ ಪರಾಶರಃ ।
ಪ್ರಣನಾಮ ತತಸ್ತಂ ಚ ಮುನಿರ್ನೃಪಮುವಾಚ ಚ ॥೧೩॥

---

ರಾಣಿಯು ಬಹುಕಾಲ ತಪಸ್ಸುಮಾಡಿದರೂ ಸಾವಿತ್ರೀದೇವಿಯ ದರ್ಶನವನ್ನಾಗಲೀ ವರವನ್ನಾಗಲೀ ಪಡೆಯಲಿಲ್ಲ. ಭಯದಿಂದಲೂ ದುಃಖದಿಂದಲೂ ಮನೆಯನ್ನು ಸೇರಿದಳು. ರಾಜನು ದುಃಖಪಡುತ್ತಿರುವ ರಾಣಿಯನ್ನು ಸಮಾಧಾನಪಡಿಸಿ ತಾನು ಸಾವಿತ್ರಿಯನ್ನು ಕುರಿತು ತಪಸ್ಸುಮಾಡಲು ಪುಷ್ಕರಕ್ಷೇತ್ರಕ್ಕೆ ಪ್ರಯಾಣ ಮಾಡಿದನು. ॥೯-೧೦॥

ರಾಜನು ಆ ಪುಷ್ಕರಕ್ಷೇತ್ರದಲ್ಲಿಯೇ ಇಂದ್ರಿಯನಿಗ್ರಹದಿಂದ ಒಂದುನೂರು ವರ್ಷಗಳ ವರೆಗೆ ತಪಸ್ಸುಮಾಡಿದನು. ಸಾವಿತ್ರೀದೇವಿಯು ಪ್ರತ್ಯಕ್ಷಳಾಗಲಿಲ್ಲ. ಆದರೆ ಪ್ರತ್ಯುತ್ತರವನ್ನು ಮಾತ್ರ ಕೊಟ್ಟಳು. ॥೧೧॥

ರಾಜನು "ಹತ್ತುಲಕ್ಷ ಗಾಯತ್ರೀಜಪವನ್ನು ನೀನು ಮಾಡು" ಎಂಬ ಒಂದು ಆಕಾಶವಾಣಿಯನ್ನು ಕೇಳಿದನು. ಆ ಸಮಯಕ್ಕೆ ಸರಿಯಾಗಿ ಅಲ್ಲಿಗೆ ಪರಾಶರಮುನಿಯು ಬಂದನು. ರಾಜನು ಅವನಿಗೆ ನಮಸ್ಕರಿಸಲು ಮುನಿಯು ರಾಜನನ್ನು ಕುರಿತು ಹೇಳಿದನು. ॥೧೨-೧೩॥

|| ಮುನಿರುವಾಚ ||

ಸಕೃಜ್ಜಪಶ್ಚ ಗಾಯತ್ರ್ಯಾಃ ಪಾಪಂ ದಿನಭವಂ ಹರೇತ್ ।
ದಶವಾರಂ ಜಪೇನೈವ ನಶ್ಯೇತ್ಪಾಪಂ ದಿವಾನಿಶಂ ||೧೪||

ಶತವಾರಂ ಜಪಶ್ಚೈವ ಪಾಪಂ ಮಾಸಾರ್ಜಿತಂ ಹರೇತ್ ।
ಸಹಸ್ರಧಾ ಜಪಶ್ಚೈವ ಕಲ್ಮಷಂ ವತ್ಸರಾರ್ಜಿತಂ ||೧೫||

ಲಕ್ಷೋ ಜನ್ಮಕೃತಂ ಪಾಪಂ ದಶಲಕ್ಷೋಽನ್ಯಜನ್ಮಜಂ ।
ಸರ್ವಜನ್ಮಕೃತಂ ಪಾಪಂ ಶತಲಕ್ಷಾದ್ವಿನಶ್ಯತಿ ||೧೬||

ಕರೋತಿ ಮುಕ್ತಿಂ ವಿಪ್ರಾಣಾಂ ಜಪೋ ದಶಗುಣಸ್ತತಃ ।
ಕರಂ ಸರ್ಪಫಣಾಕಾರಂ ಕೃತ್ವಾ ತದ್ರಂಧ್ರಮುದ್ರಿತಂ ||೧೭||

ಆನಮ್ರಮೂರ್ಧ್ವಮಚಲಂ ಪ್ರಜಪೇತ್ಪ್ರಾಙ್ಮುಖೋ ದ್ವಿಜಃ ।
ಅನಾಮಿಕಾ ಮಧ್ಯದೇಶಾದಧೋಽವಾಮಕ್ರಮೇಣ ಚ ||೧೮||

---

ಮುನಿಯು ಹೇಳಿದನು—ಗಾಯತ್ರಿಯನ್ನು ಒಂದುಬಾರಿ ಜಪಿಸಿದರೆ ಹಗಲು ಮತ್ತು ರಾತ್ರಿಯಲ್ಲಿ ಮಾಡಿದ ಪಾಪವೂ, ನೂರುಸಾರಿ ಜಪಿಸಿದರೆ ಒಂದು ತಿಂಗಳಲ್ಲಿ ಮಾಡಿದ ಪಾಪವೂ, ಸಾವಿರಬಾರಿ ಜಪಿಸಿದರೆ ಒಂದು ವರ್ಷದಲ್ಲಿ ಸಂಪಾದಿಸಿದ ಪಾಪವೂ, ನಾಶವಾಗುವುದು. ||೧೪-೧೫||

ಲಕ್ಷಸಂಖ್ಯೆಯ ಜಪವು ಈ ಜನ್ಮದಲ್ಲಿ ಮಾಡಿದ ಪಾಪವನ್ನೂ ಹತ್ತುಲಕ್ಷ ಜಪವು ಕಳೆದ ಜನ್ಮದ ಪಾಪವನ್ನೂ ನೂರುಲಕ್ಷ ಜಪವು ಸಮಸ್ತಜನ್ಮಗಳ ಪಾಪವನ್ನೂ ನಾಶಮಾಡುವುದು. ||೧೬||

ಹತ್ತುಕೋಟಿ ಗಾಯತ್ರೀಜಪವು ಬ್ರಾಹ್ಮಣನಿಗೆ ಜ್ಞಾನವನ್ನುಂಟುಮಾಡಿ ಮೋಕ್ಷವನ್ನು ಕೊಡುವುದು.

ಜಪಮಾಡುವವನು ಬಲಗೈಯ್ಯನ್ನು ಬೆರಳುಗಳು ರಂಧ್ರಬಿಡದಂತೆ ಸೇರಿಸಿ ಹಾವಿನ ಹೆಡೆಯಂತೆ ಮಾಡಿಕೊಂಡು ತಲೆಯನ್ನು ಬಗ್ಗಿಸಿಕೊಂಡು ಚಲಿಸದೆ ಪೂರ್ವಾಭಿಮುಖವಾಗಿ ಕುಳಿತು ಹೆಬ್ಬೆರಳನ್ನು ಅನಾಮಿಕದ ನಡುವೆ ಇರುವ ಗೆರೆಯ ಮೇಲಿಟ್ಟು ಕೆಳಗಿಳಿದು ಪ್ರದಕ್ಷಿಣಾಕಾರವಾಗಿ ತರ್ಜನಿಯ ಬೆರಳಿನ ಬುಡದಲ್ಲಿರುವ ಗೆರೆಯವರೆಗೆ ಒಂದೊಂದು ಗೆರೆಗೆ ಒಂದೊಂದು ಬಾರಿ ಮಂತ್ರವನ್ನು ಜಪಿಸುತ್ತಾ ಈ ಕ್ರಮದಲ್ಲಿ ಜಪಮಾಡಬೇಕು. ||೧೭-೧೮||

**ತರ್ಜನೀಮೂಲಪರ್ಯಂತಂ ಜಪಸ್ಯೈವಂ ಕ್ರಮಃ ಕರೇ ।**
**ಶ್ವೇತಪಂಕಜ ಬೀಜಾನಾಂ ಸ್ಫಟಿಕಾನಾಂ ಚ ಸಂಸ್ಕೃತಾಂ ॥೧೯॥**

**ಕೃತ್ವಾ ವಾ ಮಾಲಿಕಾಂ ರಾಜನ್ ಜಪೇತ್ತೀರ್ಥೇ ಸುರಾಲಯೇ ।**
**ಸಂಸ್ಥಾಪ್ಯ ಮಾಲಾಮಶ್ವತ್ಥಪತ್ರೇ ಪದ್ಮೇ ಚ ಸಂಯುತಃ ॥೨೦॥**

**ಕೃತ್ವಾ ಗೋರೋಚನಾಕ್ತಾಂ ಚ ಗಾಯತ್ರ್ಯಾ ಸ್ನಾಪಯೇತ್ಸುಧೀಃ ।**
**ಗಾಯತ್ರೀಶತಕಂ ತಸ್ಯಾಂ ಜಪೇಚ್ಚ ವಿಧಿಪೂರ್ವಕಂ ॥೨೧॥**

**ಅಥವಾ ಪಂಚಗವ್ಯೇನ ಸ್ನಾತ್ವಾ ಮಾಲಾಂ ಸುಸಂಸ್ಕೃತಾಂ ।**
**ಅಥ ಗಂಗೋದಕೇನೈವ ಸ್ನಾತ್ವಾ ವಾಽತಿಸುಸಂಸ್ಕೃತಾಂ ॥೨೨॥**

**ಏವಂ ಕ್ರಮೇಣ ರಾಜರ್ಷೇ ದಶಲಕ್ಷಂ ಜಪಂ ಕುರು ।**
**ಸಾಕ್ಷಾದ್ದ್ರಕ್ಷ್ಯಸಿ ಸಾವಿತ್ರೀಂ ತ್ರಿಜನ್ಮಪಾತಕಕ್ಷಯಾತ್ ॥೨೩॥**

**ನಿತ್ಯಂ ಸಂಧ್ಯಾಂ ಚ ಹೇ ರಾಜನ್ಕರಿಷ್ಯಸಿ ದಿನೇದಿನೇ ।**
**ಮಧ್ಯಾಹ್ನೇ ಚಾಽಪಿ ಸಾಯಾಹ್ನೇ ಪ್ರಾತರೇವ ಶುಚಿಃ ಸದಾ ॥೨೪॥**

---

ಬಿಳಿಯ ಕಮಲದ ಬೀಜಗಳಿಂದಾಗಲೀ ಸ್ಫಟಿಕಮಣಿಗಳಿಂದಾಗಲೀ ಜಪ ಮಾಲೆಯನ್ನು ಮಾಡಿ ತೀರ್ಥಕ್ಷೇತ್ರಗಳಲ್ಲಿಯೂ ದೇವಾಲಯಗಳಲ್ಲಿಯೂ ಕುಳಿತು ಜಪಿಸಬಹುದು. ಆ ಮಾಲೆಯನ್ನು ಅರಳಿಯ ಎಲೆಯ ಮೇಲಾಗಲೀ ಕಮಲದ ಎಲೆಯ ಮೇಲಾಗಲೀ ಇಡಬೇಕು. ಗೋರೋಚನದ ನೀರಿನಲ್ಲಿ ಗಾಯತ್ರೀಮಂತ್ರ ದಿಂದ ಮಾಲೆಯನ್ನು ತೊಳೆದು ಜಪಿಸಬೇಕು. ಆ ಮಾಲೆಯಲ್ಲಿ ನೂರುಸಾರಿ ಗಾಯತ್ರಿಯನ್ನು ಜಪಮಾಡಿದ ಮೇಲೆ ಮತ್ತೆ ಅದನ್ನು ತೊಳೆಯಬೇಕು. ಪಂಚ ಗವ್ಯದಿಂದಲಾದರೂ ಗಂಗೆಯ ನೀರಿನಿಂದಲಾದರೂ ಮಾಲೆಯನ್ನು ತೊಳೆಯ ಬಹುದು. ಹೀಗೆ ಸಂಸ್ಕಾರಮಾಡಿದ ಮಾಲೆಯಲ್ಲಿ ಜಪಮಾಡುತ್ತಾ ಹತ್ತುಲಕ್ಷ ಜಪವನ್ನು ಮಾಡಿದರೆ ಮೂರು ಜನ್ಮಗಳ ಪಾಪವು ನಾಶವಾಗಿ ಸಾವಿತ್ರೀದೇವಿಯನ್ನು ಪ್ರತ್ಯಕ್ಷವಾಗಿ ಕಾಣುವೆ. ॥೧೯-೨೦-೨೧-೨೨-೨೩॥

ಎಲೈ ರಾಜನೇ, ಪ್ರತಿದಿನವೂ ಪ್ರಾತಃಕಾಲ, ಮಧ್ಯಾಹ್ನ, ಸಾಯಂಕಾಲಗಳಲ್ಲಿ ಸಂಧ್ಯಾಕರ್ಮವನ್ನು ಮಾಡಿದವನು ಯಾವಾಗಲೂ ಪರಿಶುದ್ಧನು. ಸಂಧ್ಯಾಕರ್ಮ ವನ್ನು ಮಾಡದವನು ಅಶುಚಿಯಾದವನು, ಅವನು ಯಾವ ಕರ್ಮಮಾಡುವುದಕ್ಕೂ

ಸಂಧ್ಯಾಹೀನೋಽಶುಚಿರ್ನಿತ್ಯಮನರ್ಹಃ ಸರ್ವಕರ್ಮಸು ।
ಯದಹ್ನಾ ಕುರುತೇ ಕರ್ಮ ನ ತಸ್ಯ ಫಲಭಾಗ್ಭವೇತ್ ॥೨೫॥

ನೋಪತಿಷ್ಠತಿ ಯಃ ಪೂರ್ವಾಂ ನೋಪಾಸ್ತೇ ಯಸ್ತು ಪಶ್ಚಿಮಾಂ ।
ಸ ಶೂದ್ರವದ್ಬಹಿಷ್ಕಾರ್ಯಃ ಸರ್ವಸ್ಮಾತ್ ದ್ವಿಜಕರ್ಮಣಃ ॥೨೬॥

ಯಾವಜ್ಜೀವನಪರ್ಯಂತಂ ತ್ರಿಸಂಧ್ಯಾಂ ಯಃ ಕರೋತಿ ಚ ।
ಸ ಚ ಸೂರ್ಯಸಮೋ ವಿಪ್ರಸ್ತೇಜಸಾ ತಪಸಾ ಸದಾ ॥೨೭॥

ತತ್ಪಾದಪದ್ಮರಜಸಾ ಸದ್ಯಃ ಪೂತಾ ವಸುಂಧರಾ ।
ಜೀವನ್ಮುಕ್ತಃ ಸ ತೇಜಸ್ವೀ ಸಂಧ್ಯಾಪೂತೋ ಹಿ ಯೋ ದ್ವಿಜಃ ॥೨೮॥

ತೀರ್ಥಾನಿ ಚ ಪವಿತ್ರಾಣಿ ತಸ್ಯ ಸಂಸ್ಪರ್ಶಮಾತ್ರತಃ ।
ತತಃ ಪಾಪಾನಿ ಯಾಂತ್ಯೇವ ವೈನತೇಯಾದಿವೋರಗಾಃ ॥೨೯॥

ನ ಗೃಹ್ಣಂತಿ ಸುರಾಃ ಪೂಜಾಂ ಪಿತರಃ ಪಿಂಡತರ್ಪಣಂ ।
ಸ್ವೇಚ್ಛಯಾ ಚ ದ್ವಿಜಾತೇಶ್ಚ ತ್ರಿಸಂಧ್ಯಾರಹಿತಸ್ಯ ಚ ॥೩೦॥

---

ಯೋಗ್ಯನಲ್ಲ. ಒಂದುವೇಳೆ ಅವನು ಯಾವ ದಿನ ಸತ್ಕರ್ಮವನ್ನು ಮಾಡಬೇಕೋ ಅದನ್ನು ಮಾಡಿದರೂ ಅದು ಫಲದಾಯಕವಾಗುವುದಿಲ್ಲ. ॥೨೪-೨೫॥

ಯಾವನು ಪ್ರಾತಃಸಂಧ್ಯೆಯನ್ನೂ ಸಾಯಂಸಂಧ್ಯೆಯನ್ನೂ ಮಾಡುವುದಿಲ್ಲವೋ ಅವನು ಶೂದ್ರನಂತೆ ದ್ವಿಜರು ಮಾಡಬೇಕಾದ ಯಾವ ಕರ್ಮಕ್ಕೂ ಯೋಗ್ಯನಾಗುವುದಿಲ್ಲವಾದುದರಿಂದ ಅವನನ್ನು ಬಿಡಬೇಕು. ॥೨೬॥

ಯಾವ ಬ್ರಾಹ್ಮಣನು ತಾನು ಬದುಕಿರುವವರೆಗೂ ಮೂರು ಕಾಲಗಳಲ್ಲಿಯೂ ಸಂಧ್ಯೆಯನ್ನು ಮಾಡುವನೋ ಅವನು ತೇಜಸ್ಸಿನಲ್ಲಿಯೂ ತಪಸ್ಸಿನಲ್ಲಿಯೂ ಸೂರ್ಯನ ಸಮವಾಗುವನು. ಅವನ ಪಾದದ ಧೂಳಿಯಿಂದ ಭೂಮಿಯು ಪವಿತ್ರವಾಗುವುದು. ಸಂಧ್ಯೆಯಿಂದ ಅಪರಿಶುದ್ಧನಾದ ದ್ವಿಜನೂ ಜೀವನ್ಮುಕ್ತನಾಗುವನು. ॥೨೭-೨೮॥

ಸಂಧ್ಯಾಕರ್ಮವನ್ನು ಮಾಡುವ ದ್ವಿಜನು ಮುಟ್ಟಿದ ಮಾತ್ರಕ್ಕೆ ಸಮಸ್ತ ತೀರ್ಥಗಳೂ ಪರಿಶುದ್ಧವಾಗುವುವು. ಇವನನ್ನು ಕಂಡ ಪಾಪಗಳು ಗರುಡನನ್ನು ಕಂಡ ಸರ್ಪಗಳಂತೆ ಓಡಿಹೋಗುವುವು. ತ್ರಿಕಾಲಸಂಧ್ಯೆಯನ್ನು ಮಾಡದ ದ್ವಿಜನ

ಮೂಲಪ್ರಕೃತ್ಯಭಕ್ತೋಯಸ್ತನ್ಮಂತ್ರಸ್ಯಾಪ್ಯನರ್ಚಕಃ ।
ತದುತ್ಸವವಿಹೀನಶ್ಚ ವಿಷಹೀನೋ ಯಥೋರಗಃ ॥೩೧॥

ವಿಷ್ಣುಮಂತ್ರವಿಹೀನಶ್ಚ ತ್ರಿಸಂಧ್ಯಾರಹಿತೋ ದ್ವಿಜಃ ।
ಏಕಾದಶೀವಿಹೀನಶ್ಚ ವಿಷಹೀನೋ ಯಥೋರಗಃ ॥೩೨॥

ಹರೇರನೈವೇದ್ಯಭೋಜೀ ಧಾವಕೋ ವೃಷವಾಹಕಃ ।
ಶೂದ್ರಾನ್ನಭೋಜೀ ಯೋ ವಿಪ್ರೋ ವಿಷಹೀನೋ ಯಥೋರಗಃ ॥೩೩॥

ಶೂದ್ರಾಣಾಂ ಶವದಾಹೀ ಯೋ ಸ ವಿಪ್ರೋ ವೃಷಲೀಪತಿಃ ।
ಶೂದ್ರಾಣಾಂ ಸೂಪಕಾರಶ್ಚ ವಿಷಹೀನೋ ಯಥೋರಗಃ ॥೩೪॥

ಶೂದ್ರಾಣಾಂ ಚ ಪ್ರತಿಗ್ರಾಹೀ ಶೂದ್ರಯಾಜೀ ಚ ಯೋ ದ್ವಿಜಃ ।
ಮಸಿಜೀವೀ ಅಸಿಜೀವೀ ವಿಷಹೀನೋ ಯಥೋರಗಃ ॥೩೫॥

---

ಪೂಜೆಯನ್ನು ದೇವತೆಗಳು ಸ್ವೀಕರಿಸುವುದಿಲ್ಲ. ಪಿತೃಗಳು ಪಿಂಡತರ್ಪಣಗಳನ್ನು ಮುಟ್ಟುವುದಿಲ್ಲ. ॥೨೯-೩೦॥

ಮೂಲಪ್ರಕೃತಿಯ ಭಕ್ತನಲ್ಲದವನೂ ದೇವಿಯಮಂತ್ರಜಪ, ಪೂಜೆಯಿಲ್ಲದವನೂ, ದೇವೀ ಉತ್ಸವವನ್ನು ಮಾಡದವನೂ ವಿಷ್ಣುಮಂತ್ರಹೀನನೂ ತ್ರಿಕಾಲ ಸಂಧ್ಯೆಯನ್ನು ಮಾಡದವನೂ, ಏಕಾದಶೀ ವ್ರತವನ್ನು ಮಾಡದವನೂ ಆದ ದ್ವಿಜನು ವಿಷವಿಲ್ಲದ ಸರ್ಪದಂತೆ ಎಲ್ಲರ ತಿರಸ್ಕಾರಕ್ಕೂ ಪಾತ್ರನಾಗುವನು. ॥೩೧-೩೨॥

ವಿಷ್ಣುವಿಗೆ ನೈವೇದ್ಯಮಾಡಿದುದನ್ನು ಭೋಜನಮಾಡದವನೂ, ಶೂದ್ರರ ಬಟ್ಟೆಗಳನ್ನೊಗೆಯುವವನೂ, ಎತ್ತುಗಳನ್ನು ಗಾಡಿಗಳಿಗೆ, ಅಥವಾ ನೇಗಿಲಿಗೆ ಕಟ್ಟಿ ನಡೆಸುವವನೂ ಶೂದ್ರರ ಅನ್ನವನ್ನು ಊಟಮಾಡುವವನೂ ಆದ ಬ್ರಾಹ್ಮಣನು ವಿಷವಿಲ್ಲದ ಸರ್ಪದಂತೆ ತಿರಸ್ಕಾರ ಪಾತ್ರನು. ಶೂದ್ರರ ಹೆಣವನ್ನು ಸುಡುವವನೂ, ಶೂದ್ರಸ್ತ್ರೀಯ ಪತಿಯೂ ಶೂದ್ರರಿಗೆ ಅಡಿಗೆ ಮಾಡತಕ್ಕವನೂ ಆದ ದ್ವಿಜನು ವಿಷವಿಲ್ಲದ ಸರ್ಪದಂತೆ ಗೌರವಾರ್ಹನಲ್ಲ. ॥೩೩-೩೪॥

ಶೂದ್ರರು ಕೊಟ್ಟದಾನವನ್ನು ತೆಗೆದುಕೊಳ್ಳತಕ್ಕವನೂ, ಅವರಿಗೆ ಯಜ್ಞ ಮಾಡಿಸುವವನೂ, ಬರವಣಿಗೆಯಿಂದ ಜೀವಿಸುವವನೂ, ಕತ್ತಿಯನ್ನು ಹಿಡಿದು ಜೀವಿಸುವವನೂ ಕನ್ಯೆಯನ್ನು ಮಾರುವವನೂ, ಹರಿನಾಮ ಜಪವನ್ನು ಮಾಡಿ ಅದರ ಫಲವನ್ನು ಮಾರುವವನೂ, ಗಂಡನೂ ಮಕ್ಕಳೂ ಇಲ್ಲದ ಬ್ರಾಹ್ಮಣಸ್ತ್ರೀಯ

ಯಃ ಕನ್ಯಾವಿಕ್ರಯೀ ವಿಪ್ರೋ ಯೋ ಹರೇರ್ನಾಮ ವಿಕ್ರಯೀ ।
ಯೋ ವಿಪ್ರೋಽವೀರಾನ್ನಭೋಜೀ ಋತುಸ್ನಾತಾನ್ನಭೋಜಕಃ ॥೩೬॥

ಭಗಜೀವೀ ವಾರ್ಧುಷಿಕೋ ವಿಷಹೀನೋ ಯಥೋರಗಃ ।
ಯೋ ವಿದ್ಯಾವಿಕ್ರಯೀ ವಿಪ್ರೋ ವಿಷಹೀನೋ ಯಥೋರಗಃ ॥೩೭॥

ಸೂರ್ಯೋದಯೇ ಸ್ವಪೇದ್ಯೋ ಹಿ ಮತ್ಸ್ಯಭೋಜೀ ಚ ಯೋ ದ್ವಿಜಃ ।
ಶಿವಪೂಜಾದಿರಹಿತೋ ವಿಷಹೀನೋ ಯಥೋರಗಃ ॥೩೮॥

ಇತ್ಯುಕ್ತ್ವಾ ಚ ಮುನಿಶ್ರೇಷ್ಠಃ ಸರ್ವಪೂಜಾವಿಧಿಕ್ರಮಂ ।
ತಮುವಾಚ ಚ ಸಾವಿತ್ರ್ಯಾ ಧ್ಯಾನಾದಿಕಮಭೀಪ್ಸಿತಂ ॥೩೯॥

ದತ್ವಾ ಸರ್ವಂ ನೃಪೇಂದ್ರಾಯ ಯಯೌ ಚ ಸ್ವಾಶ್ರಮೇ ಮುನೇ ।
ರಾಜಾ ಸಂಪೂಜ್ಯ ಸಾವಿತ್ರೀಂ ದದರ್ಶ ವರಮಾಪ ಚ ॥೪೦॥

॥ ನಾರದ ಉವಾಚ ॥

ಕಿಂ ವಾ ಧ್ಯಾನಂ ಚ ಸಾವಿತ್ರ್ಯಾಃ ಕಿಂ ವಾ ಪೂಜಾವಿಧಾನಕಂ ।
ಸ್ತೋತ್ರಂ ಮಂತ್ರಂ ಚ ಕಿಂ ದತ್ವಾ ಪ್ರಯಯೌ ಸ ಪರಾಶರಃ ॥೪೧॥

---

ಅನ್ನವನ್ನು ತಿನ್ನುವವನೂ, ನಾಲ್ಕನೆಯ ದಿನ ಋತುಸ್ನಾನ ಮಾಡಿದವಳು ಮಾಡಿದ ಅನ್ನವನ್ನು ತಿನ್ನುವವನೂ, ದುರಾಚಾರಪ್ರವೃತ್ತರಾದ ಸೋದರೀ ಮುಂತಾದ ಸ್ತ್ರೀಯರಿಂದ ಜೀವಿಸುವವನೂ, ಬಡ್ಡಿಯ ಹಣದಿಂದ ಜೀವಿಸುವವನೂ, ವಿದ್ಯೆಯನ್ನು ಮಾರುವವನೂ, ಸೂರ್ಯೋದಯಕಾಲದಲ್ಲಿ ಮಲಗಿರುವವನೂ, ಸೂರ್ಯಾಸ್ತಮಯ ಕಾಲದಲ್ಲಿ ಮಲಗಿರುವವನೂ, ಮಾನನ್ನು ತಿನ್ನುವವನೂ ದೇವೀಪೂಜೆಯನ್ನು ಮಾಡದವನೂ ಆದ ದ್ವಿಜನು ವಿಷವಿಲ್ಲದ ಸರ್ಪದಂತೆ ಎಲ್ಲರ ತಿರಸ್ಕಾರಕ್ಕೂ ಪಾತ್ರನಾಗುವನು. ॥೩೫-೩೬-೩೭-೩೮॥

ಹೀಗೆಂದು ಹೇಳಿ ಪರಾಶರಮುನಿಯು ಆ ಅಶ್ವಪತಿರಾಜನಿಗೆ ಇಷ್ಟವಾದ ಸಾವಿತ್ರೀದೇವಿಯ ಧ್ಯಾನಾದಿಗಳನ್ನೂ ಪೂಜಾಕ್ರಮಗಳನ್ನೂ ಉಪದೇಶಮಾಡಿ ತನ್ನ ಆಶ್ರಮಕ್ಕೆ ಪ್ರಯಾಣಮಾಡಿದನು. ರಾಜನು ಸಾವಿತ್ರೀದೇವಿಯನ್ನು ಪೂಜಿಸಿ ದೇವಿಯನ್ನು ಪ್ರತ್ಯಕ್ಷಮಾಡಿಕೊಂಡು ವರವನ್ನು ಪಡೆದನು. ॥೩೯-೪೦॥

ನಾರದನು ಕೇಳಿದನು—ಸಾವಿತ್ರೀದೇವಿಯ ಧ್ಯಾನವಾವುದು ? ಪೂಜಾವಿಧಾನವೆಂತು ? ಪರಾಶರಮುನಿಯು ಅಶ್ವಪತಿರಾಜನಿಗೆ ಯಾವ ಸ್ತೋತ್ರವನ್ನುಪದೇಶಮಾಡಿ

ನೃಪಃ ಕೇನ ವಿಧಾನೇನ ಸಂಪೂಜ್ಯ ಶ್ರುತಿಮಾತರಂ।
ವರಂ ಚ ಕಂ ವಾ ಸಂಪ್ರಾಪ ಸಂಪೂಜ್ಯ ತು ವಿಧಾನತಃ ॥೪೨॥

ರಹಸ್ಯಾತಿರಹಸ್ಯಂ ಚ ಶ್ರುತಿಸಿದ್ಧಂ ಸಮಾಸತಃ ।
ತತ್ಸರ್ವಂ ಶ್ರೋತುಮಿಚ್ಛಾಮಿ ಸಾವಿತ್ರ್ಯಾಃ ಪರಮಂ ಮಹತ್ ॥೪೩॥

॥ ನಾರಾಯಣ ಉವಾಚ ॥

ಜ್ಯೇಷ್ಠಕೃಷ್ಣತ್ರಯೋದಶ್ಯಾಂ ಶುದ್ಧಕಾಲೇ ಚ ಯತ್ನತಃ ।
ವ್ರತಮೇವಂ ಚತುರ್ದಶ್ಯಾಂ ವ್ರತೀ ಭಕ್ತ್ಯಾ ಸಮಾಚರೇತ್ ॥೪೪॥

ವ್ರತಂ ಚತುರ್ದಶಾಬ್ದಂ ಚ ದ್ವಿಸಪ್ತಫಲಸಂಯುತಂ।
ದತ್ವಾ ದ್ವಿಸಪ್ತ ನೈವೇದ್ಯಂ ಪುಷ್ಪಧೂಪಾದಿಕಂ ಚರೇತ್ ॥೪೫॥

ವಸ್ತ್ರಂ ಯಜ್ಞೋಪವೀತಂ ಚ ಭೋಜನಂ ವಿಧಿಪೂರ್ವಕಂ।
ಸಂಸ್ಥಾಪ್ಯ ಮಂಗಲಘಟಂ ಫಲಶಾಖಾ ಸಮನ್ವಿತಂ ॥೪೬॥

---

ದನು? ವೇದಮಾತೆಯಾದ ಸಾವಿತ್ರಿಯನ್ನು ರಾಜನು ಯಾವ ವಿಧಾನದಿಂದ ಪೂಜಿಸಿದನು? ಯಾವ ವರವನ್ನು ಪಡೆದನು? ಸಾವಿತ್ರಿಯ ಸಮಸ್ತಮಹಿಮೆಯನ್ನೂ ಕೇಳಬೇಕೆಂದು ಬಯಸುವೆನು. ಇದು ವೇದದಲ್ಲಿ ಸೂಚಿತವಾಗಿ ಅತ್ಯಂತ ಗುಟ್ಟಾಗಿರುವುದು. ಅವುಗಳನ್ನು ವಿಸ್ತರಿಸಿ ಹೇಳಬೇಕೆಂದು ಅಪೇಕ್ಷಿಸುತ್ತೇನೆ. ॥೪೧-೪೨-೪೩॥

ನಾರಾಯಣನು ಹೇಳಿದನು—ಜ್ಯೇಷ್ಠಮಾಸದ ಬಹುಳ ತ್ರಯೋದಶೀ ಅಥವಾ ಶುದ್ಧಚತುರ್ದಶೀ ಈ ತಿಥಿಗಳಲ್ಲಿ ಭಕ್ತಿಯಿಂದ ಈ ವ್ರತವನ್ನು ಮಾಡಬೇಕು. ॥೪೪॥

ಈ ಸಾವಿತ್ರಿಯ ವ್ರತವನ್ನು ಹದಿನಾಲ್ಕು ವರ್ಷಗಳವರೆಗೆ ಮಾಡಬೇಕು. ದೇವಿಗೆ ಹದಿನಾಲ್ಕು ಫಲಗಳನ್ನೂ ಹದಿನಾಲ್ಕು ನೈವೇದ್ಯಗಳನ್ನೂ ಸಮರ್ಪಿಸಬೇಕು. ಪುಷ್ಪ, ಧೂಪ, ದೀಪ, ವಸ್ತ್ರ, ಯಜ್ಞೋಪವೀತ ಇವುಗಳನ್ನು ಸಮರ್ಪಿಸಬೇಕು. ಫಲ, ಚಿಗುರು, ಇವುಗಳಿಂದ ಕೂಡಿದ ಮಂಗಲಕರವಾದ ಕಲಶವನ್ನು ಸ್ಥಾಪಿಸಿ, ಆ ಕಲಶದಲ್ಲಿ ದೇವಿಯನ್ನು ಪೂಜಿಸಬೇಕು. ॥೪೫-೪೬॥

ಗಣೇಶಂ ಚ ದಿನೇಶಂ ಚ ವಹ್ನಿಂ ವಿಷ್ಣುಂ ಶಿವಂ ಶಿವಾಂ ।
ಸಂಪೂಜ್ಯ ಪೂಜಯೇದಿಷ್ಟಂ ಘಟೇ ಆವಾಹಿತೇ ದ್ವಿಜಃ ॥೪೭॥

ಶೃಣು ಧ್ಯಾನಂ ಚ ಸಾವಿತ್ರ್ಯಾಶ್ಚೋಕ್ತಂ ಮಾಧ್ಯಂದಿನೇ ಚ ಯತ್ ।
ಸ್ತೋತ್ರಂ ಪೂಜಾವಿಧಾನಂ ಚ ಮಂತ್ರಂ ಚ ಸರ್ವಕಾಮದಂ ॥೪೮॥

ತಪ್ತಕಾಂಚನವರ್ಣಾಭಾಂ ಜ್ವಲಂತೀಂ ಬ್ರಹ್ಮತೇಜಸಾ ।
ಗ್ರೀಷ್ಮಮಧ್ಯಾಹ್ನಮಾರ್ತಾಂಡ ಸಹಸ್ರಸಂಮಿತಪ್ರಭಾಂ ॥೪೯॥

ಈಷದ್ಧಾಸ್ಯಪ್ರಸನ್ನಾಸ್ಯಾಂ ರತ್ನಭೂಷಣಭೂಷಿತಾಂ ।
ವಹ್ನಿಶುದ್ಧಾಂಶುಕಾಧಾನಾಂ ಭಕ್ತಾನುಗ್ರಹವಿಗ್ರಹಾಂ ॥೫೦॥

ಸುಖದಾಂ ಮುಕ್ತಿದಾಂ ಶಾಂತಾಂ ಕಾಂತಾಂ ಚ ಜಗತಾಂ ವಿಧೇಃ ।
ಸರ್ವಸಂಪತ್ಸ್ವರೂಪಾಂ ಚ ಪ್ರದಾತ್ರೀಂ ಸರ್ವಸಂಪದಾಂ ॥೫೧॥

ವೇದಾಧಿಷ್ಠಾತೃದೇವೀಂ ಚ ವೇದಶಾಸ್ತ್ರಸ್ವರೂಪಿಣೀಂ ।
ವೇದಬೀಜಸ್ವರೂಪಾಂ ಚ ಭಜೇ ತಾಂ ವೇದಮಾತರಂ ॥೫೨॥

---

ಗಣೇಶ, ಸೂರ್ಯ, ಅಗ್ನಿ, ವಿಷ್ಣು, ಶಿವ, ದೇವೀ, ಇವರುಗಳನ್ನು ಪೂಜಿಸಿ ಆಮೇಲೆ ಇಷ್ಟದೇವತೆಯಾದ ಸಾವಿತ್ರಿಯನ್ನು ಕಲಶದಲ್ಲಿ ಆವಾಹನಮಾಡಿ ಪೂಜೆ ಮಾಡಬೇಕು. ಮಾಂಧ್ಯಂದಿನ ಶಾಖೆಯಲ್ಲಿ ಹೇಳಿರುವ ಸಾವಿತ್ರಿಯ ಧ್ಯಾನವನ್ನೂ ಸ್ತೋತ್ರವನ್ನೂ, ಮಂತ್ರವನ್ನೂ, ಪೂಜಾವಿಧಿಯನ್ನೂ, ಹೇಳುವೆನು ಕೇಳು. ಇವು ಸಮಸ್ತ ಇಷ್ಟಾರ್ಥಗಳನ್ನೂ ಕೊಡುವುವು.. ॥೪೭-೪೮॥

ಪುಟವಿಟ್ಟ ಚಿನ್ನದ ಬಣ್ಣದ ಕಾಂತಿಯಂತೆ ಹೊಳೆಯುವ ಬ್ರಹ್ಮತೇಜಸ್ಸಿನಿಂದ ಪ್ರಕಾಶಿಸುವ ಗ್ರೀಷ್ಮಋತುವಿನ ಮಧ್ಯಾಹ್ನದ ಸಾವಿರ ಸೂರ್ಯರ ಸಮಾನವಾದ ಕಾಂತಿಯುಳ್ಳ ಮುಗುಳುನಗೆಯಿಂದ ಕೂಡಿದ ಸುಂದರವಾದ ಮುಖವುಳ್ಳ, ರತ್ನಾಭರಣಗಳನ್ನು ಧರಿಸಿರುವ ಅಗ್ನಿಯಂತೆ ಪರಿಶುದ್ಧವಾದ ವಸ್ತ್ರವನ್ನುಟ್ಟಿರುವ ಭಕ್ತರಿಗೆ ಅನುಗ್ರಹವನ್ನು ಮಾಡುವುದಕ್ಕಾಗಿ ಮೂರ್ತಿರೂಪವನ್ನು ಧರಿಸಿದ ಪ್ರಪಂಚವನ್ನು ಸೃಷ್ಟಿಸಿದ ಬ್ರಹ್ಮನ ಪತ್ನಿಯೂ ಶಾಂತಸ್ವಭಾವದವಳೂ ಸುಖವನ್ನೂ ಮೋಕ್ಷವನ್ನೂ ಕೊಡತಕ್ಕವಳೂ ಆದ ಸಮಸ್ತ ಸಂಪತ್ತಿನ ಸ್ವರೂಪಳಾಗಿ ಸಕಲ ಸಂಪತ್ತನ್ನೂ ಕೊಡತಕ್ಕವಳಾದ ವೇದಕ್ಕೆ ಆಶ್ರಯಸ್ವರೂಪಳೂ ವೇದಶಾಸ್ತ್ರಸ್ವರೂಪಳೂ ವೇದ

ಧ್ಯಾತ್ವಾ ಧ್ಯಾನೇನ ನೈವೇದ್ಯಂ ದತ್ವಾ ಪಾಣಿಂ ಸ್ವಮೂರ್ಧನಿ ।
ಪುನರ್ಧ್ಯಾತ್ವಾ ಘಟೇ ಭಕ್ತ್ಯಾ ದೇವೀಮಾವಾಹಯೇದ್ವ್ರತೀ ॥೫೩॥

ದತ್ವಾ ಷೋಡಶೋಪಚಾರಂ ವೇದೋಕ್ತಂ ಮಂತ್ರಪೂರ್ವಕಂ ।
ಸಂಪೂಜ್ಯ ಸ್ತುತ್ವಾ ಪ್ರಣಮೇದ್ದೇವದೇವೀಂ ವಿಧಾನತಃ ॥೫೪॥

ಆಸನಂ ಪಾದ್ಯಮರ್ಘ್ಯಂ ಚ ಸ್ನಾನೀಯಂ ಚಾನುಲೇಪನಂ ।
ಧೂಪಂದೀಪಂ ಚ ನೈವೇದ್ಯಂ ತಾಂಬೂಲಂ ಶೀತಲಂ ಜಲಂ ॥೫೫॥

ವಸನಂ ಭೂಷಣಂ ಮಾಲ್ಯಂ ಗಂಧಮಾಚಮನೀಯಕಂ ।
ಮನೋಹರಂ ಸುತಲ್ಪಂ ಚ ದೇಯಾನ್ಯೇತಾನಿ ಷೋಡಶ ॥೫೬॥

॥ ಪೂಜಾವಿಧಾನಂ ॥

ದಾರುಸಾರವಿಕಾರಂ ಚ ಹೇಮಾದಿನಿರ್ಮಿತಂ ಚ ವಾ ।
ದೇವಾಧಾರಂ ಪುಣ್ಯದಂ ಚ ಮಯಾ ತುಭ್ಯಂ ನಿವೇದಿತಂ ॥೫೭॥

ತೀರ್ಥೋದಕಂ ಚ ಪಾದ್ಯಂ ಚ ಪುಣ್ಯದಂ ಪ್ರೀತಿದಂ ಮಹತ್ ।
ಪೂಜಾಂಗಭೂತಂ ಶುದ್ಧಂ ಚ ಮಯಾ ತುಭ್ಯಂ ನಿವೇದಿತಂ ॥೫೮॥

---

ಬೀಜವಾದ ಪ್ರಣವಸ್ವರೂಪಳೂ ಆದ ವೇದಮಾತೃವಾದ ಸಾವಿತ್ರೀದೇವಿಯನ್ನು ಧ್ಯಾನಮಾಡುತ್ತೇನೆ. ॥೪೯-೫೦-೫೧-೫೨॥

ಈ ಧ್ಯಾನಶ್ಲೋಕದಿಂದ ಧ್ಯಾನಮಾಡಿ ನೈವೇದ್ಯಮಾಡಿ ತನ್ನ ತಲೆಯಮೇಲೆ ಕೈಜೋಡಿಸಿಕೊಂಡು ಮತ್ತೆ ಧ್ಯಾನಮಾಡಿ ಕಲಶದಲ್ಲಿ ದೇವಿಯನ್ನು ಭಕ್ತಿಯಿಂದ ಆವಾಹನೆಮಾಡಬೇಕು. ವ್ರತಮಾಡತಕ್ಕವನು ವೇದೋಕ್ತಮಂತ್ರಪೂರ್ವಕವಾಗಿ ಷೋಡಶೋಪಚಾರ ಪೂಜೆಯನ್ನು ಮಾಡಿ ಸ್ತೋತ್ರಮಾಡಿ ನಮಸ್ಕಾರಮಾಡಬೇಕು. ಆಸನ, ಪಾದ್ಯ, ಅರ್ಘ್ಯ, ಸ್ನಾನ, ಅನುಲೇಪನ, ಧೂಪ, ದೀಪ, ನೈವೇದ್ಯ, ತಾಂಬೂಲ, ಶೀತಲೋದಕ, ವಸ್ತ್ರ, ಆಭರಣ, ಪುಷ್ಪ, ಗಂಧ, ಆಚಮನೀಯಜಲ, ಮನೋಹರ ವಾದ ಹಾಸಿಗೆ, ಇವುಗಳೇ ಷೋಡಶೋಪಚಾರಗಳು. ॥೫೩-೫೪-೫೫-೫೬॥

ಶ್ರೀಗಂಧಮರದಿಂದ ಮಾಡಿದ ಅಥವಾ ಚಿನ್ನ ಮುಂತಾದ ಲೋಹದಿಂದ ಮಾಡಿದ ದೇವ ಮೂರ್ತಿಗೆ ಆಶ್ರಯವಾದ ಪೀಠವನ್ನು ನಿನಗೆ ಸಮರ್ಪಿಸಲಾಗಿದೆ. ಎಂಬ ಮಂತ್ರದಿಂದ ಆಸನ ಸಮರ್ಪಣೆಯು, ಪುಣ್ಯತೀರ್ಥವೂ ಪ್ರೀತಿಕರವೂ ಆದ

ಪವಿತ್ರರೂಪಮರ್ಘ್ಯಂ ಚ ದೂರ್ವಾಪುಷ್ಪದಲಾನ್ವಿತಂ ।
ಪುಣ್ಯದಂ ಶಂಖತೋಯಾಕ್ತಂ ಮಯಾ ತುಭ್ಯಂ ಸಮರ್ಪಿತಂ ॥೫೯॥

ಸುಗಂಧಗಂಧತೋಯಂ ಚ ಸ್ನೇಹಂ ಸೌಗಂಧಕಾರಕಂ ।
ಮಯಾ ನಿವೇದಿತಂ ಭಕ್ತ್ಯಾ ಸ್ನಾನೀಯಂ ಪ್ರತಿಗೃಹ್ಯತಾಂ ॥೬೦॥

ಗಂಧದ್ರವ್ಯೋದ್ಭವಂ ಪುಣ್ಯಂ ಪ್ರೀತಿದಂ ದಿವ್ಯಗಂಧದಂ ।
ಮಯಾ ನಿವೇದಿತಂ ಭಕ್ತ್ಯಾ ಗಂಧತೋಯಂ ತವಾಂಬಿಕೇ ॥೬೧॥

ಸರ್ವಮಂಗಲರೂಪಂ ಚ ಸರ್ವಂ ಚ ಮಂಗಲಪ್ರದಂ ।
ಪುಣ್ಯದಂ ಚ ಸುಧೂಪಂ ಚ ಗೃಹಾಣ ಪರಮೇಶ್ವರಿ ॥೬೨॥

ಸುಗಂಧಯುಕ್ತಂ ಸುಖದಂ ಮಯಾ ತುಭ್ಯಂ ನಿವೇದಿತಂ ।
ಜಗತಾಂ ದರ್ಶನಾರ್ಥಾಯ ಪ್ರದೀಪಂ ದೀಪ್ತಿಕಾರಕಂ ॥೬೩॥

---

ಪೂಜಾಂಗವಾದ ಶುದ್ಧವಾದ ಪಾದ್ಯವು ಸಮರ್ಪಿಸಲಾಯಿತು. ಎಂಬ ಮಂತ್ರದಿಂದ ಪಾದ್ಯಸಮರ್ಪಣೆಯು. ॥೫೭-೫೮॥

ಗರಿಕೆ, ಹೂ, ಹಣ್ಣು ಇವುಗಳಿಂದ ಕೂಡಿದ ಶಂಖದ ನೀರಿನಿಂದ ತೊಳೆದ ಪರಿಶುದ್ಧವಾದ 'ಅರ್ಘ್ಯವನ್ನು ಸಮರ್ಪಿಸುವೆನು. ಎಂಬ ಮಂತ್ರದಿಂದ ಅರ್ಘ್ಯ ಸಮರ್ಪಣೆಯು. ॥೫೯॥

ಸುವಾಸನೆಯಿಂದ ಕೂಡಿದ ನೀರು ಸುವಾಸನೆಯ ಎಣ್ಣೆ ಇವುಗಳನ್ನು ಸ್ನಾನಕ್ಕಾಗಿ ಭಕ್ತಿಯಿಂದ ಸಮರ್ಪಿಸುವೆನು. ಎಂಬ ಮಂತ್ರದಿಂದ ಸ್ನಾನೀಯ ಸಮರ್ಪಣೆ. ॥೬೦॥

ಸುಗಂಧಪದಾರ್ಥಗಳಿಂದ ಮಾಡಿದ ಪರಿಶುದ್ಧವಾದ, ಸಂತೋಷವನ್ನುಂಟು ಮಾಡುವ ಭಕ್ತಿಯಿಂದ ನಾನು ಅರ್ಪಿಸುವ ಅನುಲೇಪನವನ್ನು ಸ್ವೀಕರಿಸಬೇಕು. ಎಂಬ ಮಂತ್ರದಿಂದ ಅನುಲೇಪನ ಸಮರ್ಪಣೆಯು. ॥೬೧॥

ಎಲ್ಲ ಬಗೆಯ ಮಂಗಲಸ್ವರೂಪವಾಗಿ ಮಂಗಲವನ್ನುಂಟುಮಾಡುವ ಪುಣ್ಯವನ್ನು ಕೊಡುವ ಸುವಾಸನೆಯಾದ ಒಳ್ಳೆಯ ಧೂಪವನ್ನು ಸ್ವೀಕರಿಸು ಎಂಬ ಮಂತ್ರದಿಂದ ಧೂಪಸಮರ್ಪಣೆಯು. ॥೬೨॥

ಸುಖವನ್ನು ಕೊಡುವ ಪ್ರಪಂಚವನ್ನು ನೋಡುವುದಕ್ಕನುಕೂಲವಾದ

ಅಂಧಕಾರಧ್ವಂಸಬೀಜಂ ಮಯಾ ತುಭ್ಯಂ ನಿವೇದಿತಂ ।
ತುಷ್ಟಿದಂ ಪುಷ್ಟಿದಂ ಚೈವ ಪ್ರೀತಿದಂ ಕ್ಷುದ್ವಿನಾಶನಂ ॥೬೪॥

ಪುಣ್ಯದಂ ಸ್ವಾದುರೂಪಂ ಚ ನೈವೇದ್ಯಂ ಪ್ರತಿಗೃಹ್ಯತಾಂ ।
ತಾಂಬೂಲಪ್ರವರಂ ರಮ್ಯಂ ಕರ್ಪೂರಾದಿಸುವಾಸಿತಂ ॥೬೫॥

ತುಷ್ಟಿದಂ ಪುಷ್ಟಿದಂ ಚೈವ ಮಯಾ ತುಭ್ಯಂ ನಿವೇದಿತಂ ।
ಸುಶೀತಲಂ ವಾರಿಶೀತಂ ಪಿಪಾಸಾನಾಶಕಾರಣಂ ॥೬೬॥

ಜಗತಾಂ ಬೀಜರೂಪಂ ಚ ಜೀವನಂ ಪ್ರತಿಗೃಹ್ಯತಾಂ
ದೇಹಶೋಭಾಸ್ವರೂಪಂ ಚ ಸಭಾಶೋಭಾವಿವರ್ಧನಂ ॥೬೭॥
ಕಾರ್ಪಾಸಜಂ ಚ ಕ್ರಿಮಿಜಂ ವಸನಂ ಪ್ರತಿಗೃಹ್ಯತಾಂ ।

---

ಬೆಳಕನ್ನು ಕೊಡುವ ಕತ್ತಲೆಯನ್ನು ನಾಶಮಾಡುವ ದೀಪವನ್ನು ಸಮರ್ಪಿಸುವೆನು. ಎಂಬ ಮಂತ್ರದಿಂದ ದೀಪಸಮರ್ಪಣೆಯು. ॥೬೩॥

ತೃಪ್ತಿಯನ್ನೂ ಬಲವನ್ನೂ ಪ್ರೀತಿಯನ್ನೂ ಉಂಟುಮಾಡುವ, ಹಸಿವನ್ನು ನಿವಾರಣೆಮಾಡುವ, ಪುಣ್ಯಕರವೂ, ರುಚಿಯೂ, ಆದ ನೈವೇದ್ಯವನ್ನು ಸ್ವೀಕರಿಸು ಎಂಬ ಮಂತ್ರದಿಂದ ನೈವೇದ್ಯ ಸಮರ್ಪಣೆಯು. ॥೬೪॥

ಮನೋಹರವಾದ ಪಚ್ಚಕರ್ಪೂರವೇ ಮೊದಲಾದುವುಗಳಿಂದ ಸುವಾಸನೆಯಾದ ತೃಪ್ತಿಯನ್ನೂ ಬಲವನ್ನೂ ಕೊಡುವ ಶ್ರೇಷ್ಠವಾದ ತಾಂಬೂಲವನ್ನು ನಿನಗೆ ಸಮರ್ಪಿಸುವೆನು. ಎಂಬ ಮಂತ್ರದಿಂದ ತಾಂಬೂಲಸಮರ್ಪಣೆಯು. ॥೬೫॥

ತಣ್ಣಗಿರುವ ಬಾಯಾರಿಕೆಯನ್ನು ಪರಿಹರಿಸುವ ಪ್ರಪಂಚದ ಬದುಕುವಿಕೆಗೆ ಕಾರಣವಾದ ನೀರನ್ನು ಸ್ವೀಕರಿಸು. ಎಂಬ ಮಂತ್ರದಿಂದ ಶೀತಲ ಜಲ ಸಮರ್ಪಣೆಯು. ॥೬೬॥

ಶರೀರಕ್ಕೆ ಕಾಂತಿಸ್ವರೂಪವಾದ ಸಭೆಯ ಕಾಂತಿಯನ್ನು ಹೆಚ್ಚಿಸುವ ಹತ್ತಿಯಿಂದಲೂ ಮತ್ತು ರೇಷ್ಮೆಯಿಂದಲೂ ಮಾಡಿದ ವಸ್ತ್ರವನ್ನು ಸ್ವೀಕರಿಸಬೇಕು. ಎಂಬ ಮಂತ್ರದಿಂದ ವಸ್ತ್ರಸಮರ್ಪಣೆಯು. ॥೬೭॥

ಕಾಂಚನಾದಿವಿನಿರ್ಮಾಣಂ ಶ್ರೀಕರಂ ಶ್ರೀಯುತಂ ಸದಾ ॥೬೮॥

ಸುಖದಂ ಪುಣ್ಯದಂ ರತ್ನಭೂಷಣಂ ಪ್ರತಿಗೃಹ್ಯತಾಂ ।
ನಾನಾವೃಕ್ಷಸಮುದ್ಭೂತಂ ನಾನಾರೂಪ ಸಮನ್ವಿತಂ ॥೬೯॥

ಫಲಸ್ವರೂಪಂ ಫಲದಂ ಫಲಂ ಚ ಪ್ರತಿಗೃಹ್ಯತಾಂ ।
ಸರ್ವಮಂಗಲರೂಪಂ ಚ ಸರ್ವಮಂಗಲಮಂಗಲಂ ॥೭೦॥

ನಾನಾಪುಷ್ಪವಿನಿರ್ಮಾಣಂ ಬಹುಶೋಭಾಸಮನ್ವಿತಂ ।
ಪ್ರೀತಿದಂ ಪುಣ್ಯದಂ ಚೈವ ಮಾಲ್ಯಂ ಚ ಪ್ರತಿಗೃಹ್ಯತಾಂ ॥೭೧॥

ಪುಣ್ಯದಂ ಚ ಸುಗಂಧಾಢ್ಯಂ ಗಂಧಂ ಚ ದೇವಿ ಗೃಹ್ಯತಾಂ ।
ಸಿಂಧೂರಂ ಚ ವರಂ ರಮ್ಯಂ ಭಾಲಶೋಭಾವಿವರ್ಧನಂ ॥೭೨॥
ಭೂಷಣಾನಾಂ ಚ ಪ್ರವರಂ ಸಿಂಧೂರಂ ಪ್ರತಿಗೃಹ್ಯತಾಂ ।

---

ಚಿನ್ನವೇ ಮೊದಲಾದ ಲೋಹಗಳಿಂದ ಮಾಡಿದ ಸಂಪತ್ತಿನಿಂದ ಕೂಡಿದ ಸುಖವನ್ನೂ ಪುಣ್ಯವನ್ನೂ ಕೊಡುವ ರತ್ನಾಭರಣಗಳನ್ನು ಸ್ವೀಕರಿಸಬೇಕು. ಎಂಬ ಮಂತ್ರದಿಂದ ಆಭರಣ ಸಮರ್ಪಣೆಯು. ॥೬೮॥

ಬಗೆಬಗೆಯ ಮರಗಳಿಂದ ಹುಟ್ಟಿದ ಅನೇಕ ಆಕಾರಗಳಿಂದ ಕೂಡಿದ ಪ್ರಯೋಜನವನ್ನುಂಟುಮಾಡುವ ಫಲವನ್ನು ಸ್ವೀಕರಿಸಬೇಕು. ಎಂಬ ಮಂತ್ರದಿಂದ ಫಲ ಸಮರ್ಪಣೆಯು. ॥೬೯॥

ಸಮಸ್ತ ಮಂಗಲಸ್ವರೂಪವೂ ಮಂಗಲಕರವಸ್ತುಗಳಲ್ಲಿ ಶ್ರೇಷ್ಠವೂ ಬಗೆಬಗೆಯ ಪುಷ್ಪಗಳಿಂದ ಮಾಡಿದ ಅಲಂಕಾರದಿಂದ ಕೂಡಿದುದೂ ಸಂತೋಷವನ್ನೂ ಪುಣ್ಯವನ್ನೂ ಕೊಡತಕ್ಕದ್ದೂ ಆದ ಪಾದದವರೆಗೂ ಬರತಕ್ಕ ಮಾಲೆಯನ್ನು ಸ್ವೀಕರಿಸಬೇಕು. ಎಂಬ ಮಂತ್ರದಿಂದ ಪುಷ್ಪಹಾರಸಮರ್ಪಣೆಯು. ॥೭೦-೭೧॥

ಎಲೌ ದೇವಿಯೇ, ಪರಿಶುದ್ಧವೂ ಸುವಾಸನೆಯೂ ಆದ ಗಂಧವನ್ನು ಸ್ವೀಕರಿಸು. ಹಣೆಗೆ ಕಾಂತಿಯನ್ನು ಹೆಚ್ಚಿಸುವ ಅಲಂಕಾರಗಳಲ್ಲಿ ಶ್ರೇಷ್ಠವಾದ ಮನೋಹರವಾದ ಸಿಂಧೂರವನ್ನು ಸ್ವೀಕರಿಸಬೇಕು. ಎಂಬ ಮಂತ್ರದಿಂದ ಗಂಧ ಮತ್ತು ಸಿಂಧೂರಸಮರ್ಪಣೆಯು. ॥೭೨॥

ವಿಶುದ್ಧಗ್ರಂಥಿಸಂಯುಕ್ತಂ ಪುಣ್ಯಸೂತ್ರವಿನಿರ್ಮಿತಂ ॥೭೩॥

ಪವಿತ್ರಂ ವೇದಮಂತ್ರೇಣ ಯಜ್ಞಸೂತ್ರಂ ಚ ಗೃಹ್ಯತಾಂ ।
ದ್ರವ್ಯಾಣ್ಯೇತಾನಿ ಮೂಲೇನ ದತ್ವಾ ಸ್ತೋತ್ರಂ ಪಠೇತ್ಸುಧೀಃ ॥೭೪॥

ತತೋ ವಿಪ್ರಾಯ ಭಕ್ತ್ಯಾ ಚ ವ್ರತೀ ದದ್ಯಾಚ್ಚ ದಕ್ಷಿಣಾಂ ।
ಸಾವಿತ್ರೀತಿ ಚತುರ್ಥ್ಯಂತಂ ವಹ್ನಿಜಾಯಾಂತಮೇವ ಚ ॥೭೫॥

ಲಕ್ಷ್ಮೀರ್ಮಾಯಾ ಕಾಮಪೂರ್ವಂ ಮಂತ್ರಮಷ್ಟಾಕ್ಷರಂ ವಿದುಃ ।
ಮಾಧ್ಯಂ ದಿನೋಕ್ತಸ್ತೋತ್ರಂ ಚ ಸರ್ವಕಾಮಫಲಪ್ರದಂ ॥೭೬॥

ವಿಪ್ರಜೀವನರೂಪಂ ಚ ನಿಬೋಧ ಕಥಯಾಮಿ ತೇ ।
ಕೃಷ್ಣೇನ ದತ್ತಾಂ ಸಾವಿತ್ರೀಂ ಗೋಲೋಕೇ ಬ್ರಹ್ಮಣೇ ಪುರಾ ॥೭೭॥
ನಾಯಾತಿ ಸಾ ತೇನ ಸಾರ್ಧಂ ಬ್ರಹ್ಮಲೋಕೇ ಚ ನಾರದ ।

---

ಪರಿಶುದ್ಧವಾದ ಬ್ರಹ್ಮಗಂಟೆನಿಂದ ಕೂಡಿದ ಪುಣ್ಯಕರವಾದ ದಾರದಿಂದ ಮಾಡಿದ ವೇದಮಂತ್ರದಿಂದ ಶುದ್ಧವಾದ ಯಜ್ಞೋಪವೀತವನ್ನು ಸ್ವೀಕರಿಸು. ಎಂಬ ಮಂತ್ರದಿಂದ ಯಜ್ಞೋಪವೀತ ಸಮರ್ಪಣೆಯು. ॥೭೩॥

ಮೂಲಮಂತ್ರಗಳಿಂದ ಮೇಲೆ ಹೇಳಿದ ದ್ರವ್ಯಗಳನ್ನು ದೇವಿಗೆ ಸಮರ್ಪಿಸಿ ವ್ರತಮಾಡಿದವನು ಭಕ್ತಿಯಿಂದ ಬ್ರಾಹ್ಮಣನಿಗೆ ದಕ್ಷಿಣೆಯನ್ನು ಕೊಡಬೇಕು. ಆಮೇಲೆ ಸ್ತೋತ್ರವನ್ನು ಪಠಿಸಬೇಕು. ॥೭೪॥

"ಶ್ರೀಂ, ಹ್ರೀಂ, ಕ್ಲೀಂ, ಸಾವಿತ್ರ್ಯೈ ಸ್ವಾಹಾ" ಎಂಬುದೇ ಅಷ್ಟಾಕ್ಷರ ಮಂತ್ರವು. ಸ್ತ್ರೀಯರು ಈ ಮಂತ್ರದಲ್ಲಿ ಸ್ವಾಹಾ ಎಂಬುದಕ್ಕೆ ಬದಲಾಗಿ ನಮಃ ಎಂದು ಸೇರಿಸಿ ಜಪ ಮಾಡಬೇಕು. ವ್ರತಮಾಡತಕ್ಕವನು ಮೇಲೆ ಹೇಳಿದ ಮಂತ್ರ ಪೂರ್ವಕವಾಗಿ ಪ್ರತಿಯೊಂದು ಉಪಚಾರವನ್ನೂ ಮಾಡಬೇಕು. ॥೭೫॥

ನಾರದನೇ, ಮಾಂಧ್ಯಂದಿನ ಶಾಖೆಯಲ್ಲಿ ಹೇಳಿದ ಈ ಸ್ತೋತ್ರವು ಸಕಲ ಇಷ್ಟಾರ್ಥಗಳನ್ನೂ ಕೊಡುವುದು. ಬ್ರಾಹ್ಮಣನಿಗೆ ಜೀವನಸ್ವರೂಪವಾದುದು. ಅದನ್ನು ಹೇಳುವೆನು ಕೇಳು. ॥೭೬॥

ಪೂರ್ವದಲ್ಲಿ ಗೋಲೋಕದಲ್ಲಿ ಕೃಷ್ಣನು ಬ್ರಹ್ಮನಿಗೆ ಸಾವಿತ್ರಿಯನ್ನು ಕೊಟ್ಟನು. ಆ ಸಾವಿತ್ರೀದೇವಿಯು ಬ್ರಹ್ಮನೊಡನೆ ಬ್ರಹ್ಮಲೋಕಕ್ಕೆ ಬರಲಿಲ್ಲ.

ಬ್ರಹ್ಮಾ ಕೃಷ್ಣಾಜ್ಞಯಾ ಭಕ್ತ್ಯಾ ತುಷ್ಟಾವ ವೇದಮಾತರಂ ॥೭೮॥
ತದಾ ಸಾ ಪರಿತುಷ್ಟಾ ಚ ಬ್ರಹ್ಮಾಣಂ ಚಕಮೇ ಪತಿಂ ।

॥ ಬ್ರಹ್ಮೋವಾಚ ॥

ಸಚ್ಚಿದಾನಂದರೂಪೇ ತ್ವಂ ಮೂಲಪ್ರಕೃತಿರೂಪಿಣಿ ॥೭೯॥
ಹಿರಣ್ಯಗರ್ಭರೂಪೇ ತ್ವಂ ಪ್ರಸನ್ನಾ ಭವ ಸುಂದರಿ ।
ತೇಜಃ ಸ್ವರೂಪೇ ಪರಮೇ ಪರಮಾನಂದರೂಪಿಣಿ ॥೮೦॥
ದ್ವಿಜಾತೀನಾಂ ಜಾತಿರೂಪೇ ಪ್ರಸನ್ನಾ ಭವ ಸುಂದರಿ ।
ನಿತ್ಯೇ ನಿತ್ಯಪ್ರಿಯೇ ದೇವಿ ನಿತ್ಯಾನಂದಸ್ವರೂಪಿಣಿ ॥೮೧॥
ಸರ್ವಮಂಗಲರೂಪೇ ಚ ಪ್ರಸನ್ನಾ ಭವ ಸುಂದರಿ ।
ಸರ್ವಸ್ವರೂಪೇ ವಿಪ್ರಾಣಾಂ ಮಂತ್ರಸಾರೇ ಪರಾತ್ಪರೇ ॥೮೨॥
ಸುಖದೇ ಮೋಕ್ಷದೇ ದೇವಿ ಪ್ರಸನ್ನಾ ಭವ ಸುಂದರಿ ।
ವಿಪ್ರಪಾಪೇಧ್ಮದಾಹಾಯ ಜ್ವಲದಗ್ನಿಶಿಖೋಪಮೇ ॥೮೩॥
ಬ್ರಹ್ಮತೇಜಃ ಪ್ರದೇ ದೇವಿ ಪ್ರಸನ್ನಾ ಭವ ಸುಂದರಿ ।

---

ಕೃಷ್ಣನ ಅಪ್ಪಣೆಯಿಂದ ಬ್ರಹ್ಮನು ವೇದಕ್ಕೆ ತಾಯಿಯಾದ ಸಾವಿತ್ರೀದೇವಿಯನ್ನು ಭಕ್ತಿಯಿಂದ ಸ್ತೋತ್ರಮಾಡಿದನು. ಆಮೇಲೆ ಆ ದೇವಿಯು ಸಂತೋಷಪಟ್ಟು ಬ್ರಹ್ಮನನ್ನು ಪತಿಯನ್ನಾಗಿ ಅಪೇಕ್ಷಿಸಿದಳು. ॥೭೭-೭೮॥

ಬ್ರಹ್ಮನು ಹೇಳಿದನು—ಸಾವಿತ್ರೀದೇವಿಯೇ, ನೀನು ಸಚ್ಚಿದಾನಂದ ರೂಪಳು. ಹಿರಣ್ಯಗರ್ಭಸ್ವರೂಪಳು. ಶ್ರೇಷ್ಠವಾದ ತೇಜಸ್ಸಿನ ಸ್ವರೂಪಳು. ಪರಮಾನಂದಸ್ವರೂಪಳು. ದ್ವಿಜರಿಗೆ ಜಾತಿಸ್ವರೂಪಳು. ಶಾಶ್ವತವಾದ ಪರಬ್ರಹ್ಮನ ಪ್ರಿಯಳು. ಶಾಶ್ವತವಾದ ಆನಂದರೂಪಳು. ಸಮಸ್ತ ಮಂಗಲಸ್ವರೂಪಳು. ಬ್ರಾಹ್ಮಣರಿಗೆ ಸಕಲವಾದ ಇಷ್ಟಾರ್ಥಸ್ವರೂಪಳು. ಮಂತ್ರಸಾರವಾದ ಗಾಯತ್ರೀ ಮಂತ್ರಸ್ವರೂಪಳು. ಅತ್ಯಂತ ಶ್ರೇಷ್ಠಳು. ಸುಖವನ್ನೂ, ಮೋಕ್ಷವನ್ನೂ, ಕೊಡತಕ್ಕವಳು. ಬ್ರಾಹ್ಮಣರ ಪಾಪವೆಂಬ ಸೌದೆಯ ಹೊರೆಯನ್ನು ಸುಡುವ ಉರಿಯುತ್ತಿರುವ ಬೆಂಕಿಯ ಜ್ವಾಲಾಸ್ವರೂಪಳು. ಬ್ರಹ್ಮತೇಜಸ್ಸನ್ನು ಕೊಡತಕ್ಕವಳು. ಇಂತಹ ನೀನು ನನಗೆ ಪ್ರಸನ್ನಳಾಗು. ॥೭೯-೮೦-೮೧-೮೨-೮೩॥

ಕಾಯೇನ ಮನಸಾ ವಾಚಾ ಯತ್ಪಾಪಂ ಕುರುತೇ ನರಃ ॥೮೪॥

ತತ್ತ್ಸ್ಮರಣಮಾತ್ರೇಣ ಭಸ್ಮೀಭೂತಂ ಭವಿಷ್ಯತಿ ।
ಇತ್ಯುಕ್ತ್ವಾ ಜಗತಾಂ ಧಾತಾ ತಸ್ಥೌ ತತ್ರ ಚ ಸಂಸದಿ ॥೮೫॥

ಸಾವಿತ್ರೀ ಬ್ರಹ್ಮಣಾ ಸಾರ್ಧಂ ಬ್ರಹ್ಮಲೋಕಂ ಜಗಾಮ ಸಾ ।
ಅನೇನ ಸ್ತವರಾಜೇನ ಸಂಸ್ತೂಯಾಽಶ್ವಪತಿಃ ನೃಪಃ ॥೮೬॥

ದದರ್ಶ ತಾಂ ಚ ಸಾವಿತ್ರೀಂ ವರಂ ಪ್ರಾಪ ಮನೋಗತಂ ।
ಸ್ತವರಾಜಮಿಮಂ ಪುಣ್ಯಂ ಸಂಧ್ಯಾಂ ಕೃತ್ವಾ ಚ ಯಃ ಪಠೇತ್॥೮೭॥
ಪಾಠೇ ಚತುರ್ಣಾಂ ವೇದಾನಾಂ ಯತ್ಫಲಂ ಲಭತೇ ಚ ತತ್ ।

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ನವಮಸ್ಕಂಧೇ
ಷಡ್ವಿಂಶೋಽಧ್ಯಾಯಃ

---

ಮನುಷ್ಯನು ಶರೀರದಿಂದಲೂ, ಮನಸ್ಸಿನಿಂದಲೂ, ಮಾತಿನಿಂದಲೂ, ಯಾವ ಯಾವ ಪಾಪವನ್ನು ಮಾಡುತ್ತಾನೆಯೋ ಅವೆಲ್ಲವೂ ಸಾವಿತ್ರೀ ತತ್ವವನ್ನು ಸ್ಮರಿಸಿದ ಮಾತ್ರದಿಂದಲೇ ಬೂದಿಯಾಗುವುವು. ಹೀಗೆಂದು ಹೇಳಿ ಸೃಷ್ಟಿಕರ್ತನಾದ ಬ್ರಹ್ಮನು ಆ ಸಭೆಯಲ್ಲಿ ಸುಮ್ಮನಿದ್ದನು. ||೮೪-೮೫||

ಸಾವಿತ್ರೀದೇವಿಯು ಬ್ರಹ್ಮನೊಡನೆ ಬ್ರಹ್ಮಲೋಕಕ್ಕೆ ಹೋದಳು. ಅಶ್ವಪತಿ ರಾಜನು ಈ ಶ್ರೇಷ್ಠವಾದ ಸ್ತೋತ್ರದಿಂದ ಸ್ತೋತ್ರಮಾಡಿ ಆ ಸಾವಿತ್ರೀದೇವಿಯ ದರ್ಶನವನ್ನು ಮಾಡಿ ಇಷ್ಟಾರ್ಥವನ್ನು ಪಡೆದನು. ಈ ಸ್ತೋತ್ರವನ್ನು ಸಂಧ್ಯಾವಂದನೆಯನ್ನು ಮಾಡಿ ಯಾರು ಹೇಳುವರೋ ಅವರಿಗೆ ನಾಲ್ಕು ವೇದಗಳನ್ನೂ ಓದಿದ ಫಲ ಬರುವುದು. ||೮೬-೮೭||

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಒಂಬತ್ತನೆಯ ಸ್ಕಂಧದಲ್ಲಿ
ಇಪ್ಪತ್ತಾರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ನವಮಸ್ಕಂಧೇ

### ॥ ಸಪ್ತವಿಂಶೋಽಧ್ಯಾಯಃ ॥

### ಇಪ್ಪತ್ತೇಳನೆಯ ಅಧ್ಯಾಯವು

॥ ಶ್ರೀನಾರಾಯಣ ಉವಾಚ ॥

**ಸ್ತುತ್ವಾಽನೇನ ಸೋಽಶ್ವಪತಿಃ ಸಂಪೂಜ್ಯ ವಿಧಿಪೂರ್ವಕಂ ।**
**ದದರ್ಶ ತತ್ರ ತಾಂ ದೇವೀಂ ಸಹಸ್ರಾರ್ಕಸಮಪ್ರಭಾಂ ॥೧॥**

**ಉವಾಚ ಸಾ ಚ ರಾಜಾನಂ ಪ್ರಸನ್ನಾ ಸಸ್ಮಿತಾ ಸತೀ ।**
**ಯಥಾ ಮಾತಾ ಸ್ವಪುತ್ರಂ ಚ ದ್ಯೋತಯಂತೀ ದಿಶಸ್ತ್ವಿಷಾ ॥೨॥**

॥ ಸಾವಿತ್ರ್ಯುವಾಚ ॥

**ಜಾನಾಮ್ಯಹಂ ಮಹಾರಾಜ ಯತ್ತೇ ಮನಸಿ ವಾಂಛಿತಂ ।**
**ವಾಂಛಿತಂ ತವ ಪತ್ನ್ಯಾಶ್ಚ ಸರ್ವಂ ದಾಸ್ಯಾಮಿ ನಿಶ್ಚಿತಂ ॥೩॥**

---

ಶ್ರೀನಾರಾಯಣನು ಹೇಳಿದನು—ಅಶ್ವಪತಿರಾಜನು ಈ ಸ್ತೋತ್ರದಿಂದ ಸಾವಿತ್ರೀದೇವಿಯನ್ನು ಸ್ತೋತ್ರಮಾಡಿ ವಿಧಿಗನುಸಾರವಾಗಿ ಪೂಜೆಯನ್ನು ಮಾಡಿ ಅನೇಕ ಸೂರ್ಯರಿಗೆ ಸಮಾನವಾದ ಕಾಂತಿಯಿಂದ ಕೂಡಿದ ದೇವಿಯನ್ನು ಕಂಡನು. ಆ ದೇವಿಯು ತನ್ನ ಕಾಂತಿಯಿಂದ ದಿಕ್ಕುಗಳನ್ನು ಬೆಳಗುತ್ತಾ ಪ್ರಸನ್ನಳಾಗಿ ನಗುತ್ತಾ ತಾಯಿಯು ಮಕ್ಕಳಿಗೆ ಹೇಳುವಂತೆ ರಾಜನನ್ನು ಕುರಿತು ಮಾತನಾಡಿದಳು. ॥೧-೨॥

ಸಾವಿತ್ರಿಯು ಹೇಳಿದಳು—ಎಲೈ ಮಹಾರಾಜನೇ, ನಿನ್ನ ಮನಸ್ಸಿನಲ್ಲಿರುವುದನ್ನು ನಾನು ಬಲ್ಲೆನು. ನಿನ್ನ ಹೆಂಡತಿಯ ಇಷ್ಟವನ್ನೂ ಬಲ್ಲೆನು. ನಿಜವಾಗಿ ಎಲ್ಲ

ಸಾಧ್ವೀಕನ್ಯಾಭಿಲಾಷಂ ಚ ಕರೋತಿ ತವ ಕಾಮಿನೀ ।
ತ್ವಂ ಪ್ರಾರ್ಥಯಸಿ ಪುತ್ರಂ ಚ ಭವಿಷ್ಯತಿ ಕ್ರಮೇಣ ಚ ॥೪॥

ಇತ್ಯುಕ್ತ್ವಾ ಸಾ ತದಾ ದೇವೀ ಬ್ರಹ್ಮಲೋಕಂ ಜಗಾಮ ಹ ।
ರಾಜಾ ಜಗಾಮ ಸ್ವಗೃಹಂ ತತ್ಕನ್ಯಾಽಽದೌ ಬಭೂವ ಹ ॥೫॥

ಆರಾಧನಾಚ್ಚ ಸಾವಿತ್ರ್ಯಾ ಬಭೂವ ಕಮಲಾ ಪರಾ ॥
ಸಾವಿತ್ರೀತಿ ಚ ತನ್ನಾಮ ಚಕಾರಾಽಶ್ವಪತಿರ್ನೃಪಃ ॥೬॥

ಕಾಲೇನ ಸಾ ವರ್ಧಮಾನಾ ಬಭೂವ ಚ ದಿನೇ ದಿನೇ ।
ರೂಪಯೌವನಸಂಪನ್ನಾ ಶುಕ್ಲೇ ಚಂದ್ರಕಲಾ ಯಥಾ ॥೭॥

ಸಾ ವರಂ ವರಯಾಮಾಸ ದ್ಯುಮತ್ಸೇನಾತ್ಮಜಂ ಸದಾ ।
ಸತ್ಯವಂತಂ ಸತ್ಯಶೀಲಂ ನಾನಾಗುಣಸಮನ್ವಿತಂ ॥೮॥

ರಾಜಾ ತಸ್ಮೈ ದದೌ ತಾಂ ಚ ರತ್ನಭೂಷಣಭೂಷಿತಾಂ ।
ಸೋಽಪಿ ಸಾರ್ಧಂ ಕೌತುಕೇನ ತಾಂ ಗೃಹೀತ್ವಾ ಗೃಹಂ ಯಯೌ॥೯॥

---

ವನ್ನೂ ಕೊಡುವೆನು. ನಿನ್ನ ಹೆಂಡಿತಿಯು ಪತಿವ್ರತೆಯಾದ ಕನ್ಯೆಯನ್ನು ಅಪೇಕ್ಷಿಸುವಳು. ನೀನು ಪುತ್ರನನ್ನು ಅಪೇಕ್ಷಿಸುವೆ. ನಿಮ್ಮ ಇಷ್ಟಾರ್ಥಗಳು ಕ್ರಮವಾಗಿ ನೆರವೇರುವುವು. ॥೩-೪॥

ಹೀಗೆಂದು ಆ ಸಾವಿತ್ರೀದೇವಿಯು ಹೇಳಿ ಬ್ರಹ್ಮಲೋಕಕ್ಕೆ ಹೋದಳು. ರಾಜನು ತನ್ನ ಮನೆಗೆ ಬಂದನು. ಸಾವಿತ್ರೀದೇವಿಯನ್ನು ಪೂಜೆಮಾಡಿದುದರಿಂದ ಆ ರಾಜನಿಗೆ ಮೊದಲು ಲಕ್ಷ್ಮೀದೇವಿಗೆ ಸಮಾನಳಾದ ಕನ್ಯೆಯು ಜನಿಸಿದಳು. ರಾಜನು ಅವಳಿಗೆ ಸಾವಿತ್ರೀ ಎಂದು ನಾಮಕರಣಮಾಡಿದನು. ॥೫-೬॥

ಆ ಸಾವಿತ್ರಿಯು ಶುಕ್ಲಪಕ್ಷದ ಚಂದ್ರನಂತೆ ದಿನದಿನಕ್ಕೆ ಅಭಿವೃದ್ಧಿಯಾಗುತ್ತಾ ಸುಂದರವಾದ ರೂಪದಿಂದಲೂ ಪ್ರಾಯದಿಂದಲೂ ಕೂಡಿ ದ್ಯುಮತ್ಸೇನನ ಮಗನಾದ ಸತ್ಯವಂತನೂ, ಅನೇಕ ಸದ್ಗುಣಗಳಿಂದ ಕೂಡಿದವನೂ ಆದ ವರನನ್ನು ವರಿಸಿದಳು. ॥೭-೮॥

ರಾಜನಾದ ಅಶ್ವಪತಿಯು ರತ್ನಾಭರಣಗಳಿಂದಲಂಕೃತಳಾದ ಆಕೆಯನ್ನು ಆ ವರನಿಗೆ ಕೊಟ್ಟು ವಿವಾಹಮಾಡಿದನು. ಆ ವರನು ಸಂತೋಷದಿಂದ ಬಳುವಲಿಯೊಡನೆ ಸಾವಿತ್ರಿಯನ್ನು ಕರೆದುಕೊಂಡು ತನ್ನ ಮನೆಗೆ ಹೋದನು. ॥೯॥

**ಸ ಚ ಸಂವತ್ಸರೇಽತೀತೇ ಸತ್ಯವಾನ್ ಸತ್ಯವಿಕ್ರಮಃ ।**
**ಜಗಾಮ ಫಲಕಾಷ್ಠಾರ್ಥಂ ಪ್ರಹರ್ಷಂ ಪಿತುರಾಜ್ಞಯಾ ॥೧೦॥**

**ಜಗಾಮ ಸಾಧ್ವೀ ತತ್ಪಶ್ಚಾತ್ಸಾವಿತ್ರೀ ದೈವಯೋಗತಃ ।**
**ನಿಪತ್ಯ ವೃಕ್ಷಾದ್ದೈವೇನ ಪ್ರಾಣಾಂಸ್ತತ್ಯಾಜ ಸತ್ಯವಾನ್ ॥೧೧॥**

**ಯಮಸ್ತಂ ಪುರುಷಂ ದೃಷ್ಟ್ವಾ ಬದ್ಧಾಂಗುಷ್ಠಸಮಂ ಮುನೇ ।**
**ಗೃಹೀತ್ವಾ ಗಮನಂ ಚಕ್ರೇ ತತ್ಪಶ್ಚಾತ್ಪ್ರಯಯೌ ಸತೀ ॥೧೨॥**

---

ಒಂದು ವರ್ಷವು ಕಳೆಯುತ್ತಲೂ ಆ ಸತ್ಯವಂತನು ತಂದೆಯ ಅಪ್ಪಣೆಯಿಂದ ಹಣ್ಣನ್ನೂ ಕಟ್ಟಿಗೆಯನ್ನೂ ತರಲು ಹೋದನು. ॥೧೦॥

ಸುದೈವಯೋಗದಿಂದ ಸಾವಿತ್ರಿಯೂ ಅವನ ಹಿಂದೆ ಹೋದಳು. ಸತ್ಯವಂತನು ದುರ್ದೈವಯೋಗದಿಂದ ಮರದಿಂದ ಬಿದ್ದು ಪ್ರಾಣವನ್ನು ಬಿಟ್ಟನು. ॥೧೧॥

ನಾರದಮುನಿಯೇ, ಕೇಳು. ಯಮನು ಅಂಗುಷ್ಠಮಾತ್ರನಾದ ಪುರುಷನನ್ನು (ಸತ್ಯವಂತನನ್ನು) ಕಟ್ಟಿ ತೆಗೆದುಕೊಂಡು ಹೊರಟನು. ಪತಿವ್ರತೆಯಾದ ಸಾವಿತ್ರಿಯೂ ಆ ಯಮನ ಹಿಂದೆ ಹೊರಟಳು. ಇಲ್ಲಿ ಸಾವಿತ್ರಿಗೆ ಪತಿದರ್ಶನವಿಲ್ಲದಿದ್ದರೆ ದೇಹವನ್ನೇ ಬಿಡುತ್ತಿದ್ದಳು. ಆದರೆ ಅವಳಿಗೆ ಯಮನ ಕೈಯ್ಯಲ್ಲಿರುವ ಪತಿಯು ಕಾಣುತ್ತಿದ್ದನು. ಆದುದರಿಂದ ಶರೀರವನ್ನು ಬಿಡಲಿಲ್ಲ. ಯಮನು ಪತಿಯ ಶರೀರದಿಂದ ಜೀವವನ್ನೆಳೆಯುವಾಗ ಏಕೆ ತಡೆಯಬಾರದಾಗಿತ್ತು? ಯಾವ ಪತಿವ್ರತೆಯಾದರೂ ಪತಿಯ ಮರಣವನ್ನಪೇಕ್ಷಿಸುವಳೇ? ಎಂದರೆ ತಡೆದಳು. ಆದರೆ ಯಮನು ಕೇಳಲಿಲ್ಲ. ಯಮನು ಪತಿವ್ರತೆಯ ಮಾತನ್ನೇಕೆ ಮೀರಿದನು? ಅವನು ಪ್ರಭುವಾದುದರಿಂದ ಪತಿವ್ರತೆಯರ ಭಯವು ಅವನಿಗಿಲ್ಲ. ಆದರೆ ಸತ್ಯವಂತನ ಜೀವವನ್ನು ತೆಗೆದುಕೊಂಡು ಹೋಗಲು ತಾನೇ ಏಕೆ ಬರಬೇಕು? ತನ್ನ ದೂತರಿಂದ ಆ ಕೆಲಸವನ್ನು ಏಕೆ ಮಾಡಿಸಲಲ್ಲ? ಎಂದರೆ ಸಾವಿತ್ರಿಯ ಪಾತಿವ್ರತ್ಯಮಹಿಮೆಯಿಂದ ದೂತರಿಂದ ಆ ಕಾರ್ಯವಾಗುವುದಿಲ್ಲವೆಂದು ತಾನೇ ಬಂದನು. ಇಂತಹ ಶಕ್ತಿಯು ಸಾವಿತ್ರಿಗಿದ್ದಮೇಲೆ ಯಮನನ್ನು ಸಂಪೂರ್ಣವಾಗಿ ಏಕೆ ತಡೆಯಲಿಲ್ಲ? ಎಂದರೆ ಸಾವಿತ್ರಿಯ ಅಭಿಪ್ರಾಯವು ಬೇರೆ ಇದ್ದಿತು. ಅದೇನೆಂದರೆ, ಯಮನು ಮಹಾಮಹಿಮನಾದ ದೇವನು. ಜೀವರ ಜೀವವನ್ನು ತರಲು ತಾನೇ ಹೋಗುವವನಲ್ಲ. ಮತ್ತು ನನ್ನಂತಹ ಪಾಪಿಗಳಿಗೆ ಕಣ್ಣಿಗೆ ಕಾಣತಕ್ಕವನೂ ಅಲ್ಲ. ಇಂತಹ ದೇವನು ತಾನೇ ಬಂದು ನನ್ನ ಪತಿಯ ಜೀವವನ್ನೆಳೆದುಕೊಂಡು ನನ್ನ ಕಣ್ಣಿಗೆ

**ಪಶ್ಚಾತ್ತಾಂ ಸುದತೀಂ ದೃಷ್ಟ್ವಾ ಯಮಃ ಸಂಯಮನೀಪತಿಃ ।**
**ಉವಾಚ ಮಧುರಂ ಸಾಧ್ವೀಂ ಸಾಧೂನಾಂ ಪ್ರವರೋ ಮಹಾನ್ ॥೧೩॥**

॥ ಧರ್ಮರಾಜ ಉವಾಚ ॥

**ಅಹೋ ಕ್ವ ಯಾಸಿ ಸಾವಿತ್ರಿ ಗೃಹೀತ್ವಾ ಮಾನುಷೀಂ ತನುಂ ।**
**ಯದಿ ಯಾಸ್ಯಸಿ ಕಾಂತೇನ ಸಾರ್ಧಂ ದೇಹಂ ತದಾ ತ್ಯಜ ॥೧೪॥**

---

ಗೋಚರವಾದ ಮೇಲೆ ಆ ದೇವನು ನನ್ನಲ್ಲಿ ಅನುಗ್ರಹ ಬುದ್ಧಿಯಿಂದ ಬಂದಿರುವನು. ಹೀಗೆ ಬಂದ ದೇವನಿಗೆ ನನ್ನಾಶ್ರಮದಲ್ಲಿ ಅತಿಥಿಸತ್ಕಾರವನ್ನು ಮಾಡಬೇಕು. ಅದನ್ನು ಹೇಗೆ ಮಾಡಲಿ? ಎಂದು ಚಿಂತಿಸುತ್ತಾ ಅವನ ಹಿಂದೆಯೇ ಹೋದಳು. ಪತಿ ವಿಯೋಗಭಯವು ಅವಳಿಗಿಲ್ಲವೇ? ಎಂದರೆ ಅವಳಿಗೆ ಪತಿಯು ಗೋಚರವಾಗು ತ್ತಿದ್ದುದರಿಂದ ಆ ಭಯವಿಲ್ಲ. ಮನುಷ್ಯದೇಹದಿಂದ ಯಮಲೋಕಕ್ಕೆ ಹೇಗೆ ಹೋದಳು? ಎಂದರೆ ದೇವತೆಗಳಸಾನ್ನಿಧ್ಯದಿಂದ ಪೂರ್ವದ ಶೂರರಾದ ಅನೇಕ ರಾಜರು ದೇವಲೋಕಕ್ಕೆ ಹೋಗಿ ದೇವತೆಗಳಿಗೆ ಸಹಾಯಮಾಡಿದರೆಂಬುದನ್ನು ಕೇಳಿದ್ದಳಾದುದರಿಂದ ತಾನೂ ಯಮನ ಹಿಂದೆ ಹೋಗಲು ಸಾಧ್ಯವೆಂದು ಅವಳು ನಂಬಿದ್ದಳು. ಆದುದರಿಂದ ಅದು ಸಾಧ್ಯವಾಯಿತು. ಅಲ್ಲದೆ ಜೊತೆಯಲ್ಲೇ ಹೋದರೆ ಪತಿವಿಯೋಗವೂ ಇಲ್ಲವು. ॥೧೨॥

ಸಜ್ಜನರಲ್ಲಿ ಶ್ರೇಷ್ಠನಾದ ಯಮನು ಹಿಂದೆ ಬರುತ್ತಿರುವ ಪತಿವ್ರತೆಯಾದ ಸಾವಿತ್ರಿಯನ್ನು ನೋಡಿ ಮಧುರವಾಗಿ ಮಾತನಾಡಿದನು.

ಪತಿವ್ರತೆಯಾದ ಸಾವಿತ್ರಿಯು ನನ್ನನ್ನು ತಡೆಯಲು ಶಕ್ತಿವಂತಳಾಗಿದ್ದರೂ ಏಕೆ ತಡೆಯಲಿಲ್ಲ? ಇವಳ ಮನಸ್ಸಿನ ಅಭಿಪ್ರಾಯವೇನು? ಎಂದು ಸಂದೇಹ ದಿಂದ ಯಮನು ಹಿಂತಿರುಗಿ ನೋಡಿದನು. "ಸುದತೀಂ" ಎಂಬ ಶಬ್ದದಿಂದ ಸಾವಿತ್ರಿಯು ನಗುತ್ತಿದ್ದಳೆಂದು ವ್ಯಕ್ತವಾಗುವುದು. ನಗುವಿಗೆ ಕಾರಣವೇನೆಂದರೆ— ನನಗೆ, ಪತಿಯ ಪ್ರಾಣವನ್ನೊಯ್ಯುವ ಯಮದೇವನನ್ನು ತಡೆಯಬಲ್ಲ ಶಕ್ತಿ ಇದ್ದರೂ ಆ ಕೆಲಸಮಾಡದೆ ಅತಿಥಿಸತ್ಕಾರಕ್ಕಾಗಿ ಪ್ರಾಣಾಧಿಕನಾದ ಪತಿಯನ್ನು ಕೊಟ್ಟ ನನ್ನ ಔದಾರ್ಯವನ್ನು ಕಂಡು ಯಮದೇವನು ಏತಕ್ಕೆ ಸಂತೋಷಪಡಲಿಲ್ಲ ವೆಂಬುದೇ ನಗುವುದಕ್ಕೆ ಕಾರಣ! ಯಮದೇವನೂ ಈ ಅಭಿಪ್ರಾಯವನ್ನು ತಿಳಿದು ಸಾಧುಶ್ರೇಷ್ಠನಾದುದರಿಂದ ಮಧುರವಾಗಿ ಮಾತನಾಡಿದನು. ॥೧೩॥

ಧರ್ಮರಾಜನು, ಓ ಸಾವಿತ್ರಿಯೇ, ನೀನು ಈ ಮನುಷ್ಯದೇಹವನ್ನು ಧರಿಸಿ ಎಲ್ಲಿಗೆ ಹೋಗುತ್ತೀಯೆ? ಗಂಡನೊಡನೆ ನೀನು ಹೋಗಬೇಕಾದರೆ ಈ ದೇಹವನ್ನು

ಗಂತುಂ ಮರ್ತ್ಯೋ ನ ಶಕ್ನೋತಿ ಗೃಹೀತ್ವಾ ಪಾಂಚಭೌತಿಕಂ ।
ದೇಹಂ ಚ ಮಮ ಲೋಕಂ ಚ ನಶ್ವರಂ ನಶ್ವರಃ ಸದಾ ॥೧೫॥

ಭರ್ತುಸ್ತೇ ಪೂರ್ಣಕಾಲೋ ವೈ ಬಭೂವ ಭಾರತೇ ಸತಿ ।
ಸ್ವಕರ್ಮಫಲಭೋಗಾರ್ಥಂ ಸತ್ಯವಾನ್ಯಾತಿ ಮದ್ಗೃಹಂ ॥೧೬॥

ಕರ್ಮಣಾ ಜಾಯತೇ ಜಂತುಃ ಕರ್ಮಣೈವ ಪ್ರಲೀಯತೇ ।
ಸುಖಂ ದುಃಖಂ ಭಯಂ ಶೋಕಃ ಕರ್ಮಣೈವ ಪ್ರಣೀಯತೇ ॥೧೭॥

ಕರ್ಮಣೇಂದ್ರೋ ಭವೇಜ್ಜೀವೋ ಬ್ರಹ್ಮಪುತ್ರಃ ಸ್ವಕರ್ಮಣಾ ।
ಸ್ವಕರ್ಮಣಾ ಹರೇರ್ದಾಸೋ ಜನ್ಮಾದಿರಹಿತೋ ಭವೇತ್ ॥ ॥೧೮॥

ಸ್ವಕರ್ಮಣಾ ಸರ್ವಸಿದ್ಧಿಮಮರತ್ವಂ ಲಭೇತ್‌ಧ್ರುವಂ ।
ಲಭೇತ್ಸ್ವಕರ್ಮಣಾ ವಿಷ್ಣೋಃ ಸಾಲೋಕ್ಯಾದಿಚತುಷ್ಟಯಂ ॥೧೯॥

---

ಬಿಡು. ನನ್ನ ಲೋಕಕ್ಕೆ ಬರಲು ನಿನಗೆ ಸಾಮರ್ಥ್ಯವಿದ್ದರೂ ಮರ್ಯಾದೆಯನ್ನು ಯಾರೂ ಮೀರಬಾರದೆಂದು ಭಾವವು. ॥೧೪॥

ಯಾವಾಗಲೂ ನಾಶಕ್ಕಧೀನನಾದ ಮನುಷ್ಯನು ನಾಶವಾಗತಕ್ಕ ಪಂಚಭೂತ ಸಂಬಂಧವಾದ ದೇಹವನ್ನು ಧರಿಸಿ ನನ್ನ ಲೋಕಕ್ಕೆ ಹೋಗಲಾರನು. ॥೧೫॥

ಸತ್ಯವಂತನ ಪ್ರಾಣವನ್ನೊಯ್ಯುವ ನನ್ನಿಂದಲೂ ತಪ್ಪಿಲ್ಲ. ನೀನೂ ಈ ವಿಷಯ ದಲ್ಲಿ ದುಃಖಪಡಬೇಡ. ಏಕೆಂದರೆ ಪತಿವ್ರತೆಯಾದ ಸಾವಿತ್ರಿಯೇ, ಭರತಖಂಡದಲ್ಲಿ ನಿನ್ನ ಪತಿಯು ಇರಬೇಕಾದ ಕಾಲವು ಪೂರೈಸಿತು. ತನ್ನ ಕರ್ಮದ ಫಲವನ್ನು ಅನುಭವಿಸಲು ಸತ್ಯವಂತನು ನನ್ನ ಲೋಕಕ್ಕೆ ಬರುವನು. ॥೧೬॥

ಪ್ರಾಣಿಗಳು ಕರ್ಮದಿಂದಲೇ ಜನಿಸುವವು. ಕರ್ಮದಿಂದಲೇ ನಾಶವಾಗು ವುವು. ಸುಖ, ದುಃಖ, ಭಯ, ಅಳು, ಮುಂತಾದುವು ಕರ್ಮದಿಂದಲೇ ಉಂಟಾಗು ತ್ತವೆ. ॥೧೭॥

ಜೀವನು ತನ್ನ ಕರ್ಮದಿಂದಲೇ ದೇವೇಂದ್ರನಾಗುವನು. ಬ್ರಹ್ಮಪುತ್ರನೂ ಆಗುವನು. ಹರಿಭಕ್ತನೂ ಆಗುವನು. ಜನ್ಮಾದಿಗಳಿಲ್ಲದೆ ಮೋಕ್ಷವನ್ನೂ ಪಡೆಯು ವನು. ॥೧೮॥

ಪ್ರಾಣಿಗಳಿಗೆ ತಮ್ಮ ತಮ್ಮ ಕರ್ಮದಿಂದಲೇ ಸರ್ವಸಿದ್ಧಿಯೂ, ದೇವತ್ವವೂ, ವಿಷ್ಣುವಿನ ಸಾಲೋಕ್ಯಾದಿ ಚತುರ್ವಿಧಮುಕ್ತಿಯೂ, ಸುರ, ಮನು, ಚಕ್ರವರ್ತಿ,

ಸುರತ್ವಂ ಚ ಮನುತ್ವಂ ಚ ರಾಜೇಂದ್ರತ್ವಂ ಲಭೇನ್ನರಃ ।
ಕರ್ಮಣಾ ಚ ಶಿವತ್ವಂ ಚ ಗಣೇಶತ್ವಂ ತಥೈವ ಚ ॥೨೦॥

ಕರ್ಮಣಾ ಚ ಮುನೀಂದ್ರತ್ವಂ ತಪಸ್ವಿತ್ವಂ ಸ್ವಕರ್ಮಣಾ ।
ಸ್ವಕರ್ಮಣಾ ಕ್ಷತ್ರಿಯತ್ವಂ ವೈಶ್ಯತ್ವಂ ಚ ಸ್ವಕರ್ಮಣಾ ॥೨೧॥

ಕರ್ಮಣೈವ ಚ ಮ್ಲೇಚ್ಛತ್ವಂ ಲಭತೇ ನಾಽತ್ರ ಸಂಶಯಃ ।
ಸ್ವಕರ್ಮಣಾ ಜಂಗಮತ್ವಂ ಶೈಲತ್ವಂ ಚ ಸ್ವಕರ್ಮಣಾ ॥೨೨॥

ಕರ್ಮಣಾ ರಾಕ್ಷಸತ್ವಂ ಚ ಕಿನ್ನರತ್ವಂ ಸ್ವಕರ್ಮಣಾ ।
ಕರ್ಮಣೈವಾಧಿಪತ್ಯಂ ಚ ವೃಕ್ಷತ್ವಂ ಚ ಸ್ವಕರ್ಮಣಾ ॥೨೩॥

ಕರ್ಮಣೈವ ಪಶುತ್ವಂ ಚ ವನಜೀವೀ ಸ್ವಕರ್ಮಣಾ ।
ಕರ್ಮಣಾ ಕ್ಷುದ್ರಜಂತುತ್ವಂ ಕೃಮಿತ್ವಂ ಚ ಸ್ವಕರ್ಮಣಾ ॥೨೪॥

ದೈತೇಯತ್ವಂ ದಾನವತ್ವಮಸುರತ್ವಂ ಸ್ವಕರ್ಮಣಾ ।
ಇತ್ಯೇತದುಕ್ತ್ವಾ ಸಾವಿತ್ರೀಂ ವಿರರಾಮ ಸ ವೈ ಯಮಃ ॥೨೫॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ನವಮಸ್ಕಂಧೇ
ಸಪ್ತವಿಂಶೋಽಧ್ಯಾಯಃ

---

ಶಿವ, ಗಣೇಶ, ಮುನೀಂದ್ರ, ತಪಸ್ವೀ, ಕ್ಷತ್ರಿಯ, ವೈಶ್ಯ, ಮ್ಲೇಚ್ಛ, ಸ್ಥಾವರ, ಜಂಗಮ, ರಾಕ್ಷಸ, ಕಿನ್ನರ, ಅಧಿಪತಿ, ವೃಕ್ಷ, ಪಶು, ವನಜೀವಿಗಳಾದ ಪ್ರಾಣಿಗಳು, ಕ್ಷುದ್ರಜಂತು, ಕೃಮಿ, ದೈತೇಯ, ದಾನವ, ಅಸುರ, ಈ ಸ್ವರೂಪಗಳುಂಟಾಗುವುವು. ಪ್ರಾಣಿಗಳು ತಮ್ಮ ಕರ್ಮಫಲಗಳನ್ನನುಸರಿಸಿ ಬೇರೆ ಬೇರೆ ಸನ್ನಿವೇಶಗಳನ್ನು ಪಡೆವರೆಂಬ ಬ್ರಹ್ಮಜ್ಞಾನವನ್ನು ಸಾವಿತ್ರಿಗೆ ಉಪದೇಶಿಸಿದೆನೆಂಬ ಭಾವನೆಯಿಂದ ಯಮನು ಸುಮ್ಮನಾದನು. ॥೧೯-೨೦-೨೧-೨೨-೨೩-೨೪-೨೫॥

ಇಲ್ಲಿಗೆ ದೇವೀಭಾಗವತಮಹಾಪುರಾಣದ ಒಂಬತ್ತನೆಯ ಸ್ಕಂಧದಲ್ಲಿ
ಇಪ್ಪತ್ತೇಳನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ನವಮಸ್ಕಂಧೇ

### ॥ ಅಷ್ಟಾವಿಂಶೋಽಧ್ಯಾಯಃ ॥

### ಇಪ್ಪತ್ತೆಂಟನೆಯ ಅಧ್ಯಾಯವು

॥ ಶ್ರೀನಾರಾಯಣ ಉವಾಚ ॥

**ಯಮಸ್ಯ ವಚನಂ ಶ್ರುತ್ವಾ ಸಾವಿತ್ರೀ ಚ ಪತಿವ್ರತಾ ।**
**ತುಷ್ಟಾವ ಪರಯಾ ಭಕ್ತ್ಯಾ ತಮುವಾಚ ಮನಸ್ವಿನೀ ॥೧॥**

॥ ಸಾವಿತ್ರ್ಯುವಾಚ ॥

**ಕಿಂ ಕರ್ಮ ತದ್ಭವೇತ್ಕೇನ ಕೋ ವಾ ತದ್ಧೇತುರೇವ ಚ ।**
**ಕೋ ವಾ ದೇಹೀ ಚ ದೇಹಃ ಕಃ ಕೋ ವಾಽತ್ರ ಕರ್ಮಕಾರಕಃ ॥೨॥**

---

ಶ್ರೀನಾರಾಯಣನು ಹೇಳಿದನು—ಪತಿವ್ರತೆಯಾದ ಸಾವಿತ್ರಿಯು ಸಮಸ್ತವೂ ಕರ್ಮಬದ್ಧವಾದುದು. ಬ್ರಹ್ಮ ವಿಷ್ಣು ಮಹೇಶ್ವರರರೂ ಕೂಡ ಕರ್ಮದಿಂದಲೇ ಹುಟ್ಟಿದರು. ಕರ್ಮಕ್ಕೆ ಕಟ್ಟುಬಿದ್ದಿರುವರು. ಎಂದು ಹೇಳಿದ ಯಮನ ಮಾತನ್ನು ಕೇಳಿ ಪರಿಶುದ್ಧವಾದ ಅಂತಃಕರಣ ಉಳ್ಳವಳಾಗಿ ಯಮದೇವನನ್ನು ಸಂತೋಷಪಡಿಸಿ ಪತಿಯನ್ನು ಬಿಡಿಸಿಕೊಳ್ಳಬಹುದೆಂದು ತಿಳಿದು ಈಗ ನಾನು ಈ " ದೇವನನ್ನು ದುರ್ಲಭವಾದ ಬ್ರಹ್ಮವಿದ್ಯೆಯನ್ನು ಕೇಳಿದರೆ ಸಂತೋಷದಿಂದುಪದೇಶಿಸುವನು. ಇಂತಹ ಜ್ಞಾನಿಯೊಡನೆ ಸಂಭಾಷಣಮಾಡುವ ಯೋಗವು ಈ ನಿರ್ಭಾಗ್ಯೆಯಾದ ನನಗೆ ಯಾವುದೋ ಪುಣ್ಯದಿಂದ ಲಭ್ಯವಾಗಿದೆ. ಈ ಸಮಯವನ್ನು ವ್ಯರ್ಥವನ್ನಾಗಿ ಮಾಡಿಕೊಳ್ಳಬಾರದು " ಎಂದು ವಿಶೇಷವಾದ ಭಕ್ತಿಯಿಂದ ಸ್ತೋತ್ರಮಾಡಿ ಯಮದೇವನನ್ನು ಕುರಿತು ಮಾತನಾಡಿದಳು. ॥೧॥

ಸಾವಿತ್ರಿಯು ಹೇಳಿದಳು—ಓ ಧರ್ಮದೇವನೇ, ಕರ್ಮವೆಂಬುದಾವುದು ?

ಕಿಂ ವಾ ಜ್ಞಾನಂ ಚ ಬುದ್ಧಿಃ ಕಾ ಕೋ ವಾ ಪ್ರಾಣಃ ಶರೀರಿಣಾಂ ।
ಕಾನೀಂದ್ರಿಯಾಣಿ ಕಿಂ ತೇಷಾಂ ಲಕ್ಷಣಂ ದೇವತಾಶ್ಚ ಕಾಃ ॥೩॥

ಭೋಕ್ತಾ ಭೋಜಯಿತಾ ಕೋ ವಾ ಕೋ ವಾ ಭೋಗಶ್ಚ ನಿಷ್ಕೃತಿಃ ।
ಕೋ ಜೀವಃ ಪರಮಾತ್ಮಾ ಕಸ್ತನ್ಮೇ ವ್ಯಾಖ್ಯಾತುಮರ್ಹಸಿ ॥೪॥

ವೇದಪ್ರಣಿಹಿತೋ ಧರ್ಮಃ ಕರ್ಮ ಯನ್ಮಂಗಲಂ ಪರಂ ।
ಅವೈದಿಕಂ ತು ಯತ್ಕರ್ಮ ತದೇವಾಶುಭಮೇವ ಚ ॥೫॥

ಅಹೈತುಕೀ ದೇವಸೇವಾ ಸಂಕಲ್ಪರಹಿತಾ ಸತೀ ।
ಕರ್ಮನಿರ್ಮೂಲರೂಪಾ ಚ ಸಾ ಏವ ಪರಭಕ್ತಿದಾ ॥೬॥

---

ಅದು ಏತರಿಂದ ಉಂಟಾಗುವುದು ? ಅದಕ್ಕೆ ಕಾರಣವೇನು ? ದೇಹೀ ಯಾರು ? ದೇಹವಾವುದು ? ಕರ್ಮವನ್ನು ಮಾಡುವವನಾರು ? ಮಾಡಿಸುವವನಾರು ? ||೨||

ಮುಕ್ತಿಯನ್ನು ಕೊಡತಕ್ಕ ಜ್ಞಾನದ ಸ್ವರೂಪವೇನು ? ಬುದ್ಧಿಯ ಸ್ವರೂಪವೇನು ? ಪ್ರಾಣವೆಂಬುದಾವುದು ? ಇಂದ್ರಿಯಗಳಾವುವು ? ಅವುಗಳ ಲಕ್ಷಣಗಳೇನು ? ಅವುಗಳಿಗೆ ದೇವತೆಗಳಾರು ? ಈ ದೇಹದಲ್ಲಿ ಸುಖದುಃಖಗಳನ್ನನುಭವಿಸುವವನಾರು ? ಅವುಗಳನ್ನನುಭವಿಸುವಂತೆ ಮಾಡುವವನಾರು ? ಭೋಗವೆಂಬುದಾವುದು ? ಈ ಸಂಸಾರಕ್ಕೆ ನಾಶವು ಯಾವರೀತಿಯಲ್ಲಾಗುವುದು ? ಜೀವನಾರು ? ಪರಮಾತ್ಮನಾರು ? ಇವುಗಳೆಲ್ಲವನ್ನೂ ಪತಿವಿಯೋಗದಿಂದ ದುಃಖಪಡುತ್ತಿರುವ ನನ್ನ ಮನಸ್ಸಿನ ಶಾಂತಿಗೋಸ್ಕರ ಹೇಳಬೇಕು. ||೩-೪||

ವೇದದಲ್ಲಿ ಹೇಳಿರುವ ಧರ್ಮವೇ ಶುಭಕರ್ಮವು. ವೇದದಲ್ಲಿ ನಿಷೇಧಿಸಿರುವುದು ಅಶುಭಕರ್ಮವು. ಶುಭಕರ್ಮವು ಮೋಕ್ಷವನ್ನು ಕೊಡುವುದು. ಅಶುಭಕರ್ಮವು ನರಕದುಃಖವನ್ನುಂಟುಮಾಡುವುದು. " ಸ್ವರ್ಗಕಾಮೋ ಯಜೇತ " ಎಂಬ ವೇದವಾಕ್ಯದಿಂದ ವಿಹಿತವಾದ ಕರ್ಮವು ಅನಿತ್ಯಫಲವನ್ನು ಕೊಡುವುದು. ಆದರೂ ಬಂಧಹೇತುವಾಗುವುದಿಲ್ಲ ಹೇಗೆಂದರೆ, ||೫||

ಫಲವನ್ನಪೇಕ್ಷಿಸದೆ ಫಲವಾಸನೆಯೂ (ಸಂಸ್ಕಾರ) ಇಲ್ಲದೆ ಮಾಡಿದ ವೇದೋಕ್ತಕರ್ಮವಾದ ದೇವಸೇವಾದಿಗಳು ಮನೋಮಲವನ್ನು ನಾಶಮಾಡಿ ಚಿತ್ತಶುದ್ಧಿಯನ್ನುಂಟುಮಾಡಿ ಪರಮಾತ್ಮನಲ್ಲಿ ವಿಶೇಷವಾದ ಭಕ್ತಿಯನ್ನು ಹುಟ್ಟಿಸಿ ಕರ್ಮವನ್ನು ನಿರ್ಮೂಲಮಾಡುವುದರ ಮೂಲಕವಾಗಿ ಜ್ಞಾನಪ್ರಾಪ್ತಿಗೆ ಸಹಾಯಕವಾಗುತ್ತದೆ. ||೬||

ಕೋ ವಾ ಕರ್ಮಫಲಂ ಭುಂಜ್ತೇ ಕೋ ವಾ ನಿರ್ಲಿಪ್ತ ಏವ ಚ ।
ಬ್ರಹ್ಮಭಕ್ತೋ ಯೋ ನರಶ್ಚ ಸ ಚ ಮುಕ್ತಃ ಶ್ರುತಃ ಶ್ರುತೌ ॥೭॥

ಜನ್ಮಮೃತ್ಯುಜರಾವ್ಯಾಧಿಶೋಕಭೀತಿವಿವರ್ಜಿತಃ ।
ಭಕ್ತಿಶ್ಚ ದ್ವಿವಿಧಾ ಸಾಧ್ವಿ ಶ್ರುತ್ಯುಕ್ತಾ ಸರ್ವಸಂಮತಾ ॥೮॥

ನಿರ್ವಾಣಪದದಾತ್ರೀ ಚ ಹರಿರೂಪಪ್ರದಾ ನೃಣಾಂ ।
ಹರಿರೂಪಸ್ವರೂಪಾಂ ಚ ಭಕ್ತಿಂ ವಾಂಛಂತಿ ವೈಷ್ಣವಾಃ ॥೯॥

ಅನ್ಯೇ ನಿರ್ವಾಣಮಿಚ್ಛಂತಿ ಯೋಗಿನೋ ಬ್ರಹ್ಮವಿತ್ತಮಾಃ ।
ಕರ್ಮಣೋ ಬೀಜರೂಪಶ್ಚ ಸತತಂ ತತ್ಫಲಪ್ರದಃ ॥೧೦॥

ಕರ್ಮರೂಪಶ್ಚ ಭಗವಾನ್ಪರಾತ್ಮಾ ಪ್ರಕೃತಿಃ ಪರಾ ।
ಸೋಽಪಿತದ್ಧೇತುರೂಪಶ್ಚ ದೇಹೋ ನಶ್ವರ ಏವ ಚ ॥೧೧॥

---

ಪರಬ್ರಹ್ಮದಲ್ಲಿ ಭಕ್ತಿಯುಳ್ಳ ಮನುಷ್ಯನು ಫಲಾಪೇಕ್ಷೆಯಿಲ್ಲದವನಾದುದರಿಂದ ನಿರ್ಲಿಪ್ತನೆನಿಸುವನು. ಅವನು ಯಾವ ಕರ್ಮವನ್ನು ತಾನೇ ಮಾಡುವನು? ಯಾವ ಫಲವನ್ನು ತಾನೇ ಅನುಭವಿಸುವನು? ಅವನೇ ಮುಕ್ತನೆಂದು ವೇದವು ಹೇಳುವುದು. ॥೭॥

ಹುಟ್ಟು, ಸಾವು, ಮುಪ್ಪು, ರೋಗ, ಭಯ, ಇವುಗಳಿಲ್ಲದವನೇ ಮುಕ್ತನು. ಎಲೈ ಸಾಧ್ವಿಯೇ, ಭಕ್ತಿಯು ಎರಡು ವಿಧವಾಗಿರುವುದು. ಎಂದು ವೇದವು ಎಲ್ಲರೂ ಒಪ್ಪುವಂತೆ ಹೇಳುವುದು. ಒಂದು ಮೋಕ್ಷವನ್ನು ಕೊಡತಕ್ಕುದು. ಇದು ನಿರ್ಗುಣವಾದ ಆತ್ಮವಿಷಯವಾದುದು. ಮತ್ತೊಂದು ಹರಿಸ್ವರೂಪವನ್ನುಂಟು ಮಾಡುವುದು. ಇದು ಸಗುಣಬ್ರಹ್ಮವಿಷಯವಾದುದು. ॥೮॥

ವಿಷ್ಣುಭಕ್ತರು ಅಂದರೆ ಸಗುಣೋಪಾಸಕರಾದ ಮಧ್ಯಮಾಧಿಕಾರಿಗಳು ಹರಿಸ್ವರೂಪ, ಸಗುಣಬ್ರಹ್ಮವಿಷಯವಾದ ಭಕ್ತಿ, ಇವನ್ನೇ ಉತ್ತಮಾಧಿಕಾರಪ್ರಾಪ್ತಿಗಾಗಿ ಅಪೇಕ್ಷಿಸುವರು. ಬ್ರಹ್ಮಜ್ಞಾನಿಗಳಾದ ಯೋಗಿಗಳು ನಿರ್ಗುಣಭಕ್ತಿರೂಪವಾದ ಮುಕ್ತಿಯನ್ನೇ ಅಪೇಕ್ಷಿಸುವರು. ಪರಮಾತ್ಮನು ಕರ್ಮಕ್ಕೆ ಕಾರಣಸ್ವರೂಪನಾಗಿಯೂ ಫಲಪ್ರದನಾಗಿಯೂ ಇರುವನು. ॥೯.೧೦॥

ಸೃಷ್ಟಿ, ಸ್ಥಿತಿ, ಸಂಹಾರರೂಪವಾದ ಕರ್ಮವನ್ನು ಮಾಡತಕ್ಕವನು ಪರಮಾತ್ಮನು. ಅವನೇ ಮೂಲಪ್ರಕೃತಿಯ ಸ್ವರೂಪನು. ಅವನೇ ಕರ್ಮಕ್ಕೆ ಉಪ

ಪೃಥಿವೀವಾಯುರಾಕಾಶೋ ಜಲಂ ತೇಜಸ್ತಥೈವ ಚ ।
ಏತಾನಿ ಸೂತ್ರರೂಪಾಣಿ ಸೃಷ್ಟಿರೂಪವಿಧೌ ಸತಃ ॥೧೨॥

ಕರ್ಮ-ಕರ್ತಾ ಚ ದೇಹೀ ಚ ಆತ್ಮಾ ಭೋಜಯಿತಾ ಸದಾ ।
ಭೋಗೋ ವಿಭವಭೇದಶ್ಚ ನಿಷ್ಕೃತಿರ್ಮುಕ್ತಿರೇವ ಚ ॥೧೩॥

ಸದಸದ್ಭೇದಬೀಜಂ ಚ ಜ್ಞಾನಂ ನಾನಾವಿಧಂ ಭವೇತ್ ।
ವಿಷಯಾಣಾಂ ವಿಭಾಗಾನಾಂ ಭೇದಿ ಬೀಜಂ ಚ ಕೀರ್ತಿತಂ ॥೧೪॥

ಬುದ್ಧಿರ್ವಿವೇಚನಾ ಸಾ ಚ ಜ್ಞಾನಬೀಜಂ ಶ್ರುತೌ ಶ್ರುತಂ ।
ವಾಯುಭೇದಾಶ್ಚ ಪ್ರಾಣಾಶ್ಚ ಬಲರೂಪಾಶ್ಚ ದೇಹಿನಾಂ ॥೧೫॥

---

ದಾನ ಕಾರಣನೂ ಆಗಿರುವನು. ಇಲ್ಲಿ ಕರ್ಮಕ್ಕೆ ಉಪಾದಾನಕಾರಣ, ನಿಮಿತ್ತ ಕಾರಣ, ವಿವರ್ತಕಾರಣವೆಂದು ಮೂರುಬಗೆಯ ಕಾರಣಗಳಿರುವುವು. ಅವಿದ್ಯೆಯೇ ಉಪಾದಾನಕಾರಣ ಅವಿದ್ಯೆಯಲ್ಲಿ ಚಿತ್ಪ್ರತಿಬಿಂಬವೇ ನಿಮಿತ್ತಕಾರಣ ಬ್ರಹ್ಮವೇ ವಿವರ್ತ ಕಾರಣವೆಂದು ವಿಭಾಗವು. ದೇಹವು ನಾಶವಾಗತಕ್ಕದು. ಅದು ಪೃಥಿವೀ ವಾಯು, ಆಕಾಶ, ನೀರು, ತೇಜಸ್ಸು ಎಂಬ ಪಂಚಭೂತಸಂಬಂಧವಾದುದು. ಬ್ರಹ್ಮಸೃಷ್ಟಿಯಲ್ಲಿ ಈ ಪಂಚಭೂತಗಳು ಮಣಿಗಳಲ್ಲಿ ದಾರವಿರುವಂತೆ ಸಮಸ್ತ ಶರೀರಗಳಲ್ಲಿಯೂ ವ್ಯಾಪಿಸಿಕೊಂಡಿರುವುವು. ॥೧೧-೧೨॥

ಜೀವನೇ (ದೇಹೀ) ಕೆಲಸವನ್ನು ಮಾಡತಕ್ಕವನು. ಅವನೇ ಸುಖದುಃಖ ಗಳನ್ನನುಭವಿಸತಕ್ಕವನು. ಅಂತರ್ಯಾಮಿಯಾದ ಆತ್ಮನು ಪ್ರೇರಕನು. ಸುಖದುಃಖಾ ನುಭವವೇ ಭೋಗವು. ಆತ್ಮಸ್ವರೂಪದಿಂದಿರುವುದೇ ಮುಕ್ತಿಯು. ॥೧೩॥

ಸತ್-ಆತ್ಮ, ಅಸತ್-ಮಾಯಾದಿಗಳು. ಇವುಗಳ ಭೇದ ಎಂದರೆ ವಿವೇಚನೆಗೆ ಕಾರಣವಾದುದು ತತ್ವಜ್ಞಾನವು. ಇದು ಅಪರೋಕ್ಷವಾದ ಆತ್ಮವಸ್ತುವಿಷಯ ವಾದುದು. ಘಟ, ಪಟಾದಿ ಬಗೆಬಗೆಯ ಪದಾರ್ಥವಿಷಯವಾದ ಜ್ಞಾನವು ಅನೇಕ ಬಗೆಯಾದುದು. ॥೧೪॥

ವಿಚಾರದಿಂದ ನಿಶ್ಚಿತವಾದ ಮನೋವೃತ್ತಿಯನ್ನು ಬುದ್ಧಿ ಎಂದು ಕರೆಯು ವರು. ಆ ಬುದ್ಧಿಯೇ ಅನುಭವರೂಪವಾದ ತತ್ವಜ್ಞಾನಕ್ಕೆ ಕಾರಣವು. ಎಂದು ವೇದ ದಲ್ಲಿ ಹೇಳಿದೆ. ಒಂದೇ ಬುದ್ಧಿಯು ಅಂತರ್ಮುಖವಾಗಿದ್ದರೆ ಅದನ್ನೇ ಜ್ಞಾನ, ಬ್ರಹ್ಮ ವಿದ್ಯಾ ಎಂದು ಕರೆಯುವರು. ಬಹಿರ್ಮುಖವಾಗಿದ್ದರೆ ಬುದ್ಧಿ ಚಿತ್ತ ಮುಂತಾದ ಪದ

ಇಂದ್ರಿಯಾಣಾಂ ಚ ಪ್ರವರಮೀಶ್ವರಾಂಶಮನೂಹಕಂ ।
ಪ್ರೇರಕಂ ಕರ್ಮಣಾಂ ಚೈವ ದುರ್ನಿವಾರ್ಯಂ ಚ ದೇಹಿನಾಂ ॥೧೬॥

ಅನಿರೂಪ್ಯಮದೃಶ್ಯಂ ಚ ಜ್ಞಾನಭೇದೋ ಮನಃ ಸ್ಮೃತಂ ।
ಲೋಚನಂ ಶ್ರವಣಂ ಘ್ರಾಣಂ ತ್ವಕ್ಚ ರಸನಮಿಂದ್ರಿಯಂ ॥೧೭॥

ಅಂಗಿನಾಮಂಗರೂಪಂ ಚ ಪ್ರೇರಕಂ ಸರ್ವಕರ್ಮಣಾಂ ।
ರಿಪುರೂಪಂ ಮಿತ್ರರೂಪಂ ಸುಖರೂಪಂ ಚ ದುಃಖದಂ ॥೧೮॥

ಸೂರ್ಯೋ ವಾಯುಶ್ಚ ಪೃಥಿವೀ ಬ್ರಹ್ಮಾದ್ಯಾ ದೇವತಾಃ ಸ್ಮೃತಾಃ ।
ಪ್ರಾಣದೇಹಾದಿಭೃದ್ಯೋ ಹಿ ಸ ಜೀವಃ ಪರಿಕೀರ್ತಿತಃ ॥೧೯॥

---

ಗಳಿಂದ ವ್ಯವಹರಿಸುವರು. ಶರೀರದಲ್ಲಿ ನಾಡಿಗಳಲ್ಲಿ ಸಂಚರಿಸುವ ಗಾಳಿಗಳನ್ನೇ ಪ್ರಾಣವೆಂದೂ ನರಗಳಲ್ಲಿ ಸಂಚರಿಸುವ ಶಕ್ತಿಗಳನ್ನೇ ಬಲವೆಂದೂ ಹೇಳುವರು. ॥೧೫॥

ಇಂದ್ರಿಯಗಳಲ್ಲಿ ಶ್ರೇಷ್ಠವಾದ ಪರಮಾತ್ಮನ ಅಂಶವಾದ ಎಂದರೆ ಅಂತಃಕರಣದಲ್ಲಿ ಪ್ರತಿಬಿಂಬಿಸಿದ ಸಂಕಲ್ಪ ವಿಕಲ್ಪಾತ್ಮಕವಾದ ಇಂದ್ರಿಯ ವ್ಯಾಪಾರಗಳನ್ನು ಪ್ರೇರೇಪಿಸುವ ಸ್ವಾಧೀನಮಾಡಿಕೊಳ್ಳಲಸಾಧ್ಯವಾದ ಎಂದರೆ ಚಂಚಲವಾದ ಈ ರೂಪದಿಂದಿರುವುದೆಂದು ಹೇಳಲಸಾಧ್ಯವಾದ ಕಣ್ಣಿಗೆ ಕಾಣದಿರುವ ಬುದ್ಧಿಯ ಒಂದು ರೂಪವೇ ಮನಸ್ಸು. ॥೧೬॥

ಕಣ್ಣು, ಕಿವಿ, ಮೂಗು, ಚರ್ಮ, ನಾಲಿಗೆ ಇವು ಜ್ಞಾನೇಂದ್ರಿಯಗಳು. ಶರೀರದಲ್ಲಿ ಈ ಅವಯವಸ್ಥಾನಗಳು ಇಂದ್ರಿಯಗಳಲ್ಲ. ದರ್ಶನ, ಶ್ರವಣಾದಿ ಶಕ್ತಿಗಳೇ ಇಂದ್ರಿಯಗಳು. ಈ ಇಂದ್ರಿಯಗಳೇ ಸರ್ವಕರ್ಮೇಂದ್ರಿಯಗಳನ್ನೂ ಪ್ರೇರೇಪಿಸುವುವು. ಇವುಗಳಲ್ಲಿ ಸದ್ವಿಷಯವಾಗಿರುವುವು ಮಿತ್ರರೂಪವಾದುವು. ಅಸದ್ವಿಷಯಕವಾಗಿರುವುವು ಶತ್ರುಗಳು. ॥೧೭-೧೮॥

ಸೂರ್ಯ, ವಾಯು, ಭೂಮಿ, ಬ್ರಹ್ಮಾದಿಗಳೇ ಇಂದ್ರಿಯಾಭಿಮಾನದೇವತೆಗಳು. ಪ್ರಾಣ ದೇಹ ಇವುಗಳನ್ನು ಧರಿಸಿರುವ ಅಂತಃಕರಣದಲ್ಲಿ ಪ್ರತಿಬಿಂಬರೂಪನಾಗಿರುವ ಆತ್ಮನನ್ನೇ ಜೀವನೆಂದು ಕರೆಯುವರು. ॥೧೯॥

**ಪರಮಂ ವ್ಯಾಪಕಂ ಬ್ರಹ್ಮ ನಿರ್ಗುಣಃ ಪ್ರಕೃತೇಃ ಪರಃ ।**
**ಕಾರಣಂ ಕಾರಣಾನಾಂ ಚ ಪರಮಾತ್ಮಾ ಸ ಉಚ್ಯತೇ ॥೨೦॥**

**ಇತ್ಯೇವಂ ಕಥಿತಂ ಸರ್ವಂ ತ್ವಯಾ ಪೃಷ್ಟಂ ಯಥಾಽಽಗಮಂ ।**
**ಜ್ಞಾನಿನಾಂ ಜ್ಞಾನರೂಪಂ ಚ ಗಚ್ಛ ವತ್ಸೇ ಯಥಾಸುಖಂ ॥೨೧॥**

॥ ಸಾವಿತ್ರ್ಯುವಾಚ ॥

**ತ್ಯಕ್ತ್ವಾ ಕ್ವ ಯಾಮಿ ಕಾಂತಂ ವಾ ತ್ವಾಂ ವಾ ಜ್ಞಾನಾರ್ಣವಂ ಧ್ರುವಂ ।**
**ಯದ್ಯತ್ಕರೋಮಿ ಪ್ರಶ್ನಂ ಚ ತದ್ಭವಾನ್ವಕ್ತುಮರ್ಹತಿ ॥೨೨॥**

**ಕಾಂ ಕಾಂ ಯೋನಿಂ ಯಾತಿ ಜೀವಃ ಕರ್ಮಣಾ ಕೇನ ವಾ ಪುನಃ ।**
**ಕೇನ ವಾ ಕರ್ಮಣಾ ಸ್ವರ್ಗಂ ಕೇನ ವಾ ನರಕಂ ಪಿತಃ ॥೨೩॥**

**ಕೇನ ವಾ ಕರ್ಮಣಾ ಮುಕ್ತಿಃ ಕೇನ ಭಕ್ತಿರ್ಭವೇದ್ಗುರೌ ।**
**ಕೇನ ವಾ ಕರ್ಮಣಾ ಯೋಗೀ ರೋಗೀ ವಾ ಕೇನ ಕರ್ಮಣಾ ॥೨೪॥**

---

ಪ್ರಕೃತಿಗಿಂತಲೂ ಶ್ರೇಷ್ಠನಾದ ಸರ್ವವ್ಯಾಪಿಯಾಗಿ ನಿರ್ಗುಣನೂ ಆದ ಸಮಸ್ತ ಕಾರಣವಸ್ತುಗಳಿಗೂ ಕಾರಣನಾದ ಶ್ರೇಷ್ಠವಸ್ತುವೇ ಪರಬ್ರಹ್ಮವು. ಅಥವಾ ಪರಮಾತ್ಮನು. ॥೨೦॥

ಮಗಳೇ, ನೀನು ಕೇಳಿದ ಪ್ರಶ್ನೆಗೆ ಉತ್ತರಗಳನ್ನೂ ವೇದವನ್ನನುಸರಿಸಿದ ಜ್ಞಾನಿಗಳು ಪಡೆದಿರತಕ್ಕ ಆತ್ಮಜ್ಞಾನಸ್ವರೂಪವನ್ನೂ, ನಿನಗೆ ಹೇಳಿರುವೆನು. ಇನ್ನು ನೀನು ಯಾವ ಚಿಂತೆಯನ್ನೂ ಮಾಡದೆ ಸುಖವಾಗಿ ಪ್ರಯಾಣಮಾಡು ಎಂದನು. ॥೨೧॥

ಸಾವಿತ್ರಿಯು ಯಮನನ್ನು ಕುರಿತು, ನನ್ನ ಪತಿಯನ್ನೂ ಜ್ಞಾನಸಮುದ್ರನಾದ ನಿನ್ನನ್ನೂ ಬಿಟ್ಟು ನಾನೆಲ್ಲಿಗೆ ಹೋಗಲಿ? ನಾನು ಏನೇನು ಪ್ರಶ್ನೆಯನ್ನು ಕೇಳುವೆನೋ ಆ ಪ್ರಶ್ನೆಗಳಿಗೆಲ್ಲಕ್ಕೂ ನೀನು ಉತ್ತರವನ್ನು ಹೇಳಬೇಕು. ॥೨೨॥

ಓ ತಂದೆಯೇ, ಜೀವನು ಯಾವ ಯಾವ ಕರ್ಮದಿಂದ ಯಾವ ಯಾವ ಜನ್ಮವನ್ನು ಪಡೆವನು? ಯಾವ ಕರ್ಮದಿಂದ ಸ್ವರ್ಗಕ್ಕೆ ಹೋಗುವನು? ಯಾವ ಕರ್ಮದಿಂದ ನರಕಕ್ಕೆ ಹೋಗುವನು? ॥೨೩॥

ಮುಕ್ತಿಯಾಗಬೇಕಾದರೂ, ಗುರುವಿನಲ್ಲಿ ಭಕ್ತಿಯುಂಟಾಗಬೇಕಾದರೂ, ಯೋಗಿಯಾಗಬೇಕಾದರೂ, ರೋಗಿಯಾಗಬೇಕಾದರೂ, ಬಹುಕಾಲ ಬದುಕಬೇಕಾ

ಕೇನ ವಾ ದೀರ್ಘಜೀವೀ ಚ ಕೇನಾಲ್ಪಾಯುಶ್ಚ ಕರ್ಮಣಾ ।
ಕೇನ ವಾ ಕರ್ಮಣಾ ದುಃಖೀ ಸುಖೀ ವಾ ಕೇನ ಕರ್ಮಣಾ ॥೨೫॥

ಅಂಗಹೀನಶ್ಚ ಕಾಣಶ್ಚ ಬಧಿರಃ ಕೇನ ಕರ್ಮಣಾ ।
ಅಂಧೋ ವಾ ಪಂಗುರಪಿ ವಾ ಪ್ರಮತ್ತಃ ಕೇನ ಕರ್ಮಣಾ ॥೨೬॥

ಕ್ಷಿಪ್ತೋಽತಿಲುಬ್ಧಕಶ್ಚೋರಃ ಕೇನ ವಾ ಕರ್ಮಣಾ ಭವೇತ್ ।
ಕೇನ ಸಿದ್ಧಿಮವಾಪ್ನೋತಿ ಸಾಲೋಕ್ಯಾದಿಚತುಷ್ಟಯಂ ॥೨೭॥

ಕೇನ ವಾ ಬ್ರಾಹ್ಮಣತ್ವಂ ಚ ತಪಸ್ವಿತ್ವಂ ಚ ಕೇನ ವಾ ।
ಸ್ವರ್ಗಭೋಗಾದಿಕಂ ಕೇನ ವೈಕುಂಠಂ ಕೇನ ಕರ್ಮಣಾ ॥೨೮॥

ಗೋಲೋಕಃ ಕೇನ ವಾ ಬ್ರಹ್ಮನ್ಸರ್ವೋತ್ಕೃಷ್ಟೋ ನಿರಾಮಯಃ ।
ನರಕೋ ವಾ ಕತಿ ವಿಧಃ ಕಿಂಸಂಖ್ಯೋ ನಾಮ ಕಿಂ ಚ ವಾ ॥೨೯॥

ಕೋ ವಾ ಕಂ ನರಕಂ ಯಾತಿ ಕಿಯಂತಂ ತೇಷು ತಿಷ್ಠತಿ ।
ಪಾಪಿನಾಂ ಕರ್ಮಣಾ ಕೇನ ಕೋ ವಾ ವ್ಯಾಧಿಃ ಪ್ರಜಾಯತೇ ॥೩೦॥
ಯದ್ಯತ್ಪ್ರಿಯಂ ಮಯಾ ಪೃಷ್ಟಂ ತನ್ಮೇ ವ್ಯಾಖ್ಯಾತುಮರ್ಹಸಿ ।

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ನವಮಸ್ಕಂಧೇ
ಅಷ್ಟಾವಿಂಶೋಽಧ್ಯಾಯಃ

---

ದರೂ, ಅಲ್ಪಾಯುವಾಗಬೇಕಾದರೂ, ದುಃಖಿಯಾಗಬೇಕಾದರೂ, ಸುಖಿಯಾಗಬೇಕಾದರೂ ಯಾವ ಯಾವ ಕರ್ಮಗಳು ಕಾರಣವಾಗುವುವು? ॥೨೪-೨೫॥

ಅಂಗಹೀನನಾಗಿಯೂ, ಕುರುಡನಾಗಿಯೂ, ಕಿವುಡನಾಗಿಯೂ, ಯಾವ ಕರ್ಮದಿಂದಾಗುವನು? ಹುಟ್ಟುಕುರುಡನಾಗಿಯೂ, ಕುಂಟನೂ, ಹುಚ್ಚನೂ, ಜಿಪುಣನೂ, ಕಳ್ಳನೂ ಯಾವ ಕರ್ಮದಿಂದಾಗುವನು? ಯಾವ ಕರ್ಮದಿಂದ ಸಾಲೋಕ್ಯಾದಿ ಮುಕ್ತಿಗಳೂ ಬ್ರಾಹ್ಮಣತ್ವವೂ, ತಪಸ್ವಿತ್ವವೂ, ಸ್ವರ್ಗಾದಿಸುಖಗಳೂ ವೈಕುಂಠಲೋಕಪ್ರಾಪ್ತಿಯೂ ಆಗುವುವು. ॥೨೬-೨೭-೨೮॥

ಓ ಪರಬ್ರಹ್ಮಸ್ವರೂಪನಾದ ಧರ್ಮರಾಜನೇ, ಸರ್ವೋತ್ಕೃಷ್ಟವಾದ ಗೋಲೋಕವು ಯಾವ ಕರ್ಮದಿಂದ ಪ್ರಾಪ್ತವಾಗುವುದು? ನರಕಗಳೆಷ್ಟುವಿಧಗಳು? ಅವುಗಳ ಹೆಸರುಗಳೇನು? ಯಾವನು ಯಾವ ನರಕದಲ್ಲಿ ಎಷ್ಟು ಕಾಲವಿರುವನು?

ಯಾವ ಪಾಪಕರ್ಮಗಳಿಂದ ಯಾವ ರೋಗಗಳುಂಟಾಗುತ್ತವೆ? ನಾನು ಕೇಳಿದ ಇವೆಲ್ಲಾ ಪ್ರಶ್ನೆಗಳಿಗೂ ವಿಸ್ತಾರವಾಗಿ ಉತ್ತರಗಳನ್ನು ಹೇಳಬೇಕು ಎಂದು ಯಮ ಧರ್ಮರಾಜನನ್ನು ಕುರಿತು ಸಾವಿತ್ರಿಯು ಕೇಳಿದಳು. ||೨೯-೩೦||

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಒಂಬತ್ತನೆಯ ಸ್ಕಂಧದಲ್ಲಿ
ಇಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ನವಮಸ್ಕಂಧೇ

### || ಏಕೋನತ್ರಿಂಶೋಽಧ್ಯಾಯಃ ||

### ಇಪ್ಪತ್ತೊಂಬತ್ತನೆಯ ಅಧ್ಯಾಯವು

|| ಶ್ರೀ ನಾರಾಯಣ ಉವಾಚ ||

**ಸಾವಿತ್ರೀವಚನಂ ಶ್ರುತ್ವಾ ಜಗಾಮ ವಿಸ್ಮಯಂ ಯಮಃ ।**
**ಪ್ರಹಸ್ಯ ವಕ್ತುಮಾರೇಭೇ ಕರ್ಮಪಾಕಂ ತು ಜೀವಿನಾಂ ॥೧॥**

|| ಧರ್ಮ ಉವಾಚ ||

**ಕನ್ಯಾ ದ್ವಾದಶವರ್ಷೀಯಾ ವತ್ಸೇ ತ್ವಂ ವಯಸಾಽಧುನಾ ।**
**ಜ್ಞಾನಂ ತೇ ಪೂರ್ವವಿದುಷಾಂ ಜ್ಞಾನಿನಾಂ ಯೋಗಿನಾಂ ಪರಂ॥೨॥**

**ಸಾವಿತ್ರೀವರದಾನೇನ ತ್ವಂ ಸಾವಿತ್ರೀಕಲಾ ಸತೀ ।**
**ಪ್ರಾಪ್ತಾ ಪುರಾ ಭೂಭೃತಾ ಚ ತಪಸಾ ತತ್ಸಮಾ ಸುತೇ ॥೩॥**

---

ನಾರಾಯಣನು ಹೇಳಿದನು—ಯಮನು ಸಾವಿತ್ರಿಯ ಮಾತನ್ನು ಕೇಳಿ ಆಶ್ಚರ್ಯವನ್ನು ಹೊಂದಿ ನಗುತ್ತಾ ಜೀವಿಗಳ ಕರ್ಮವಿಪಾಕವನ್ನು ಹೇಳಲು ಪ್ರಾರಂಭಿಸಿದನು. ||೧||

ಮಗಳೇ ನೀನು ಹನ್ನೆರಡು ವರ್ಷ ವಯಸ್ಸಿನ ಕನ್ಯೆಯಾಗಿರುವೆ ! ನಿನ್ನ ತಿಳಿವಳಿಕೆಯಾದರೋ ಸನಕಾದಿ ಯೋಗಿಗಳಿಗೂ ಜ್ಞಾನಿಗಳಿಗೂ ಸಮನಾಗಿ ಶ್ರೇಷ್ಠವಾಗಿರುವುದು ! ||೨||

ನೀನು ಸಾವಿತ್ರಿಯ ಅಂಶರೂಪಳು. ಪೂರ್ವದಲ್ಲಿ ಅಶ್ವಪತಿರಾಜನು ಸಾವಿತ್ರೀ ದೇವಿಯನ್ನು ಕುರಿತು ತಪಸ್ಸುಮಾಡಿ ಆ ದೇವಿಯ ವರದಿಂದ ನಿನ್ನನ್ನು ಮಗಳನ್ನಾಗಿ ಪಡೆದನು. ||೩||

ಯಥಾ ಶ್ರೀಃ ಶ್ರೀಪತೇಃ ಕ್ರೋಡೇ ಭವಾನೀ ಚ ಭವೋರಸಿ ।
ಯಥಾಽದಿತಿಃ ಕಶ್ಯಪೇ ಚ ಯಥಾಽಹಲ್ಯಾ ಚ ಗೌತಮೇ ॥೪॥

ಯಥಾ ಶಚೀ ಮಹೇಂದ್ರೇ ಚ ಯಥಾ ಚಂದ್ರೇ ಚ ರೋಹಿಣೀ ।
ಯಥಾ ರತಿಃ ಕಾಮದೇವೇ ಯಥಾ ಸ್ವಾಹಾ ಹುತಾಶನೇ ॥೫॥

ಯಥಾ ಸ್ವಧಾ ಚ ಪಿತೃಷು ಯಥಾ ಸಂಜ್ಞಾ ದಿವಾಕರೇ ।
ವರುಣಾನೀ ಚ ವರುಣೇ ಯಜ್ಞೇ ಚ ದಕ್ಷಿಣಾ ಯಥಾ ॥೬॥

ಯಥಾ ವರಾಹೇ ಪೃಥಿವೀ ದೇವಸೇನಾ ಚ ಕಾರ್ತಿಕೇ ।
ಸೌಭಾಗ್ಯಾ ಸುಪ್ರಿಯಾತ್ವಂ ಚ ತಥಾ ಸತ್ಯವತಃ ಪ್ರಿಯೇ ॥೭॥

ಅಯಂ ತುಭ್ಯಂ ವರೋ ದತ್ತೋಽಪ್ಯಪರಂ ಚ ಯಥೇಪ್ಸಿತಂ ।
ವೃಣು ದೇವಿ ಮಹಾಭಾಗೇ ದದಾಮಿ ಸಕಲೇಪ್ಸಿತಂ ॥೮॥

॥ ಸಾವಿತ್ರ್ಯುವಾಚ ॥

ಸತ್ಯವತ ಔರಸಾನಾಂ ಪುತ್ರಾಣಾಂ ಶತಕಂ ಮಮ ।
ಭವಿಷ್ಯತಿ ಮಹಾಭಾಗ ವರಮೇತನ್ಮದೀಪ್ಸಿತಂ ॥೯॥

---

ಲಕ್ಷ್ಮಿಯು ವಿಷ್ಣುವಿನ ಹೃದಯದಲ್ಲಿಯೂ, ಗೌರಿಯು ಶಿವನ ದೇಹದಲ್ಲಿಯೂ, ಅದಿತಿಯು ಕಶ್ಯಪನಲ್ಲಿಯೂ, ಅಹಲ್ಯೆಯು ಗೌತಮನಲ್ಲಿಯೂ, ಶಚಿಯು ದೇವೇಂದ್ರನಲ್ಲಿಯೂ, ರೋಹಿಣಿಯು ಚಂದ್ರನಲ್ಲಿಯೂ, ರತಿಯು ಕಾಮದೇವನಲ್ಲಿಯೂ, ಸ್ವಾಹಾದೇವಿಯು ಅಗ್ನಿಯಲ್ಲಿಯೂ, ಸ್ವಧಾದೇವಿಯು ಪಿತೃದೇವತೆಗಳಲ್ಲಿಯೂ, ಸಂಜ್ಞಾದೇವಿಯು ಸೂರ್ಯನಲ್ಲಿಯೂ, ವರುಣಾನಿಯು ವರುಣನಲ್ಲಿಯೂ, ದಕ್ಷಿಣಾದೇವಿಯು ಯಜ್ಞದೇವನಲ್ಲಿಯೂ ಭೂದೇವಿಯು ವರಾಹಸ್ವಾಮಿಯಲ್ಲಿಯೂ, ದೇವಸೇನೆಯು ಕುಮಾರಸ್ವಾಮಿಯಲ್ಲಿಯೂ, ಇರುವಂತೆ ನೀನೂ ಸೌಭಾಗ್ಯವತಿಯಾಗಿ ಸತ್ಯವಾನನಿಗೆ ಪ್ರೀತಿಪಾತ್ರಳಾಗಿರು. ಈ ವರವನ್ನು ನಿನಗೆ ಕೊಟ್ಟಿರುವೆನು. ನಿನಗಿಷ್ಟವಾದ ಮತ್ತೊಂದು ವರವನ್ನು ಕೇಳು. ನಿನ್ನ ಸಕಲ ಇಷ್ಟಾರ್ಥಗಳನ್ನೂ ನಡೆಯಿಸಿಕೊಡುವೆನು ಎಂದನು. ||೪-೫-೬-೭-೮||

ಸಾವಿತ್ರಿಯು, ಸತ್ಯವಾನನ ದೆಸೆಯಿಂದ ನನಗೆ ನೂರುಜನ ಮಕ್ಕಳಾಗಬೇಕು. ನನ್ನ ತಂದೆಗೆ ನೂರು ಜನ ಮಕ್ಕಳಾಗಬೇಕು. ನಮ್ಮ ಮಾವನಿಗೆ

ಮತ್ಪಿತುಃ ಪುತ್ರಶತಕಂ ಶ್ವಶುರಸ್ಯ ಚ ಚಕ್ಷುಷೀ ।
ರಾಜ್ಯಲಾಭೋ ಭವತ್ವೇವಂ ವರನೇತನ್ಮದೀಪ್ಸಿತಂ ॥೧೦॥

ಅಂತೇ ಸತ್ಯವತಾ ಸಾರ್ಧಂ ಯಾಸ್ಯಾಮಿ ಹರಿಮಂದಿರಂ ।
ಸಮತೀತೇ ಲಕ್ಷವರ್ಷೇ ದೇಹೀದಂ ಮೇ ಜಗತ್ಪ್ರಭೋ ॥೧೧॥

ಜೀವಕರ್ಮವಿಪಾಕಂ ಚ ಶ್ರೋತುಂ ಕೌತೂಹಲಂ ಮಮ ।
ವಿಶ್ವನಿಸ್ತಾರಬೀಜಂ ಚ ತನ್ಮೇ ವ್ಯಾಖ್ಯಾತುಮರ್ಹಸಿ ॥೧೨॥

॥ ಧರ್ಮರಾಜ ಉವಾಚ ॥

ಭವಿಷ್ಯತಿ ಮಹಾಸಾಧ್ವಿ ಸರ್ವಂ ಮಾನಸಿಕಂ ತವ ।
ಜೀವಕರ್ಮವಿಪಾಕಂ ಚ ಕಥಯಾಮಿ ನಿಶಾಮಯ ॥೧೩॥

ಶುಭಾನಾಮಶುಭಾನಾಂ ಚ ಕರ್ಮಣಾಂ ಜನ್ಮ ಭಾರತೇ ।
ಪುಣ್ಯಕ್ಷೇತ್ರೇ ಚ ನಾಽನ್ಯತ್ರ ಸರ್ವಂ ಚ ಭುಂಜತೇ ಜನಾಃ ॥೧೪॥

---

ಕಣ್ಣುಗಳು ಬರಬೇಕು. ಮತ್ತು ಶತ್ರುಗಳು ಅಪಹರಿಸಿದ ರಾಜ್ಯವೂ ದೊರೆಯ ಬೇಕು. ಈ ವರವು ನನಗಿಷ್ಟವಾದುದು. ॥೯-೧೦॥

ಪ್ರಪಂಚಕ್ಕೊಡೆಯನಾದ ಧರ್ಮದೇವನೇ, ಒಂದುಲಕ್ಷ ವರ್ಷ ಕಳೆದ ಮೇಲೆ ಕೊನೆಯಲ್ಲಿ ಸತ್ಯವಾನನೊಡನೆ ಕೂಡಿ ವೈಕುಂಠಕ್ಕೆ ಹೋಗುವೆನು. ಪ್ರಾಣಿಗಳ ಕರ್ಮಗಳನ್ನೂ ಅವುಗಳ ಫಲಗಳನ್ನೂ ಕೇಳಬೇಕೆಂದು ನನಗೆ ಆಸಕ್ತಿಯಿರುವುದು. ಇದು ಸಂಸಾರ ಸಮುದ್ರವನ್ನು ದಾಟುವುದಕ್ಕೆ ಕಾರಣವಾದುದರಿಂದ ಅದನ್ನು ನನಗೆ ವಿಸ್ತಾರವಾಗಿ ಹೇಳಬೇಕು. ಎಂದಳು. ॥೧೧-೧೨॥

ಧರ್ಮರಾಜನು ಹೇಳಿದನು—ಮಹಾಪತಿವ್ರತೆಯಾದ ಸಾವಿತ್ರಿಯೇ, ನಿನ್ನ ಮನಸ್ಸಿನ ಇಷ್ಟವೆಲ್ಲವೂ ನೆರವೇರುವುದು. ಜೀವಿಗಳ ಕರ್ಮವಿಪಾಕವನ್ನು ಹೇಳು ವೆನು ಕೇಳು. ಪುಣ್ಯಕ್ಷೇತ್ರವಾದ ಭರತಖಂಡದಲ್ಲಿ ಶುಭಾಶುಭಕರ್ಮಗಳ ಫಲವನ್ನು ಅವರು ಅನುಭವಿಸುವರು. ಇತರ ದೇಶಗಳಲ್ಲಿ ಅಲ್ಲವು. ಆದರೆ ಅವರೂ ಶುಭಾಶುಭ ಕರ್ಮಗಳ ಫಲವನ್ನು ಸ್ವರ್ಗನರಕಗಳಲ್ಲಿ ಅನುಭವಿಸುವರು. ॥೧೩-೧೪॥

ಸುರಾ ದೈತ್ಯಾ ದಾನವಾಶ್ಚ ಗಂಧರ್ವಾ ರಾಕ್ಷಸಾದಯಃ ।
ನರಾಶ್ಚ ಕರ್ಮಜನಕಾ ನ ಸರ್ವೇ ಜೀವಿನಃ ಸತಿ ॥೧೫॥

ವಿಶಿಷ್ಟಜೀವಿನಃ ಕರ್ಮ ಭುಂಜತೇ ಸರ್ವಯೋನಿಷು ।
ಶುಭಾಶುಭಂ ಚ ಸರ್ವತ್ರ ಸ್ವರ್ಗೇಷು ನರಕೇಷು ಚ ॥೧೬॥

ವಿಶೇಷತೋ ಜೀವಿನಶ್ಚ ಭ್ರಮಂತೇ ಸರ್ವಯೋನಿಷು ।
ಶುಭಾಶುಭಂ ಭುಂಜತೇ ಚ ಕರ್ಮಪೂರ್ವಾರ್ಜಿತಂ ಫಲಂ ॥೧೭॥

ಶುಭೇನ ಕರ್ಮಣಾ ಯಾತಿ ಸ್ವರ್ಲೋಕಾದಿಕಮೇವ ಚ ।
ಕರ್ಮಣಾ ಚಾಽಶುಭೇನೈವ ಭ್ರಮಂತಿ ನರಕೇಷು ಚ ॥೧೮॥

ಕರ್ಮ ನಿರ್ಮೂಲನೇ ಭಕ್ತಿಃ ಸಾ ಚೋಕ್ತಾ ದ್ವಿವಿಧಾ ಸತಿ ।
ನಿರ್ವಾಣರೂಪಾ ಭಕ್ತಿಶ್ಚ ಬ್ರಹ್ಮಣಃ ಪ್ರಕೃತೇರಿಹ ॥೧೯॥

---

ದೇವತೆಗಳು, ದೈತ್ಯರು, ದಾನವರು, ಗಂಧರ್ವರು, ರಾಕ್ಷಸರು, ಮನುಷ್ಯರು, ಇವರೇ ಕರ್ಮವನ್ನು ಮಾಡತಕ್ಕವರು. ಸಮಸ್ತ ಪಶ್ವಾದಿ ಜೀವಿಗಳೂ ಕರ್ಮವನ್ನು ಮಾಡಲು ಅಧಿಕಾರಿಗಳಲ್ಲ. ಮುಖ್ಯ ಜೀವರು ಎಂದರೆ ಕರ್ಮಾಧಿಕಾರಿಗಳಾದವರು ತಾವು ಮಾಡಿದ ಶುಭಾಶುಭಕರ್ಮಗಳ ಫಲವನ್ನು ಸ್ವರ್ಗನರಕಗಳಲ್ಲಿಯೂ ತಾವು ಪಡೆದಿರುವ ಸಕಲ ಜನ್ಮಗಳಲ್ಲಿಯೂ ಅನುಭವಿಸುವರು. ॥೧೫-೧೬॥

ಕರ್ಮಾಧಿಕಾರಿಗಳಾದ ಮನುಷ್ಯಾದಿ ಜೀವರುಗಳು ತಾವು ಮಾಡಿದ ಪೂರ್ವಾರ್ಜಿತ ಕರ್ಮಫಲಗಳನ್ನು ಕರ್ಮಾನುಸಾರವಾಗಿ ಬಂದ ಜನ್ಮಗಳಲ್ಲಿ ಅನುಭವಿಸುತ್ತಲಿರುವರು. ಶುಭಕರ್ಮಗಳಾದ ಸ್ವರ್ಗಾದಿಲೋಕಗಳಿಗೂ ಹೋಗುವರು. ಅಶುಭಕರ್ಮಗಳಿಂದ ನರಕಗಳಿಗೂ ಅವರು ಹೋಗುವರು. ॥೧೭-೧೮॥

ಕರ್ಮಫಲವನ್ನು ನಾಶಮಾಡಬೇಕಾದರೆ ಭಕ್ತಿಯು ಅವಶ್ಯಕವಾದುದು. ಅದು ಎರಡು ವಿಧವು. ಒಂದು ನಿರ್ಗುಣಭಕ್ತಿ. ಎರಡನೆಯದು ಮಾಯಾವಿಶಿಷ್ಟ ಬ್ರಹ್ಮರೂಪಿಣಿಯಾದ ಮೂಲಪ್ರಕೃತಿ ಸಂಬಂಧವಾದುದು. ಈ ಎರಡು ವಿಧವಾದ ಭಕ್ತಿಗಳೂ ಕರ್ಮನಾಶಮಾಡುವುದರಲ್ಲಿ ಸಮರ್ಥವಾಗುವುವು. ॥೧೯॥

ರೋಗೀ ಕುಕರ್ಮಣಾ ಜೀವಶ್ಚಾಽರೋಗೀ ಶುಭಕರ್ಮಣಾ ।
ದೀರ್ಘಜೀವೀ ಚ ಕ್ಷೀಣಾಯುಃ ಸುಖೀ ದುಃಖೀ ಚ ಕರ್ಮಣಾ॥೨೦॥

ಅಂಧಾದಯಶ್ಚಾಂಗಹೀನಾಃ ಕರ್ಮಣಾ ಕುತ್ಸಿತೇನ ಚ ।
ಸಿದ್ಧ್ಯಾದಿಕಮವಾಪ್ನೋತಿ ಸರ್ವೋತ್ಕೃಷ್ಟೇನ ಕರ್ಮಣಾ ॥೨೧॥

ಸಾಮಾನ್ಯಂ ಕಥಿತಂ ದೇವಿ ವಿಶೇಷಂ ಶೃಣು ಸುಂದರಿ ।
ಸುದುರ್ಲಭಂ ಸುಗೋಪ್ಯಂ ಚ ಪುರಾಣೇಷು ಸ್ಮೃತಿಷ್ವಪಿ ॥೨೨॥

ದುರ್ಲಭಾ ಮಾನುಷೀ ಜಾತಿಃ ಸರ್ವಜಾತಿಷು ಭಾರತೇ ।
ಸರ್ವೇಭ್ಯೋ ಬ್ರಾಹ್ಮಣಃ ಶ್ರೇಷ್ಠಃ ಪ್ರಶಸ್ತಃ ಸರ್ವಕರ್ಮಸು ॥೨೩॥

ಬ್ರಹ್ಮನಿಷ್ಠೋ ದ್ವಿಜಶ್ಚೈವ ಗರೀಯಾನ್ ಭಾರತೇ ಸತಿ ।
ನಿಷ್ಕಾಮಶ್ಚ ಸಕಾಮಶ್ಚ ಬ್ರಾಹ್ಮಣೋ ದ್ವಿವಿಧಃ ಸತಿ ॥೨೪॥

ಸಕಾಮಾಚ್ಚ ಪ್ರಧಾನಶ್ಚ ನಿಷ್ಕಾಮೋ ಭಕ್ತ ಏವ ಚ ।
ಕರ್ಮಭಾಗೀ ಸಕಾಮಶ್ಚ ನಿಷ್ಕಾಮೋ ನಿರುಪದ್ರವಃ ॥೨೫॥

---

ಜೀವನು ಕೆಟ್ಟಕರ್ಮದಿಂದ ರೋಗಿಯೂ ಕ್ಷೀಣಾಯುವೂ ದುಃಖಿಯೂ ಆಗುವನು. ಶುಭಕರ್ಮದಿಂದ ಆರೋಗ್ಯವಂತನೂ, ದೀರ್ಘಾಯುವೂ, ಸುಖಿಯೂ ಆಗುವನು. ||೨೦||

ಕೆಟ್ಟ ಕರ್ಮದಿಂದ ಕುರುಡು ಮುಂತಾದ ಅಂಗಹೀನತ್ವವುಂಟಾಗುವುದು. ಉತ್ತಮವಾದ ಕರ್ಮದಿಂದ ಉತ್ತಮವಾದ ಸಿದ್ಧಿಗಳುಂಟಾಗುವುವು. ||೨೧||

ಸಾವಿತ್ರೀದೇವಿಯೇ, ಸಾಮಾನ್ಯವಾದ ವಿಷಯವನ್ನು ಹೇಳಿದೆನು. ಇನ್ನು ಮುಂದೆ ಗುಟ್ಟಾದ ವಿಶೇಷ ವಿಷಯವನ್ನು ಹೇಳುವೆನು ಕೇಳು. ಭರತಖಂಡದಲ್ಲಿ ಮನುಷ್ಯನಾಗಿ ಹುಟ್ಟುವುದು ದುರ್ಲಭವಾದುದು. ಮನುಷ್ಯರಲ್ಲಿ ಬ್ರಾಹ್ಮಣನು ಎಲ್ಲಾ ಕರ್ಮಗಳಿಗೂ ಅಧಿಕಾರಿಯಾದುದರಿಂದ ಶ್ರೇಷ್ಠನು. ಅದರಲ್ಲಿಯೂ ಬ್ರಹ್ಮನಿಷ್ಠನಾದ ಬ್ರಾಹ್ಮಣನು ದೊಡ್ಡವನು. ಬ್ರಾಹ್ಮಣರಲ್ಲಿ ಸಕಾಮರು ನಿಷ್ಕಾಮರು ಎಂದು ಎರಡುವಿಧ. ||೨೨-೨೩-೨೪||

ಸಕಾಮನಾದವನಿಗೆ ಕರ್ಮವೇ ಮುಖ್ಯವು. ಅವನಿಗಿಂತ ಶ್ರೇಷ್ಠನಾದ ನಿಷ್ಕಾಮನಿಗೆ ಯಾವ ತೊಂದರೆಯೂ ಇಲ್ಲದೆ ಭಕ್ತಿಯೊಂದೇ ಮುಖ್ಯವಾದುದು. ||೨೫||

ಸ ಯಾತಿ ದೇಹಂ ತ್ಯಕ್ತ್ವಾ ಚ ಪದಂ ಯತ್ರನ್ನಿರಾಮಯಂ ।
ಪುನರಾಗಮನಂ ನಾಸ್ತಿ ತೇಷಾಂ ನಿಷ್ಕಾಮಿಣಾಂ ಸತಿ ॥೨೬॥

ಸೇವಂತೇ ದ್ವಿಭುಜಂ ಕೃಷ್ಣಂ ಪರಮಾತ್ಮಾನಮೀಶ್ವರಂ ।
ಗೋಲೋಕಂ ಪ್ರತಿ ತೇ ಭಕ್ತಾ ದಿವ್ಯರೂಪವಿಧಾರಿಣಃ ॥೨೭॥

ಸಕಾಮಿನೋ ವೈಷ್ಣವಾಶ್ಚ ಗತ್ವಾ ವೈಕುಂಠಮೇವ ಚ ।
ಭಾರತಂ ಪುನರಾಯಾಂತಿ ತೇಷಾಂ ಜನ್ಮ ದ್ವಿಜಾತಿಷು ॥೨೮॥

ಕಾಲೇನ ತೇ ಚ ನಿಷ್ಕಾಮಾ ಭವಂತ್ಯೇವ ಕ್ರಮೇಣ ಚ ।
ಭಕ್ತಿಂ ಚ ನಿರ್ಮಲಾಂ ತೇಭ್ಯೋ ದಾಸ್ಯಾಮಿ ನಿಶ್ಚಿತಂ ಪುನಃ ॥೨೯॥

ಬ್ರಾಹ್ಮಣಾ ವೈಷ್ಣವಾಶ್ಚೈವ ಸಕಾಮಾಃ ಸರ್ವಜನ್ಮಸು ।
ನ ತೇಷಾಂ ನಿರ್ಮಲಾ ಬುದ್ಧಿರ್ವಿಷ್ಣುಭಕ್ತಿವಿವರ್ಜಿತಾಃ ॥೩೦॥

ತೀರ್ಥಾಶ್ರಿತಾ ದ್ವಿಜಾ ಯೇ ಚ ತಪಸ್ಯಾ ನಿರತಾಃ ಸತಿ ।
ತೇ ಯಾಂತಿ ಬ್ರಹ್ಮಲೋಕಂ ಚ ಪುನರಾಯಾಂತಿ ಭಾರತೇ ॥೩೧॥

ಸ್ವಧರ್ಮನಿರತಾ ಯೇ ಚ ತೀರ್ಥಾಽನ್ಯತ್ರನಿವಾಸಿನಃ ।
ವ್ರಜಂತಿ ತೇ ಸತ್ಯಲೋಕಂ ಪುನರಾಯಾಂತಿ ಭಾರತೇ ॥೩೨॥

---

ನಿಷ್ಕಾಮಿಯಾದವನು ದೇಹವನ್ನು ಬಿಟ್ಟಮೇಲೆ ಮೋಕ್ಷವನ್ನು ಪಡೆಯುವನು. ಅವನಿಗೆ ಪುನರ್ಜನ್ಮವಿಲ್ಲ. ನಿಷ್ಕಾಮಿಗಳಾದ ಭಕ್ತರು ಗೋಲೋಕಕ್ಕೆ ಹೋಗಿ ಅಲ್ಲಿ ದಿವ್ಯರೂಪವನ್ನು ಧರಿಸಿದವರಾಗಿ ಪರಮಾತ್ಮನಾದ ದ್ವಿಭುಜಕೃಷ್ಣನನ್ನು ಸೇವಿಸುತ್ತಿರುವರು. ಸಕಾಮಿಗಳೂ ವಿಷ್ಣುಭಕ್ತರೂ ಆದ ಬ್ರಾಹ್ಮಣರು ದೇಹವನ್ನು ಬಿಟ್ಟು ವೈಕುಂಠಕ್ಕೆ ಹೋಗಿ ಮತ್ತೆ ಭರತಖಂಡದಲ್ಲಿ ಬ್ರಾಹ್ಮಣರಾಗಿ ಹುಟ್ಟುವರು. ಕೆಲವು ಕಾಲದ ಮೇಲೆ ಅವರೂ ನಿಷ್ಕಾಮಿಗಳಾಗುವರು. ಅವರಲ್ಲಿ ಪರಿಶುದ್ಧವಾದ ಭಕ್ತಿಯನ್ನುಂಟುಮಾಡುವೆನು. ಇದು ನಿಜವು. ||೨೬-೨೭-೨೮-೨೯||

ಬ್ರಾಹ್ಮಣರಾಗಿ ವೈಷ್ಣವರಾಗಿ ಹುಟ್ಟಿದರೂ ಸಕಾಮಕರ್ಮವನ್ನು ಮಾಡುವವರಿಗೆ ಪರಿಶುದ್ಧವಾದ ವಿಷ್ಣುಭಕ್ತಿಯು ಇರುವುದಿಲ್ಲ. ಅವರ ಬುದ್ಧಿಯು ನಿರ್ಮಲವಾದುದಲ್ಲ. ತೀರ್ಥಕ್ಷೇತ್ರಗಳಲ್ಲಿ ವಾಸಮಾಡುತ್ತಾ ತಪಸ್ಸುಮಾಡುವವರು ಬ್ರಹ್ಮಲೋಕಕ್ಕೆ ಹೋಗಿ ಪುನಃ ಭರತಖಂಡದಲ್ಲಿ ಹುಟ್ಟುವರು. ಹೀಗೆಯೇ ಸ್ವಧರ್ಮದಲ್ಲಿ

ಸ್ವಧರ್ಮನಿರತಾ ವಿಪ್ರಾಃ ಸೂರ್ಯಭಕ್ತಾಶ್ಚ ಭಾರತೇ ।
ವ್ರಜಂತಿ ತೇ ಸೂರ್ಯಲೋಕಂ ಪುನರಾಯಾಂತಿ ಭಾರತೇ ॥೩೩॥

ಮೂಲಪ್ರಕೃತಿಭಕ್ತಾ ಯೇ ನಿಷ್ಕಾಮಾ ಧರ್ಮಚಾರಿಣಃ ।
ಮಣಿದ್ವೀಪಂ ಪ್ರಯಾಂತ್ಯೇವ ಪುನರಾವೃತ್ತಿವರ್ಜಿತಂ ॥೩೪॥

ಸ್ವಧರ್ಮನಿರತಾ ಭಕ್ತಾಃ ಶೈವಾಃ ಶಾಕ್ತಾಶ್ಚ ಗಾಣಪಾಃ ।
ತೇ ಯಾಂತಿ ಶಿವಲೋಕಂ ಚ ಪುನರಾಯಾಂತಿ ಭಾರತೇ ॥೩೫॥

ಯೇ ವಿಪ್ರಾ ಅನ್ಯದೇವೇಜ್ಯಾಃ ಸ್ವಧರ್ಮನಿರತಾಃ ಸತಿ ।
ತೇ ಯಾಂತಿ ಸರ್ವಲೋಕಂ ಚ ಪುನರಾಯಾಂತಿ ಭಾರತೇ ॥೩೬॥

ಹರಿಭಕ್ತಾಶ್ಚ ನಿಷ್ಕಾಮಾಃ ಸ್ವಕರ್ಮನಿರತಾ ದ್ವಿಜಾಃ ।
ತೇ ಚ ಯಾಂತಿ ಹರೇರ್ಲೋಕಂ ಕ್ರಮಾದ್ಭಕ್ತಿಬಲಾದಹೋ ॥೩೭॥

ಸ್ವಧರ್ಮರಹಿತಾ ವಿಪ್ರಾ ದೇವಾನ್ಯಸೇವನಾಃ ಸದಾ ।
ಭ್ರಷ್ಟಾಚಾರಾಶ್ಚ ಕಾಮಾಶ್ಚ ತೇ ಯಾಂತಿ ನರಕಂ ಧ್ರುವಂ ॥೩೮॥

---

ಆಸಕ್ತರಾಗಿದ್ದು ತೀರ್ಥಕ್ಷೇತ್ರಗಳಲ್ಲಿಲ್ಲದಿದ್ದವರೂ ಸತ್ಯಲೋಕಕ್ಕೆ ಹೋಗಿ ಪುನರ್ಜನ್ಮವನ್ನು ಪಡೆವರು. ಸ್ವಧರ್ಮನಿರತರಾಗಿ ಸೂರ್ಯಭಕ್ತರಾದವರು ಸೂರ್ಯಲೋಕಕ್ಕೆ ಹೋಗಿ ಮತ್ತೆ ಜನ್ಮವನ್ನು ಪಡೆವರು. ||೩೦-೩೧-೩೨-೩೩||

ಮೂಲಪ್ರಕೃತಿಯಾದ ದೇವಿಯ ಭಕ್ತರಾಗಿ ನಿಷ್ಕಾಮಕರ್ಮವನ್ನು ಮಾಡುವವರು ಪುನರಾವೃತ್ತಿಯಿಲ್ಲದ ಮಣಿದ್ವೀಪಕ್ಕೆ ಹೋಗುವರು. ಸ್ಕಂ. ೩. ಅ. ೩. ||೩೪||

ಸ್ವಧರ್ಮನಿರತರಾಗಿ ಶಿವನನ್ನೂ ಶಕ್ತಿಯನ್ನೂ ಗಣಪತಿಯನ್ನೂ ಪೂಜಿಸುವ ಭಕ್ತರು ಶಿವಲೋಕಕ್ಕೂ, ಬೇರೆ ಬೇರೆ ದೇವತೆಗಳ ಭಕ್ತರು ಆಯಾ ದೇವತೆಗಳ ಲೋಕಕ್ಕೂ ಹೋಗಿ ಮತ್ತೆ ಭರತಖಂಡದಲ್ಲಿ ಜನ್ಮವೆತ್ತುವರು. ||೩೫-೩೬||

ಸ್ವಕರ್ಮಾಸಕ್ತರಾಗಿ ನಿಷ್ಕಾಮಿಗಳಾದ ಹರಿಭಕ್ತರು ತಮ್ಮ ಭಕ್ತಿಬಲದಿಂದ ವಿಷ್ಣುಲೋಕಕ್ಕೆ ಹೋಗುವರು. ||೩೭||

ಬ್ರಾಹ್ಮಣರಲ್ಲಿ ತಮ್ಮ ಧರ್ಮವನ್ನು ಬಿಟ್ಟು ಆಚಾರಭ್ರಷ್ಟರಾಗಿ ಕಾಮಿಗಳಾಗಿ ಕ್ಷುದ್ರದೇವತೆಗಳನ್ನು ಪೂಜಿಸತಕ್ಕವರು ಅಥವಾ ಪಂಚಾಯತನದ ದೇವರ ಪೂಜೆ ಮಾಡದವರು ಖಂಡಿತವಾಗಿಯೂ ನರಕಕ್ಕೆ ಹೋಗುವರು. ||೩೮||

ಸ್ವಧರ್ಮನಿರತಾ ಏವ ವರ್ಣಾಶ್ಚತ್ವಾರ ಏವ ಚ ।
ಭ್ರಮಂತ್ಯೇವ ಶುಭಸ್ಯೈವ ಕರ್ಮಣಃ ಫಲಭೋಗಿನಃ ॥೩೯॥

ಸ್ವಕರ್ಮರಹಿತಾ ಯೇ ಚ ನರಕಂ ಯಾಂತಿ ತೇ ಧ್ರುವಂ ।
ಭಾರತೇ ನ ಭವಂತ್ಯೇವ ಕರ್ಮಣಃ ಫಲಭೋಗಿನಃ ॥೪೦॥

ಸ್ವಧರ್ಮನಿರತಾ ಏವ ವರ್ಣಾಶ್ಚತ್ವಾರ ಏವ ಚ ।
ಸ್ವಧರ್ಮನಿರತಾ ವಿಪ್ರಾಃ ಸ್ವಧರ್ಮನಿರತಾಯ ಚ ॥೪೧॥

ಕನ್ಯಾಂ ದದತಿ ವಿಪ್ರಾಯ ಚಂದ್ರಲೋಕಂ ಪ್ರಯಾಂತಿ ತೇ ।
ವಸಂತಿ ತತ್ರ ತೇ ಸಾಧ್ವಿ ಯಾವದಿಂದ್ರಾಶ್ಚತುರ್ದಶ ॥೪೨॥

ಸಾಲಂಕೃತಾಯಾ ದಾನೇನ ದ್ವಿಗುಣಂ ಫಲಮುಚ್ಯತೇ ।
ಸಕಾಮಾ ಯಾಂತಿ ತಲ್ಲೋಕಂ ನ ನಿಷ್ಕಾಮಾಶ್ಚ ಸಾಧವಃ ॥೪೩॥
ತೇ ಪ್ರಯಾಂತಿ ವಿಷ್ಣುಲೋಕಂ ಫಲಸಂಘಾತವರ್ಜಿತಾಃ ।

---

ನಾಲ್ಕು ವರ್ಣದವರೂ ತಮ್ಮ ತಮ್ಮ ಧರ್ಮವನ್ನು ಆಚರಿಸುತ್ತಿದ್ದರೆ ಅವರು ಶುಭವಾದ ಕರ್ಮಫಲವನ್ನೇ ಅನುಭವಿಸುವವರಾಗುತ್ತಾರೆ. ಇದೇ ಉತ್ತಮವು.॥೩೯॥

ಸ್ವಕರ್ಮವನ್ನು ಮಾಡದವರು ಶಾಶ್ವತವಾದ ನರಕವನ್ನು ಹೊಂದುವರು. ಭರತಖಂಡದಲ್ಲಿ ಅವರಿಗೆ ಜನ್ಮವೇ ಬರುವುದಿಲ್ಲ. ನರಕದಿಂದ ಅವರಿಗೆ ಉದ್ಧಾರವೇ ಆಗುವುದಿಲ್ಲ. ॥೪೦॥

ನಾಲ್ಕುವರ್ಣದವರೂ ತಮ್ಮ ಧರ್ಮದಲ್ಲಾಸಕ್ತರಾಗಿದ್ದು ವಿಪ್ರರು ಸ್ವಧರ್ಮದಿಂದಿದ್ದು ಸ್ವಧರ್ಮದಿಂದಿದ್ದ ವಿಪ್ರನಿಗೆ ಕನ್ಯಾದಾನಮಾಡಿದರೆ ಚಂದ್ರಲೋಕಕ್ಕೆ ಹೋಗಿ ಹದಿನಾಲ್ಕು ಇಂದ್ರರ ಅಧಿಕಾರವು ಕಳೆಯುವಷ್ಟು ಕಾಲ ಆ ಲೋಕದಲ್ಲಿರುವರು. ॥೪೧-೪೨॥

ಸಾಲಂಕೃತಕನ್ಯಾದಾನ ಮಾಡಿದರೆ ದ್ವಿಗುಣಪುಣ್ಯವು ಬರುವುದು. ಫಲಾಪೇಕ್ಷೆಯುಳ್ಳವರು ತಮಗಿಷ್ಟವಾದ ಲೋಕವನ್ನು ಪಡೆಯುವರು. ನಿಷ್ಕಾಮಿಗಳಾದ ಸಜ್ಜನರಿಗೆ ಚಿತ್ತಶುದ್ಧಿಯೇ ಫಲವು. ಚಿತ್ತಶುದ್ಧಿಯಿಂದ ಜ್ಞಾನಪ್ರಾಪ್ತಿಯಾಗುವುದು. ಜ್ಞಾನಪ್ರಾಪ್ತಿಗೆ ತಡೆಯಿದ್ದರೆ ತಮಗಿಷ್ಟವಾದ ವಿಷ್ಣುಲೋಕವೇ ಮುಂತಾದ ಲೋಕಗಳನ್ನು ಅಂಥವರು ಪಡೆಯುವರು. ॥೪೩॥

ಗವ್ಯಂ ಚ ರಜತಂ ಸ್ವರ್ಣಂ ವಸ್ತ್ರಂ ಸರ್ಪಿಃ ಫಲಂ ಜಲಂ ॥೪೪॥
ಯೇ ದದತ್ಯೇವ ವಿಪ್ರೇಭ್ಯಶ್ಚಂದ್ರಲೋಕಂ ಪ್ರಯಾಂತಿ ತೇ ।
ವಸಂತಿ ತೇ ಚ ತಲ್ಲೋಕೇ ವರ್ಷಾಣಾಮಯುತಂ ಸತಿ ॥೪೫॥
ಸುಚಿರಾತ್ಸುಚಿರಂ ವಾಸಂ ಕುರ್ವಂತಿ ತೇನ ತೇ ಜನಾಃ ।
ಯೋ ದದಾತಿ ಸುವರ್ಣಾಶ್ಚ ಗಾಶ್ಚ ತಾಮ್ರಾದಿಕಂ ಸತಿ ॥೪೬॥
ತೇ ಯಾಂತಿ ಸೂರ್ಯಲೋಕಂ ಚ ಶುಚಯೇ ಬ್ರಾಹ್ಮಣಾಯ ಚ ।
ವಸಂತಿ ತೇ ತತ್ರ ಲೋಕೇ ವರ್ಷಾಣಾಮಯುತಂ ಸತಿ ॥೪೭॥
ವಿಪುಲೇ ಸುಚಿರಂ ವಾಸಂ ಕುರ್ವಂತಿ ಚ ನಿರಾಮಯಾಃ ।
ದದಾತಿ ಭೂಮಿಂ ವಿಪ್ರೇಭ್ಯೋ ಧನಾನಿ ವಿಪುಲಾನಿ ಚ ॥೪೮॥
ಸ ಯಾತಿ ವಿಷ್ಣುಲೋಕಂ ಚ ಶ್ವೇತದ್ವೀಪಂ ಮನೋಹರಂ ।
ತತ್ರೈವ ನಿವಸತ್ಯೇವ ಯಾವಚ್ಚಂದ್ರದಿವಾಕರೌ ॥೪೯॥
ವಿಪುಲೇ ವಿಪುಲಂ ವಾಸಂ ಕರೋತಿ ಪುಣ್ಯವಾನ್ಮನೇ ।

---

ಗವ್ಯವೆಂದರೆ ಗೋವಿನಿಂದುಂಟಾದ ಹಾಲು ಮೊಸರು ಮುಂತಾದುವು. ಬೆಳ್ಳಿ, ಚಿನ್ನ, ವಸ್ತ್ರ, ತುಪ್ಪ, ಹಣ್ಣು, ನೀರು ಇವುಗಳನ್ನು ಬ್ರಾಹ್ಮಣನಿಗೆ ದಾನಮಾಡಿದವರು ಚಂದ್ರಲೋಕಕ್ಕೆ ಹೋಗಿ ಹತ್ತುಸಾವಿರ ವರ್ಷಗಳೋ ಇನ್ನೂ ಹೆಚ್ಚಾಗಿಯೋ ಆ ಲೋಕದಲ್ಲಿ ವಾಸಮಾಡುವರು. ॥೪೪-೪೫॥

ಯಾರು ಪರಿಶುದ್ಧನಾದ ಬ್ರಾಹ್ಮಣನಿಗೆ ಉತ್ತಮವಾದ ಬಣ್ಣದಿಂದ ಕೂಡಿದ ಗೋವನ್ನೂ ತಾಮ್ರ ಪಾತ್ರೆ ಮೊದಲಾದುವನ್ನೂ ದಾನಮಾಡುವನೋ ಅವನು ಸೂರ್ಯಲೋಕದಲ್ಲಿ ಹತ್ತುಸಾವಿರ ವರ್ಷ ಅಥವಾ ಇನ್ನೂ ಹೆಚ್ಚುಕಾಲ ವಾಸಮಾಡುವನು. ॥೪೬-೪೭॥

ಬ್ರಾಹ್ಮಣನಿಗೆ ಭೂಮಿಯನ್ನೂ ಹೆಚ್ಚಾಗಿ ಹಣವನ್ನೂ ದಾನಮಾಡಿದವನು ಮನೋಹರವಾದ ವಿಷ್ಣುವಿನ ಸ್ಥಾನವಾದ ಶ್ವೇತದ್ವೀಪದಲ್ಲಿ ಸೂರ್ಯಚಂದ್ರರಿರುವವರೆಗೂ ಇರುವನು. ಪುಣ್ಯವು ಹೆಚ್ಚಾಗಿದ್ದರೆ ಇನ್ನೂ ಹೆಚ್ಚುಕಾಲವಿರುವನು. ॥೪೮-೪೯॥

ಗೃಹಂ ದದತಿ ವಿಪ್ರಾಯ ಯೇ ಜನಾ ಭಕ್ತಿಪೂರ್ವಕಂ ॥೫೦॥

ತೇ ಯಾಂತಿ ವಿಷ್ಣುಲೋಕಂ ಚ ಸುಚಿರಂ ಸುಖದಾಯಕಂ ।
ಗೃಹರೇಣುಪ್ರಮಾಣಂ ಚ ವಿಷ್ಣುಲೋಕೇ ಮಹತ್ತಮೇ ॥೫೧॥

ವಿಪುಲೇ ವಿಪುಲಂ ವಾಸಂ ಕುರ್ವಂತಿ ಮಾನವಾಃ ಸತಿ ।
ಯಸ್ಮೈ ಯಸ್ಮೈ ಚ ದೇವಾಯ ಯೋ ದದಾತಿ ಗೃಹಂ ನರಃ ॥೫೨॥

ಸ ಯಾತಿ ತಸ್ಯ ಲೋಕಂ ಚ ರೇಣುಮಾನಾಬ್ದಮೇವ ಚ ।
ಸೌಧೇ ಚತುರ್ಗುಣಂ ಪುಣ್ಯಂ ದೇಶೇ ಶತಗುಣಂ ಫಲಂ ॥೫೩॥

ಪ್ರಕೃಷ್ಟೇ ದ್ವಿಗುಣಂ ತಸ್ಮಾದಿತ್ಯಾಹ ಕಮಲೋದ್ಭವಃ ।
ಯೋ ದದಾತಿ ತಡಾಕಂ ಚ ಸರ್ವಪಾಪಾಪನುತ್ತಯೇ ॥೫೪॥

ಸ ಯಾತಿ ಜನಲೋಕಂ ಚ ರೇಣುಮಾನಾಬ್ದಮೇವ ಚ ।
ವಾಪ್ಯಾಂ ಫಲಂ ದಶಗುಣಂ ಪ್ರಾಪ್ನೋತಿ ಮಾನವಃ ಸದಾ ॥೫೫॥
ಸ ತು ವಾಪೀಪ್ರದಾನೇನ ತಡಾಗಸ್ಯ ಫಲಂ ಲಭೇತ್ ।

---

ಯಾರು ಭಕ್ತಿಯಿಂದ ಬ್ರಾಹ್ಮಣನಿಗೆ ಮನೆಯನ್ನು ದಾನಮಾಡುವರೋ ಅವರು ಸುಖಕರವಾದ ವಿಷ್ಣುಲೋಕದಲ್ಲಿ ದಾನಮಾಡಿದ ಮನೆಯಲ್ಲಿ ಎಷ್ಟು ರೇಣುಗಳಿವೆಯೋ ಅಷ್ಟು ವರ್ಷ ವಾಸವಾಗಿರುವರು. ಯಾವ ಯಾವ ದೇವತೆಗಳ ಪ್ರೀತ್ಯರ್ಥವಾಗಿ ಮನೆಯನ್ನು ದಾನಮಾಡಿದರೂ ರೇಣುಮಾನ ವರ್ಷಗಳು ಎಂದರೆ ಆಯಾ ಮನೆಗಳಲ್ಲಿ ಇರಬಹುದಾದ ಪರಮಾಣುಗಳ ಸಂಖ್ಯೆಯಷ್ಟು ವರ್ಷಗಳ ವರೆಗೆ ಆ ದೇವತೆಗಳ ಲೋಕದಲ್ಲಿ ವಾಸಿಸುವರು. ಉಪ್ಪರಿಗೆಯ ಮನೆಯ ದಾನಕ್ಕೆ ನಾಲ್ಕರಷ್ಟು ಪುಣ್ಯವೂ, ದೇಶದ ದಾನಕ್ಕೆ ನೂರರಷ್ಟು ಪುಣ್ಯವೂ ದೊಡ್ಡ ದೇಶಕ್ಕೆ ಎರಡರಷ್ಟು ಪುಣ್ಯವೂ, ಬರುವುದೆಂದು ಬ್ರಹ್ಮನು ಹೇಳಿರುವನು. ॥೫೦-೫೧-೫೨-೫೩॥

ಸಮಸ್ತ ಪಾಪಗಳ ಪರಿಹಾರಕ್ಕಾಗಿ ಯಾರು ಕೆರೆಯನ್ನು ದಾನಮಾಡುವರೋ ಅವರು ಕೆರೆಯಲ್ಲಿರುವ ನೀರಿನ ಪರಮಾಣುಗಳಷ್ಟು ವರ್ಷ ಜನೋಲೋಕದಲ್ಲಿ ವಾಸ ಮಾಡುವರು. ಭಾವಿಯನ್ನು ಕಟ್ಟಿಸಿ ದಾನಮಾಡಿದವರು ಹತ್ತರಷ್ಟು ಫಲವನ್ನು ಹೊಂದುವರು. ಭಾವಿಯ ದಾನದಿಂದ ಕೆರೆಯದಾನದ ಫಲವನ್ನೂ ಹೊಂದುವರು. ॥೫೪-೫೫॥

ಧನುಶ್ಚತುಃ ಸಹಸ್ರೇಣ ದೈರ್ಘ್ಯಂ ಮಾನೇನ ನಿಶ್ಚಿತಂ ॥೫೭॥

ನ್ಯೂನಾ ವಾ ತಾವತೀ ಪ್ರಸ್ಥೇ ಸಾ ವಾಪೀ ಪರಿಕೀರ್ತಿತಾ ।
ದಶವಾಪೀಸಮಾ ಕನ್ಯಾ ಯದಿ ಪಾತ್ರೇ ಪ್ರದೀಯತೇ ॥೫೭॥

ಫಲಂ ದದಾತಿ ದ್ವಿಗುಣಂ ಯದಿ ಸಾಽಲಂಕೃತಾ ಭವೇತ್ ।
ಯತ್ಫಲಂ ಚ ತಡಾಗೇ ಚ ತದುದ್ಧಾರೇ ಚ ಯತ್ಫಲಂ ॥೫೮॥

ವಾಪ್ಯಾಶ್ಚ ಪಂಕೋದ್ಧರಣೇ ವಾಪೀತುಲ್ಯಫಲಂ ಲಭೇತ್ ।
ಅಶ್ವತ್ಥವೃಕ್ಷಮಾರೋಪ್ಯ ಪ್ರತಿಷ್ಠಾಂ ಯಃ ಕರೋತಿ ಚ ॥೫೯॥

ಸ ಪ್ರಯಾತಿ ತಪೋಲೋಕಂ ವರ್ಷಾಣಾಮಯುತಂ ಸತಿ ।
ಪುಷ್ಪೋದ್ಯಾನಂ ಯೋ ದದಾತಿ ಸಾವಿತ್ರೀ ಸರ್ವಭೂತಯೇ ॥೬೦॥

ಸ ವಸೇದ್ಧ್ರುವಲೋಕಂ ಚ ವರ್ಷಾಣಾಮಯುತಂ ಧ್ರುವಂ ।
ಯೋ ದದಾತಿ ವಿಮಾನಂ ಚ ವಿಷ್ಣವೇ ಭಾರತೇ ಸತಿ ॥೬೧॥

---

ನಾಲ್ಕು ಮೊಳ ಉದ್ದಕ್ಕೆ ಒಂದುಧನುವೆಂದು ಹೆಸರು. ನಾಲ್ಕುಸಾವಿರ ಧನುಸ್ಸಿನ ಉದ್ದ ಅಷ್ಟೇ ಅಗಲ ಅಥವಾ ಕಡಿಮೆ ಅಗಲವಿರುವುದು ವಾಪಿ. ಇಳಿಯುವ ಭಾವಿಗೆ ನಲವತ್ತು ಮೊಳ ಉದ್ದವೂ ಅಷ್ಟೇ ಅಥವಾ ಕಡಿಮೆ ಅಗಲವೆಂದು ದೇವೀ ಪುರಾಣದಲ್ಲಿರುವುದು. ॥೫೭॥

ಹತ್ತು ಭಾವಿಗಳನ್ನು ದಾನಮಾಡಿದಷ್ಟು ಫಲವು ಪಾತ್ರದಲ್ಲಿ ಕನ್ಯಾದಾನ ದಿಂದ ಬರುವುದು. ಸಾಲಂಕೃತಕನ್ಯಾದಾನಕ್ಕೆ ದ್ವಿಗುಣಫಲವು. ಕೆರೆಯನ್ನು ದಾನ ಮಾಡಿದರೆ ಎಷ್ಟು ಫಲವೋ ಅಷ್ಟೇ ಫಲವು ಕೆರೆಯ ಕೆಸರನ್ನು ತೆಗೆದು ಜೀರ್ಣೋ ದ್ಧಾರಮಾಡಿದರೂ ಬರುವುದು. ಭಾವಿಯ ಕೆಸರನ್ನು ತೆಗೆಸಿದರೆ ಭಾವಿಯನ್ನು ಕಟ್ಟಿಸಿ ದಾನಮಾಡಿದಫಲವು ಬರುವುದು. ॥೫೭-೫೮॥

ಅಶ್ವತ್ಥವೃಕ್ಷವನ್ನು ಬೆಳಸಿ ಅದನ್ನು ಪ್ರತಿಷ್ಠೆಮಾಡಿಸಿದರೆ ಹತ್ತುಸಾವಿರ ವರ್ಷ ತಪೋಲೋಕದಲ್ಲಿ ವಾಸಮಾಡುವರು. ಹೂವಿನ ತೋಟವನ್ನು ದಾನಮಾಡಿದರೆ ಸಕಲ ಸಂಪತ್ತೂ ಬರುವುದಲ್ಲದೆ ಹತ್ತುಸಾವಿರ ವರ್ಷ ಧ್ರುವಲೋಕದಲ್ಲಿ ವಾಸ ಮಾಡುವರು. ॥೫೯-೬೦॥

ಯಾರು ವಿಷ್ಣುದೇವಾಲಯಕ್ಕೆ ವಿಮಾನವನ್ನು (ಮುಂಬಾಗಿಲಿನ ಗೋಪುರ)

ವಿಷ್ಣುಲೋಕೇ ವಸೇತ್ಸೋಽಪಿ ಯಾವನ್ಮನ್ವಂತರಂ ಪರಂ ।
ಚಿತ್ರಯುಕ್ತೇ ಚ ವಿಪುಲೇ ಫಲಂ ತಸ್ಯ ಚತುರ್ಗುಣಂ ॥೬೨॥

ತಸ್ಯಾರ್ಧಂ ಶಿಬಿಕಾದಾನೇ ಫಲಮೇವ ಲಭೇದ್ಧ್ರುವಂ ।
ಯೋ ದದಾತಿ ಭಕ್ತಿಯುಕ್ತೋ ಹರಯೇ ದೋಲಮಂದಿರಂ ॥೬೩॥

ವಿಷ್ಣುಲೋಕೇ ವಸೇತ್ಸೋಽಪಿ ಯಾವನ್ಮನ್ವಂತರಂ ಶತಂ ।
ರಾಜಮಾರ್ಗಂ ಸೌಧಯುಕ್ತಂ ಯಃ ಕರೋತಿ ಪತಿವ್ರತೇ ॥೬೪॥

ವರ್ಷಾಣಾಮಯುತಂ ಸೋಽಪಿ ಶಕ್ರಲೋಕೇ ಮಹೀಯತೇ ।
ಬ್ರಾಹ್ಮಣೇಭ್ಯೋಽಥ ದೇವೇಭ್ಯೋ ದಾನೇ ಸಮಫಲಂಭವೇತ್॥೬೫॥

ಯದ್ಧಿ ದತ್ತಂ ಚ ತದ್ಭುಜ್ತೇ ನ ದತ್ತಂ ನೋಪತಿಷ್ಠತೇ ।
ಭುಕ್ತ್ವಾ ಸ್ವರ್ಗಾದಿಕಂ ಸೌಖ್ಯಂ ಪುಣ್ಯವಾನ್ ಜನ್ಮ ಭಾರತೇ ॥೬೬॥

---

ಕಟ್ಟಿಸಿಕೊಡುವರೋ ಅವರು ಒಂದು ಮನ್ವಂತರದವರೆಗೂ ವಿಷ್ಣುಲೋಕದಲ್ಲಿ ವಾಸಮಾಡುವರು. ಆ ವಿಮಾನವು ವಿಸ್ತಾರವಾಗಿ ಚಿತ್ರಗಳಿಂದ ಕೂಡಿದ್ದರೆ ನಾಲ್ಕರಷ್ಟು ಫಲವು. ದೇವಾಲಯಕ್ಕೆ ಪಲ್ಲಕ್ಕಿಯನ್ನು ತೆಗೆದುಕೊಟ್ಟರೆ ವಿಮಾನದ ಅರ್ಧದಷ್ಟು ಫಲವು ಬರುವುದು. ॥೬೦-೬೨॥

ಯಾವನು ವಿಷ್ಣುದೇವಾಲಯದಲ್ಲಿ ಉಯ್ಯಾಲೆಯ ಮಂಟಪವನ್ನು ಕಟ್ಟಿಸುವನೋ ಅವನು ನೂರು ಮನ್ವಂತರಗಳವರೆಗೆ ವಿಷ್ಣುಲೋಕದಲ್ಲಿರುವನು. ॥೬೩॥

ಪತಿವ್ರತೆಯಾದ ಸಾವಿತ್ರಿಯೇ, ಯಾರು ಉಪ್ಪರಿಗೆ ಮನೆಗಳಿಂದ ಕೂಡಿದ ರಾಜಮಾರ್ಗವನ್ನು ಮಾಡಿಸುವರೋ ಅವರು ಹತ್ತುಸಾವಿರ ವರ್ಷಗಳವರೆಗೆ ಇಂದ್ರಲೋಕದಲ್ಲಿರುವರು. ॥೬೪॥

ಬ್ರಾಹ್ಮಣರಿಗಾಗಲೀ ದೇವತೆಗಳಿಗಾಗಲೀ ಮಾಡಿದ ದಾನವು ಸಮಾನವಾದ ಫಲವುಳ್ಳದ್ದಾಗಿರುವುದು. ದಾತೃಗಳು ದಾನಕ್ಕೆ ತಕ್ಕ ಫಲವನ್ನನುಭವಿಸುವರು. ಪುಣ್ಯವಂತನು ಸ್ವರ್ಗದಲ್ಲಿ ಸೌಖ್ಯವನ್ನನುಭವಿಸಿ ಭರತಖಂಡದಲ್ಲಿ ಕ್ರಮವಾಗಿ ಉತ್ತಮವಾದ ಬ್ರಾಹ್ಮಣವಂಶದಲ್ಲಿಯೇ ಹುಟ್ಟುವನು. ಪುನಃ ಪುಣ್ಯಕರ್ಮವನ್ನು ಆಚರಿಸಿ ಸ್ವರ್ಗಾದಿಫಲಗಳನ್ನನುಭವಿಸಿ ಮತ್ತೆ ಬ್ರಾಹ್ಮಣನಾಗಿಯೇ ಹುಟ್ಟುವನು.

ಲಭೇದ್ವಿಪ್ರಕುಲೇಷ್ವೇವ ಕ್ರಮೇಣೈವೋತ್ತಮಾದಿಷು ।
ಭಾರತೇ ಪುಣ್ಯವಾನ್ವಿಪ್ರೋ ಭುಕ್ತ್ವಾ ಸ್ವರ್ಗಾದಿಕಂ ಫಲಂ ॥೬೭॥

ಪುನಃ ಸೋಽಪಿ ಭವೇದ್ವಿಪ್ರಶ್ಚೈವಂ ಚ ಕ್ಷತ್ರಿಯಾದಯಃ ।
ಕ್ಷತ್ರಿಯೋ ವಾಽಥ ವೈಶ್ಯೋ ವಾ ಕಲ್ಪಕೋಟಿಶತೇನ ಚ ॥೬೮॥

ತಪಸಾ ಬ್ರಾಹ್ಮಣತ್ವಂ ಚ ನ ಪ್ರಾಪ್ನೋತಿ ಶ್ರುತೌ ಶ್ರುತಂ ।
ನಾಽಭುಕ್ತಂ ಕ್ಷೀಯತೇ ಕರ್ಮ ಕಲ್ಪಕೋಟಿಶತೈರಪಿ ॥೬೯॥

ಅವಶ್ಯಮೇವ ಭೋಕ್ತವ್ಯಂ ಕೃತಂ ಕರ್ಮ ಶುಭಾಶುಭಂ ।
ದೈವತೀರ್ಥಸಹಾಯೇನ ಕಾಯವ್ಯೂಹೇನ ಶುದ್ಧ್ಯತಿ ॥೭೦॥
ಏತತ್ತೇ ಕಥಿತಂ ಕಿಂಚಿತ್ಕಿಂ ಭೂಯಃ ಶ್ರೋತುಮಿಚ್ಛಸಿ ।

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ನವಮಸ್ಕಂಧೇ
ಏಕೋನತ್ರಿಂಶೋಽಧ್ಯಾಯಃ

---

ಕ್ಷತ್ರಿಯಾದಿಗಳೂ ಹೀಗೆಯೇ ಸ್ವರ್ಗಫಲವನ್ನನುಭವಿಸಿದ ಮೇಲೆ ಬ್ರಾಹ್ಮಣವಂಶದಲ್ಲಿ ಹುಟ್ಟುವರು. ॥೬೫-೬೬-೬೭॥

ಕ್ಷತ್ರಿಯನಾಗಲೀ ವೈಶ್ಯನಾಗಲೀ ನೂರುಕೋಟಿ ಕಲ್ಪಗಳವರೆಗೆ ತಪಸ್ಸು ಮಾಡಿದರೂ ಬ್ರಾಹ್ಮಣನಾಗಲಾರನೆಂದು ವೇದದಲ್ಲಿ ಹೇಳಿರುವುದು. ಆದರೆ ಇಂತಹ ಪುಣ್ಯಫಲದಿಂದ ಹುಟ್ಟುವಾಗಲೇ ಬ್ರಾಹ್ಮಣವಂಶದಲ್ಲಿಹುಟ್ಟುವನೆಂದು ಭಾವವು.॥೬೮॥

ನೂರುಕೋಟಿ ಕಲ್ಪಗಳ ಕಾಲ ಕಳೆದರೂ ಮಾಡಿದ ಶುಭಾಶುಭ ಕರ್ಮಗಳ ಫಲವನ್ನನುಭವಿಸದೆ ಕರ್ಮವು ನಾಶವಾಗುವುದಿಲ್ಲ. ಆದುದರಿಂದ ಕರ್ಮಫಲವನ್ನು ಅನುಭವಿಸಿಯೇ ತೀರಬೇಕು. ಜೀವನು ಕರ್ಮಸಂಬಂಧವನ್ನು ಕಳೆದುಕೊಂಡು ಶುದ್ಧನಾಗಬೇಕಾದರೆ ದೇವತೆಗಳ ಅನುಗ್ರಹವೂ ತೀರ್ಥಕ್ಷೇತ್ರಗಳ ಸೇವೆಯೂ ಆವಶ್ಯಕವಾದುದು. ಎಲೌ ಸಾವಿತ್ರಿಯೇ, ನಿನಗೆ ಈ ವಿಷಯವನ್ನು ಹೇಳಿರುವೆನು. ಮತ್ತೇನನ್ನು ಕೇಳಬೇಕೆಂದಿರುವೆ? ॥೬೯-೭೦॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಒಂಬತ್ತನೆಯ ಸ್ಕಂಧದಲ್ಲಿ
ಇಪ್ಪತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ನವಮಸ್ಕಂಧೇ

### || ತ್ರಿಂಶೋಽಧ್ಯಾಯಃ ||

### ಮೂವತ್ತನೆಯ ಅಧ್ಯಾಯವು

|| ಸಾವಿತ್ರ್ಯುವಾಚ ||

**ಪ್ರಯಾಂತಿ ಸ್ವರ್ಗಮನ್ಯಂ ಚ ಯೇನೈವ ಕರ್ಮಣಾ ಯಮ ।**
**ಮಾನವಾಃ ಪುಣ್ಯವಂತಶ್ಚ ತನ್ಮೇ ವ್ಯಾಖ್ಯಾತುಮರ್ಹಸಿ ||೧||**

|| ಧರ್ಮರಾಜ ಉವಾಚ ||

**ಅನ್ನದಾನಂ ಚ ವಿಪ್ರಾಯ ಯಃ ಕರೋತಿ ಚ ಭಾರತೇ ।**
**ಅನ್ನಪ್ರಮಾಣವರ್ಷಂ ಚ ಶಿವಲೋಕೇ ಮಹೀಯತೇ ||೨||**

**ಅನ್ನದಾನಂ ಮಹಾದಾನಮನ್ಯೇಭ್ಯೋಽಪಿ ಕರೋತಿ ಯಃ ।**
**ಅನ್ನದಾನಪ್ರಮಾಣಂ ಚ ಶಿವಲೋಕೇ ಮಹೀಯತೇ ||೩||**

**ಅನ್ನದಾನಾತ್ಪರಂ ದಾನಂ ನ ಭೂತಂ ನ ಭವಿಷ್ಯತಿ ।**
**ನಾತ್ರ ಪ್ರಾತ್ರ ಪರೀಕ್ಷಾ ಸ್ಯಾನ್ನ ಕಾಲನಿಯಮಃ ಕ್ವಚಿತ್ ||೪||**

---

ಸಾವಿತ್ರಿಯು ಹೇಳಿದಳು--ಯಮದೇವನೇ, ಯಾವ ಕರ್ಮದಿಂದ ಮನುಷ್ಯರು ಪುಣ್ಯವಂತರಾಗಿ ಸ್ವರ್ಗಕ್ಕೆ ಮತ್ತು ಇತರ ಉತ್ತಮಲೋಕಗಳಿಗೆ ಹೋಗುವರೋ ಅದನ್ನು ನನಗೆ ವಿಸ್ತಾರವಾಗಿ ಹೇಳು. ||೧||

ಧರ್ಮರಾಜನು ಹೇಳಿದನು---ಯಾವನು ಬ್ರಾಹ್ಮಣರಿಗಾಗಲೀ ಇತರರಿಗಾಗಲೀ ಅನ್ನದಾನವನ್ನು ಮಾಡುವನೋ ಅವನು ಅನ್ನದಗುಳಿನಷ್ಟು ವರ್ಷಗಳವರೆಗೆ ಶಿವಲೋಕದಲ್ಲಿ ಗೌರವದಿಂದ ಸುಖವನ್ನನುಭವಿಸುವನು. ಅನ್ನದಾನಕ್ಕಿಂತ ಶ್ರೇಷ್ಠ

ದೇವೇಭ್ಯೋ ಬ್ರಾಹ್ಮಣೇಭ್ಯೋ ವಾ ದದಾತಿ ಚಾಸನಂ ಯದಿ ।
ಮಹೀಯತೇ ವಿಷ್ಣುಲೋಕೇ ವರ್ಷಾಣಾಮಯುತಂ ಸತಿ ॥೫॥

ಯೋ ದದಾತಿ ಚ ವಿಪ್ರಾಯ ದಿವ್ಯಾಂ ಧೇನುಂ ಪಯಸ್ವಿನೀಂ ।
ತಲ್ಲೋಮಮಾನವರ್ಷಂ ಚ ವಿಷ್ಣುಲೋಕೇ ಮಹೀಯತೇ ॥೬॥

ಚತುರ್ಗುಣಂ ಪುಣ್ಯದಿನೇ ತೀರ್ಥೇ ಶತಗುಣಂ ಫಲಂ ।
ದಾನಂ ನಾರಾಯಣಕ್ಷೇತ್ರೇ ಫಲಂ ಕೋಟಿಗುಣಂ ಭವೇತ್ ॥೭॥

ಗಾಂ ಯೋ ದದಾತಿ ವಿಪ್ರಾಯ ಭಾರತೇ ಭಕ್ತಿಪೂರ್ವಕಂ ।
ವರ್ಷಾಣಾಮಯುತಂ ಚೈವ ಚಂದ್ರಲೋಕೇ ಮಹೀಯತೇ ॥೮॥

ಯಶ್ಚೋಭಯಮುಖೀ ದಾನಂ ಕರೋತಿ ಬ್ರಾಹ್ಮಣಾಯ ಚ ।
ತಲ್ಲೋಮಮಾನವರ್ಷಂ ಚ ವಿಷ್ಣುಲೋಕೇ ಮಹೀಯತೇ ॥೯॥

---

ವಾದ ದಾನವು ಹಿಂದೆಯೂ ಇರಲಿಲ್ಲ. ಮುಂದೆಯೂ ಇರುವುದಿಲ್ಲ. ಅನ್ನದಾನ ಮಾಡುವುದಕ್ಕೆ ಪಾತ್ರಪರೀಕ್ಷೆಯಾಗಲೀ ಕಾಲನಿಯಮವಾಗಲೀ ಇಲ್ಲ. ||೨-೩-೪||

ದೇವತೆಗಳಿಗಾಗಲೀ ಬ್ರಾಹ್ಮಣರಿಗಾಗಲೀ ಪೀಠವನ್ನು ದಾನಮಾಡಿದರೆ ಹತ್ತು ಸಾವಿರ ವರ್ಷಗಳ ವರೆಗೆ ವಿಷ್ಣುಲೋಕದಲ್ಲಿರುವರು. ಒಳ್ಳೆಯ ಹಾಲುಕರೆಯುವ ಹಸುವನ್ನು ಬ್ರಾಹ್ಮಣರಿಗೆ ದಾನಮಾಡಿದರೆ ಆ ಹಸುವಿನ ಶರೀರದಲ್ಲಿರುವ ಕೂದಲುಗಳ ಸಂಖ್ಯೆಯಷ್ಟು ವರ್ಷಗಳು ವಿಷ್ಣುಲೋಕದಲ್ಲಿ ವಾಸಮಾಡುವರು. ||೫-೬||

ಯಾವ ದಾನವನ್ನಾದರೂ ಪುಣ್ಯದಿನದಲ್ಲಿ ಮಾಡಿದರೆ ಇಲ್ಲಿ ಹೇಳಿದ ಫಲದ ನಾಲ್ಕರಷ್ಟು, ಪಾವನವಾದ ತೀರ್ಥಕ್ಷೇತ್ರಗಳಲ್ಲಿ ಮಾಡಿದರೆ ನೂರರಷ್ಟು, ನಾರಾಯಣ ಕ್ಷೇತ್ರದಲ್ಲಿ ಮಾಡಿದರೆ ಕೋಟಿಯಷ್ಟು ಫಲಬರುವುದು. ||೭||

ಭರತಖಂಡದಲ್ಲಿ ಬ್ರಾಹ್ಮಣನಿಗೆ (ಗಾಂ ಎಂದರೆ ಇಲ್ಲಿ ವೃಷಭ) ಎತ್ತನ್ನು ದಾನಮಾಡಿದರೆ ಹತ್ತುಸಾವಿರ ವರ್ಷಗಳವರೆಗೆ ಚಂದ್ರಲೋಕದಲ್ಲಿರುವರು. ||೮||

ಯಾವನು ಬ್ರಾಹ್ಮಣನಿಗೆ ಉಭಯಮುಖೀ (ಆಗತಾನೇ ಕರುವನ್ನು ಹಾಕುತ್ತಿರುವ ಹಸು) ಯನ್ನು ದಾನಮಾಡುವನೋ ಅವನು ಆ ಹಸುವಿನ ಮೈಯಲ್ಲಿರುವ ಕೂದಲುಗಳ ಸಂಖ್ಯೆಯಷ್ಟು ವರ್ಷಗಳು ವಿಷ್ಣುಲೋಕದಲ್ಲಿ ಗೌರವದಿಂದ ಸುಖವನ್ನನುಭವಿಸುವನು. ||೯||

ಯೋ ದದಾತಿ ಬ್ರಾಹ್ಮಣಾಯ ಶ್ವೇತಛತ್ರಂ ಮನೋಹರಂ ।
ವರ್ಷಾಣಾಮಯುತಂ ಸೋಽಪಿ ಮೋದತೇ ವರುಣಾಲಯೇ ॥೧೦॥

ವಿಪ್ರಾಯ ಪೀಡಿತಾಂಗಾಯ ವಸ್ತ್ರಯುಗ್ಮಂ ದದಾತಿ ಚ ।
ಮಹೀಯತೇ ವಾಯುಲೋಕೇ ವರ್ಷಾಣಾಮಯುತಂ ಸತಿ ॥೧೧॥

ಯೋ ದದಾತಿ ಬ್ರಾಹ್ಮಣಾಯ ಶಾಲಗ್ರಾಮಂ ಸವಸ್ತ್ರಕಂ ।
ಮಹೀಯತೇ ಸ ವೈಕುಂಠೇ ಯಾವಚ್ಚಂದ್ರದಿವಾಕರೌ ॥೧೨॥

ಯೋ ದದಾತಿ ಬ್ರಾಹ್ಮಣಾಯ ದಿವ್ಯಾಂ ಶಯ್ಯಾಂ ಮನೋಹರಾಂ ।
ಮಹೀಯತೇ ಚಂದ್ರಲೋಕೇ ಯಾವಚ್ಚಂದ್ರದಿವಾಕರೌ ॥೧೩॥

ಯೋ ದದಾತಿ ಪ್ರದೀಪಂ ಚ ದೇವೇಭ್ಯೋ ಬ್ರಾಹ್ಮಣಾಯ ಚ ।
ಯಾವನ್ಮನ್ವಂತರಂ ಸೋಽಪಿ ವಹ್ನಿಲೋಕೇ ಮಹೀಯತೇ ॥೧೪॥

ಕರೋತಿ ಗಜದಾನಂ ಚ ಯದಿ ವಿಪ್ರಾಯ ಭಾರತೇ ।
ಯಾವದಿಂದ್ರೋ ನರಸ್ತಾವದಿಂದ್ರಸ್ಯಾರ್ಧಾಸನೇ ವಸೇತ್ ॥೧೫॥

ಭಾರತೇ ಯೋಽಶ್ವದಾನಂ ಚ ಕರೋತಿ ಬ್ರಾಹ್ಮಣಾಯ ಚ ।
ಮೋದತೇ ವಾರುಣೇ ಲೋಕೇ ಯಾವದಿಂದ್ರಾಶ್ಚತುರ್ದಶ ॥೧೬॥

---

ಬ್ರಾಹ್ಮಣನಿಗೆ ಮನೋಹರವಾದ ಬಿಳಿಯ ಛತ್ರಿಯನ್ನು ದಾನಮಾಡಿದವನು ಹತ್ತು ಸಾವಿರ ವರ್ಷಗಳವರೆಗೆ ವರುಣಲೋಕದಲ್ಲಿ ಸುಖಪಡುವನು. ॥೧೦॥

ಚಳಿಯಿಂದ ನಡುಗುತ್ತಿರುವ ಬ್ರಾಹ್ಮಣನಿಗೆ ವಸ್ತ್ರದಾನಮಾಡಿದರೆ ವಾಯು ಲೋಕಪ್ರಾಪ್ತಿಯೂ, ವಸ್ತ್ರಸಹಿತವಾಗಿ ಸಾಲಿಗ್ರಾಮವನ್ನು ದಾನಮಾಡಿದರೆ ವೈಕುಂಠ ಲೋಕವೂ, ಉತ್ತಮವಾದ ಹಾಸಿಗೆಯನ್ನು ದಾನಮಾಡಿದರೆ ಚಂದ್ರಲೋಕವೂ ಪ್ರಾಪ್ತವಾಗುವುದು. ॥೧೧-೧೨-೧೩॥

ದೇವತೆಗಳಿಗೂ ಬ್ರಾಹ್ಮಣರಿಗೂ ದೀಪದಾನವನ್ನು ಮಾಡಿದರೆ ಒಂದು ಮನ್ವಂತರದವರೆಗೆ ಅಗ್ನಿಲೋಕದಲ್ಲಿರುವನು. ॥೧೪॥

ಆನೆಯನ್ನು ದಾನಮಾಡಿದವನು ದೇವೇಂದ್ರನ ಅರ್ಧಾಸನದಲ್ಲಿ ಕುಳಿತು ಕೊಳ್ಳುವನು. ಕುದುರೆಯನ್ನು ದಾನಮಾಡಿದವನೂ, ಪಲ್ಲಕ್ಕಿಯನ್ನು ದಾನಮಾಡಿ

ಪ್ರಕೃಷ್ಟಾಂ ಶಿಬಿಕಾಂ ಯೋ ಹಿ ದದಾತಿ ಬ್ರಾಹ್ಮಣಾಯ ಚ ।
ಮೋದತೇ ವಾರುಣೇ ಲೋಕೇ ಯಾವದಿಂದ್ರಾಶ್ಚತುರ್ದಶ ॥೧೭॥

ಪ್ರಕೃಷ್ಟಾಂ ವಾಟಿಕಾಂ ಯೋ ಹಿ ದದಾತಿ ಬ್ರಾಹ್ಮಣಾಯ ಚ ।
ಮಹೀಯತೇ ವಾಯುಲೋಕೇ ಯಾವನ್ಮನ್ವಂತರಂ ಸತಿ ॥೧೮॥

ಯೋ ದದಾತಿ ಚ ವಿಪ್ರಾಯ ವ್ಯಜನಂ ಶ್ವೇತಚಾಮರಂ ।
ಮಹೀಯತೇ ವಾಯುಲೋಕೇ ವರ್ಷಾಣಾಮಯುತಂ ಧ್ರುವಂ ॥೧೯॥

ಧಾನ್ಯಂ ರತ್ನಂ ಯೋ ದದಾತಿ ಚಿರಜೀವೀ ಭವೇತ್ಸುಧೀಃ ।
ದಾತಾ ಗೃಹೀತಾ ತೌ ದ್ವೌ ಚ ಧ್ರುವಂ ವೈಕುಂಠಗಾಮಿನೌ ॥೨೦॥

ಸತತಂ ಶ್ರೀಹರೇರ್ನಾಮ ಭಾರತೇ ಯೋ ಜಪೇನ್ನರಃ ।
ಸ ಏವ ಚಿರಜೀವೀ ಚ ತತೋ ಮೃತ್ಯುಃ ಪಲಾಯತೇ ॥೨೧॥

ಯೋ ನರೋ ಭಾರತೇ ವರ್ಷೇ ದೋಲನಂ ಕಾರಯೇತ್ಸುಧೀಃ ।
ಪೂರ್ಣಿಮಾರಜನೀಶೀರ್ಷೇ ಜೀವನ್ಮುಕ್ತೋ ಭವೇನ್ನರಃ ॥೨೨॥

---

ದವನೂ ಹದಿನಾಲ್ಕು ಜನ ದೇವೇಂದ್ರರ ಅಧಿಕಾರವಿರುವವರೆಗೂ ವರುಣಲೋಕದಲ್ಲಿ ಸುಖವನ್ನನುಭವಿಸುವನು. ॥೧೫-೧೬-೧೭॥

ಬ್ರಾಹ್ಮಣನಿಗೆ ಉತ್ತಮವಾದ ಹೂವಿನ ತೋಟವನ್ನು ದಾನಮಾಡಿದರೂ, ಬೀಸಣಿಗೆಯನ್ನೂ ಬಿಳಿಯ ಚಾಮರವನ್ನೂ ದಾನಮಾಡಿದರೂ ಬಹಳಕಾಲ ವಾಯುಲೋಕದಲ್ಲಿ ಸುಖವನ್ನನುಭವಿಸುವರು. ॥೧೯॥

ಧಾನ್ಯವನ್ನೂ ರತ್ನವನ್ನೂ ದಾನಮಾಡಿದವನು ಬುದ್ಧಿವಂತನಾಗಿ ಬಹುಕಾಲ ಬದುಕುವನು. ಮತ್ತು ದಾನಮಾಡಿದವನೂ, ಪ್ರತಿಗ್ರಹಮಾಡಿದವನೂ ಇಬ್ಬರೂ ವೈಕುಂಠಲೋಕಕ್ಕೆ ಹೋಗುವರು. ॥೨೦॥

ಯಾವ ಮನುಜನು ಯಾವಾಗಲೂ ಹರಿನಾಮವನ್ನೂ, ಶಿವ, ದೇವೀ, ಗಣೇಶ, ಸೂರ್ಯ ಇವರ ನಾಮಗಳನ್ನೂ ಜಪಿಸುತ್ತಿರುವನೋ ಅಂಥವನು ಬಹಳ ಕಾಲ ಬದುಕುವನು. ಮೃತ್ಯುವೂ ಅವನಿಗೆ ಹೆದರಿ ಓಡುವುದು. ॥೨೧॥

ಯಾವ ಮನುಜನು ಭರತಖಂಡದಲ್ಲಿ ಸಮಸ್ತ ದೇವತೆಗಳಿಗೂ ಪೂರ್ಣಿಮೆಯ ರಾತ್ರಿ ನಾಲ್ಕನೆಯ ಯಾಮದಲ್ಲಿ ಉಯ್ಯಾಲೆಯ ಉತ್ಸವವನ್ನು ಮಾಡಿ

ಇಹಲೋಕೇ ಸುಖಂ ಭುಕ್ತ್ವಾ ಯಾತ್ಯಂತೇ ವಿಷ್ಣುಮಂದಿರಂ ।
ನಿಶ್ಚಿತಂ ನಿವಸೇತ್ತತ್ರ ಶತಮನ್ವಂತರಾವಧಿ ॥೨೩॥

ಫಲಮುತ್ತರಫಲ್ಗುನ್ಯಾಂ ತತೋಽಪಿ ದ್ವಿಗುಣಂ ಭವೇತ್ ।
ಕಲ್ಪಾಂತಜೀವೀ ಸ ಭವೇದಿತ್ಯಾಹ ಕಮಲೋದ್ಭವಃ ॥೨೪॥

ತಿಲದಾನಂ ಬ್ರಾಹ್ಮಣಾಯ ಯಃ ಕರೋತಿ ಚ ಭಾರತೇ ।
ತಿಲಪ್ರಮಾಣವರ್ಷಂ ಚ ಮೋದತೇ ಶಿವಮಂದಿರೇ ॥೨೫॥

ತತಃ ಸುಯೋನಿಂ ಸಂಪ್ರಾಪ್ಯ ಚಿರಜೀವೀ ಭವೇತ್ಸುಖೀ ।
ತಾಮ್ರಪಾತ್ರಸ್ಥ ದಾನೇನ ದ್ವಿಗುಣಂ ಚ ಫಲಂ ಲಭೇತ್ ॥೨೬॥

---

ಸುವನೋ ಅವನು ಜೀವನ್ಮುಕ್ತನಾಗುವನು. ಇಹಲೋಕದಲ್ಲಿ ಸಮಸ್ತ ಸುಖಗಳನ್ನೂ ಅನುಭವಿಸಿ ಶರೀರವನ್ನು ಬಿಟ್ಟು ವೈಕುಂಠಕ್ಕೆ ಹೋಗಿ ನೂರುಮನ್ವಂತರಗಳ ವರೆಗೆ ಅಲ್ಲಿ ವಾಸವಾಗಿರುವನು. ಉತ್ತರಫಲ್ಗುನಿ ನಕ್ಷತ್ರಯುಕ್ತವಾದ ಪೂರ್ಣಿಮೆಯ ದಿನ ದೋಲೋತ್ಸವವನ್ನು ಮಾಡಿಸಿದರೆ ಹಿಂದೆ ಹೇಳಿದ ಫಲದ ಎರಡರಷ್ಟು ಫಲವು ಬರುವುದು. ಅಲ್ಲದೆ ಇಹಲೋಕದಲ್ಲಿ ಅವನು ಒಂದು ಕಲ್ಪದ ವರೆಗೆ ಜೀವಿಸಿರುವನೆಂದು ಬ್ರಹ್ಮನು ಹೇಳಿರುವನು. ॥೨೨-೨೩-೨೪॥

ಭರತಖಂಡದಲ್ಲಿ ಬ್ರಾಹ್ಮಣನಿಗೆ ಯಾರು ಎಳ್ಳನ್ನು ದಾನಕೊಡುವರೋ ಅವರು ಆ ಎಳ್ಳುಕಾಳಿನ ಸಂಖ್ಯೆಯಷ್ಟು ವರ್ಷ ಶಿವಲೋಕದಲ್ಲಿ ಸಂತೋಷಪಡುವರು. ಆಮೇಲೆ ಉತ್ತಮವಾದ ಜನ್ಮವನ್ನು ಪಡೆದು ಬಹುಕಾಲ ಸುಖವಾಗಿ ಬದುಕುವರು. ತಾಮ್ರದ ಪಾತ್ರೆಯಲ್ಲಿ ಎಳ್ಳನ್ನು ಹಾಕಿ ದಾನಮಾಡಿದರೆ ಅದರ ಎರಡರಷ್ಟು ಫಲ ಬರುವುದು. ॥೨೫-೨೬॥

ಪತಿವ್ರತೆಯಾಗಿಯೂ ತನಗೆ ಪ್ರೀತಿಪಾತ್ರಳಾಗಿಯೂ, ಭೋಗಯೋಗ್ಯಳಾಗಿಯೂ ವಸ್ತ್ರಾಭರಣಗಳಿಂದ ಅಲಂಕರಿಸಿಕೊಂಡವಳಾಗಿಯೂ ಇರುವ ಸ್ತ್ರೀಯನ್ನು ಬ್ರಾಹ್ಮಣನಿಗೆ ಯಾವನು ದಾನಮಾಡುವನೋ ಅವನು ಹದಿನಾಲ್ಕು ಜನ ಇಂದ್ರರ ಅಧಿಕಾರವು ಮುಗಿಯುವ ವರೆಗೂ ಚಂದ್ರಲೋಕದಲ್ಲಿ ಅಪ್ಸರಸ್ತ್ರೀಯರೊಂದಿಗೆ ಹಗಲೂ ರಾತ್ರಿಯೂ ಸಂತೋಷವನ್ನನುಭವಿಸುವನು. ಆಮೇಲೆ ಗಂಧರ್ವಲೋಕದಲ್ಲಿ ಹತ್ತುಸಾವಿರ ವರ್ಷಗಳ ವರೆಗೆ ಹಗಲೂ ರಾತ್ರಿಯೂ ಸಂತೋಷದಿಂದ

ಸಾಲಂಕೃತಾಂ ಚ ಭೋಗ್ಯಾಂ ಚ ಸವಸ್ತ್ರಾಂ ಸುಂದರೀಂ ಪ್ರಿಯಾಂ ।
ಯೋ ದದಾತಿ ಬ್ರಾಹ್ಮಣಾಯ ಭಾರತೇ ಚ ಪತಿವ್ರತಾಂ ॥೨೭॥

ಮಹೀಯತೇ ಚಂದ್ರಲೋಕೇ ಯಾವದಿಂದ್ರಾಶ್ಚತುರ್ದಶ ।
ತತ್ರ ಸ್ವರ್ವೇಶ್ಯಯಾ ಸಾರ್ಧಂ ಮೋದತೇ ಚ ದಿವಾನಿಶಂ ॥೨೮॥

ತತೋ ಗಂಧರ್ವಲೋಕೇ ಚ ವರ್ಷಾಣಾಮಯುತಂ ಧ್ರುವಂ ।
ದಿವಾನಿಶಂ ಕೌತುಕೇನ ಚೋರ್ವಶ್ಯಾ ಸಹ ಮೋದತೇ ॥೨೯॥

ತತೋ ಜನ್ಮಸಹಸ್ರಂ ಚ ಪ್ರಾಪ್ನೋತಿ ಸುಂದರೀಂ ಪ್ರಿಯಾಂ ।
ಸತೀಂ ಸೌಭಾಗ್ಯಯುಕ್ತಾಂ ಚ ಕೋಮಲಾಂ ಪ್ರಿಯವಾದಿನೀಂ॥೩೦॥

ಪ್ರದದಾತಿ ಫಲಂ ಚಾರು ಬ್ರಾಹ್ಮಣಾಯ ಚ ಯೋ ನರಃ ।
ಫಲಪ್ರಮಾಣವರ್ಷಂ ಚ ಶಕ್ರಲೋಕೇ ಮಹೀಯತೇ ॥೩೧॥

ಪುನಃ ಸುಯೋನಿಂ ಸಂಪ್ರಾಪ್ಯ ಲಭತೇ ಸುತಮುತ್ತಮಂ ।
ಸಫಲಾನಾಂ ಚ ವೃಕ್ಷಾಣಾಂ ಸಹಸ್ರಂ ಚ ಪ್ರಶಂಸಿತಂ ॥೩೨॥

---

ಊರ್ವಶಿಯೊಡನೆ ವಿಹರಿಸುವನು. ಆಮೇಲೆ ಸಾವಿರ ಜನ್ಮಗಳ ವರೆಗೂ ಪತಿವ್ರತೆಯೂ ಸೌಭಾಗ್ಯವತಿಯೂ ಮೃದುವಾದ ಅವಯವಗಳುಳ್ಳವಳೂ ಪ್ರಿಯವಾದ ಮಾತನಾಡುವವಳೂ ಆದ ಸುಂದರಿಯನ್ನು ಪತ್ನಿಯನ್ನಾಗಿ ಪಡೆಯುವನು.

ಇಲ್ಲಿ ಪತಿವ್ರತಾಸ್ತ್ರೀಯನ್ನು ದಾನಮಾಡಬೇಕೆಂದು ಹೇಳಿರುವುದರಿಂದ ತೋರುವ ವಿಶೇಷಾರ್ಥವೇನೆಂದರೆ:—ಮೊದಲು ಸ್ತ್ರೀಯನ್ನು ದಾನಮಾಡಿ ತರುವಾಯ ಆ ಸ್ತ್ರೀಯ ತೂಕದ ಸುವರ್ಣವನ್ನು ಬ್ರಾಹ್ಮಣನಿಗೆ ಕೊಟ್ಟು ಸ್ತ್ರೀಯನ್ನು ತಾನಿಟ್ಟುಕೊಳ್ಳಬೇಕು. ಹಾಗಿಲ್ಲದೆ ಹೋದರೆ ದಾನ ಮಾಡಿದವರಿಗೂ ಪ್ರತಿಗ್ರಹ ಮಾಡಿದವರಿಗೂ ಇಬ್ಬರಿಗೂ ನರಕ ಪ್ರಾಪ್ತವಾಗುವುದೆಂದು ಬೇರೆ ಪುರಾಣಗಳಲ್ಲಿ ಸ್ಪಷ್ಟವಾಗಿರುವುದು. ಸ್ಕಾಂದಪುರಾಣದಲ್ಲಿ "ಸ್ತ್ರಿಯಂ ದತ್ವಾ ತತಸ್ತಾಂತು ಕ್ರೀಣೀಯಾತ್ಕಾಂಚನಾದಿನಾ" ಎಂದಿರುವುದು. ॥೨೭-೨೮-೨೯-೩೦॥

ಯಾವ ಮನುಜನು ಬ್ರಾಹ್ಮಣನಿಗೆ ಉತ್ತಮವಾದ ಫಲಗಳನ್ನು ದಾನ ಮಾಡುವನೋ ಅವನು ಫಲಗಳ ಸಂಖ್ಯೆಯಷ್ಟು ವರ್ಷ ಇಂದ್ರಲೋಕದಲ್ಲಿ ವಾಸ ಮಾಡುವನು. ಮತ್ತೆ ಒಳ್ಳೆಯ ಜನ್ಮವನ್ನು ಪಡೆದು ಉತ್ತಮನಾದ ಮಗನನ್ನು

ಕೇವಲಂ ಫಲದಾನಂ ವಾ ಬ್ರಾಹ್ಮಣಾಯ ದದಾತಿ ಚ ।
ಸುಚಿರಂ ಸ್ವರ್ಗವಾಸಂ ಚ ಕೃತ್ವಾ ಯಾತಿ ಚ ಭಾರತೇ ॥೩೩॥

ನಾನಾದ್ರವ್ಯಸಮಾಯುಕ್ತಂ ನಾನಾಸಸ್ಯಸಮನ್ವಿತಂ ।
ದದಾತಿ ಯಶ್ಚ ವಿಪ್ರಾಯ ಭಾರತೇ ವಿಪುಲಂ ಗೃಹಂ ॥೩೪॥

ಸುರಲೋಕೇ ವಸೇತ್ಸೋಽಪಿ ಯಾವನ್ಮನ್ವಂತರಂ ಶತಂ ।
ತತಃ ಸುಯೋನಿಂ ಸಂಪ್ರಾಪ್ಯ ಸ ಮಹಾಧನವಾನ್ಭವೇತ್ ॥೩೫॥

ಯೋ ನರಃ ಸಸ್ಯಸಂಯುಕ್ತಾಂ ಭೂಮಿಂ ಚ ಸುಚಿರಾಂ ಸತಿ ।
ದದಾತಿ ಭಕ್ತ್ಯಾ ವಿಪ್ರಾಯ ಪುಣ್ಯಕ್ಷೇತ್ರೇ ಚ ಭಾರತೇ ॥೩೬॥

ಮಹೀಯತೇ ಚ ವೈಕುಂಠೇ ಮನ್ವಂತರಶತಂ ಧ್ರುವಂ ।
ಪುನಃ ಸುಯೋನಿಂ ಸಂಪ್ರಾಪ್ಯ ಮಹಾಂಶ್ಚ ಭೂಮಿಪೋ ಭವೇತ್ ॥೩೭॥

ತಂ ನ ತ್ಯಜತಿ ಭೂಮಿಶ್ಚ ಜನ್ಮನಾಂ ಶತಕಂ ಪರಂ ।
ಶ್ರೀಮಾಂಶ್ಚ ಧನವಾಂಶ್ಚೈವ ಪುತ್ರವಾಂಶ್ಚ ಪ್ರಜೇಶ್ವರಃ ॥೩೮॥

---

ಪಡೆವನು. ಫಲಸಹಿತವಾದ ಮರಗಳನ್ನು ದಾನಮಾಡಿದರೆ ಸಾವಿರಪಾಲು ಫಲವು ಅಧಿಕವಾಗುವುದು. ಒಂದು ಫಲವನ್ನು ದಾನಮಾಡಿದರೂ ಬಹುಕಾಲ ಸ್ವರ್ಗದಲ್ಲಿದ್ದು ಭರತಖಂಡದಲ್ಲಿ ಜನ್ಮವೆತ್ತುವನು. ॥೩೧-೩೨-೩೩॥

ಸಮಸ್ತ ಪದಾರ್ಥಗಳಿಂದಲೂ ಸಕಲ ಸಸ್ಯಗಳಿಂದಲೂ ತುಂಬಿದ ವಿಸ್ತಾರವಾದ ಮನೆಯನ್ನು ಯಾರು ದಾನಮಾಡುವರೋ ಅವರು ನೂರು ಮನ್ವಂತರಗಳವರೆಗೆ ದೇವಲೋಕದಲ್ಲಿದ್ದು ಆಮೇಲೆ ಉತ್ತಮವಾದ ಜನ್ಮವನ್ನು ಪಡೆದು ಮಹಾಧನಿಕನಾಗಿ ಬಾಳುವನು. ॥೩೪-೩೫॥

ಯಾವನು ಸಸ್ಯದಿಂದ ಕೂಡಿದ ಭೂಮಿಯನ್ನು ಭಕ್ತಿಯಿಂದ ಪುಣ್ಯಕ್ಷೇತ್ರಗಳಲ್ಲಿ ಬ್ರಾಹ್ಮಣರಿಗೆ ದಾನಮಾಡುವನೋ ಅವನು ನೂರು ಮನ್ವಂತರಗಳ ಕಾಲ ವೈಕುಂಠದಲ್ಲಿದ್ದು ಮತ್ತೆ ಉತ್ತಮವಾದ ಜನ್ಮವನ್ನು ಪಡೆದು ದೊಡ್ಡ ರಾಜನಾಗುವನು. ಒಂದುನೂರು ಜನ್ಮಗಳವರೆಗೂ ಭೂಮಿಯು ಅವನನ್ನು ತ್ಯಜಿಸುವುದಿಲ್ಲ. ಧನವಂತನೂ ಸಂಪತ್ತುಳ್ಳವನೂ ಮಕ್ಕಳುಳ್ಳವನೂ ಆದ ರಾಜನಾಗುವನು. ॥೩೬-೩೭-೩೮॥

ಸವ್ರಜಂ ಚ ಪ್ರಕೃಷ್ಟಂ ಚ ಗ್ರಾಮಂ ದದ್ಯಾದ್ದ್ವಿಜಾಯ ಚ ।
ಲಕ್ಷಮನ್ವಂತರಂ ಚೈವ ವೈಕುಂಠೇ ಸ ಮಹೀಯತೇ ॥೩೯॥

ಪುನಃ ಸುಯೋನಿಂ ಸಂಪ್ರಾಪ್ಯ ಗ್ರಾಮಲಕ್ಷಸಮನ್ವಿತಂ ।
ನ ಜಹಾತಿ ಚ ತಂ ಪೃಥ್ವೀ ಜನ್ಮನಾಂ ಲಕ್ಷಮೇವ ಚ ॥೪೦॥

ಸುಪ್ರಜಂ ಚ ಪ್ರಕೃಷ್ಟಂ ಚ ಪಕ್ವಸಸ್ಯಸಮನ್ವಿತಂ ।
ನಾನಾಪುಷ್ಕರಿಣೀವೃಕ್ಷಫಲವಲ್ಲಿಸಮನ್ವಿತಂ ॥೪೧॥

ನಗರಂ ಯಶ್ಚ ವಿಪ್ರಾಯ ದದಾತಿ ಭಾರತೇ ಭುವಿ ।
ಮಹೀಯತೇ ಸ ಕೈಲಾಸೇ ದಶಲಕ್ಷೇಂದ್ರಕಾಲಕಂ ॥೪೨॥

ಪುನಃ ಸುಯೋನಿಂ ಸಂಪ್ರಾಪ್ಯ ರಾಜೇಂದ್ರೋ ಭಾರತೇ ಭವೇತ್ ।
ನಗರಾಣಾಂ ಚ ನಿಯುತಂ ಸ ಲಭೇನ್ನಾತ್ರಸಂಶಯಃ ॥೪೩॥

ಧರಾ ತಂ ನ ಜಹಾತ್ಯೇವ ಜನ್ಮನಾಮಯುತಂ ಧ್ರುವಂ ।
ಪರಮೈಶ್ವರ್ಯನಿಯುತೋ ಭವೇದೇವ ಮಹೀತಲೇ ॥೪೪॥

---

ಗೊಲ್ಲರ ಹಟ್ಟಿಗಳಿಂದ ಕೂಡಿದ ಉತ್ತಮವಾದ ಗ್ರಾಮವನ್ನು ಬ್ರಾಹ್ಮಣನಿಗೆ ದಾನಮಾಡಿದರೆ ಆವನು ಲಕ್ಷ ಮನ್ವಂತರಗಳವರೆಗೆ ವೈಕುಂಠದಲ್ಲಿ ಸುಖವಾಗಿದ್ದು ಮತ್ತೆ ಉತ್ತಮವಾದ ಜನ್ಮವನ್ನು ಪಡೆದು ಲಕ್ಷ ಗ್ರಾಮಗಳಿಂದ ಕೂಡಿದ ಭೂಮಿಗೆ ಲಕ್ಷ ಜನ್ಮಗಳ ವರೆಗೂ ರಾಜನಾಗಿರುವನು. ||೩೯-೪೦||

ಒಳ್ಳೆಯ ಪ್ರಜೆಗಳಿಂದ ಕೂಡಿದ ಉತ್ಕೃಷ್ಟವಾದ ಸಸ್ಯಗಳಿಂದ ಕೂಡಿದ ಸರೋವರಗಳು ಬಗೆ ಬಗೆಯ ಮರಗಳು ಬಳ್ಳಿಗಳು ಫಲಗಳು ಇವುಗಳಿಂದ ತುಂಬಿದ ನಗರವನ್ನು ಬ್ರಾಹ್ಮಣನಿಗೆ ದಾನಮಾಡಿದವನು ಹತ್ತುಲಕ್ಷ ದೇವೇಂದ್ರರ ಅಧಿಕಾರ ಮುಗಿಯುವವರೆಗೂ ಕೈಲಾಸದಲ್ಲಿ ಸುಖವನ್ನನುಭವಿಸಿ ಒಳ್ಳೆಯ ಜನ್ಮವನ್ನೆತ್ತಿ ಭರತಖಂಡದಲ್ಲಿ ಚಕ್ರವರ್ತಿಯಾಗಿ ಲಕ್ಷ ನಗರಗಳನ್ನು ಪಡೆಯುವನು. ಹತ್ತು ಸಾವಿರ ಜನ್ಮಗಳು ಸಂಪೂರ್ಣ ಸಂಪತ್ತಿನಿಂದ ಕೂಡಿ ಚಕ್ರವರ್ತಿಯಾಗುವನು. ||೪೧-೪೨-೪೩-೪೪||

ನಗರಾಣಾಂ ಚ ಶತಕಂ ದೇಶಂ ಯೋ ಹಿ ದ್ವಿಜಾತಯೇ ।
ಸುಪ್ರಕೃಷ್ಟಂ ಮಧ್ಯಕೃಷ್ಟಂ ಪ್ರಜಾಯುಕ್ತಂ ದದಾತಿ ಚ ॥೪೫॥

ವಾಪೀತಡಾಗಸಂಯುಕ್ತಂ ನನಾವೃಕ್ಷಸಮನ್ವಿತಂ ।
ಮಹೀಯತೇ ಸ ವೈಕುಂಠೇ ಕೋಟಿಮನ್ವಂತರಾಧಿಕಂ ॥೪೬॥

ಪುನಃ ಸುಯೋನಿಂ ಸಂಪ್ರಾಪ್ಯ ಜಂಬೂದ್ವೀಪಪತಿರ್ಭವೇತ್ ।
ಪರಮೈಶ್ವರ್ಯಸಂಯುಕ್ತೋ ಯಥಾಶಕ್ರಸ್ತಥಾ ಭುವಿ ॥೪೭॥

ಮಹೀ ತಂ ನ ಜಹಾತ್ಯೇವ ಜನ್ಮನಾಂ ಕೋಟಿಮೇವ ಚ ।
ಕಲ್ಪಾಂತಜೀವೀ ಸ ಭವೇದ್ರಾಜರಾಜೇಶ್ವರೋ ಮಹಾನ್ ॥೪೮॥

ಸ್ವಾಧಿಕಾರಂ ಸಮಗ್ರಂ ಚ ಯೋ ದದಾತಿ ದ್ವಿಜಾತಯೇ ।
ಚತುರ್ಗುಣಂ ಫಲಂ ಚಾಂತೇ ಭವೇತ್ತಸ್ಯ ನ ಸಂಶಯಃ ॥೪೯॥

ಜಂಬೂದ್ವೀಪಂ ಯೋ ದದಾತಿ ಬ್ರಾಹ್ಮಣಾಯ ತಪಸ್ವಿನೇ ।
ಫಲಂ ಶತಗುಣಂ ಚಾಂತೇ ಭವೇತ್ತಸ್ಯ ನ ಸಂಶಯಃ ॥೫೦॥

---

ನೂರು ಮನ್ವಂತರಗಳಿಂದ ಕೂಡಿದ ಉತ್ತಮ ಮಧ್ಯಮವರ್ಗದ ಪ್ರಜೆಗಳಿಂದಲೂ ಸರೋವರಗಳಿಂದಲೂ ಕೆರೆ ಇವುಗಳಿಂದಲೂ ಬಗೆಬಗೆಯ ಮರಗಳಿಂದಲೂ ತುಂಬಿದ ದೇಶವನ್ನು ಯಾವನು ಬ್ರಾಹ್ಮಣನಿಗೆ ದಾನಮಾಡುವನೋ ಆತನು ವೈಕುಂಠಲೋಕದಲ್ಲಿ ಕೋಟಿ ಮನ್ವಂತರಗಳ ಕಾಲ ಸುಖಿಯಾಗಿದ್ದು ಮತ್ತೆ ಜನ್ಮವನ್ನೆತ್ತಿ ಜಂಬೂದ್ವೀಪಕ್ಕೆ ರಾಜನಾಗುವನು. ಸ್ವರ್ಗದಲ್ಲಿ ದೇವೇಂದ್ರನಂತೆ ಭೂಮಿಯಲ್ಲಿ ಉತ್ತಮವಾದ ಸಂಪತ್ತಿನಿಂದ ಕೂಡಿರುವನು. ಕೋಟಿಜನ್ಮಗಳವರೆಗೂ ಅವನಿಗೆ ದೊರೆತನವು ತಪ್ಪುವುದಿಲ್ಲ. ಚಕ್ರವರ್ತಿಗಳಲ್ಲಿ ಶ್ರೇಷ್ಠನಾಗಿ ಬಹಳಕಾಲ ಬದುಕುವನು. ॥೪೫-೪೬-೪೭-೪೮॥

ತಾನು ಮಾಡಿದ ದೊರೆತನ ಮುಂತಾದ ಅಧಿಕಾರವನ್ನು ಬ್ರಾಹ್ಮಣನಿಗೆ ಯಾರು ಕೊಡುತ್ತಾರೆಯೋ ಅವರು ತಾವು ಈಗ ಅನುಭವಿಸುವ ಫಲದ ನಾಲ್ಕರಷ್ಟು ಫಲವನ್ನನುಭವಿಸುವರು. ॥೪೯॥

ತಪಸ್ವಿಯಾದ ಬ್ರಾಹ್ಮಣನಿಗೆ ಜಂಬೂದ್ವೀಪವನ್ನು ಯಾರು ದಾನಮಾಡುವರೋ ಅವರು ಈಗ ಅನುಭವಿಸುವ ಫಲದ ನೂರರಷ್ಟು ಫಲವನ್ನನುಭವಿಸುವರು. ॥೫೦॥

ಜಂಬೂದ್ವೀಪಮಹೀದಾತುಃ ಸರ್ವತೀರ್ಥಾನಿ ಸೇವಿತುಃ ।
ಸರ್ವೇಷಾಂ ತಪಸಾಂ ಕರ್ತುಃ ಸರ್ವೇಷಾಂ ವಾಸಕಾರಿಣಃ ॥೫೧॥

ಸರ್ವದಾನಪ್ರದಾತುಶ್ಚ ಸರ್ವಸಿದ್ಧೇಶ್ವರಸ್ಯ ಚ ।
ಅಸ್ತ್ಯೇವ ಪುನರಾವೃತ್ತಿರ್ನ ಭಕ್ತಸ್ಯ ಮಹೇಶಿತುಃ ॥೫೨॥

ಅಸಂಖ್ಯಬ್ರಹ್ಮಣಾಂ ಪಾತಂ ಪಶ್ಯಂತಿ ಭುವನೇಶಿತುಃ ।
ನಿವಸಂತಿ ಮಣಿದ್ವೀಪೇ ಶ್ರೀದೇವ್ಯಾಃ ಪರಮೇ ಪದೇ ॥೫೩॥

ದೇವೀಮಂತ್ರೋಪಾಸಕಾಶ್ಚ ವಿಹಾಯ ಮಾನವೀಂ ತನುಂ ।
ವಿಭೂತಿಂ ದಿವ್ಯರೂಪಂ ಚ ಜನ್ಮಮೃತ್ಯುಜರಾಹರಂ ॥೫೪॥

ಲಬ್ಧ್ವಾ ದೇವ್ಯಾಶ್ಚ ಸಾರೂಪ್ಯಂ ದೇವೀಸೇವಾಂ ಚ ಕುರ್ವತೇ ।
ಪಶ್ಯಂತಿ ತೇ ಮಣಿದ್ವೀಪೇ ಸ ಖಂಡಂ ಲೋಕಸಂಕ್ಷಯಂ ॥೫೫॥

ನಶ್ಯಂತಿ ದೇವಾಃ ಸಿದ್ಧಾಶ್ಚ ವಿಶ್ವಾನಿ ನಿಖಿಲಾನಿ ಚ ।
ದೇವೀ-ಭಕ್ತಾ ನ ನಶ್ಯಂತಿ ಜನ್ಮಮೃತ್ಯುಜರಾಹರಾಃ ॥೫೬॥

---

ಜಂಬೂದ್ವೀಪದ ಭೂಮಿಯನ್ನು ದಾನಮಾಡುವವನಿಗೂ ಸಮಸ್ತ ತೀರ್ಥ ಯಾತ್ರೆಯನ್ನು ಮಾಡಿದವನಿಗೂ ಎಲ್ಲ ತಪಸ್ಸನ್ನು ಮಾಡಿದವನಿಗೂ ಸಕಲರಿಗೂ ಆಶ್ರಯವನ್ನು ಕೊಟ್ಟವನಿಗೂ ಸಕಲ ದಾನಗಳನ್ನು ಮಾಡಿದವನಿಗೂ ಸಕಲ ಸಿದ್ಧಿಗಳನ್ನು ಪಡೆದವನಿಗೂ ಪುನರ್ಜನ್ಮವಿದ್ದೇ ಇರುವುದು. ಆದರೆ ಮೂಲಪ್ರಕೃತಿಯಾದ ದೇವಿಯ ಭಕ್ತನಿಗೆ ಪುನರ್ಜನ್ಮವಿಲ್ಲ. ॥೫೧-೫೨॥

ದೇವಿಯ ಭಕ್ತರು ಭುವನೇಶ್ವರಿಯ ಮಣಿದ್ವೀಪದಲ್ಲಿ ಶ್ರೀದೇವಿಯ ಪರಮ ಪದದಲ್ಲಿ ವಾಸಮಾಡುತ್ತಾ ಲೆಕ್ಕವಿಲ್ಲದಷ್ಟು ಬ್ರಹ್ಮರ ನಾಶವನ್ನು ನೋಡುವರು. ದೇವೀಮಂತ್ರೋಪಾಸಕರು ಮನುಷ್ಯಶರೀರವನ್ನು ಬಿಟ್ಟು ಹುಟ್ಟು, ಸಾವು, ಮುಪ್ಪು, ಇಲ್ಲದ ದಿವ್ಯವಾದ ದೇವಿಯ ಸಾರೂಪ್ಯವನ್ನು ಪಡೆದು ದೇವಿಯ ಸೇವೆಯನ್ನು ಮಾಡುತ್ತಾ ಮಣಿದ್ವೀಪದಲ್ಲಿದ್ದುಕೊಂಡು ಕಲ್ಪಪ್ರಳಯಗಳನ್ನು ಮಹಾಪ್ರಳಯವನ್ನೂ ನೋಡುವರು. ಎಂದರೆ ಅಷ್ಟು ದೀರ್ಘಾಯುಗಳಾಗಿರುವರು. ॥೫೩-೫೪-೫೫॥

ದೇವತೆಗಳೂ ಸಿದ್ಧರೂ ಸಮಸ್ತ ಪ್ರಪಂಚಗಳೂ ನಾಶವಾಗುವುವು. ಹುಟ್ಟು,

ಕಾರ್ತಿಕೇ ತುಲಸೀದಾನಂ ಕರೋತಿ ಹರಯೇ ಚ ಯಃ
ಯುಗತ್ರಯಪ್ರಮಾಣಂ ಚ ಮೋದತೇ ಹರಿಮಂದಿರೇ ॥೫೭॥

ಪುನಃ ಸುಯೋನಿಂ ಸಂಪ್ರಾಪ್ಯ ಹರಿಭಕ್ತಿಂ ಲಭೇದ್ಧ್ರುವಂ ।
ಜಿತೇಂದ್ರಿಯಾಣಾಂ ಪ್ರವರಃ ಸ ಭವೇದ್ಭಾರತೇ ಭುವಿ ॥೫೮॥

ಮಧ್ಯೇ ಯಃ ಸ್ನಾತಿ ಗಂಗಾಯಾಮರುಣೋದಯಕಾಲತಃ ।
ಯುಗಷಷ್ಟಿಸಹಸ್ರಾಣಿ ಮೋದತೇ ಹರಿಮಂದಿರೇ ॥೫೯॥

ಪುನಃ ಸುಯೋನಿಂ ಸಂಪ್ರಾಪ್ಯ ವಿಷ್ಣುಮಂತ್ರಂ ಲಭೇದ್ಧ್ರುವಂ ।
ತ್ಯಕ್ತ್ವಾ ಚ ಮಾನುಷಂ ದೇಹಂ ಪುನರ್ಯಾತಿ ಹರೇಃ ಪದಂ ॥೬೦॥

ನಾಸ್ತಿ ತತ್ಪುನರಾವೃತ್ತಿಃ ವೈಕುಂಠಾಚ್ಚ ಮಹೀತಲೇ ।
ಕರೋತಿ ಹರಿದಾಸ್ಯಂ ಚ ತಥಾ ಸಾರೂಪ್ಯಮೇವ ಚ ॥೬೧॥

ನಿತ್ಯಸ್ನಾಯೀ ಚ ಗಂಗಾಯಾಂ ಸ ಪೂತಃ ಸೂರ್ಯವದ್ಭುವಿ ।
ಪದೇ ಪದೇಽಶ್ವಮೇಧಸ್ಯ ಲಭತೇ ನಿಶ್ಚಿತಂ ಫಲಂ ॥೬೨॥

---

ಸಾವು, ಮುಪ್ಪುಗಳನ್ನು ನಾಶಮಾಡುವ ದೇವಿಯ ಭಕ್ತರು ನಾಶವಾಗುವುದಿಲ್ಲ. ||೫೬||

ಕಾರ್ತಿಕಮಾಸದಲ್ಲಿ ತುಲಸಿಯ ವಿವಾಹವ್ರತವನ್ನು ಯಾರು ಮಾಡುವರೋ ಅವರು ವಿಷ್ಣುಲೋಕದಲ್ಲಿ ಸುಖವನ್ನನುಭವಿಸಿ ಮತ್ತೆ ಉತ್ತಮ ಜನ್ಮವನ್ನು ಪಡೆದು ಹರಿಭಕ್ತನೂ ಜಿತೇಂದ್ರಿಯರಲ್ಲಿ ಶ್ರೇಷ್ಠನೂ ಆಗುವರು. ||೫೭-೫೮||

ಅರುಣೋದಯ ಸಮಯದಲ್ಲಿ ಗಂಗೆಯಲ್ಲಿ ಯಾರು ಸ್ನಾನಮಾಡುವರೋ ಅವರು ಅರವತ್ತು ಸಹಸ್ರ ಯುಗಗಳಕಾಲ ವಿಷ್ಣುಲೋಕದಲ್ಲಿದ್ದು ಮತ್ತೆ ಉತ್ತಮವಾದ ಜನ್ಮವನ್ನು ಪಡೆದು ವಿಷ್ಣುಮಂತ್ರವನ್ನು ಜಪಿಸಿ ಮನುಷ್ಯದೇಹವನ್ನು ಬಿಟ್ಟು ಮತ್ತೆ ವೈಕುಂಠಕ್ಕೆ ಹೋಗುವರು. ಅವರಿಗೆ ಪುನರ್ಜನ್ಮವಿಲ್ಲ. ಅವರು ವಿಷ್ಣುವಿನ ಸಾರೂಪ್ಯವನ್ನು ಹೊಂದಿ ಅವನ ಸೇವೆಯನ್ನು ಮಾಡಿಕೊಂಡಿರುವರು. ||೫೯-೬೦-೬೧||

ಪ್ರತಿದಿನವೂ ಗಂಗೆಯಲ್ಲಿ ಸ್ನಾನಮಾಡುವವನು ಸೂರ್ಯನಂತೆ ಪರಿಶುದ್ಧನು. ಮತ್ತು ಒಂದೊಂದು ಸ್ನಾನಕ್ಕೂ ಅಶ್ವಮೇಧದ ಫಲವನ್ನು ಹೊಂದುವನು. ಅವನ

ತಸ್ಯೈವ ಪಾದರಜಸಾ ಸದ್ಯಃ ಪೂತಾ ವಸುಂಧರಾ ।
ಮೋದತೇ ಸ ಚ ವೈಕುಂಠೇ ಯಾವಚ್ಚಂದ್ರದಿವಾಕರೌ ॥೬೩॥

ಪುನಃ ಸುಯೋನಿಂ ಸಂಪ್ರಾಪ್ಯ ಹರಿಭಕ್ತಿಂ ಲಭೇದ್ಧ್ರುವಂ ।
ಜೀವನ್ಮುಕ್ತೋಽತಿತೇಜಸ್ವೀ ತಪಸ್ವಿಪ್ರವರೋ ಭವೇತ್ ॥೬೪॥

ಸ್ವಧರ್ಮನಿರತಃ ಶುದ್ಧೋ ವಿದ್ವಾಂಶ್ಚ ಸ ಜಿತೇಂದ್ರಿಯಃ ।
ಮೀನಕರ್ಕಟಯೋರ್ಮಧ್ಯೇ ಗಾಢಂ ತಪತಿ ಭಾಸ್ಕರಃ ॥೬೫॥

ಭಾರತೇ ಯೋ ದದಾತ್ಯೇವ ಜಲಮೇವ ಸುವಾಸಿತಂ ।
ಸ ಮೋದತೇ ಚ ಕೈಲಾಸೇ ಯಾವದಿಂದ್ರಾಶ್ಚತುರ್ದಶ ॥೬೬॥

ಪುನಃ ಸುಯೋನಿಂ ಸಂಪ್ರಾಪ್ಯ ರೂಪವಾಂಶ್ಚ ಸುಖೀ ಭವೇತ್ ।
ಶಿವಭಕ್ತಶ್ಚ ತೇಜಸ್ವೀ ವೇದವೇದಾಂಗಪಾರಗಃ ॥೬೭॥

ವೈಶಾಖೇ ಸಕ್ತುದಾನಂ ಚ ಯಃ ಕರೋತಿ ದ್ವಿಜಾತಯೇ ।
ಸಕ್ತುರೇಣು ಪ್ರಮಾಣಾಬ್ದಂ ಮೋದತೇ ಶಿವಮಂದಿರೇ ॥೬೮॥

---

ಪಾದದ ಧೂಳಿಯಿಂದ ಭೂಮಿಯು ಪರಿಶುದ್ಧವಾಗುವುದು. ಅವನು ವೈಕುಂಠಲೋಕದಲ್ಲಿ ಸೂರ್ಯಚಂದ್ರರಿರುವವರೆಗೂ ಸಂತೋಷವನ್ನನುಭವಿಸುವನು. ಮತ್ತೆ ಉತ್ತಮವಾದ ಜನ್ಮವನ್ನು ಪಡೆದು ಹರಿಭಕ್ತನಾಗಿ ಜೀವನ್ಮುಕ್ತನಾಗಿ ತೇಜಸ್ವಿಯಾಗಿ ತಪಸ್ವಿಗಳಲ್ಲಿ ಶ್ರೇಷ್ಠನಾಗಿ ಇರುವನು. ॥೬೨-೬೩-೬೪॥

ಯಾರು ಪರಿಶುದ್ಧನಾಗಿ ತನ್ನ ಧರ್ಮವನ್ನು ನಡೆಸುತ್ತಾ ವಿದ್ವಾಂಸನೂ ಜಿತೇಂದ್ರಿಯನೂ ಆಗಿ ಭರತಖಂಡದಲ್ಲಿ ಮೀನಮಾಸದಿಂದ ಕರ್ಕಾಟಕಮಾಸದ ವರೆಗೆ ನಾಲ್ಕುತಿಂಗಳು ಸೂರ್ಯನ ತಾಪವು ಹೆಚ್ಚಾಗಿರುವಾಗ ಸುವಾಸನೆಯಾದ ನೀರನ್ನು ದಾನಮಾಡುವನೋ,ಅವನು ಹದಿನಾಲ್ಕುಜನ ದೇವೇಂದ್ರರ ಅಧಿಕಾರವು ಮುಗಿಯುವವರೆಗೂ ಕೈಲಾಸದಲ್ಲಿ ಸಂತೋಷದಿಂದ ಇರುವನು. ಮತ್ತೆ ಉತ್ತಮಜನ್ಮವನ್ನು ಪಡೆದು ರೂಪವಂತನೂ ಸುಖಿಯೂ ವೇದವೇದಾಂಗ ಪಾರಂಗತನೂ ಶಿವಭಕ್ತನೂ ತೇಜಸ್ವಿಯೂ ಆಗುವನು. ॥೬೫-೬೬-೬೭॥

ವೈಶಾಖಮಾಸದಲ್ಲಿ ಬ್ರಾಹ್ಮಣನಿಗೆ ಹಿಟ್ಟನ್ನು ಯಾರು ದಾನಮಾಡುವರೋ ಅವರು ಆ ಹಿಟ್ಟಿನಲ್ಲಿರುವ ರೇಣುಗಳಷ್ಟು ವರ್ಷ ಕೈಲಾಸದಲ್ಲಿರುವರು. ॥೬೮॥

ಕರೋತಿ ಭಾರತೇ ಯೋ ಹಿ ಕೃಷ್ಣ ಜನ್ಮಾಷ್ಟಮಿಾವ್ರತಂ ।
ಶತಜನ್ಮಕೃತಂ ಪಾಪಂ ಮುಚ್ಯತೇ ನಾಽತ್ರ ಸಂಶಯಃ ॥೬೯॥

ವೈಕುಂಠೇ ಮೋದತೇ ಸೋಽಪಿ ಯಾವದಿಂದ್ರಾಶ್ಚತುರ್ದಶ ।
ಪುನಃ ಸುಯೋನಿಂ ಸಂಪ್ರಾಪ್ಯ ಕೃಷ್ಣೇ ಭಕ್ತಿಂ ಲಭೇದ್ಧ್ರುವಂ ॥೭೦॥

ಇಹೈವ ಭಾರತೇ ವರ್ಷೇ ಶಿವರಾತ್ರಿಂ ಕರೋತಿ ಯಃ ।
ಮೋದತೇ ಶಿವಲೋಕೇ ಸ ಸಪ್ತಮನ್ವಂತರಾವಧಿ ॥೭೧॥

ಶಿವಾಯ ಶಿವರಾತ್ರೌ ಚ ಬಿಲ್ವಪತ್ರಂ ದದಾತಿ ಚ ।
ಪತ್ರಮಾನಯುಗಂ ತತ್ರ ಮೋದತೇ ಶಿವಮಂದಿರೇ ॥೭೨॥

ಪುನಃ ಸುಯೋನಿಂ ಸಂಪ್ರಾಪ್ಯ ಶಿವಭಕ್ತಿಂ ಲಭೇದ್ಧ್ರುವಂ ।
ವಿದ್ಯಾವಾನ್ಪುತ್ರವಾನ್ ಶ್ರೀಮಾನ್ಪ್ರಜಾವಾನ್ಭೂಮಿವಾನ್ಭವೇತ್ ॥೭೩॥

ಚೈತ್ರಮಾಸೇಽಥವಾ ಮಾಘೇ ಶಂಕರಂ ಯೋಽರ್ಚಯೇದ್ವ್ರತೀ ।
ಕರೋತಿ ನರ್ತನಂ ಭಕ್ತ್ಯಾ ವೇತ್ರಪಾಣಿರ್ದಿವಾನಿಶಂ ॥೭೪॥

---

ಭರತಖಂಡದಲ್ಲಿ ಕೃಷ್ಣಜನ್ಮಾಷ್ಟಮಿಯ ವ್ರತವನ್ನು ಮಾಡಿದವನು ತನ್ನ ನೂರು ಜನ್ಮಗಳ ಪಾಪವನ್ನು ಕಳೆದುಕೊಂಡು ಹದಿನಾಲ್ಕು ಜನ ದೇವೇಂದ್ರರ ಅಧಿಕಾರ ಮುಗಿಯುವ ವರೆಗೆ ವೈಕುಂಠಲೋಕದಲ್ಲಿ ಸುಖವನ್ನನುಭವಿಸಿ ಮತ್ತೆ ಉತ್ತಮಜನ್ಮವನ್ನು ಪಡೆದು ಕೃಷ್ಣನಲ್ಲಿ ಶಾಶ್ವತವಾದ ಭಕ್ತಿಯನ್ನು ಪಡೆವನು. ॥೬೯-೭೦॥

ಈ ಭಾರತದಲ್ಲಿ ಶಿವರಾತ್ರಿಯ ವ್ರತವನ್ನು ಮಾಡಿದವನು ಏಳು ಮನ್ವಂತರಗಳ ಕಾಲ ಶಿವಲೋಕದಲ್ಲಿ ಸಂತೋಷಪಡುವನು. ಶಿವರಾತ್ರಿಯ ದಿನ ಶಿವನಿಗೆ ಬಿಲ್ವಪತ್ರೆಯನ್ನು ಪೂಜಿಸಿದವನು ಪತ್ರೆಯ ಸಂಖ್ಯೆಗಳಷ್ಟು ಯುಗಗಳು ಶಿವಲೋಕದಲ್ಲಿ ಸಂತೋಷಪಟ್ಟು ಮತ್ತೆ ಉತ್ತಮ ಜನ್ಮವೆತ್ತಿ ಶಿವಭಕ್ತಿಯನ್ನು ಪಡೆದು ವಿದ್ವಾಂಸನೂ ಸಂಪತ್ತುಳ್ಳವನೂ ಪುತ್ರವಂತನೂ ಸಂತತಿಯುಳ್ಳವನೂ ಭೂಸ್ವಾಮಿಯೂ ಆಗುವನು. ॥೭೧-೭೨-೭೩॥

ಚೈತ್ರಮಾಸದಲ್ಲಾಗಲೀ ಮಾಘಮಾಸದಲ್ಲಾಗಲೀ ಶಿವನನ್ನು ಪೂಜಿಸಿ ಯಾರು ಭಕ್ತಿಯಿಂದ ಕೈಯಲ್ಲಿ ಬೆತ್ತವನ್ನು ಹಿಡಿದು ಹಗಲು ರಾತ್ರೆಯೂ ನರ್ತನ

**ಮಾಸಂ ವಾಽಪ್ಯರ್ಧಮಾಸಂ ವಾ ದಶಸಪ್ತದಿನಾನಿ ಚ ।**
**ದಿನಮಾನಯುಗಂ ಸೋಽಪಿ ಶಿವಲೋಕೇ ಮಹೀಯತೇ ॥೭೫॥**

**ಶ್ರೀರಾಮನವಮೀಂ ಯೋ ಹಿ ಕರೋತಿ ಭಾರತೇ ಪುಮಾನ್ ।**
**ಸಪ್ತಮನ್ವಂತರಂ ಯಾವನ್ಮೋದತೇ ವಿಷ್ಣುಮಂದಿರೇ ॥೭೬॥**

**ಪುನಃ ಸುಯೋನಿಂ ಸಂಪ್ರಾಪ್ಯ ರಾಮಭಕ್ತಿಂ ಲಭೇದ್ಧ್ರುವಂ ।**
**ಜಿತೇಂದ್ರಿಯಾಣಾಂ ಪ್ರವರೋ ಮಹಾಂಶ್ಚ ಧನವಾನ್ಭವೇತ್ ॥೭೭॥**

**ಶಾರದೀಯಾಂ ಮಹಾಪೂಜಾಂ ಪ್ರಕೃತೇರ್ಯಃ ಕರೋತಿ ಚ ।**
**ಮಹಿಷೈಶ್ಛಾಗಲೈರ್ಮೇಷೈಃ ಖಡ್ಗೈರ್ಭೇಕಾದಿಭಿಃ ಸತಿ ॥೭೮॥**

**ನೈವೇದ್ಯೈರುಪಹಾರೈಶ್ಚ ಧೂಪದೀಪಾದಿಭಿಸ್ತಥಾ ।**
**ನೃತ್ಯಗೀತಾದಿಭಿರ್ವಾದ್ಯೈಃ ನಾನಾಕೌತುಕಮಂಗಲಂ ॥೭೯॥**

**ಶಿವಲೋಕೇ ವಸೇತ್ಸೋಽಪಿ ಸಪ್ತಮನ್ವಂತರಾವಧಿ ।**
**ಪುನಃ ಸುಯೋನಿಂ ಸಂಪ್ರಾಪ್ಯ ನರೋ ಬುದ್ಧಿಂ ಚ ನಿರ್ಮಲಾಂ ॥೮೦॥**

---

ಮಾಡುತ್ತಾ ತಿಂಗಳು, ಹದಿನೈದುದಿನ, ಹತ್ತು ಅಥವಾ ಏಳು ದಿನಗಳ ವರೆಗೆ ವ್ರತಾಚರಣೆ ಮಾಡಿದರೆ ಅವರು ಆ ದಿನಸಂಖ್ಯೆಯ ಯುಗಗಳ ವರೆಗೆ ಶಿವಲೋಕದಲ್ಲಿ ಸಂತೋಷದಿಂದಿರುವರು. ॥೭೪-೭೫॥

ಶ್ರೀರಾಮನವಮಿವ್ರತವನ್ನು ಯಾರು ಮಾಡುವರೋ ಅವರು ಏಳು ಮನ್ವಂತರಗಳ ವರೆಗೆ ವಿಷ್ಣುಲೋಕದಲ್ಲಿ ಸಂತೋಷದಿಂದಿರುವರು. ಮತ್ತೆ ಉತ್ತಮ ಜನ್ಮವೆತ್ತಿ ರಾಮಭಕ್ತಿಯನ್ನು ಪಡೆದು ಜಿತೇಂದ್ರಿಯ ಶ್ರೇಷ್ಠನೂ ಮಹಾಧನವಂತನೂ ಆಗುವನು. ॥೭೭॥

ಮೂಲಪ್ರಕೃತಿಯಾದ ಭುವನೇಶ್ವರೀದೇವಿಗೆ ಶರದೃತುವಿನಲ್ಲಿ ಮಹಾಪೂಜೆಯನ್ನು ಯಾರು ಮಾಡುವರೋ ಕೋಣ, ಮೇಕೆ, ಕುರಿ, ಖಡ್ಗಮೃಗ, ಕಪ್ಪೆ ಮುಂತಾದುವುಗಳನ್ನು ಬಲಿಕೊಟ್ಟು (ಈ ಬಲಿಯು ಬ್ರಾಹ್ಮಣರನ್ನೂ, ಮಾಂಸಾಹಾರಿಗಳಲ್ಲದವರನ್ನೂ ಬಿಟ್ಟು, ಬೇರೆಯವರ ವಿಷಯವಾದುದು) ನೈವೇದ್ಯ ಉಪಹಾರಗಳು ಧೂಪ, ದೀಪ, ನೃತ್ಯ, ಗೀತ ವಾದ್ಯಗಳಿಂದ ಕೂಡಿದ ಬಗೆಬಗೆಯ ಮಂಗಲಕಾರ್ಯವನ್ನು ಯಾರು ಮಾಡುವರೋ ಅವರು ಏಳು ಮನ್ವಂತರಗಳ ವರೆಗೆ ಶಿವಲೋಕ

ಅತುಲಾಂ ಶ್ರಿಯಮಾಪ್ನೋತಿ ಪುತ್ರಪೌತ್ರವಿವರ್ಧನೀಂ ।
ಮಹಾಪ್ರಭಾವಯುಕ್ತಶ್ಚ ಗಜವಾಜಿಸಮನ್ವಿತಃ ॥೮೧॥

ರಾಜರಾಜೇಶ್ವರಃ ಸೋಽಪಿ ಭವೇದೇವ ನ ಸಂಶಯಃ ।
ತತಃ ಶುಕ್ಲಾಷ್ಟಮೀಂ ಪ್ರಾಪ್ಯ ಮಹಾಲಕ್ಷ್ಮೀಂ ಚ ಯೋಽರ್ಚಯೇತ್॥೮೨॥

ನಿತ್ಯಂ ಭಕ್ತ್ಯಾ ಪಕ್ಷಮೇಕಂ ಪುಣ್ಯಕ್ಷೇತ್ರೇ ಚ ಭಾರತೇ ।
ದತ್ವಾ ತಸ್ಯೈ ಪ್ರಕೃಷ್ಟಾನಿ ಚೋಪಚಾರಾಣಿ ಷೋಡಶ ॥೮೩॥

ಗೋಲೋಕೇ ಚ ವಸೇತ್ಸೋಽಪಿ ಯಾವದಿಂದ್ರಾಶ್ಚತುರ್ದಶ ।
ಪುನಃ ಸುಯೋನಿಂ ಸಂಪ್ರಾಪ್ಯ ರಾಜರಾಜೇಶ್ವರೋ ಭವೇತ್ ॥೮೪॥

ಕಾರ್ತಿಕೇ ಪೂರ್ಣಿಮಾಯಾಂ ತು ಕೃತ್ವಾ ತು ರಾಸಮಂಡಲಂ ।
ಗೋಪಾನಾಂ ಶತಕಂ ಕೃತ್ವಾ ಗೋಪೀನಾಂ ಶತಕಂ ತಥಾ ॥೮೫॥

ಶಿಲಾಯಾಂ ಪ್ರತಿಮಾಯಾಂ ಚ ಶ್ರೀಕೃಷ್ಣಂ ರಾಧಯಾ ಸಹ ।
ಭಾರತೇ ಪೂಜಯೇದ್ಭಕ್ತ್ಯಾ ಚೋಪಹಾರಾಣಿ ಷೋಡಶ ॥೮೬॥

ಗೋಲೋಕೇ ವಸತೇ ಸೋಽಪಿ ಯಾವದ್ವೈ ಬ್ರಹ್ಮಣೋ ವಯಃ ।
ಭಾರತಂ ಪುನರಾಗತ್ಯ ಕೃಷ್ಣೇ ಭಕ್ತಿಂ ಲಭೇದ್ದೃಢಾಂ ॥೮೭॥

---

ದಲ್ಲಿದ್ದು ಮತ್ತೆ ಉತ್ತಮಜನ್ಮವನ್ನು ಎತ್ತಿ ನಿರ್ಮಲವಾದ ಬುದ್ಧಿಯನ್ನೂ ಅಸಮಾನ ವಾದ ಸಂಪತ್ತನ್ನೂ ಪಡೆದು ಆನೆ, ಕುದುರೆಗಳಿಂದ ಕೂಡಿದ ಮಹಾಪರಾಕ್ರಮಿಯಾದ ಚಕ್ರವರ್ತಿಯಾಗುವರು. ಸಂದೇಹವಿಲ್ಲ. ||೭೮-೭೯-೮೦-೮೧||

ಶರದೃತುವಿನಲ್ಲಿ ಶುಕ್ಲಪಕ್ಷದ ಅಷ್ಟಮಿಯ ದಿನ ಮಹಾಲಕ್ಷ್ಮಿಯಪೂಜೆ ಯನ್ನು ಪ್ರಾರಂಭಿಸಿ ಭರತಖಂಡದ ಪುಣ್ಯಕ್ಷೇತ್ರದಲ್ಲಿ ಪ್ರತಿದಿನವೂ ಭಕ್ತಿಯಿಂದ ಕೂಡಿ ಹದಿನೈದು ದಿನಗಳ ವರೆಗೆ ಷೋಡಶೋಪಚಾರಗಳಿಂದ ಪೂಜೆಯನ್ನು ಮಾಡಿದರೆ ಪೂಜೆಮಾಡಿದವನು ಹದಿನಾಲ್ಕು ಜನ ದೇವೇಂದ್ರರ ಅಧಿಕಾರವನ್ನನು ಭವಿಸಿ ಮತ್ತೆ ಉತ್ತಮಜನ್ಮವೆತ್ತಿ ಚಕ್ರವರ್ತಿಯಾಗುವನು. ||೮೨-೮೩-೮೪||

ಕಾರ್ತಿಕಮಾಸದಲ್ಲಿ ಪೂರ್ಣಿಮೆಯ ದಿನ ರಾಸಮಂಡಲವನ್ನು ಮಾಡಿ ಒಂದುನೂರು ಗೋಪ ಗೋಪಿಯರ ಪ್ರತಿಮೆಯನ್ನೂ ರಾಧಾಕೃಷ್ಣರ ಪ್ರತಿಮೆಯನ್ನು ಇಟ್ಟು ಭಕ್ತಿಯಿಂದ ಷೋಡಶೋಪಚಾರಪೂಜೆಯನ್ನು ಮಾಡಿದವರು ಬ್ರಹ್ಮನ

ಕ್ರಮೇಣ ಸುದೃಢಾಂ ಭಕ್ತಿಂ ಲಬ್ಧ್ವಾ ಮಂತ್ರಂ ಹರೇರಹೋ ।
ದೇಹಂ ತ್ಯಕ್ತ್ವಾ ಚ ಗೋಲೋಕಂ ಪುನರೇವ ಪ್ರಯಾತಿ ಸಃ ॥೪೮॥

ತತಃ ಕೃಷ್ಣಸ್ಯ ಸಾರೂಪ್ಯಂ ಪಾರ್ಷದಪ್ರವರೋ ಭವೇತ್ ।
ಪುನಸ್ತತ್ಪತನಂ ನಾಸ್ತಿ ಜರಾಮೃತ್ಯುಹರೋ ಭವೇತ್ ॥೪೯॥

ಶುಕ್ಲಾಂ ವಾಽಪ್ಯಥವಾ ಕೃಷ್ಣಾಂ ಕರೋತ್ಯೇಕಾದಶೀಂ ಚ ಯಃ ।
ವೈಕುಂಠೇ ಮೋದತೇ ಸೋಽಪಿ ಯಾವದ್ವೈ ಬ್ರಹ್ಮಣೋ ವಯಃ ॥೯೦॥

ಭಾರತಂ ಪುನರಾಗತ್ಯ ಕೃಷ್ಣಭಕ್ತಿಂ ಲಭೇದ್ಧ್ರುವಂ ।
ಕ್ರಮೇಣ ಭಕ್ತಿಂ ಸುದೃಢಾಂ ಕರೋತ್ಯೇಕಾಂ ಹರೇರಹೋ ॥೯೧॥

ದೇಹಂ ತ್ಯಕ್ತ್ವಾ ಚ ಗೋಲೋಕಂ ಪುನರೇವ ಪ್ರಯಾತಿ ಸಃ ।
ತತಃ ಕೃಷ್ಣಸ್ಯ ಸಾರೂಪ್ಯಂ ಸಂಪ್ರಾಪ್ಯ ಪಾರ್ಷದೋ ಭವೇತ್ ॥೯೨॥
ಪುನಸ್ತತ್ಪತನಂ ನಾಸ್ತಿ ಜರಾಮೃತ್ಯುಹರೋ ಭವೇತ್ ।

---

ಆಯುಸ್ಸು ಮುಗಿಯುವವರೆಗೂ ಗೋಲೋಕದಲ್ಲಿದ್ದು ಸುಖವನ್ನನುಭವಿಸಿ ಭರತ ಖಂಡದಲ್ಲಿ ಮತ್ತೆ ಹುಟ್ಟಿ ಕೃಷ್ಣನಲ್ಲಿ ಭಕ್ತಿಯನ್ನು ಪಡೆದು ಕ್ರಮವಾಗಿ ದೃಢಭಕ್ತಿಯಿಂದ ಹರಿಮಂತ್ರವನ್ನು ಗುಟ್ಟಾಗಿ ಜಪಿಸಿ ಶರೀರವನ್ನು ಬಿಟ್ಟು ಮತ್ತೆ ಗೋಲೋಕಕ್ಕೆ ಹೋಗಿ ಅಲ್ಲಿ ಕೃಷ್ಣನ ಸಾರೂಪ್ಯವನ್ನು ಪಡೆದು ಅವನ ಸೇವಕಶ್ರೇಷ್ಠನಾಗುವರು. ಮತ್ತೆ ಅವರಿಗೆ ಮುಪ್ಪು ಮರಣಗಳ ಭಯವೂ ಪುನರ್ಜನ್ಮವೂ ಇರುವುದಿಲ್ಲ. ॥೪೫-೪೬-೪೭-೪೮-೪೯॥

ಯಾವನು ಶುಕ್ಲ ಅಥವಾ ಕೃಷ್ಣಪಕ್ಷದ ಏಕಾದಶೀ ವ್ರತವನ್ನು ಮಾಡುವನೋ ಅವನು ಬ್ರಹ್ಮನ ಆಯಸ್ಸು ಮುಗಿಯುವವರೆಗೂ ವೈಕುಂಠಲೋಕದಲ್ಲಿದ್ದು ಮತ್ತೆ ಜನ್ಮವೆತ್ತಿ ಕೃಷ್ಣನಲ್ಲಿ ದೃಢವಾದ ಏಕಾಂತ ಭಕ್ತಿಯನ್ನು ಮಾಡಿ ದೇಹವನ್ನು ಬಿಟ್ಟು ಗೋಲೋಕಕ್ಕೆ ಹೋಗಿ ಕೃಷ್ಣನ ಸಾರೂಪ್ಯವನ್ನು ಪಡೆದು ಅವನ ಸೇವಕನಾಗುವನು. ಮುಪ್ಪು ಮರಣವಾಗಲೀ ಪುನರ್ಜನ್ಮವಾಗಲೀ ಅವನಿಗಿಲ್ಲ. ॥೯೦-೯೧-೯೨॥

ಭಾದ್ರೇ ಚ ಶುಕ್ಲದ್ವಾದಶ್ಯಾಂ ಯಃ ಶಕ್ರಂ ಪೂಜಯೇನ್ನರಃ ॥೯೩॥

ಷಷ್ಟಿವರ್ಷಸಹಸ್ರಾಣಿ ಶಕ್ರಲೋಕೇ ಮಹೀಯತೇ ।
ರವಿವಾರೇ ಚ ಸಂಕ್ರಾಂತ್ಯಾಂ ಸಪ್ತಮ್ಯಾಂ ಶುಕ್ಲಪಕ್ಷಕೇ ॥೯೪॥

ಸಂಪೂಜ್ಯಾರ್ಕಂ ಹವಿಷ್ಯಾನ್ನಂ ಯಃ ಕರೋತಿ ಚ ಭಾರತೇ ।
ಮಹೀಯತೇ ಸೋಽರ್ಕಲೋಕೇ ಯಾವದಿಂದ್ರಾಶ್ಚತುರ್ದಶ ॥೯೫॥

ಭಾರತಂ ಪುನರಾಗತ್ಯ ಚಾ ರೋಗೀ ಶ್ರೀಯುತೋ ಭವೇತ್ ।
ಜ್ಯೇಷ್ಠಕೃಷ್ಣಚತುರ್ದಶ್ಯಾಂ ಸಾವಿತ್ರೀಂ ಯೋ ಹಿ ಪೂಜಯೇತ್ ॥೯೬॥

ಮಹೀಯತೇ ಬ್ರಹ್ಮಲೋಕೇ ಸಪ್ತಮನ್ವಂತರಾವಧಿ ।
ಪುನರ್ಮಹೀಂ ಸಮಾಗತ್ಯ ಶ್ರೀಮಾನತುಲವಿಗ್ರಹಃ ॥೯೭॥

ಚಿರಜೀವೀ ಭವೇಚ್ಛೋಽಪಿ ಜ್ಞಾನವಾನ್ಸಂಪದಾ ಯುತಃ ।
ಮಾಘಸ್ಯ ಶುಕ್ಲಪಂಚಮ್ಯಾಂ ಪೂಜಯೇದ್ಯಃ ಸರಸ್ವತೀಂ ॥೯೮॥

---

ಭಾದ್ರಪದ ಮಾಸದ ಶುಕ್ಲ ದ್ವಾದಶಿಯ ದಿನ ದೇವೇಂದ್ರನನ್ನು ಪೂಜೆ ಮಾಡಿದವನು ಅರವತ್ತುಸಾವಿರ ವರ್ಷ ಇಂದ್ರಲೋಕದಲ್ಲಿ ಸುಖಿಸುವನು. ॥೯೩॥

ಭಾನುವಾರ, ಸಂಕ್ರಮಣ, ಶುಕ್ಲಪಕ್ಷದ ಸಪ್ತಮಿ ಈ ದಿನಗಳಲ್ಲಿ ಸೂರ್ಯನನ್ನು ಪೂಜಿಸಿ ಹವಿಸ್ಸನ್ನು ನಿವೇದನಮಾಡಿದವನು ಹದಿನಾಲ್ಕು ಇಂದ್ರರ ಅಧಿಕಾರ ಕಾಲದವರೆಗೆ ಸೂರ್ಯಲೋಕದಲ್ಲಿ ಸುಖವಾಗಿದ್ದು ಮತ್ತೆ ಭರತಖಂಡದಲ್ಲಿ ಜನ್ಮವೆತ್ತಿ ರೋಗವಿಲ್ಲದವನಾಗಿ ಸಂಪತ್ತಿನಿಂದ ಕೂಡಿ ಬದುಕುವನು. ॥೯೪-೯೫॥

ಜ್ಯೈಷ್ಠಮಾಸದ ಕೃಷ್ಣಪಕ್ಷದ ಚತುರ್ದಶಿಯದಿನ ಸಾವಿತ್ರೀದೇವಿಯ ವ್ರತವನ್ನು ಯಾವನು ಮಾಡುವನೋ ಅವನು ಏಳು ಮನ್ವಂತರಗಳ ವರೆಗೆ ಬ್ರಹ್ಮಲೋಕದಲ್ಲಿ ಸುಖಿಸಿ ಮತ್ತೆ ಭೂಮಿಯಲ್ಲಿ ಜನಿಸಿ ಧನವಂತನಾಗಿಯೂ ಪರಾಕ್ರಮಿಯಾಗಿಯೂ ಆಯುಸ್ಸು, ಸಂಪತ್ತು, ಜ್ಞಾನ ಇವುಗಳಿಂದ ಕೂಡಿ ಬದುಕಿರುವನು. ॥೯೬-೯೭॥

ಮಾಘಶುಕ್ಲಪಂಚಮಿಯ ದಿನ ಯಾವನು ಸರಸ್ವತಿಯನ್ನು ಪೂಜೆಮಾಡುವನೋ, ಭಕ್ತಿಯಿಂದಲೂ, ಇಂದ್ರಿಯನಿಗ್ರಹಪೂರ್ವಕವಾಗಿಯೂ ಷೋಡಶೋಪಚಾರ

ಸಂಯುತೋ ಭಕ್ತಿತೋ ದತ್ವಾ ಚೋಪಚಾರಾಣಿ ಷೋಡಶ ।
ಮಹೀಯತೇ ಮಣಿದ್ವೀಪೇ ಯಾವದ್ಬ್ರಹ್ಮದಿವಾನಿಶಂ ॥೯೯॥

ಸಂಪ್ರಾಪ್ಯ ಚ ಪುನರ್ಜನ್ಮ ಸ ಭವೇತ್ಕವಿಪಂಡಿತಃ ।
ಗಾಂ ಸುವರ್ಣಾದಿಕಂ ಯೋ ಹಿ ಬ್ರಾಹ್ಮಣಾಯ ದದಾತಿ ಚ ॥೧೦೦॥

ನಿತ್ಯಂ ಜೀವನಪರ್ಯಂತಂ ಭಕ್ತಿಯುಕ್ತಶ್ಚ ಭಾರತೇ ।
ಗವಾಂ ಲೋಮಪ್ರಮಾಣಾಬ್ದಂ ದ್ವಿಗುಣಂ ವಿಷ್ಣುಮಂದಿರೇ ॥೧೦೧॥

ಮೋದತೇ ಹರಿಣಾ ಸಾರ್ಧಂ ಕ್ರೀಡಾಕೌತುಕಮಂಗಲೈಃ ।
ತದಂತೇ ಪುನರಾಗತ್ಯ ರಾಜರಾಜೇಶ್ವರೋ ಭವೇತ್ ॥೧೦೨॥

ಶ್ರೀಮಾಂಶ್ಚ ಪುತ್ರವಾನ್ವಿದ್ವಾನ್ ಜ್ಞಾನವಾನ್ಸರ್ವತಃ ಸುಖೀ ।
ಭೋಜಯೇದ್ಯೋಽಪಿ ಮಿಷ್ಟಾನ್ನಂ ಬ್ರಾಹ್ಮಣೇಭ್ಯಶ್ಚ ಭಾರತೇ ॥೧೦೩॥

ವಿಪ್ರಲೋಮಪ್ರಮಾಣಾಬ್ದಂ ಮೋದತೇ ವಿಷ್ಣುಮಂದಿರೇ ।
ತತಃ ಪುನರಿಹಾಗತ್ಯ ಸುಖೀ ಚ ಧನವಾನ್ಭವೇತ್ ॥೧೦೪॥
ವಿದ್ವಾನ್ಸುಚಿರಜೀವೀ ಚ ಶ್ರೀಮಾನತುಲವಿಕ್ರಮಃ ।

---

ಪೂಜೆಯನ್ನು ಮಾಡಿ ಅವನು ಬ್ರಹ್ಮನ ಒಂದು ದಿನ ಪ್ರಮಾಣ ಮಣಿದ್ವೀಪ ದಲ್ಲಿದ್ದು ಮತ್ತೆ ಜನ್ಮವನ್ನು ಪಡೆದು ಕವಿಯೂ ಜ್ಞಾನಿಯೂ ಆಗುವನು. ॥೯೮-೯೯॥

ತಾನು ಜೀವಿಸಿರುವವರೆಗೂ ಪ್ರತಿದಿನವೂ ಗೋವನ್ನೂ ಸುವರ್ಣವನ್ನೂ ಯಾವನು ದಾನಮಾಡುವನೋ ಆತನು ಗೋವುಗಳ ಕೂದಲುಗಳ ಸಂಖ್ಯೆಯ ಎರಡರಷ್ಟು ಕಾಲ ವಿಷ್ಣುಲೋಕದಲ್ಲಿ ಸುಖವನ್ನನುಭವಿಸಿ ಮತ್ತೆ ಜನ್ಮವೆತ್ತಿ ಚಕ್ರ ವರ್ತಿಯಾಗಿ ಧನವಂತನೂ ಪುತ್ರವಂತನೂ, ವಿದ್ವಾಂಸನೂ, ಜ್ಞಾನಿಯೂ ಆಗಿ ಸಮಸ್ತ ಸುಖಗಳನ್ನೂ ಅನುಭವಿಸುವನು. ॥೧೦೦-೧೦೧-೧೦೨॥

ಬ್ರಾಹ್ಮಣರಿಗೆ ಮೃಷ್ಟಾನ್ನಭೋಜನವನ್ನು ಮಾಡಿಸುವವನು ಬ್ರಾಹ್ಮಣರ ಲೋಮಗಳ ಸಂಖ್ಯೆಯಷ್ಟು ಕಾಲ ವಿಷ್ಣುಲೋಕದಲ್ಲಿ ಸುಖಿಸಿ ಮತ್ತೆ ಜನ್ಮವನ್ನೆತ್ತಿ ವಿದ್ವಾಂಸನೂ ಶ್ರೀಮಂತನೂ ಪರಾಕ್ರಮಿಯೂ ಸುಖಿಯೂ ಆಗುವನು. ॥೧೦೩-೧೦೪॥

ಯೋ ವಕ್ತಿ ವಾ ದದಾತ್ಯೇವ ಹರೇರ್ನಾಮಾನಿ ಭಾರತೇ ॥೧೦೫॥

ಯುಗಂ ನಾಮಪ್ರಮಾಣಂ ಚ ವಿಷ್ಣುಲೋಕೇ ಮಹೀಯತೇ ।
ತತಃ ಪುನರಿಹಾಗತ್ಯ ಸ ಸುಖೀ ಧನವಾನ್ಭವೇತ್ ॥೧೦೬॥

ಯದಿ ನಾರಾಯಣಕ್ಷೇತ್ರಫಲಂ ಕೋಟಿಗುಣಂ ಭವೇತ್ ।
ನಾಮ್ನಾಂ ಕೋಟಿಂ ಹರೇರ್ಯೋ ಹಿ ಕ್ಷೇತ್ರೇ ನಾರಾಯಣೇ ಜಪೇತ್ ॥

ಸರ್ವಪಾಪವಿನಿರ್ಮುಕ್ತೋ ಜೀವನ್ಮುಕ್ತೋ ಭವೇದ್ಧ್ರುವಂ ।
ನ ಲಭೇತ್ಸ ಪುನರ್ಜನ್ಮ ವೈಕುಂಠೇ ಸ ಮಹೀಯತೇ ॥೧೦೮॥

ಲಭೇದ್ವಿಷ್ಣೋಶ್ಚ ಸಾರೂಪ್ಯಂ ನ ತಸ್ಯ ಪತನಂ ಭವೇತ್ ।
ವಿಷ್ಣುಭಕ್ತಿಂ ಲಭೇತ್ಸೋಽಪಿ ವಿಷ್ಣುಸಾರೂಪ್ಯಮಾಪ್ನುಯಾತ್ ॥೧೦೯॥

ಶಿವಂ ಯಃ ಪೂಜಯೇನ್ನಿತ್ಯಂ ಕೃತ್ವಾ ಲಿಂಗಂ ಚ ಪಾರ್ಥಿವಂ ।
ಯಾವಜ್ಜೀವನಪರ್ಯಂತಂ ಸ ಯಾತಿ ಶಿವಮಂದಿರಂ ॥೧೧೦॥

ಮೃದೋ ರೇಣು ಪ್ರಮಾಣಾಬ್ದಂ ಶಿವಲೋಕೇ ಮಹೀಯತೇ ।
ತತಃ ಪುನರಿಹಾಗತ್ಯ ರಾಜೇಂದ್ರೋ ಭಾರತೇ ಭವೇತ್ ॥೧೧೧॥

---

ಭರತಖಂಡದಲ್ಲಿ ಹರಿನಾಮ ಕೀರ್ತನೆಯನ್ನು ಮಾಡಿದವನು ಬಹುಕಾಲ ವಿಷ್ಣುಲೋಕದಲ್ಲಿದ್ದು ಮತ್ತೆ ಜನ್ಮವೆತ್ತಿ ಧನವಂತನೂ ಸುಖಿಯೂ ಆಗುವನು. ॥೧೦೫-೧೦೬॥

ವಿಷ್ಣುಕ್ಷೇತ್ರದಲ್ಲಿ ಕೋಟಿಹರಿನಾಮ ಜಪವನ್ನು ಮಾಡಿದವನು ಸಮಸ್ತ ಪಾಪಗಳನ್ನೂ ಕಳೆದುಕೊಂಡು ಜೀವನ್ಮುಕ್ತನಾಗುವನು. ಶರೀರವನ್ನು ಬಿಟ್ಟು ವೈಕುಂಠಲೋಕಕ್ಕೆ ಹೋಗಿ ವಿಷ್ಣುಭಕ್ತಿಯಿಂದ ವಿಷ್ಣುಸಾರೂಪ್ಯವನ್ನು ಪಡೆವನು. ಅವನಿಗೆ ಪುನರ್ಜನ್ಮವಿಲ್ಲ. ॥೧೦೭-೧೦೮-೧೦೯॥

ಪ್ರತಿದಿನವೂ ಮಣ್ಣಿನಲ್ಲಿ ಲಿಂಗವನ್ನು ಮಾಡಿ ಪಾರ್ಥಿವಲಿಂಗಪೂಜೆಯನ್ನು ಬದುಕಿರುವವರೆಗೂ ಮಾಡಿದವನು ಮಣ್ಣಿನ ರೇಣುಗಳಷ್ಟು ಕಾಲ ಶಿವಲೋಕದಲ್ಲಿ ಸುಖವನ್ನನುಭವಿಸಿ ಮತ್ತೆ ಭರತಖಂಡದಲ್ಲಿ ಚಕ್ರವರ್ತಿಯಾಗಿ ಜನಿಸುವನು. ॥೧೧೦-೧೧೧॥

ಶಿಲಾಂ ಚ ಪೂಜಯೇನ್ನಿತ್ಯಂ ಶಿಲಾತೋಯಂ ಚ ಭಕ್ಷತಿ ।
ಮಹೀಯತೇ ಚ ವೈಕುಂಠೇ ಯಾವದ್ವೈ ಬ್ರಹ್ಮಣಃ ಶತಂ ॥೧೧೨॥

ತತೋ ಲಬ್ಧ್ವಾ ಪುನರ್ಜನ್ಮ ಹರಿಭಕ್ತಿಂ ಚ ದುರ್ಲಭಾಂ ।
ಮಹೀಯತೇ ವಿಷ್ಣುಲೋಕೇ ನ ತಸ್ಯ ಪತನಂ ಭವೇತ್ ॥೧೧೩॥

ತಪಾಂಸಿ ಚೈವ ಸರ್ವಾಣಿ ವ್ರತಾನಿ ನಿಖಿಲಾನಿ ಚ ।
ಕೃತ್ವಾ ತಿಷ್ಠತಿ ವೈಕುಂಠೇ ಯಾವದಿಂದ್ರಾಶ್ಚತುರ್ದಶ ॥೧೧೪॥

ತತೋ ಲಬ್ಧ್ವಾ ಪುನರ್ಜನ್ಮ ರಾಜೇಂದ್ರೋ ಭಾರತೇ ಭವೇತ್ ।
ತತೋ ಮುಕ್ತೋ ಭವೇತ್ಪಶ್ಚಾತ್ಪುನರ್ಜನ್ಮ ನ ವಿದ್ಯತೇ ॥೧೧೫॥

ಯಃ ಸ್ನಾತ್ವಾ ಸರ್ವತೀರ್ಥೇಷು ಭುವಃ ಕೃತ್ವಾ ಪ್ರದಕ್ಷಿಣಂ ।
ಸ ತು ನಿರ್ವಾಣತಾಂ ಯಾತಿ ನ ತು ಜನ್ಮಭವೇದ್ಭುವಿ ॥೧೧೬॥

ಪುಣ್ಯಕ್ಷೇತ್ರೇ ಭಾರತೇ ಚ ಯೋಽಶ್ವಮೇಧಂ ಕರೋತಿ ಚ ।
ಅಶ್ವಲೋಮಮಿತಾಬ್ದಂ ಚ ಶಕ್ರಸ್ಯಾರ್ಧಾಸನಂ ಭಜೇತ್ ॥೧೧೭॥
ಚತುರ್ಗುಣಂ ರಾಜಸೂಯಫಲಮಾಪ್ನೋತಿ ಮಾನವಃ ।

---

ಪ್ರತಿದಿನವೂ ಸಾಲಿಗ್ರಾಮಶಿಲೆಯನ್ನು ಪೂಜಿಸಿ ತೀರ್ಥವನ್ನು ಕುಡಿದವನು ನೂರುಜನ ಬ್ರಹ್ಮರ ಅಧಿಕಾರ ಮುಗಿಯುವವರೆಗೂ ವೈಕುಂಠದಲ್ಲಿದ್ದು ಸುಖವನ್ನನುಭವಿಸಿ ಮತ್ತೆ ಜನ್ಮವೆತ್ತಿ ಹರಿಭಕ್ತಿಯನ್ನು ಪಡೆದು ವಿಷ್ಣುಲೋಕಕ್ಕೆ ಹೋಗಿ ಪುನರ್ಜನ್ಮವನ್ನು ಹೊಂದುವುದಿಲ್ಲ. ॥೧೧೨-೧೧೩॥

ತಪಸ್ಸುಗಳನ್ನೂ ಸಕಲವ್ರತಗಳನ್ನೂ ಮಾಡಿದವರು ಹದಿನಾಲ್ಕು ಇಂದ್ರರ ಅಧಿಕಾರ ಮುಗಿಯುವವರೆಗೂ ವೈಕುಂಠದಲ್ಲಿದ್ದು ಪುನರ್ಜನ್ಮವನ್ನು ಪಡೆದು ಭರತಖಂಡದಲ್ಲಿ ರಾಜನಾಗಿದ್ದು ಬಳಿಕ ಮುಕ್ತನಾಗುವನು. ಆ ಮೇಲೆ ಅವನಿಗೆ ಪುನರ್ಜನ್ಮವಿಲ್ಲ. ॥೧೧೪-೧೧೫॥

ಸಕಲ ತೀರ್ಥಸ್ನಾನಮಾಡಿದವನೂ ಭೂಪ್ರದಕ್ಷಿಣೆಯನ್ನು ಮಾಡಿದವನೂ ಮೋಕ್ಷವನ್ನು ಹೊಂದುವನು. ಅವನಿಗೆ ಪುನರ್ಜನ್ಮವಿಲ್ಲ. ॥೧೧೬॥

ಭರತಖಂಡದಲ್ಲಿ ಪುಣ್ಯಕ್ಷೇತ್ರದಲ್ಲಿ ಅಶ್ವಮೇಧಯಜ್ಞವನ್ನು ಮಾಡಿದವನು ಆ ಕುದುರೆಯ ಮೈಕೂದಲುಗಳ ಸಂಖ್ಯೆಯಷ್ಟು ವರ್ಷ ದೇವೇಂದ್ರನ ಅರ್ಧಾಸನದಲ್ಲಿರು

ಸರ್ವೇಭ್ಯೋಽಪಿ ಮಖೇಭ್ಯೋಽಹಿ ಪರೋ ದೇವೀಮಖಃ ಸ್ಮೃತಃ ॥೧೧೮॥

ವಿಷ್ಣುನಾ ಚ ಕೃತಃ ಪೂರ್ವಂ ಬ್ರಹ್ಮಣಾ ಚ ವರಾನನೇ ।
ಶಂಕರೇಣ ಮಹೇಶೇನ ತ್ರಿಪುರಾಸುರನಾಶನೇ ॥೧೧೯॥

ಶಕ್ತಿಯಜ್ಞಃ ಪ್ರಧಾನಶ್ಚ ಸರ್ವಯಜ್ಞೇಷು ಸುಂದರಿ ।
ನಾಽನೇನ ಸದೃಶೋ ಯಜ್ಞಸ್ತ್ರಿಷು ಲೋಕೇಷು ವಿದ್ಯತೇ ॥೧೨೦॥

ದಕ್ಷೇಣ ಚ ಕೃತಃ ಪೂರ್ವಂ ಮಹಾನ್ಸಂಭಾರಸಂಯುತಃ ।
ಬಭೂವ ಕಲಹೋ ಯತ್ರ ದಕ್ಷಶಂಕರಯೋಃ ಸತಿ ॥೧೨೧॥

ಶೇಪುಶ್ಚ ನಂದಿನಂ ವಿಪ್ರಾ ನಂದೀ ವಿಪ್ರಾಂಶ್ಚ ಕೋಪತಃ ।
ಯದ್ಧೇತೋರ್ದಕ್ಷಯಜ್ಞಂ ಚ ಬಭಂಜ ಚಂದ್ರಶೇಖರಃ ॥೧೨೨॥

---

ವನು. ರಾಜಸೂಯ ಯಜ್ಞದ ನಾಲ್ಕರಷ್ಟು ಫಲವು ಅಶ್ವಮೇಧಯಜ್ಞಕ್ಕೆ ಬರುವುದು. ॥೧೧೭॥

ಸಮಸ್ತ ಯಜ್ಞಗಳಿಗಿಂತಲೂ ಶ್ರೀಭುವನೇಶ್ವರೀ ಪ್ರೀತ್ಯರ್ಥವಾಗಿ ಮಾಡುವ ಜ್ಯೋತಿಷ್ಟೋಮಾದಿ ಯಜ್ಞಗಳೂ ಕೋಟಿಹೋಮಾದಿಗಳೂ ನವರಾತ್ರೋತ್ಸವಾದಿಗಳೂ ದೇವೀಯಜ್ಞವೆಂಬ ಹೆಸರನ್ನು ಪಡೆದಿರುವುವು. ಆ ದೇವಿಯ ಯಜ್ಞವೇ ಶ್ರೇಷ್ಠವಾದುದು. ಪೂರ್ವದಲ್ಲಿ ವಿಷ್ಣುವೂ ಬ್ರಹ್ಮನೂ ತ್ರಿಪುರಾಸುರಸಂಹಾರಕಾಲದಲ್ಲಿ ಶಿವನೂ ಈ ಯಜ್ಞವನ್ನು ಮಾಡಿದರು. ॥೧೧೮-೧೧೯॥

ಸುಂದರಿಯಾದ ಸಾವಿತ್ರಿಯೇ, ಕೇಳು ಸಮಸ್ತ ಯಜ್ಞಗಳಿಗಿಂತಲೂ ಶಕ್ತಿಯಜ್ಞವು ಮುಖ್ಯವಾದುದು. ಮೂರು ಲೋಕಗಳಲ್ಲಿಯೂ ಇದಕ್ಕೆ ಸಮಾನವಾದ ಯಜ್ಞವು ಇಲ್ಲವು. ಹಿಂದೆ ದಕ್ಷನು ಅನೇಕ ಪದಾರ್ಥಗಳನ್ನು ಸಿದ್ಧಮಾಡಿಕೊಂಡು ದೇವಿಯ ಪ್ರೀತಿಯನ್ನು ಬಿಟ್ಟು ಯಜ್ಞಮಾಡಿದನು. ಆ ಕಾರಣದಿಂದ ಶಿವನಿಗೂ ದಕ್ಷನಿಗೂ ಜಗಳವಾಗಿ ಬ್ರಾಹ್ಮಣರು ನಂದಿಗೂ, ನಂದಿಯು ಬ್ರಾಹ್ಮಣರಿಗೂ ಪರಸ್ಪರ ಶಾಪವನ್ನು ಕೊಟ್ಟರು. ಆ ಕಾರಣದಿಂದ ಶಿವನು ಆ ಯಜ್ಞವನ್ನು ನಾಶಮಾಡಿದನು. ॥೧೨೦-೧೨೧-೧೨೨॥

ಚಕಾರ ದೇವೀಯಜ್ಞಂ ಸ ಪುರಾ ದಕ್ಷಪ್ರಜಾಪತಿಃ ।
ಧರ್ಮಶ್ಚ ಕಶ್ಯಪಶ್ಚೈವ ಶೇಷಶ್ಚಾಪಿ ಚ ಕರ್ದಮಃ ॥೧೨೩॥

ಸ್ವಾಯಂಭುವೋ ಮನುಶ್ಚೈವ ತತ್ಪುತ್ರಶ್ಚ ಪ್ರಿಯವ್ರತಃ ।
ಶಿವಃ ಸನತ್ಕುಮಾರಶ್ಚ ಕಪಿಲಶ್ಚ ಧ್ರುವಸ್ತಥಾ ॥೧೨೪॥

ರಾಜಸೂಯಸಹಸ್ರಾಣಾಂ ಫಲಮಾಪ್ನೋತಿ ನಿಶ್ಚಿತಂ ।
ದೇವೀಯಜ್ಞಾತ್ಪರೋ ಯಜ್ಞೋ ನಾಸ್ತಿ ವೇದೇ ಫಲಪ್ರದಃ ॥೧೨೫॥

ವರ್ಷಾಣಾಂ ಶತಜೀವೀ ಚ ಜೀವನ್ಮುಕ್ತೋ ಭವೇದ್ಧ್ರುವಂ ।
ಜ್ಞಾನೇನ ತೇಜಸಾ ಚೈವ ವಿಷ್ಣುತುಲ್ಯೋ ಭವೇದಿಹ ॥೧೨೬॥

ದೇವಾನಾಂ ಚ ಯಥಾ ವಿಷ್ಣುರ್ವೈಷ್ಣವಾನಾಂ ಚ ನಾರದಃ ।
ಶಾಸ್ತ್ರಾಣಾಂ ಚ ಯಥಾ ವೇದಾ ವರ್ಣಾನಾಂ ಬ್ರಾಹ್ಮಣೋ ಯಥಾ॥೧೨೭॥

ತೀರ್ಥಾನಾಂ ಚ ಯಥಾ ಗಂಗಾ ಪವಿತ್ರಾಣಾಂ ಶಿವೋ ಯಥಾ ।
ಏಕಾದಶೀ ವ್ರತಾನಾಂ ಚ ಪುಷ್ಪಾಣಾಂ ತುಲಸೀ ಯಥಾ ॥೧೨೮॥

---

ಬಳಿಕ ದಕ್ಷಪ್ರಜಾಪತಿಯು ದೇವೀಯಜ್ಞವನ್ನು ಮಾಡಿದನು. ಆಮೇಲೆ ಧರ್ಮನೂ ಕಶ್ಯಪನೂ, ಆದಿಶೇಷನೂ, ಕರ್ದಮನೂ, ಸ್ವಾಯಂಭುವ ಮನುವೂ, ಅವನ ಮಗ ಪ್ರಿಯವ್ರತನೂ, ಶಿವನೂ, ಸನತ್ಕುಮಾರನೂ, ಕಪಿಲನೂ ದೇವೀ ಯಜ್ಞವನ್ನು ಮಾಡಿದರು. ॥೧೨೩-೧೨೪॥

ಸಾವಿರ ರಾಜಸೂಯ ಯಜ್ಞದ ಫಲವು ಒಂದು ದೇವೀಯಜ್ಞಕ್ಕೆ ಬರುವುದು. ದೇವೀಯಜ್ಞಕ್ಕಿಂತ ಉತ್ತಮಫಲವನ್ನುಂಟುಮಾಡುವ ಯಾಗವು ವೇದದಲ್ಲಿ ಮತ್ತೊಂದಿಲ್ಲ. ಈ ಯಜ್ಞವನ್ನು ಮಾಡಿದವನು ನೂರುವರ್ಷ ಜೀವಿಸಿದ್ದು ಜೀವನ್ಮುಕ್ತನಾಗಿರುವನು. ಅವನು ಜ್ಞಾನದಿಂದಲೂ ತೇಜಸ್ಸಿನಿಂದಲೂ ವಿಷ್ಣುವಿಗೆ ಸಮನಾಗಿರುವನು. ॥೧೨೫-೧೨೬॥

ತೇಜೋವತಿಯೂ ಮಗಳಂತೆ ಪ್ರೀತಿಪಾತ್ರಳೂ ಆದ ಸಾವಿತ್ರಿಯೇ, ಕೇಳು. ದೇವತೆಗಳಲ್ಲಿ ವಿಷ್ಣುವೂ, ವಿಷ್ಣುಭಕ್ತರಲ್ಲಿ ನಾರದನೂ, ಶಾಸ್ತ್ರಗಳಲ್ಲಿ ವೇದವೂ, ವರ್ಣಗಳಲ್ಲಿ ಬ್ರಾಹ್ಮಣವರ್ಣವೂ, ತೀರ್ಥಗಳಲ್ಲಿ ಗಂಗೆಯೂ, ಪರಿಶುದ್ಧರಾದವರಲ್ಲಿ

ನಕ್ಷತ್ರಾಣಾಂ ಯಥಾ ಚಂದ್ರಃ ಪಕ್ಷಿಣಾಂ ಗರುಡೋ ಯಥಾ ।
ಯಥಾ ಸ್ತ್ರೀಣಾಂ ಚ ಪ್ರಕೃತೀ ರಾಧಾ ವಾಣೀ ವಸುಂಧರಾ ॥೧೨೯॥

ಶೀಘ್ರಾಣಾಂ ಚೇಂದ್ರಿಯಾಣಾಂ ಚ ಚಂಚಲಾನಾಂ ಮನೋ ಯಥಾ ।
ಪ್ರಜಾಪತೀನಾಂ ಬ್ರಹ್ಮಾ ಚ ಪ್ರಜಾನಾಂ ಚ ಪ್ರಜಾಪತಿಃ ॥೧೩೦॥

ವೃಂದಾವನಂ ವನಾನಾಂ ಚ ವರ್ಷಾಣಾಂ ಭಾರತಂ ಯಥಾ ।
ಶ್ರೀಮತಾಂ ಚ ಯಥಾ ಶ್ರೀಶ್ಚ ವಿದುಷಾಂ ಚ ಸರಸ್ವತೀ ॥೧೩೧॥

ಪತಿವ್ರತಾನಾಂ ದುರ್ಗಾ ಚ ಸೌಭಾಗ್ಯಾನಾಂ ಚ ರಾಧಿಕಾ ।
ದೇವೀಯಜ್ಞಸ್ತಥಾ ವತ್ಸೇ ಸರ್ವಯಜ್ಞೇಷು ಭಾಮಿನಿ ॥೧೩೨॥

ಅಶ್ವಮೇಧಶತೇನೈವ ಶಕ್ರತ್ವಂ ಚ ಲಭೇದ್ಧ್ರುವಂ ।
ಸಹಸ್ರೇಣ ವಿಷ್ಣುಪದಂ ಸಂಪ್ರಾಪ್ತಃ ಪೃಥುರೇವ ಚ ॥೧೩೩॥

ಸ್ನಾನಂ ಚ ಸರ್ವತೀರ್ಥಾನಾಂ ಸರ್ವಯಜ್ಞೇಷು ದೀಕ್ಷಣಂ ।
ಸರ್ವೇಷಾಂ ಚ ವ್ರತಾನಾಂ ಚ ತಪಸಾಂ ಫಲಮೇವ ಚ ॥೧೩೪॥

---

ಶಿವನೂ, ವ್ರತಗಳಲ್ಲಿ ಏಕಾದಶಿಯೂ, ಹೂಗಳಲ್ಲಿ ತುಲಸಿಯೂ, ನಕ್ಷತ್ರಗಳಲ್ಲಿ ಚಂದ್ರನೂ, ಪಕ್ಷಿಗಳಲ್ಲಿ ಗರುಡನೂ, ಸ್ತ್ರೀಯರಲ್ಲಿ ಮೂಲಪ್ರಕೃತಿಯೂ, ಸರಸ್ವತೀ, ಭೂದೇವಿಯರೂ, ವೇಗವೂ, ಚಟುವಟಿಕೆಯೂಉಳ್ಳ ಇಂದ್ರಿಯಗಳಲ್ಲಿ ಮನಸ್ಸೂ, ಸೃಷ್ಟಿಕಾರ್ಯವನ್ನು ಮಾಡುವ ಪ್ರಜಾಪತಿಗಳಲ್ಲಿ ಬ್ರಹ್ಮನೂ, ಪ್ರಜೆಗಳಲ್ಲಿ ನರಪತಿಯೂ, ವನಗಳಲ್ಲಿ ವೃಂದಾವನವೂ, ವರ್ಷಗಳಲ್ಲಿ ಭಾರತವರ್ಷವೂ, ಶ್ರೀಮಂತರಲ್ಲಿ ಲಕ್ಷ್ಮಿಯೂ, ಜ್ಞಾನಿಗಳಲ್ಲಿ ಸರಸ್ವತಿಯೂ, ಪತಿವ್ರತೆಯರಲ್ಲಿ ಪಾರ್ವತಿಯೂ, ಸೌಭಾಗ್ಯವತಿಯರಲ್ಲಿ ರಾಧೆಯೂ, ಹೇಗೆ ಶ್ರೇಷ್ಠರೋ, ಹಾಗೆ ಸಮಸ್ತ ಯಜ್ಞಗಳಿಗಿಂತಲೂ ದೇವೀಯಜ್ಞವು ಶ್ರೇಷ್ಠವಾದುದು. ॥೧೨೭-೧೨೮-೧೨೯-೧೩೦-೧೩೧-೧೩೨॥

ನೂರು ಅಶ್ವಮೇಧಯಜ್ಞಗಳನ್ನು ಮಾಡಿದರೆ ಇಂದ್ರಪದವಿಯು ಬರುವುದು. ಸಾವಿರ ಅಶ್ವಮೇಧ ಯಜ್ಞಗಳನ್ನು ಮಾಡಿ ಪೃಥುಚಕ್ರವರ್ತಿಯು ವಿಷ್ಣುಸ್ಥಾನವನ್ನು ಪಡೆದನು. ॥೧೩೩॥

ಸಕಲ ತೀರ್ಥಗಳ ಸ್ನಾನವೂ ಸಕಲ ಯಜ್ಞಗಳಲ್ಲಿ ದೀಕ್ಷಿತನಾಗುವುದೂ, ಸಮಸ್ತ ವ್ರತ ಮತ್ತು ತಪಸ್ಸುಗಳನ್ನು ಮಾಡುವುದೂ, ವೇದಗಳನ್ನು ಓದುವುದೂ,

ಪಾತೇ ಚತುರ್ಣಾಂ ವೇದಾನಾಂ ಪ್ರಾದಕ್ಷಿಣ್ಯಂ ಭುವಸ್ತಥಾ ।
ಫಲಭೂತಮಿದಂ ಸರ್ವಂ ಮುಕ್ತಿದಂ ಶಕ್ತಿಸೇವನಂ ॥೧೩೫॥

ಪುರಾಣೇಷು ಚ ವೇದೇಷು ಚೇತಿಹಾಸೇಷು ಸರ್ವತಃ ।
ನಿರೂಪಿತಂ ಸಾರಭೂತಂ ದೇವೀಪಾದಾಂಬುಜಾರ್ಚನಂ ॥೧೩೬॥

ತದ್ವರ್ಣನಂ ಚ ತದ್ಧ್ಯಾನಂ ತನ್ನಾಮಗುಣಕೀರ್ತನಂ ।
ತತ್ಸ್ತೋತ್ರ ಸ್ಮರಣಂ ಚೈವ ವಂದನಂ ಜಪಮೇವ ಚ ॥೧೩೭॥

ತತ್ಪಾದೋದಕನೈವೇದ್ಯಭಕ್ಷಣಂ ನಿತ್ಯಮೇವ ಚ ।
ಸರ್ವಸಂಮತಮಿತ್ಯೇವಂ ಸರ್ವೇಪ್ಸಿತಮಿದಂ ಸತಿ ॥೧೩೮॥

ಭಜ ನಿತ್ಯಂ ಪರಂ ಬ್ರಹ್ಮ ನಿರ್ಗುಣಂ ಪ್ರಕೃತಿಂ ಪರಾಂ ।
ಗೃಹಾಣ ಸ್ವಾಮಿನಂ ವತ್ಸೇ ಸುಖಂ ವಸ ಚ ಮಂದಿರೇ ॥೧೩೯॥

ಅಯಂ ತೇ ಕಥಿತಃ ಕರ್ಮವಿಪಾಕೋ ಮಂಗಲೋ ನೃಣಾಂ ।
ಸರ್ವೇಪ್ಸಿತಃ ಸರ್ವಮತಸ್ತತ್ತ್ವಜ್ಞಾನಪ್ರದಃ ಪರಃ ॥೧೪೦॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ನವಮಸ್ಕಂಧೇ
ತ್ರಿಂಶೋಽಧ್ಯಾಯಃ

---

ಭೂಪ್ರದಕ್ಷಿಣೆಯನ್ನು ಮಾಡುವುದೂ ಈ ಎಲ್ಲದರಿಂದಲೂ ಬರುವ ಪುಣ್ಯಗಳ ಫಲವಾದುದರಿಂದ ಈ ಶಕ್ತಿದೇವಿಯ ಪೂಜೆ ಮುಂತಾದುವುಗಳಿಂದ ಬರುವ ಪುಣ್ಯವು ಶ್ರೇಷ್ಠವೂ ಮುಕ್ತಿಯನ್ನು ಕೊಡತಕ್ಕುದೂ ಆಗಿರುವುದು. ॥೧೩೪-೧೩೫॥

ಸಮಸ್ತ ವೇದ, ಪುರಾಣ, ಇತಿಹಾಸಗಳಲ್ಲಿ ದೇವೀಪಾದಕಮಲಪೂಜೆಯೇ ಶ್ರೇಷ್ಠವೆಂದು ಹೇಳಿರುವುದು. ದೇವಿಯ ವರ್ಣನೆ, ಧ್ಯಾನ, ನಾಮ ಗುಣಗಳ ಕೀರ್ತನೆ, ಸ್ತೋತ್ರ, ಸ್ಮರಣೆ, ನಮಸ್ಕಾರ, ಜಪ, ಪಾದೋದಕ ಪಾನ, ನೈವೇದ್ಯಗಳ ಭಕ್ಷಣಇವುಗಳು ಪ್ರತಿದಿನವೂ ನಡೆದರೆ ಸರ್ವರಿಗೂ ಒಪ್ಪಿಗೆಯಾಗಿಯೂ ಸಕಲರಿಗೂ ಇಷ್ಟವಾದುದಾಗಿಯೂ ಇರುವುದು. ॥೧೩೬-೧೩೭-೧೩೮॥

ಮಗಳೇ, ಪ್ರತಿದಿನವೂ ನಿರ್ಗುಣವಾದ ಶ್ರೇಷ್ಠವಾದ ಪರಬ್ರಹ್ಮಸ್ವರೂಪವನ್ನೂ, ಮಾಯಾವಿಶಿಷ್ಟಬ್ರಹ್ಮರೂಪಿಣಿಯಾದ ಮೂಲಪ್ರಕೃತಿಯನ್ನು ಸೇವಿಸು. ನಿನ್ನ ಪತಿ

ಯನ್ನು ಕೊಡುವೆನು. ತೆಗೆದುಕೋ! ಮನೆಯಲ್ಲಿ ಸುಖವಾಗಿ ವಾಸಮಾಡು. ಮಂಗಲಕರವಾದ ಈ ಕರ್ಮವಿಪಾಕವನ್ನು ನಿನಗೆ ಹೇಳಿರುವೆನು. ಇದು ಎಲ್ಲರಿಗೂ ಒಪ್ಪಿಗೆಯಾದುದು. ಸಕಲ ಇಷ್ಟಾರ್ಥಗಳನ್ನೂ ಕೊಡತಕ್ಕುದು. ಅಲ್ಲದೆ ತತ್ವಜ್ಞಾನವನ್ನೂ ಉಂಟುಮಾಡುವುದು. ಅತ್ಯಂತ ಶ್ರೇಷ್ಠವಾದುದು. ||೧೩೯-೧೪೦||

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಒಂಬತ್ತನೆಯ ಸ್ಕಂಧದಲ್ಲಿ
ಮೂವತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ನವಮಸ್ಕಂಧೇ

### ॥ ಏಕತ್ರಿಂಶೋಽಧ್ಯಾಯಃ ॥

### ಮೂವತ್ತೊಂದನೆಯ ಅಧ್ಯಾಯವು

॥ ಶ್ರೀನಾರಾಯಣ ಉವಾಚ ॥

**ಶಕ್ತೇರುತ್ಕೀರ್ತನಂ ಶ್ರುತ್ವಾ ಸಾವಿತ್ರೀ ಯಮವಕ್ತ್ರತಃ ।**
**ಸಾಶ್ರುನೇತ್ರಾ ಸಪುಲಕಾ ಯಮಂ ಪುನರುವಾಚ ಸಾ ॥೧॥**

॥ ಸಾವಿತ್ರ್ಯುವಾಚ ॥

**ಶಕ್ತೇರುತ್ಕೀರ್ತನಂ ಧರ್ಮ ಸಕಲೋದ್ಧಾರಕಾರಣಂ ।**
**ಶ್ರೋತೄಣಾಂ ಚೈವ ವಕ್ತೄಣಾಂ ಜನ್ಮಮೃತ್ಯುಜರಾಹರಂ ॥೨॥**

**ದಾನವಾನಾಂ ಚ ಸಿದ್ಧಾನಾಂ ತಪಸಾಂ ಚ ಪರಂ ಪದಂ ।**
**ಯೋಗಾನಾಂ ಚೈವ ವೇದಾನಾಂ ಕೀರ್ತನಂ ಸೇವನಂ ವಿಭೋಃ॥೩॥**

---

ನಾರಾಯಣನು ಹೇಳಿದನು—ಸಾವಿತ್ರಿಯು ಯಮನು ಹೇಳಿದ ಶಕ್ತಿ ದೇವಿಯ ಮಹಿಮೆಯನ್ನು ಕೇಳಿ ಮೈಯೆಲ್ಲವೂ ರೋಮಾಂಚಿತವಾಗಿ, ಭಕ್ತ್ಯತಿಶಯ ದಿಂದ ಉಂಟಾದ ಆನಂದಬಾಷ್ಪವು ಉಕ್ಕಿ ಬರುತ್ತಿರಲು ಯಮನನ್ನು ಕುರಿತು ಮತ್ತೆ ಹೇಳಿದಳು. ॥೧॥

ಸಾವಿತ್ರಿಯು ಹೇಳಿದಳು—ಧರ್ಮರಾಜನೇ, ಮೂಲಪ್ರಕೃತಿಯ ಮಹಿಮೆ ಯನ್ನು ಹೇಳುವುದು ಸಕಲರನ್ನೂ ಉದ್ಧಾರಮಾಡುವುದಕ್ಕೆ ಕಾರಣವಾಗುವುದು. ಕೇಳುವವರಿಗೂ ಹೇಳುವವರಿಗೂ ಹುಟ್ಟು, ಸಾವು, ಮುಪ್ಪುಗಳನ್ನು ನಾಶಮಾಡು ವುದು. ದಾನವರೂ ಸಿದ್ಧರೂ ಮಾಡುವ ತಪಸ್ಸಿಗೆ ಫಲರೂಪವಾದ ಸ್ಥಾನಪ್ರಾಪಕ

**ಮುಕ್ತಿತ್ವಮಮರತ್ವಂ ಚ ಸರ್ವಸಿದ್ಧಿತ್ವಮೇವ ಚ ।**
**ಶ್ರೀಶಕ್ತಿಸೇವಕಸ್ಯೈವ ಕಲಾಂ ನಾರ್ಹಂತಿ ಷೋಡಶೀಂ ॥೪॥**

**ಭಜಾಮಿ ಕೇನ ವಿಧಿನಾ ವದ ವೇದವಿದಾಂ ವರ ।**
**ಶುಭಕರ್ಮವಿಪಾಕಂ ಚ ಶ್ರುತಂ ನೃಣಾಂ ಮನೋಹರಂ ॥೫॥**

**ಕರ್ಮಾಶುಭವಿಪಾಕಂ ಚ ತನ್ಮೇ ವ್ಯಾಖ್ಯಾತುಮರ್ಹಸಿ ।**
**ಇತ್ಯುಕ್ತ್ವಾ ಚ ಸತೀ ಬ್ರಹ್ಮನ್ಭಕ್ತಿನಮ್ರಾತ್ಮಕಂಧರಾ ॥೬॥**

**ತುಷ್ಟಾವ ಧರ್ಮರಾಜಂ ಚ ವೇದೋಕ್ತೇನ ಸ್ತವೇನ ಚ ।**

॥ ಸಾವಿತ್ರ್ಯುವಾಚ ॥

**ತಪಸಾ ಧರ್ಮಮಾರಾಧ್ಯ ಪುಷ್ಕರೇ ಭಾಸ್ಕರಃ ಪುರಾ ॥೭॥**
**ಧರ್ಮಂ ಸೂರ್ಯಃ ಸುತಂ ಪ್ರಾಪ ಧರ್ಮರಾಜಂ ನಮಾಮ್ಯಹಂ ।**

---

ವಾಗಿರುವುದು. ಶಕ್ತಿದೇವಿಯ ಕೀರ್ತನೆಯಿಂದ ಯೋಗಾಭ್ಯಾಸವನ್ನೂ ಮಾಡಿದಂತಾಗುವುದು. ॥೨-೩॥

ಮೋಕ್ಷಯೋಗ್ಯತೆಯೂ ದೇವತ್ವವೂ ಸಮಸ್ತಸಿದ್ಧಿಗಳನ್ನು ಪಡೆಯುವ ಸಾಮರ್ಥ್ಯವೂ ಶಕ್ತಿದೇವಿಯನ್ನು ಪೂಜಿಸುವವನ ಮಹಿಮೆಯಲ್ಲಿ ಹದಿನಾರನೆಯ ಒಂದು ಭಾಗಕ್ಕೆ ಸಮವಾಗಲಾರದು. ಹೆಚ್ಚು ಹೇಳುವುದೇನು ? ದೇವಿಯ ಭಕ್ತನಿಗೆ ಸಮವಾದವರು ಇಲ್ಲವೇ ಇಲ್ಲ! ಎಂದು ಭಾವವು. ॥೪॥

ವೇದವನ್ನು ತಿಳಿದವರಲ್ಲಿ ಶ್ರೇಷ್ಠನಾದ ಧರ್ಮರಾಜನೇ, ಯಾವ ನಿಯಮದಿಂದ ದೇವಿಯನ್ನು ಪೂಜಿಸಲಿ. ಅದನ್ನು ಹೇಳು. ಕೇಳುವುದಕ್ಕೆ ಇಂಪಾದ ಶುಭಕರ್ಮವಿಪಾಕವನ್ನು ಕೇಳಿದೆನು. ಅಶುಭಕರ್ಮವಿಪಾಕವನ್ನೂ ವಿಸ್ತಾರವಾಗಿ ವಿವರಿಸು. ॥೫॥

ನಾರದನೇ ಕೇಳು, ಪತಿವ್ರತೆಯಾದ ಸಾವಿತ್ರಿಯು ಹೀಗೆಂದು ಹೇಳಿ ಭಕ್ತಿಯಿಂದ ತನ್ನ ಕುತ್ತಿಗೆಯನ್ನು ಬಗ್ಗಿಸಿಕೊಂಡು ಧರ್ಮರಾಜನನ್ನು ವೇದೋಕ್ತವಾದ ಸ್ತೋತ್ರದಿಂದ ಧ್ಯಾನಮಾಡಿ ಸ್ತುತಿಸಿದಳು. ಹೇಗೆಂದರೆ– ॥೬॥

ಸಾವಿತ್ರಿಯು ಹೇಳಿದಳು—ಪೂರ್ವದಲ್ಲಿ ಸೂರ್ಯನು ಪುಷ್ಕರಕ್ಷೇತ್ರದಲ್ಲಿ ತಪಸ್ಸುಮಾಡಿ ಧರ್ಮದೇವನನ್ನು ಪೂಜಿಸಿ ಆ ದೇವನ ಅಂಶವುಳ್ಳ ಯಾವ ಮಗನನ್ನು ಪಡೆದನೋ, ಆ ಧರ್ಮರಾಜನನ್ನು ನಮಸ್ಕರಿಸುವೆನು. ॥೭॥

ಸಮತಾ ಸರ್ವಭೂತೇಷು ಯಸ್ಯ ಸರ್ವಸ್ಯ ಸಾಕ್ಷಿಣಃ ॥೮॥

ಅತೋ ಯನ್ನಾಮ ಶಮನಮಿತಿ ತಂ ಪ್ರಣಮಾಮ್ಯಹಂ ।
ಯೇನಾಂತಶ್ಚ ಕೃತೋ ವಿಶ್ವೇ ಸರ್ವೇಷಾಂ ಜೀವಿನಾಂ ಪರಂ ॥೯॥

ಕಾಮಾನುರೂಪಂ ಕಾಲೇನ ತಂ ಕೃತಾಂತಂ ನಮಾಮ್ಯಹಂ ।
ಬಿಭರ್ತಿ ದಂಡಂ ದಂಡಾಯ ಪಾಪಿನಾಂ ಶುದ್ಧಿಹೇತವೇ ॥೧೦॥

ನಮಾಮಿ ತಂ ದಂಡಧರಂ ಯಃ ಶಾಸ್ತಾ ಸರ್ವಜೀವಿನಾಂ ।
ವಿಶ್ವಂ ಚ ಕಲಯತ್ಯೇವ ಯಃ ಸರ್ವೇಷು ಚ ಸಂತತಂ ॥೧೧॥

ಅತೀವ ದುರ್ನಿವಾರ್ಯಂ ಚ ತಂ ಕಾಲಂ ಪ್ರಣಮಾಮ್ಯಹಂ ।
ತಪಸ್ವೀ ಬ್ರಹ್ಮನಿಷ್ಠೋ ಯಃ ಸಂಯಮೀ ಸಂ ಜಿತೇಂದ್ರಿಯಃ ॥೧೨॥
ಜೀವಾನಾಂ ಕರ್ಮಫಲದಸ್ತಂ ಯಮಂ ಪ್ರಣಮಾಮ್ಯಹಂ ।

---

ಸಮಸ್ತ ಪ್ರಾಣಿಗಳಲ್ಲಿಯೂ ಸಮಾನಭಾವದಿಂದ ಇದ್ದು ಅವರು ಮಾಡುವ ಕರ್ಮಗಳಿಗೆ ಸಾಕ್ಷಿಸ್ವರೂಪನಾಗಿ ಶಮನನೆಂಬ ಹೆಸರನ್ನು ಪಡೆದ ಧರ್ಮರಾಜನನ್ನು ನಮಸ್ಕರಿಸುವೆನು. ॥೮॥

ಪ್ರಪಂಚದಲ್ಲಿ ಸಮಸ್ತ ಪ್ರಾಣಿಗಳಿಗೂ ಅವರ ಇಚ್ಛಾನುಸಾರವಾಗಿ ಮಾಡಿದ ಕರ್ಮವು ಫಲಿಸುವ ಕಾಲಕ್ಕೆ ಸರಿಯಾಗಿ ಅವರ ಆಯುಸ್ಸನ್ನು ಕೊನೆಗಾಣಿಸುವುದರಿಂದ ಕೃತಾಂತನೆಂಬ ಹೆಸರನ್ನು ಪಡೆದ ಧರ್ಮರಾಜನನ್ನು ನಮಸ್ಕರಿಸುವೆನು. ॥೯॥

ಪಾಪಿಗಳನ್ನು ಪಾಪಗಳಿಂದ ಬಿಡಿಸಿ ಶುದ್ಧಿಮಾಡುವುದಕ್ಕೋಸ್ಕರ ಅವರನ್ನು ದಂಡಿಸಲು ದಂಡವನ್ನು ಧರಿಸಿರುವುದರಿಂದ ದಂಡಧರನೆಂಬ ಹೆಸರನ್ನು ಹೊಂದಿ ಸಮಸ್ತ ಪ್ರಾಣಿಗಳನ್ನೂ ಸನ್ಮಾರ್ಗದಲ್ಲಿ ನಡೆಸುವ ಧರ್ಮರಾಜನನ್ನು ನಮಸ್ಕರಿಸುವೆನು. ॥೧೦॥

ಸಮಸ್ತ ಪ್ರಾಣಿಗಳಿಗೂ ಅವರ ಕರ್ಮಾನುಸಾರವಾಗಿ ಫಲವಾಗಬೇಕಾದ ಕಾಲಕ್ಕೆ ಸರಿಯಾಗಿ ಫಲದ ಸಂಬಂಧವನ್ನು ಉಂಟುಮಾಡುವ ಅನಿವಾರ್ಯವಾದ ಕೆಲಸವುಳ್ಳ ಕಾಲನೆಂಬ ಹೆಸರನ್ನು ಪಡೆದ ಧರ್ಮರಾಜನನ್ನು ನಮಸ್ಕರಿಸುವೆನು.॥೧೧॥

ಇಂದ್ರಿಯನಿಗ್ರಹದ ಅಭ್ಯಾಸವನ್ನು ಮಾಡಿ ಸಂಪೂರ್ಣವಾಗಿ ಆ ಇಂದ್ರಿಯಗಳನ್ನು ಜಯಿಸಿ ತಪಸ್ಸುಮಾಡಿ ಬ್ರಹ್ಮಜ್ಞಾನಸಂಪನ್ನರಾಗಿರುವ ಜೀವರುಗಳಿಗೆ ಕರ್ಮಫಲ

ಸ್ವಾತ್ಮಾರಾಮಶ್ಚ ಸರ್ವಜ್ಞೋ ಮಿತ್ರಂ ಪುಣ್ಯಕೃತಾಂ ಭವೇತ್ ॥೧೩॥

ಪಾಪಿನಾಂ ಕ್ಲೇಶದೋ ಯಸ್ತಂ ಪುಣ್ಯಮಿತ್ರಂ ನಮಾಮ್ಯಹಂ ।
ಯಜ್ಜನ್ಮ ಬ್ರಹ್ಮಣೋಽಂಶೇನ ಜ್ವಲಂತಂ ಬ್ರಹ್ಮತೇಜಸಾ ॥೧೪॥

ಯೋ ಧ್ಯಾಯತಿ ಪರಂ ಬ್ರಹ್ಮ ತಮೀಶಂ ಪ್ರಣಮಾಮ್ಯಹಂ ।
ಇತ್ಯುಕ್ತ್ವಾ ಸಾ ಚ ಸಾವಿತ್ರೀ ಪ್ರಣನಾಮ ಯಮಂ ಮುನೇ ॥೧೫॥

ಯಮಸ್ತಾಂ ಶಕ್ತಿಭಜನಂ ಕರ್ಮಪಾಕಮುವಾಚ ಹ ।
ಇದಂ ಯಮಾಷ್ಟಕಂ ನಿತ್ಯಂ ಪ್ರಾತರುತ್ಥಾಯ ಯಃ ಪಠೇತ್ ॥೧೬॥

ಯಮಾತ್ತಸ್ಯ ಭಯಂ ನಾಸ್ತಿ ಸರ್ವಪಾಪಾತ್ಪ್ರಮುಚ್ಯತೇ ।
ಮಹಾಪಾಪೀ ಯದಿ ಪಠೇನ್ನಿತ್ಯಂ ಭಕ್ತಿಸಮನ್ವಿತಃ ॥೧೭॥
ಯಮಃ ಕರೋತಿ ಸಂಶುದ್ಧಂ ಕಾಯವ್ಯೂಹೇನ ನಿಶ್ಚಿತಂ ।

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ನವಮಸ್ಕಂಧೇ
ಏಕತ್ರಿಂಶೋಽಧ್ಯಾಯಃ

---

ಗಳನ್ನು ಕೊಡುತ್ತಾ ಅವರನ್ನು ಸನ್ಮಾರ್ಗದಲ್ಲಿ ನಡೆಸುವ ಯಮನನ್ನು ನಮಸ್ಕರಿಸುವೆನು. ॥೧೨॥

ಸರ್ವಜ್ಞನಾಗಿ ಆತ್ಮಜ್ಞಾನದಿಂದ ಸಂತೋಷಪಡುತ್ತಿರುವ ಪುಣ್ಯವಂತರಿಗೆ ಸ್ನೇಹಿತನೂ ಪಾಪಿಗಳಿಗೆ ದುಃಖವನ್ನು ಕೊಡತಕ್ಕವನೂ ಆದ, ಪುಣ್ಯಕ್ಕೆ ಮಿತ್ರನಾದ ಯಮಧರ್ಮರಾಜನನ್ನು ನಮಸ್ಕರಿಸುವೆನು, ॥೧೩॥

ಯಾವ ದೇವನು ಪರಬ್ರಹ್ಮನ ಅಂಶದಿಂದ ಜನಿಸಿ ಆ ಬ್ರಹ್ಮನ ತೇಜಸ್ಸಿನಿಂದ ಪ್ರಕಾಶಿಸುತ್ತಾ ಆ ಬ್ರಹ್ಮನನ್ನೇ ಧ್ಯಾನಮಾಡುತ್ತಿರುವನೋ ಆ ಧರ್ಮದೇವನನ್ನು ನಮಸ್ಕರಿಸುವೆನು. ॥೧೪॥

ನಾರದಮುನಿಯೇ ಕೇಳು, ಸಾವಿತ್ರಿಯು ಹೀಗೆ ಸ್ತೋತ್ರಮಾಡಿ ಯಮನಿಗೆ ನಮಸ್ಕಾರಮಾಡಿದಳು. ಯಮನು ಆ ಸಾವಿತ್ರಿಗೆ ಮೂಲಪ್ರಕೃತಿಯ ಮಂತ್ರವನ್ನೂ ಉಪದೇಶಿಸಿ, ಆ ಶುಭಕರ್ಮವಿಪಾಕವನ್ನೂ ವಿವರಿಸಿ ಹೇಳಿದನು. ॥೧೫॥

ಈ ಯಮಾಷ್ಟಕವನ್ನು ಪ್ರತಿದಿನವೂ ಪ್ರಾತಃಕಾಲದಲ್ಲಿ ಎದ್ದು ಯಾರು ಹೇಳುವರೋ ಅವರು ಯಮನ ಭಯವಿಲ್ಲದೆ ಸಮಸ್ತ ಪಾಪಗಳಿಂದಲೂ ಬಿಡುಗಡೆ

ಯನ್ನು ಹೊಂದುವರು. ಮಹಾಪಾಪಿಯಾದವನೂ ಕೂಡ ಪ್ರತಿದಿನವೂ ಭಕ್ತಿಯಿಂದ ಈ ಸ್ತೋತ್ರವನ್ನು ಪಠನ ಮಾಡಿದರೆ ಯಮನು ಅವನನ್ನು ಪರಿಶುದ್ಧನನ್ನಾಗಿ ಮಾಡುವನು. ||೧೬-೧೭||

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಒಂಬತ್ತನೆಯ ಸ್ಕಂಧದಲ್ಲಿ
ಮೂವತ್ತೊಂದನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ನವಮಸ್ಕಂಧೇ

### || ದ್ವಾತ್ರಿಂಶೋಽಧ್ಯಾಯಃ ||

### ಮೂವತ್ತೆರಡನೆಯ ಅಧ್ಯಾಯವು

|| ಶ್ರೀನಾರಾಯಣ ಉವಾಚ ||

**ಮಾಯಾಬೀಜಂ ಮಹಾಮಂತ್ರಂ ಪ್ರದತ್ವಾ ವಿಧಿಪೂರ್ವಕಂ ।**
**ಕರ್ಮಾಶುಭವಿಪಾಕಂ ಚ ತಾಮುವಾಚ ರವೇಃ ಸುತಃ ||೧||**

|| ಧರ್ಮರಾಜ ಉವಾಚ ||

**ಶುಭಕರ್ಮವಿಪಾಕಾನ್ನ ನರಕಂ ಯಾತಿ ಮಾನವಃ ।**
**ಕರ್ಮಾಶುಭವಿಪಾಕಂ ಚ ಕಥಯಾಮಿ ನಿಶಾಮಯ ||೨||**

**ನಾನಾ ಪುರಾಣ ಭೇದೇನ ಸಾಮಭೇದೇನ ಭಾಮಿನಿ ।**
**ನಾನಾಪ್ರಕಾರಂ ಸ್ವರ್ಗಂ ಚ ಯಾತಿ ಜೀವಃ ಸ್ವಕರ್ಮಭಿಃ ||೩||**

---

ನಾರಾಯಣನು ಹೇಳಿದನು--ಸೂರ್ಯಪುತ್ರನಾದ ಯಮಧರ್ಮರಾಜನು ಸಾವಿತ್ರೀದೇವಿಗೆ ಮೂಲಪ್ರಕೃತಿಯಾದ ಭುವನೇಶ್ವರೀದೇವಿಯ ಮಾಯಾಬೀಜ ಮಂತ್ರವನ್ನೇ ವೇದವಿಧಿಗನುಸಾರವಾಗಿ ಉಪದೇಶಮಾಡಿ ("ಭಿಕ್ಷುಕದೀಕ್ಷಾವಿಧಿ" ಎಂದು ವ್ಯಾಖ್ಯಾನದಲ್ಲಿದೆ). ಅಶುಭಕರ್ಮವಿಪಾಕವನ್ನೂ ತಿಳಿಯ ಹೇಳಿದನು. ||೧||

ಧರ್ಮರಾಜನು ಹೇಳಿದನು—ಸಾವಿತ್ರಿಯೇ, ಮನುಷ್ಯನು ಶುಭಕರ್ಮಗಳ ಫಲದಿಂದ ನರಕಕ್ಕೆ ಹೋಗುವುದಿಲ್ಲ. ಅಶುಭಕರ್ಮಗಳ ಫಲವನ್ನು ಹೇಳುವೆನು. ಕೇಳು. ||೨||

ಅನೇಕ ಪುರಾಣಗಳಲ್ಲಿ ಹೇಳುವಂತೆ ಅನೇಕ ಹೆಸರುಗಳಿಂದ ಕೂಡಿದ ಸ್ವರ್ಗಗಳಿಗೆ ಜೀವರು ತಮ್ಮ ವೇದೋಕ್ತ ಕರ್ಮಾಚರಣೆಯಿಂದ ಹೋಗುವರು. ||೩||

ಶುಭಕರ್ಮವಿಪಾಕಾನ್ನ ನರಕಂ ಯಾತಿ ಕರ್ಮಭಿಃ ।
ಕುಕರ್ಮಣಾಂ ಚ ನರಕಂ ಯಾತಿ ನಾನಾವಿಧಂ ನರಃ ॥೪॥

ನರಕಾಣಾಂ ಚ ಕುಂಡಾನಿ ಸಂತಿ ನಾನಾವಿಧಾನಿ ಚ ।
ನಾನಾಶಾಸ್ತ್ರಪ್ರಮಾಣೇನ ಕರ್ಮಭೇದೇನ ಯಾನಿ ಚ ॥೫॥

ವಿಸ್ತೃತಾನಿ ಚ ಗರ್ತಾನಿ ಕ್ಲೇಶದಾನಿ ಚ ದುಃಖಿನಾಂ ।
ಭಯಂಕರಾಣಿ ಘೋರಾಣಿ ಹೇ ವತ್ಸೇ ಕುತ್ಸಿತಾನಿ ಚ ॥೬॥

ಷಡಶೀತಿ ಚ ಕುಂಡಾನಿ ಏವಮನ್ಯಾನಿ ಸಂತಿ ಚ ।
ನಿಬೋಧ ತೇಷಾಂ ನಾಮಾನಿ ಪ್ರಸಿದ್ಧಾನಿ ಶ್ರುತೌ ಸತಿ ॥೭॥

ವಹ್ನಿಕುಂಡಂ ತಪ್ತಕುಂಡಂ ಕ್ಷಾರಕುಂಡಂ ಭಯಾನಕಂ ।
ವಿಟ್ಕುಂಡಂ ಮೂತ್ರಕುಂಡಂ ಚ ಶ್ಲೇಷ್ಮಕುಂಡಂ ಚ ದುಸ್ಸಹಂ ॥೮॥

ಗರಕುಂಡಂ ದೂಷಿಕಾಕುಂಡಂ ವಸಾಕುಂಡಂ ತಥೈವ ಚ ।
ಶುಕ್ರಕುಂಡಮಸೃಕ್ಕುಂಡಮಶ್ರುಕುಂಡಂ ಚ ಕುತ್ಸಿತಂ ॥೯॥

---

ಜೀವನು ವೇದೋಕ್ತಕರ್ಮಾಚರಣೆಯಿಂದುಂಟಾದ ಶುಭಕರ್ಮಫಲದಿಂದ ನರಕಕ್ಕೆ ಹೋಗುವುದಿಲ್ಲ. ವೇದವಿರುದ್ಧವಾದ ಕರ್ಮಾಚರಣೆಯಿಂದ ಬಗೆಬಗೆಯ ನರಕಗಳಿಗೆ ಹೋಗುವನು. ॥೪॥

ಎಲೈ ಮಗಳೆ, ಕೇಳು. ಅನೇಕ ಶಾಸ್ತ್ರಗಳ ಪ್ರಮಾಣದಿಂದಲೂ ಕರ್ಮಗಳ ಭೇದದಿಂದಲೂ ಅನೇಕ ಬಗೆಯಾದ ನರಕದ ಗುಂಡಿಗಳು ಏರ್ಪಟ್ಟಿರುವುವು. ವಿಸ್ತಾರವಾದ ಆ ಹಳ್ಳಗಳು ದುಃಖಪಡುವವರಿಗೆ ಹಿಂಸೆಕೊಡತಕ್ಕುವಾಗಿಯೂ ಭಯಂಕರವಾಗಿಯೂ ಇರುವುವು. ॥೫-೬॥

ಪ್ರಸಿದ್ಧವಾದ ವೇದಗಳಲ್ಲಿ ಹೇಳಿರುವ ಎಂಬತ್ತಾರು ನರಕದ ಗುಂಡಿಗಳಿರುವುವು! ಅವುಗಳ ಹೆಸರುಗಳನ್ನು ಹೇಳುವೆನು ಕೇಳು. ॥೭॥

ಬೆಂಕಿಯ ಮತ್ತು ಬಿಸಿತಾಕುವ ಗುಂಡಿಗಳು, ಉಪ್ಪಿನಹಳ್ಳ, ಭಯಾನಕವೆಂಬುವ ಮಡುವು, ಮಲ, ಮೂತ್ರ, ಸಹಿಸಲಸಾಧ್ಯವಾದ ಶ್ಲೇಷ್ಮ, ವಿಷ, ಕಣ್ಣಿನ ಕೊಳೆ, ಕೊಬ್ಬು ವೀರ್ಯ, ರಕ್ತ, ಕೆಟ್ಟಕಣ್ಣೀರು, ಶರೀರದ ಕೊಳೆ, ಕಿವಿಯ ಕೊಳೆ,

ಕುಂಡಂ ಗಾತ್ರಮಲಾನಾಂ ಚ ಕರ್ಣವಿಟ್ಕುಂಡಮೇವ ಚ ।
ಮಜ್ಜಾಕುಂಡಂ ಮಾಂಸಕುಂಡಂ ನಕ್ರಕುಂಡಂ ಚ ದುಸ್ಸಹಂ ॥೧೦॥

ಲೋಮಕುಂಡಂ ಕೇಶಕುಂಡಮಸ್ಥಿಕುಂಡಂ ಚ ದುಸ್ತರಂ ।
ತಾಮ್ರಕುಂಡಂ ಲೋಹಕುಂಡಂ ಪ್ರತಪ್ತಂ ಕ್ಲೇಶದಂ ಮಹತ್॥೧೧॥

ಚರ್ಮಕುಂಡಂ ತಪ್ತಸುರಾಕುಂಡಂ ಚ ಪರಿಕೀರ್ತಿತಂ ।
ತೀಕ್ಷ್ಣಕಂಟಕಕುಂಡಂ ಚ ವಿಷೋದಂ ವಿಷಕುಂಡಕಂ ॥೧೨॥

ಪ್ರತಪ್ತಕುಂಡಂ ತೈಲಸ್ಯ ಕುಂತಕುಂಡಂ ಚ ದುರ್ವಹಂ ।
ಕೃಮಿಕುಂಡಂ ಪೂಯಕುಂಡಂ ಸರ್ಪಕುಂಡಂ ದರಂತಕಂ ॥೧೩॥

ಮಶಕುಂಡಂ ದಂಶಕುಂಡಂ ಭೀಮಂ ಗರಲಕುಂಡಕಂ ।
ಕುಂಡಂ ಚ ವಜ್ರದಂಷ್ಟ್ರಾಣಾಂ ವೃಶ್ಚಿಕಾನಾಂ ಚ ಸುವ್ರತೇ ॥೧೪॥

ಶರಕುಂಡಂ ಶೂಲಕುಂಡಂ ಖಡ್ಗಕುಂಡಂ ಚ ಭೀಷಣಂ ।
ಗೋಲಕುಂಡಂ ನಕ್ರಕುಂಡಂ ಕಾಕಕುಂಡಂ ಶುಚಾಸ್ಪದಂ ॥೧೫॥

---

ಶರೀರದ ಒಂದು ಅಂಟಾದ ರಸ, ಮಾಂಸ, ಇವುಗಳ ಮತ್ತು ದಾಟಲಾಗದ ಮೊಸಳೆಗಳಿಂದ ಕೂಡಿರುವ ಮಡುಗಳು, ॥೮-೯-೧೦॥

ವೈರೋಮಗಳು, ತಲೆಕೂದಲುಗಳು, ಮೂಳೆಗಳು ಇವುಗಳ ಗುಂಡಿಗಳು, ಬಿಸಿಯಾಗಿ ಮಹಾಕಷ್ಟವನ್ನು ಕೊಡುವ ಕರಗಿದ ತಾಮ್ರದ, ಮತ್ತು ಕಬ್ಬಿಣದ ಮಡುಗಳು, ಚರ್ಮದಗುಂಡಿ, ಕುದಿಯುತ್ತಿರುವ ಹೆಂಡದ ಹಳ್ಳ, ಕಹಿಯಾದ ನೀರುಳ್ಳ ಸಮುದ್ರದಂತಿರುವ ವಿಷದಗುಂಡಿ, ಕಾಯಿಸಿದ ಎಣ್ಣೆಯ ಮತ್ತು ಕುಂತಾಯುಧಗಳಿಂದ ಕೂಡಿರುವ ಹಳ್ಳಗಳು, ಕ್ರಿಮಿಗಳ, ಕೀವಿನ, ಮತ್ತು ಕ್ರೂರವಾದ ಸರ್ಪಗಳಿಂದ ಕೂಡಿರುವ ಮಡುಗಳು, ॥೧೧-೧೨-೧೩॥

ಸೊಳ್ಳೆ, ನೊಣ, ಭಯಂಕರವಾದ ವಿಷ ಹಾವು, ಚೇಳು, ನಕ್ರ ಇವುಗಳ ಗುಂಡಿಗಳು, ಬಾಣ, ಶೂಲ, ಖಡ್ಗ, ಮುಂತಾದ ಆಯುಧಗಳ ಗುಂಡಿಗಳು, ದುಃಖವನ್ನು ಕೊಡತಕ್ಕ ಕಾಗೆಗಳ ಹಳ್ಳವೂ, ಮಂಥಾನವೆಂಬ ಕ್ರೂರವಾದ ಪ್ರಾಣಿಗಳಿರುವ ಮಡುವೂ, ಬೀಜವೆಂಬ ಪ್ರಾಣಿಗಳಿರುವ ಮತ್ತು ಸಹಿಸಲಸಾಧ್ಯವಾದ ವಜ್ರದಂತೆ ಹಲ್ಲುಳ್ಳ ಪ್ರಾಣಿಗಳ ಗುಂಡಿಯೂ, ಹಾಗೆಯೇ ಕಾದಕಲ್ಲಿನ ಮತ್ತು ಮೊನೆಯಾದ ಕಲ್ಲುಗಳ ಗುಂಡಿ, ಜೊಲ್ಲಿನರಸದ ಮಡುವು, ಮಸಿನೀರಿನ ಹಳ್ಳವೂ,

ಮಂಥಾನಕುಂಡಂ ಬೀಜಕುಂಡಂ ವಜ್ರಕುಂಡಂ ಚ ದುಸ್ಸಹಂ ।
ತಪ್ತಪಾಷಾಣಕುಂಡಂ ಚ ತೀಕ್ಷ್ಣಪಾಷಾಣಕುಂಡಕಂ ॥೧೬॥

ಲಾಲಾಕುಂಡಂ ಮಸೀಕುಂಡಂ ಚೂರ್ಣಾಕುಂಡಂ ತಥೈವ ಚ ।
ಚಕ್ರಕುಂಡಂ ವಕ್ರಕುಂಡಂ ಕೂರ್ಮಕುಂಡಂ ಮಹೋಲ್ಬಣಂ॥೧೭॥

ಜ್ವಾಲಾಕುಂಡಂ ಭಸ್ಮಕುಂಡಂ ದಗ್ಧಕುಂಡಂ ಶುಚಿಸ್ಮಿತೇ ।
ತಪ್ತಸೂಚೀ ಮಸಿಪತ್ರಂ ಕ್ಷುರಧಾರಂ ಸೂಚೀಮುಖಂ ॥೧೮॥

ಗೋಕಾಮುಖಂ ನಕ್ರಮುಖಂ ಗಜದಂಶಂ ಚ ಗೋಮುಖಂ ।
ಕುಂಭೀಪಾಕಂ ಕಾಲಸೂತ್ರಂ ಮತ್ಸ್ಯೋದಂ ಕೃಮಿಕಂತುಕಂ ॥೧೯॥

ಪಾಂಸುಭೋಜ್ಯಂ ಪಾಶವೇಷ್ಟಂ ಶೂಲಪ್ರೋತಂ ಪ್ರಕಂಪನಂ ।
ಉಲ್ಕಾಮುಖ ಮಂಧಕೂಪಂ ವೇಧನಂ ತಾಡನಂ ತಥಾ ॥೨೦॥

ಜಾಲರಂಧ್ರಂ ದೇಹಚೂರ್ಣಂ ದಲನಂ ಶೋಷಣಂ ಕಷಂ ।
ಶೂರ್ಪಂ ಜ್ವಾಲಾಮುಖಂ ಚೈವ ಧೂಮಾಂಧಂ ನಾಗವೇಷ್ಟನಂ॥೨೧॥

ಕುಂಡಾನ್ಯೇತಾನಿ ಸಾವಿತ್ರಿ ಪಾಪಿನಾಂ ಕ್ಲೇಶದಾನಿ ಚ ।
ನಿಯುಕ್ತೈಃ ಕಿಂಕರಗಣೈ ರಕ್ಷಿತಾನಿ ಚ ಸಂತತಂ ॥೨೨॥

---

ಧೂಳಿನ ಮತ್ತು ಚಕ್ರವಕ್ರವೆಂಬ ಪ್ರಾಣಿಗಳ ಗುಂಡಿ, ಆಮೆಗಳ ಗುಂಡಿ, ಉರಿಯ ಗುಂಡಿ, ಬೂದಿಯ ಗುಂಡಿ, ಉರಿದುಹೋದ ಕೆಂಡಗಳ ಮಡುವು, ಕಾಯಿಸಿದ ಸೂಜಿಯ ಗುಂಡಿಯೂ, ಅಸಿಪತ್ರವೆಂಬ ನರಕ, ಕತ್ತಿಯ ಅಲಗಿನಿಂದ ತುಂಬಿದ ನರಕ, ಮತ್ತು ಸೂಚಿಯ ಮುಖದ ನರಕವೂ, ಅಲ್ಲದೆ ॥೧೪-೧೫-೧೬-೧೭-೧೮॥

ಗೋಕಾಮುಖ, ನಕ್ರಮುಖ, ಗಜದಂತ, ಗೋಮುಖ, ಕುಂಭೀಪಾಕ, ಕಾಲಸೂತ್ರ, ಮತ್ಸ್ಯೋದ, ಅರುಂತುದ, ಪಾಂಸುಭೋಜ್ಯ, ಪಾಶವೇಷ್ಟ, ಶೂಲಪ್ರೋತ, ಪ್ರಕಂಪನ, ಉಲ್ಕಾಮುಖ, ಅಂಧಕೂಪ, ವೇಧನ, ತಾಡನ, ಜಾಲರಂಧ್ರ, ದೇಹಚೂರ್ಣ, ದಲನ, ಶೋಷಣ, ಕಷ, ಶೂರ್ಪ, ಜ್ವಾಲಾಮುಖ, ಧೂಮಾಂಧ, ನಾಗವೇಷ್ಟನ ಎಂಬ ಹೆಸರಿನ ನರಕಗಳೂ ಇವೆ. ॥೧೯-೨೦-೨೧॥

ಓ ಸಾವಿತ್ರಿಯೇ, ಪಾಪಿಗಳಿಗೆ ಕಷ್ಟವನ್ನು ಕೊಡುವ ಈ ಕುಂಡಗಳನ್ನು ಅನೇಕ ಜನ ನನ್ನ ಕಿಂಕರರು ಯಾವಾಗಲೂ ರಕ್ಷಿಸುತ್ತಿರುವರು. ಆ ಕಿಂಕರರು

ದಂಡಹಸ್ತೈಃ ಪಾಶಹಸ್ತೈರ್ಮದಮತ್ತೈರ್ಭಯಂಕರೈಃ ।
ಶಕ್ತಿಹಸ್ತೈರ್ಗದಾಹಸ್ತೈರಸಿಹಸ್ತೈಃ ಸುದಾರುಣೈಃ ॥೨೩॥

ತಮೋಯುಕ್ತೈರ್ದಯಾಹೀನೈರ್ನಿವಾರ್ಯೈಶ್ಚ ನ ಸರ್ವತಃ ।
ತೇಜಸ್ವಿಭಿಶ್ಚ ನಿಶ್ಶಂಕೈರಾತಾಮ್ರಪಿಂಗಲೋಚನೈಃ ॥೨೪॥

ಯೋಗಯುಕ್ತೈಃ ಸಿದ್ಧಿಯುಕ್ತೈಃ ನಾನಾರೂಪಧರೈರ್ಭಟೈಃ ।
ಆಸನ್ನಮೃತ್ಯುಭಿರ್ದೃಷ್ಟೈಃ ಪಾಪಿಭಿಃ ಸರ್ವಜೀವಿಭಿಃ ॥೨೫॥

ಸ್ವಕರ್ಮನಿರತೈಃ ಸರ್ವೈಃ ಶಾಕ್ತೈಃ ಸೌರೈಶ್ಚ ಗಾಣಪೈಃ ।
ಅದೃಶ್ಯೈಃ ಪುಣ್ಯಕೃದ್ಭಿಶ್ಚ ಸಿದ್ಧೈರ್ಯೋಗಿಭಿರೇವ ಚ ॥೨೬॥

ಸ್ವಧರ್ಮನಿರತೈರ್ವಾಽಪಿ ವಿರತೈರ್ವಾ ಸ್ವತಂತ್ರಕೈಃ ।
ಬಲವದ್ಭಿಶ್ಚ ನಿಶ್ಶಂಕೈಃ ಸ್ವಪ್ನದೃಷ್ಟೈಶ್ಚ ವೈಷ್ಣವೈಃ ॥೨೭॥

---

ಕೈಯಲ್ಲಿ ದಂಡ, ಪಾಶ, ಶಕ್ತಿ, ಗದೆ, ಕತ್ತಿ ಮುಂತಾದ ಭಯಂಕರವಾದ ಆಯುಧಗಳನ್ನು ಧರಿಸಿ ಮದದಿಂದ ಜ್ಞಾನತಪ್ಪಿದವರಂತಿರುವರು. ||೨೨-೨೩||

ಆ ನನ್ನ ಭಟರು ತಮೋಗುಣದಿಂದ ಕೂಡಿ, ದಯಾಹೀನರಾಗಿ, ಪರಾಕ್ರಮಿಗಳಾಗಿ, ಯಾರ ಭಯವೂ ಇಲ್ಲದವರಾಗಿ, ಕೆಂಪಾದ ಕಣ್ಣುಗಳಿಂದ ಕೂಡಿದವರಾಗಿ, ಬಗೆಬಗೆಯ ರೂಪಗಳನ್ನು ಧರಿಸಿದವರಾಗಿಯೂ ಇರುತ್ತಾ ಸಮಸ್ತ ಪಾಪಿಗಳೂ ಮರಣ ಹೊಂದುವಾಗ ಅವರ ಕಣ್ಣಿಗೆ ಕಾಣಿಸುವರು. ಯೋಗಿಗಳಾಗಿಯೂ, ಅಣಿಮಾದಿ ಸಿದ್ಧಿಗಳುಳ್ಳವರಾಗಿಯೂ ಇರುವವರಿಗೆ ಅವರು ಕಾಣಿಸುವುದಿಲ್ಲವು. ||೨೪-೨೫||

ಶಕ್ತಿ, ಸೂರ್ಯ, ಗಣಪತಿ, ಈ ದೇವತೆಗಳನ್ನು ಉಪಾಸನೆಮಾಡುತ್ತಾ ಸ್ವಕರ್ಮದಲ್ಲಿ ಆಸಕ್ತರಾದ ಜನರಿಗೂ, ಪುಣ್ಯಕರ್ಮವನ್ನು ಮಾಡುವವರಿಗೂ, ಸಿದ್ಧರಿಗೂ, ಯೋಗಿಗಳಿಗೂ ವೇದೋಕ್ತಧರ್ಮವನ್ನಾಚರಿಸುವವರಿಗೂ, ಜ್ಞಾನಿಗಳಿಗೂ, ಯಾವ ಕೆಟ್ಟ ಯೋಚನೆಯೂ ಇಲ್ಲದವರಿಗೂ, ಸ್ವಪ್ನದಲ್ಲಿ ದೇವರ ದರ್ಶನವನ್ನು ಮಾಡಿದ ವಿಷ್ಣುಭಕ್ತರಿಗೂ ನನ್ನ ಕಿಂಕರರು ಕಾಣಿಸಿಕೊಳ್ಳುವುದಿಲ್ಲವು. ಓ ಪತಿವ್ರತೆಯಾದ ಸಾವಿತ್ರಿಯೇ, ನರಕದ ಗುಂಡಿಗಳ ಲೆಕ್ಕವನ್ನು ಹೇಳಿರುವೆನು. ಯಾರು

ಏತತ್ತೇ ಕಥಿತಂ ಸಾಧ್ವಿ ಕುಂಡಸಂಖ್ಯಾನಿರೂಪಣಂ ।
ಯೇಷಾಂ ನಿವಾಸೋ ಯತ್ಕುಂಡೇ ನಿಬೋಧ ಕಥಯಾಮಿ ತೇ ॥೨೮॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ನವಮಸ್ಕಂಧೇ
ದ್ವಾತ್ರಿಂಶೋಽಧ್ಯಾಯಃ

---

ಯಾವ ನರಕದ ಗುಂಡಿಯಲ್ಲಿ ವಾಸಮಾಡುವರೆಂಬುದನ್ನು ಇನ್ನುಮುಂದೆ ಹೇಳುವೆನು, ಕೇಳು. ||೨೬-೨೭-೨೮||

ಇಲ್ಲಿಗೆ ದೇವೀಭಾಗವತಮಹಾಪುರಾಣದ ಒಂಬತ್ತನೆಯ ಸ್ಕಂಧದಲ್ಲಿ
ಮೂವತ್ತೆರಡನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ನವಮಸ್ಕಂಧೇ

### ॥ ತ್ರಯಸ್ತ್ರಿಂಶೋಽಧ್ಯಾಯಃ ॥

### ಮೂವತ್ತುಮೂರನೆಯ ಅಧ್ಯಾಯವು

॥ ಧರ್ಮರಾಜ ಉವಾಚ ॥

**ಹರಿಸೇವಾರತಃ ಶುದ್ಧೋ ಯೋಗಸಿದ್ಧೋ ವ್ರತೀ ಸತಿ ।**
**ತಪಸ್ವೀ ಬ್ರಹ್ಮಚಾರೀ ಚ ನ ಯಾತಿ ನರಕಂ ಧ್ರುವಂ ॥೧॥**

**ಕಟುವಾಚಾ ಬಾಂಧವಾಂಶ್ಚ ಬಲಲೇಪೇನ ಯೋ ನರಃ ।**
**ದಗ್ಧಾನ್ಕರೋತಿ ಬಲವಾನ್ವಹ್ನಿಕುಂಡಂ ಪ್ರಯಾತಿ ಸಃ ॥೨॥**

**ಸ್ವಗಾತ್ರಲೋಮಮಾನಾಬ್ದಂ ತತ್ರ ಸ್ಥಿತ್ವಾ ಹುತಾಶನೇ ।**
**ಪಶುಯೋನಿಮವಾಪ್ನೋತಿ ರೌದ್ರದಗ್ಧಾಂ ತ್ರಿಜನ್ಮನಿ ॥೩॥**

---

ಧರ್ಮರಾಜನು ಹೇಳಿದನು—ಪತಿವ್ರತೆಯಾದ ಸಾವಿತ್ರಿಯೇ, ವಿಷ್ಣುಪೂಜೆಯಲ್ಲಾಸಕ್ತನಾದವನೂ, ಪರಿಶುದ್ಧನೂ ಯೋಗಸಿದ್ಧನಾದವನೂ, ವ್ರತಮಾಡತಕ್ಕವನೂ, ತಪಸ್ಸನ್ನು ಮಾಡುವವನೂ, ಬ್ರಹ್ಮಚಾರಿಯೂ ನರಕಕ್ಕೆ ಹೋಗುವುದಿಲ್ಲವೆಂಬುದು ಖಂಡಿತವಾದ ಮಾತು. ॥೧॥

ಯಾವ ಮನುಷ್ಯನು ತನಗಿರುವ ಶರೀರಬಲ, ವಿದ್ಯಾ, ಧನ ಮುಂತಾದ ಗರ್ವದಿಂದ ನಂಟರನ್ನೂ, ಇತರರನ್ನೂ, ಕ್ರೂರವಾದ ಮಾತುಗಳಿಂದ ಸಂತಾಪಪಡಿಸುವನೋ ಅವನು ವಹ್ನಿಕುಂಡವೆಂಬ ನರಕಕ್ಕೆ ಹೋಗಿ ತನ್ನ ಮೈಯಲ್ಲಿರುವ ರೋಮಗಳ ಸಂಖ್ಯೆಯಷ್ಟು ವರ್ಷ ಆ ಬೆಂಕಿಯಲ್ಲಿದ್ದು ಮೂರು ಜನ್ಮಗಳ ವರೆಗೆ ನೆರಳಿಲ್ಲದೆ ಬಿಸಿಲು ಕಾಯುತ್ತಿರುವ ಕಾಡಿನಲ್ಲಿ ಪಶುವಾಗಿ ಹುಟ್ಟುವನು. ॥೨-೩॥

ಬ್ರಾಹ್ಮಣಂ ತೃಷಿತಂ ತಪ್ತಂ ಕ್ಷುಧಿತಂ ಗೃಹಮಾಗತಂ ।
ನ ಭೋಜಯತಿ ಯೋ ಮೂಢಸ್ತಪ್ತಕುಂಡಂ ಪ್ರಯಾತಿ ಸಃ ॥೪॥

ತತ್ರ ತಲ್ಲೋಮಮಾನಂ ಚ ವರ್ಷಂ ಸ್ಥಿತ್ವಾ ಚ ದುಃಖದೇ ।
ತಪ್ತಸ್ಥಲೇ ವಹ್ನಿತಲ್ಪೇ ಪಕ್ಷೀ ಚ ಸಪ್ತಜನ್ಮಸು ॥೫॥

ರವಿವಾರೇ ಚ ಸಂಕ್ರಾಂತ್ಯಾಮಮಾಯಾಂ ಶ್ರಾದ್ಧವಾಸರೇ ।
ವಸ್ತ್ರಾಣಾಂ ಕ್ಷಾರಸಂಯೋಗಂ ಕರೋತಿ ಕೇವಲಂ ನರಃ ॥೬॥

ಸ ಯಾತಿ ಕ್ಷಾರಕುಂಡಂ ಚ ಸೂತ್ರಮಾನಾಬ್ದಮೇವ ಚ ।
ಸ ವ್ರಜೇದ್ರಜಕೀಂ ಯೋನಿಂ ಸಪ್ತಜನ್ಮಸು ಭಾರತೇ ॥೭॥

ಮೂಲಪ್ರಕೃತಿನಿಂದಾಂ ಯಃ ಕುರುತೇ ಮಾನವಾಧಮಃ ।
ವೇದನಿಂದಾಂ ಶಾಸ್ತ್ರನಿಂದಾಂ ಪುರಾಣಾನಾಂ ತಥೈವ ಚ ॥೮॥

ಬ್ರಹ್ಮಾವಿಷ್ಣುಶಿವಾದೀನಾಂ ತಥಾ ನಿಂದಾಪರೋ ಜನಃ ।
ಗೌರೀವಾಣ್ಯಾದಿದೇವೀನಾಂ ತಥಾ ನಿಂದಾಪರೋ ಜನಃ ॥೯॥

---

ಹೊಟ್ಟೆ ಹಸಿವಿನಿಂದ ಸಂತಾಪವನ್ನು ಹೊಂದಿ ಮನೆಗೆ ಬಂದ ಬ್ರಾಹ್ಮಣನಿಗೆ ಯಾವ ಮೂಢನು ಅನ್ನವನ್ನು ಹಾಕುವುದಿಲ್ಲವೋ ಅವನು ತಪ್ತಕುಂಡವೆಂಬ ನರಕಕ್ಕೆ ಹೋಗಿ ಆ ಬ್ರಾಹ್ಮಣನ ಮೈಯಲ್ಲಿರುವ ರೋಮಗಳ ಸಂಖ್ಯೆಯಷ್ಟು ವರ್ಷ ಅಲ್ಲಿ ದುಃಖವನ್ನನುಭವಿಸಿ ಏಳು ಜನ್ಮಗಳವರೆಗೆ ಉಷ್ಣಪ್ರದೇಶದಲ್ಲಿ ಬೆಂಕಿಯ ಹಾಸಿಗೆಯಲ್ಲಿ ಪಕ್ಷಿಯಾಗಿ ಜನಿಸುವನು. ॥೪-೫॥

ಭಾನುವಾರ, ಸಂಕ್ರಮಣ, ಅಮಾವಾಸ್ಯೆ, ಶ್ರಾದ್ಧದ ದಿನ ಇವುಗಳಲ್ಲಿ ಬಟ್ಟೆಗೆ ಚೌಳು ಉಪ್ಪನ್ನು ಹಾಕಿ ಯಾರು ಒಗೆಯುವರೋ ಅವರು ಆ ಬಟ್ಟೆಯಲ್ಲಿರುವ ಎಳೆಗಳಷ್ಟುವರ್ಷ ಕ್ಷಾರಕುಂಡವೆಂಬ ನರಕದಲ್ಲಿ ದುಃಖವನ್ನನುಭವಿಸಿ ಭರತಖಂಡ ದಲ್ಲಿ ಏಳುಜನ್ಮಗಳವರೆಗೆ ಅಗಸರ ಹೆಂಗುಸಾಗುವರು. ॥೬-೭॥

ಯಾವ ನೀಚಮನುಷ್ಯನು ಮೂಲಪ್ರಕೃತಿಯ ನಿಂದೆಯನ್ನೂ ವೇದ, ಶಾಸ್ತ್ರ, ಪುರಾಣ, ಬ್ರಹ್ಮ, ವಿಷ್ಣು, ಶಿವ, ಗೌರೀ, ಸರಸ್ವತೀ, ಮುಂತಾದ ದೇವತೆಗಳ ನಿಂದೆ ಯನ್ನೂ ಮಾಡುವನೋ ಅವನು ಭಯಾನಕವೆಂಬ ನರಕಕ್ಕೆ ಹೋಗುವನು. ಇದ ಕ್ಕಿಂತ ಹೆಚ್ಚು ದುಃಖವನ್ನು ಕೊಡುವ ನರಕವು ಇನ್ನಿಲ್ಲ. ಅಲ್ಲಿ ಅನೇಕ ಕಾಲವಿದ್ದು

ತೇ ಸರ್ವೇ ನಿರಯೇ ಯಾಂತಿ ತಸ್ಮಿನ್ಕುಂಡೇ ಭಯಾನಕೇ ।
ನಾತಃ ಪರತರಂ ಕುಂಡಂ ದುಃಖದಂ ತು ಭವಿಷ್ಯತಿ ॥೧೦॥

ತತ್ರ ಸ್ಥಿತ್ವಾಽನೇಕಕಾಲಂ ಸರ್ಪಯೋನಿಂ ವ್ರಜೇತ್ಪುನಃ ।
ದೇವೀನಿಂದಾಪರಾಧಸ್ಯ ಪ್ರಾಯಶ್ಚಿತ್ತಂ ನ ವಿದ್ಯತೇ ॥೧೧॥

ಸ್ವದತ್ತಾಂ ಪರದತ್ತಾಂ ವಾ ವೃತ್ತಿಂ ಚ ಸುರವಿಪ್ರಯೋಃ ।
ಷಷ್ಟಿವರ್ಷ ಸಹಸ್ರಾಣಿ ವಿಟ್ಕುಂಡಂ ಚ ಪ್ರಯಾತಿ ಸಃ ॥೧೨॥

ತಾವಂತ್ಯೇವ ಹಿ ವರ್ಷಾಣಿ ವಿಡ್ಭೋಜೀ ತತ್ರ ತಿಷ್ಠತಿ ॥
ಷಷ್ಟಿವರ್ಷಸಹಸ್ರಾಣಿ ವಿಟ್ಕೃಮಿಶ್ಚ ಪುನರ್ಭುವಿ ॥೧೩॥

ಪರಕೀಯ ತಡಾಗೇ ಚ ತಡಾಗಂ ಯಃ ಕರೋತಿ ಚ ।
ಉತ್ಸೃಜೇದ್ದೈವದೋಷೇಣ ಮೂತ್ರಕುಂಡಂ ಪ್ರಯಾತಿ ಸಃ ॥೧೪॥

ತದ್ರೇಣುಮಾನವರ್ಷಂ ಚ ತದ್ಭೋಜೀ ತತ್ರ ತಿಷ್ಠತಿ ।
ಪುನಃ ಪೂರ್ಣಶತಾಬ್ದಂ ಚ ಸ ವೃಷೋ ಭಾರತೇ ಭುವಿ ॥೧೫॥

---

ಸರ್ಪವಾಗಿ ಹುಟ್ಟುವನು. ದೇವಿಯನ್ನು ದೂಷಣೆಮಾಡಿದ ತಪ್ಪಿಗೆ ಪ್ರಾಯಶ್ಚಿತ್ತವೇ ಇಲ್ಲ. ॥೮-೯-೧೦-೧೧॥

ತಾನು ಕೊಟ್ಟುದಾದರೂ ಇತರರು ಕೊಟ್ಟುದಾದರೂ ದೇವತೆಗಳ ಮತ್ತು ಬ್ರಾಹ್ಮಣರ ವೃತ್ತಿಯನ್ನು ಯಾರು ಅಪಹರಿಸುವರೋ ಅವರು ಮಲಕುಂಡವೆಂಬ ನರಕಕ್ಕೆ ಹೋಗಿ ಅರವತ್ತುಸಾವಿರ ವರ್ಷಗಳವರೆಗೆ ಮಲವನ್ನು ತಿನ್ನುತ್ತಿದ್ದು ಮತ್ತೆ ಭೂಮಿಯಲ್ಲಿ ಅಷ್ಟೇ ವರ್ಷಗಳವರೆಗೆ ಮಲದಲ್ಲಿ ಕ್ರಿಮಿಯಾಗಿ ಹುಟ್ಟುವನು. ॥೧೨-೧೩॥

ಮತ್ತೊಬ್ಬನು ಕಟ್ಟಿಸಿದ ಕೆರೆಯು ಒಣಗಿಹೋಗಿದ್ದರೆ ಅಲ್ಲಿ ಅವನ ಅನುಮತಿ ಯಿಲ್ಲದೆ ಯಾವನು ಕೆರೆಯನ್ನು ಕಟ್ಟಿಸುವನೋ ಅಥವಾ ನೀರಿರುವ ಕೆರೆಯಲ್ಲಿ ಯಾವನು ದೈವದೋಷದಿಂದ ಮೂತ್ರವಿಸರ್ಜನೆ ಮಾಡುವನೋ ಅವನು ಮೂತ್ರ ಕುಂಡವೆಂಬ ನರಕಕ್ಕೆ ಹೋಗುವನು. ಅಲ್ಲಿ ಆ ಕೆರೆಯ ಧೂಳಿನ ಸಂಖ್ಯೆಯಷ್ಟು ವರ್ಷಗಳ ವರೆಗೆ ಮೂತ್ರಾಹಾರವನ್ನು ಮಾಡುತ್ತಿದ್ದು ಮತ್ತೆ ಭರತಖಂಡದಲ್ಲಿ ನೂರು ವರ್ಷಗಳ ವರೆಗೆ ಮತ್ತೆ ಎತ್ತಾಗಿ ಹುಟ್ಟುವನು. ॥೧೪-೧೫॥

ಏಕಾಕೀ ಮಿಷ್ಟಮಶ್ನಾತಿ ಶ್ಲೇಷ್ಮಕುಂಡಂ ಪ್ರಯಾತಿ ಚ ।
ಪೂರ್ಣಮಬ್ದಶತಂ ಚೈವ ತದ್ಭೋಜೀ ತತ್ರ ತಿಷ್ಠತಿ ॥೧೬॥

ತತಃ ಪೂರ್ಣಶತಾಬ್ದಂ ಚ ಸ ಪ್ರೇತೋ ಭಾರತೇ ಭವೇತ್ ।
ಶ್ಲೇಷ್ಮಮೂತ್ರಪೂಯಂ ಚೈವ ಪೂಯಂ ಭುಙ್ತ್ತೇ ತತಃ ಶುಚಿಃ ॥೧೭॥

ಪಿತರಂ ಮಾತರಂ ಚೈವ ಗುರುಂ ಭಾರ್ಯಾಂ ಸುತಂ ಸುತಾಂ ।
ಯೋ ನ ಪುಷ್ಣಾತ್ಯನಾಥಂ ಚ ಗರಕುಂಡಂ ಪ್ರಯಾತಿ ಸಃ ॥೧೮॥

ಪೂರ್ಣಮಬ್ದಶತಂ ಚೈವಂ ತದ್ಭೋಜೀ ತತ್ರ ತಿಷ್ಠತಿ ।
ತತೋ ವ್ರಜೇದ್ಭೂತಯೋನಿಂ ಶತವರ್ಷಂ ತತಃ ಶುಚಿಃ ॥೧೯॥

ದೃಷ್ಟ್ವಾSತಿಥಿಂ ವಕ್ರಚಕ್ಷುಃ ಕರೋತಿ ಯೋ ಹಿ ಮಾನವಃ ।
ಪಿತೃದೇವಾಸ್ತಸ್ಯ ಜಲಂ ನ ಗೃಹ್ಣಂತಿ ಚ ಪಾಪಿನಃ ॥೨೦॥

ಯಾನಿ ಕಾನಿ ಚ ಪಾಪಾನಿ ಬ್ರಹ್ಮಹತ್ಯಾದಿಕಾನಿ ಚ ।
ಇಹೈವ ಲಭತೇ ಚಾಂತೇ ದೂಷಿಕಾಕುಂಡಮಾವ್ರಜೇತ್ ॥೨೧॥

---

ಮೃಷ್ಟಾನ್ನವನ್ನು ಒಬ್ಬನೇ ಊಟಮಾಡಿದವನು ಶ್ಲೇಷ್ಮಕುಂಡವೆಂಬ ನರಕಕ್ಕೆ ಹೋಗುವನು. ಅಲ್ಲಿ ನೂರುವರ್ಷಗಳವರೆಗೆ ಶ್ಲೇಷ್ಮವನ್ನೇ ಆಹಾರಮಾಡಿಕೊಂಡಿದ್ದು ಆ ಮೇಲೆ ನೂರು ವರ್ಷಗಳವರೆಗೆ ಭರತಭೂಮಿಯಲ್ಲಿ ಪ್ರೇತನಾಗಿ ಹುಟ್ಟಿ ಶ್ಲೇಷ್ಮ, ಮೂತ್ರ, ಕೀವು, ಇವುಗಳನ್ನು ತಿಂದು ಬಳಿಕ ಶುಚಿಯಾಗುವನು. ||೧೬-೧೭||

ತಂದೆ, ತಾಯಿ, ಗುರು, ಹೆಂಡಿತಿ, ಮಗ, ಮಗಳು ಇವರುಗಳನ್ನು ಯಾರು ದಿಕ್ಕಿಲ್ಲದವರಾದರೂ ನೋಡುತ್ತಿದ್ದರೂ ಕಾಪಾಡುವುದಿಲ್ಲವೋ ಅವರು ಗರಕುಂಡವೆಂಬ ನರಕಕ್ಕೆ ಹೋಗಿ ನೂರುವರ್ಷಗಳ ವರೆಗೆ ಆ ವಿಷವನ್ನೇ ತಿನ್ನುತ್ತಿದ್ದು ಬಳಿಕ ನೂರು ವರ್ಷಗಳವರೆಗೆ ಭೂತನಾಗಿದ್ದು ಬಳಿಕ ಶುದ್ಧನಾಗುವರು. ||೧೮-೧೯||

ಯಾವ ಮನುಷ್ಯನು ಮನೆಗೆ ಬಂದ ಅತಿಥಿಯನ್ನು ವಕ್ರದೃಷ್ಟಿಯಿಂದ ನೋಡುವನೋ ಪಾಪಿಯಾದ ಅವನು ಕೊಟ್ಟ ನೀರಿನ ತರ್ಪಣವನ್ನು ಪಿತೃಗಳೂ ದೇವತೆಗಳೂ ಸ್ವೀಕರಿಸುವುದಿಲ್ಲ. ಈ ಸಂದರ್ಭದಲ್ಲಿ ಇವನು ಮಾಡಿದ ಬ್ರಹ್ಮಹತ್ಯಾದಿ ಮಹಾಪಾಪಗಳೇನಿದ್ದರೂ ಫಲೋನ್ಮುಖವಾಗಿ ಶರೀರವನ್ನು ಬಿಟ್ಟಮೇಲೆ ದೂಷಿಕಾ

ಪೂರ್ಣಮಬ್ದಶತಂ ಚೈವ ತದ್ಭೋಜೀ ತತ್ರ ತಿಷ್ಠತಿ ।
ತತೋ ವ್ರಜೇದ್ಭೂತಯೋನಿಂ ಶತವರ್ಷಂ ತತಃ ಶುಚಿಃ ॥೨೨॥

ದತ್ವಾ ದ್ರವ್ಯಂ ಚ ವಿಪ್ರಾಯ ಚಾನ್ಯಸ್ಮೈ ದೀಯತೇ ಯದಿ ।
ಸ ತಿಷ್ಠತಿ ವಸಾಕುಂಡೇ ತದ್ಭೋಜೀ ಶತವತ್ಸರಂ ॥೨೩॥

ಕೃತಲಾಸೋ ಭವೇತ್ಸೋಽಪಿ ಭಾರತೇ ಸಪ್ತಜನ್ಮಸು ।
ತತೋ ಭವೇನ್ಮಹಾ ರೌದ್ರೋ ದರಿದ್ರೋಽಲ್ಪಾಯುರೇವ ಚ ॥೨೪॥

ಪುಮಾಂಸಂ ಕಾಮಿನೀ ವಾಽಪಿ ಕಾಮಿನೀಂ ವಾ ಪುಮಾನಥ ।
ಯಃ ಶುಕ್ರಂ ಪಾಯಯತ್ಯೇವ ಶುಕ್ರಕುಂಡಂ ಪ್ರಯಾತಿ ಸಃ ॥೨೫॥

ಪೂರ್ಣಮಬ್ದಶತಂ ಚೈವ ತದ್ಭೋಜೀ ತತ್ರ ತಿಷ್ಠತಿ ।
ಕೃಮಿಯೋನಿಂ ಶತಾಬ್ದಂ ಚ ವ್ರಜೇದ್ಭೂತ್ವಾ ತತಃ ಶುಚಿಃ ॥೨೬॥

ಸಂತಾಡ್ಯ ಚ ಗುರುಂ ವಿಪ್ರಂ ರಕ್ತಪಾತಂ ಚ ಕಾರಯೇತ್ ।
ಸ ಚ ತಿಷ್ಠತ್ಯಸೃಕ್ಕುಂಡೇ ತದ್ಭೋಜೀ ಶತವತ್ಸರಂ ॥೨೭॥

---

ಕುಂಡವೆಂಬ ನರಕಕ್ಕೆ ಹೋಗುವನು. ನೂರು ವರ್ಷಗಳ ವರೆಗೆ (ದೂಷಿಕಾ) ಕಣ್ಣಿನ ಕೊಳೆಯನ್ನು ತಿನ್ನುತ್ತಿದ್ದು ಬಳಿಕ ನೂರು ವರ್ಷಗಳ ವರೆಗೆ ಭೂತಯೋನಿಯಲ್ಲಿದ್ದು ತರುವಾಯ ಶುದ್ಧನಾಗುವನು. ॥೨೦-೨೧-೨೨॥

ಬ್ರಾಹ್ಮಣನಿಗೆ ದ್ರವ್ಯವನ್ನು ದಾನಮಾಡಿ ಅದನ್ನೇ ಮತ್ತೊಬ್ಬರಿಗೆ ಕೊಟ್ಟರೆ ಅವನು ವಸಾಕುಂಡವೆಂಬ ನರಕದಲ್ಲಿ ನೂರು ವರ್ಷ ಆ ವಸೆಯನ್ನೇ ತಿನ್ನುತ್ತಿದ್ದು ಬಳಿಕ ಭರತಖಂಡದಲ್ಲಿ ಏಳು ಜನ್ಮಗಳ ವರೆಗೆ ಹೆಂಟೆಗೊದ್ದನಾಗಿ ಹುಟ್ಟಿ ಆಮೇಲೆ ಕ್ರೂರಿಯಾದ ದರಿದ್ರನೂ, ಅಲ್ಪಾಯುಷೂ ಆಗಿ ಹುಟ್ಟುವನು. ॥೨೩॥

ಪುರುಷನು ಸ್ತ್ರೀಗಾಗಲಿ ಸ್ತ್ರೀಯು ಪುರುಷನಿಗಾಗಲಿ ಕಾಮದಿಂದಲೂ ಅನುರಾಗದಿಂದಲೂ ವೀರ್ಯವನ್ನು ಪಾನಮಾಡಿಸಿದರೆ ಅವರು ಶುಕ್ರಕುಂಡವೆಂಬ ನರಕಕ್ಕೆ ಹೋಗಿ ಸಂಪೂರ್ಣ ನೂರುವರ್ಷಗಳು ಅಲ್ಲಿ ಅದನ್ನೇ ಆಹಾರಮಾಡುತ್ತಿದ್ದು ನೂರು ವರ್ಷಗಳ ವರೆಗೆ ಕೃಮಿಯಾಗಿ ಹುಟ್ಟಿ ಬಳಿಕ ಶುದ್ಧರಾಗುವರು. ॥೨೫-೨೬॥

ಬ್ರಾಹ್ಮಣನೂ, ಗುರುವೂ ಆದವನನ್ನು ಹೊಡೆದು ರಕ್ತಪಾತವನ್ನು ಮಾಡಿದವನು "ಅಸೃಕ್ಕುಂಡ" ವೆಂಬ ನರಕದಲ್ಲಿ ಆ ರಕ್ತವನ್ನೇ ಕುಡಿಯುತ್ತಾ ನೂರು

ತತೋ ಲಭೇದ್ವ್ಯಾಘ್ರಜನ್ಮ ಸಪ್ತಜನ್ಮಸು ಭಾರತೇ ।
ತತಃ ಶುದ್ಧಿಮವಾಪ್ನೋತಿ ಮಾನವಶ್ಚ ಕ್ರಮೇಣ ಹ ॥೨೮॥

ಯೋಽಶ್ರು ತತ್ಯಾಜ ಗಾಯಂತಂ ಭಕ್ತಂ ದೃಷ್ಟ್ವಾ ಸಗದ್ಗದಂ ।
ಶ್ರೀಕೃಷ್ಣಗುಣಸಂಗೀತೇ ಹಸತ್ಯೇವ ಹಿ ಯೋ ನರಃ ॥೨೯॥

ಸ ವಸೇದಶ್ರುಕುಂಡೇ ಚ ತದ್ಭೋಜೀ ಶತವರ್ಷಕಂ ।
ತತೋ ಭವೇಚ್ಚ ಚಂಡಾಲಸ್ತ್ರೀಜನ್ಮನಿರತಃ ಶುಚಿಃ ॥೩೦॥

ಕರೋತಿ ಶಠತಾಂ ತದ್ವನ್ನಿತ್ಯಂ ಸುಹೃದಿ ಯೋ ನರಃ ।
ಕುಂಡಂ ಗಾತ್ರಮಲಾನಾಂ ಚ ಸ ಪ್ರಯಾತಿ ಶತಾಬ್ದಕಂ ॥೩೧॥

ತತಃ ಸ ಗಾರ್ದಭೀಂ ಯೋನಿಮವಾಪ್ನೋತಿ ತ್ರಿಜನ್ಮನಿ ।
ತ್ರಿಜನ್ಮನಿ ಚ ಸಾರ್ಗಾಲೀಂ ತತಃ ಶುದ್ಧೋ ಭವೇದ್ಧ್ರುವಂ ॥೩೨॥

---

ವರ್ಷಗಳನ್ನು ಕಳೆದು ಭರತಖಂಡದಲ್ಲಿ ಏಳು ಜನ್ಮಗಳು ಹುಲಿಯಾಗಿ ಹುಟ್ಟಿ ಕ್ರಮವಾಗಿ ಶುದ್ಧನಾಗಿ ಮನುಷ್ಯನಾಗುವನು. ॥೨೭-೨೮॥

ದೇವತೆಗಳನ್ನು ದ್ವೇಶಿಸಿ ಭಕ್ತಿಯಿಂದ ಗದ್ಗದಕಂಠದಿಂದ ಶ್ರೀಕೃಷ್ಣನ ಗುಣ ಕೀರ್ತನೆಯನ್ನು ಹಾಡುತ್ತಿರುವವನನ್ನು ನೋಡಿ ಯಾವನ ಕಣ್ಣುಗಳಲ್ಲಿ ಆನಂದ ಬಾಷ್ಪವು ಬರುವುದಿಲ್ಲವೋ ಅಥವಾ ಅಂತಹ ಭಕ್ತನು ಹಾಡುವಾಗ ಆ ಗಾನಕ್ಕೆ ಮನಕೊಡದೆ ಯಾವನು ತನ್ನ ಸಂಸಾರದುಃಖದಿಂದ ಕಣ್ಣೀರುಬಿಡುತ್ತಿರುವನೋ, ಯಾವನು ವಿನೋದದಿಂದ ಆ ದೇವತೆಗಳ ಕೀರ್ತನೆಯನ್ನು ಹಾಸ್ಯಮಾಡುವನೋ ಅವನು "ಅಶ್ರುಕುಂಡ"ವೆಂಬ ನರಕದಲ್ಲಿ ನೂರುವರ್ಷ ಕಣ್ಣೀರನ್ನೇ ಕುಡಿಯುತ್ತಾ ಇದ್ದು ಬಳಿಕ ಚಂಡಾಲಸ್ತ್ರೀಯಾಗಿ ಹುಟ್ಟಿ ಆ ಮೇಲೆ ಶುದ್ಧನಾಗುವನು.॥೨೯-೩೦॥

ಯಾವ ಮನುಷ್ಯನು ತನ್ನ ಸ್ನೇಹಿತರಲ್ಲಿ ಯಾವಾಗಲೂ ಮೂರ್ಖನಂತೆ ನಡೆದುಕೊಳ್ಳುವನೋ ಅವನು ನೂರು ವರ್ಷಗಳು ಶರೀರದ ಕೊಳೆಯಿಂದ ಕೂಡಿದ ನರಕದಲ್ಲಿದ್ದು ಬಳಿಕ ಮೂರು ಜನ್ಮಗಳು ಕತ್ತೆಯಾಗಿಯೂ, ಮೂರು ಜನ್ಮಗಳು ನರಿಯಾಗಿಯೂ ಹುಟ್ಟಿ ಆ ಮೇಲೆ ಶುದ್ಧನಾಗುವನು. ॥೩೧-೩೨॥

ಬಧಿರಂ ಯೋ ಹಸತ್ಯೇವ ನಿಂದತ್ಯೇವಾಭಿಮಾನತಃ ।
ಸ ವಸೇತ್ಕರ್ಣವಿಟ್ಕುಂಡೇ ತದ್ಭೋಜೀ ಶತವತ್ಸರಂ ॥೩೩॥

ತತೋ ಭವೇತ್ಸ ಬಧಿರೋ ದರಿದ್ರಃ ಸಪ್ತಜನ್ಮಸು ।
ಸಪ್ತಜನ್ಮಸ್ವಂಗಹೀನಸ್ತತಃ ಶುದ್ಧಿಂ ಲಭೇದ್ಧ್ರುವಂ ॥೩೪॥

ಲೋಭಾತ್ಸ್ವಭರಣಾರ್ಥಾಯ ಜೀವಿನಂ ಹಂತಿ ಯೋ ನರಃ ।
ಮಜ್ಜಾಕುಂಡೇ ವಸೇತ್ಸೋಽಪಿ ತದ್ಭೋಜೀ ಲಕ್ಷವತ್ಸರಂ ॥೩೫॥

ತತೋ ಭವೇಚ್ಚ ಶಶಕೋ ಮೀನಶ್ಚ ಸಪ್ತಜನ್ಮಸು ।
ತ್ರಿಜನ್ಮನಿ ವರಾಹಶ್ಚ ಕುಕ್ಕುಟಃ ಸಪ್ತಜನ್ಮಸು ॥೩೬॥

ಏಣಾದಯಶ್ಚ ಕರ್ಮಭ್ಯಸ್ತತಃ ಶುದ್ಧಿಂ ಲಭೇದ್ಧ್ರುವಂ ।
ಸ್ವಕನ್ಯಾಪಾಲನಂ ಕೃತ್ವಾ ವಿಕ್ರೀಣಾತಿ ಚ ಯೋ ನರಃ ॥೩೭॥

ಅರ್ಥಲೋಭಾನ್ಮಹಾಮೂಢೋ ಮಾಂಸಕುಂಡಂ ಪ್ರಯಾತಿ ಸಃ ।
ಕನ್ಯಾಲೋಮಪ್ರಮಾಣಾಬ್ದಂ ತದ್ಭೋಜೀ ತತ್ರ ತಿಷ್ಠತಿ ॥೩೮॥

---

ಯಾವನು ಕಿವುಡನನ್ನು ಹಾಸ್ಯಮಾಡಿ ನಿಂದಿಸುತ್ತಾನೆಯೋ ಅವನು ನೂರು ವರ್ಷಗಳ ವರೆಗೆ ಕರ್ಣಮಲದನರಕದಲ್ಲಿ ಅದನ್ನೇ ತಿನ್ನುತ್ತಾ ಇದ್ದು ಬಳಿಕ ಏಳು ಜನ್ಮಗಳು ಕಿವುಡನೂ ದರಿದ್ರನೂ ಆಗಿ ಹುಟ್ಟಿ ಮತ್ತೆ ಏಳು ಜನ್ಮಗಳು ಅಂಗಹೀನನಾಗಿ ಹುಟ್ಟಿ ಆಮೇಲೆ ಶುದ್ಧನಾಗುವನು.. ॥೩೩-೩೪॥

ಯಾವ ಮನುಷ್ಯನು ಅತ್ಯಾಶೆಯಿಂದಲೂ ತನ್ನ ಹೊಟ್ಟೆ ಹೊರೆಯುವುದಕ್ಕಾಗಿಯೂ ಪ್ರಾಣಿಗಳನ್ನು ಕೊಲ್ಲುತ್ತಾನೆಯೋ ಅವನು ಲಕ್ಷವರ್ಷಗಳ ವರೆಗೆ "ಮಜ್ಜಾಕುಂಡ" ವೆಂಬ ನರಕದಲ್ಲಿ ಅದನ್ನೇ ತಿನ್ನುತ್ತಿದ್ದು ಆ ಮೇಲೆ ಮೊಲವಾಗಿಯೂ ಮೀನಾಗಿಯೂ ಏಳುಜನ್ಮಗಳನ್ನು ಕಳೆದು ಮೂರುಜನ್ಮಗಳು ಹಂದಿಯಾಗಿಯೂ ಏಳು ಜನ್ಮಗಳು ಕೋಳಿಯಾಗಿಯೂ ತನ್ನ ಕರ್ಮಗಳಿಗನುಸಾರವಾಗಿ ಜಿಂಕೆ ಮೊದಲಾದ ಪ್ರಾಣಿಗಳಾಗಿಯೂ ಹುಟ್ಟಿ ಬಳಿಕ ಶುದ್ಧನಾಗುವನು.॥೩೫-೩೬॥

ತನ್ನ ಮಗಳನ್ನು ಸಾಕಿ ಯಾವ ಮನುಷ್ಯನು ಹಣದಾಸೆಯಿಂದ ಮೂಢನಾಗಿ ಆ ಕನ್ಯೆಯನ್ನು ಮಾರುವನೋ ಅವನು ಮಾಂಸಕುಂಡವೆಂಬ ನರಕಕ್ಕೆ ಹೋಗುವನು. ಅಲ್ಲಿ ತಾನು ಮಾರಿದ ಕನ್ಯೆಯ ರೋಮಗಳಷ್ಟು ಸಂಖ್ಯೆಯ

ತಸ್ಯ ದಂಡಪ್ರಹಾರಂ ಚ ಕುರ್ವಂತಿ ಮಮ ಕಿಂಕರಾಃ ।
ಮಾಂಸಭಾರಂ ಮೂರ್ಧ್ನಿ ಕೃತ್ವಾ ರಕ್ತಭಾರಂ ಲಿಹೇತ್ಕ್ಷುಧಾ॥೩೯॥

ತತೋ ಹಿ ಭಾರತೇ ಪಾಪೀ ಕನ್ಯಾವಿಟ್ಕೃಮಿಗೋ ಭವೇತ್ ।
ಷಷ್ಟಿವರ್ಷಸಹಸ್ರಾಣಿ ವ್ಯಾಧಶ್ಚ ಸಪ್ತಜನ್ಮಸು ॥೪೦॥

ತ್ರಿಜನ್ಮನಿ ವರಾಹಶ್ಚ ಕುಕ್ಕುಟಃ ಸಪ್ತಜನ್ಮಸು ।
ಮಂಡೂಕೋ ಹಿ ಜಲೌಕಶ್ಚ ಸಪ್ತಜನ್ಮಸು ಭಾರತೇ ॥೪೧॥

ಸಪ್ತಜನ್ಮಸು ಕಾಕಶ್ಚ ತತಃ ಶುದ್ಧಿಂ ಲಭೇದ್ಧ್ರುವಂ ।
ವ್ರತಾನಾಮುಪವಾಸಾನಾಂ ಶ್ರಾದ್ಧಾದೀನಾಂ ಚ ಸಂಗಮೇ ॥೪೨॥

ಕರೋತಿ ಯಃ ಕ್ಷೌರಕರ್ಮ ಸೋಽಶುಚಿಃ ಸರ್ವಕರ್ಮಸು ।
ಸ ಚ ತಿಷ್ಠತಿ ಕುಂಡಂ ಚ ನಖಾದೀನಾಂ ಚ ಸುಂದರಿ ॥೪೩॥

ತದ್ದೈವದಿನಮಾನಾಬ್ದಂ ತದ್ಭೋಜೀ ದಂಡತಾಡಿತಃ ।

---

ವರ್ಷಗಳ ವರೆಗೆ ಮಾಂಸವನ್ನು ತಿನ್ನುತ್ತಾ ಇರುವನು. ನನ್ನ ದೂತರು ಅವನನ್ನು ತಲೆಯ ಮೇಲೆ ಮಾಂಸದ ಹೊರೆಯನ್ನು ಹೇರಿ ದೊಣ್ಣೆಯಿಂದ ಹೊಡೆಯುವರು. ಅವನು ಅದರಿಂದ ಸೋರುತ್ತಿರುವ ರಕ್ತವನ್ನು ಹಸಿವಿನಿಂದ ನೆಕ್ಕುತ್ತಿರುವನು. ಬಳಿಕ ಭರತಖಂಡದಲ್ಲಿ ಕನ್ಯೆಯ ಮಲದಲ್ಲಿ ಕೃಮಿಯಾಗಿ ಹುಟ್ಟಿ ಅರವತ್ತುಸಾವಿರ ವರ್ಷಗಳ ಮೇಲೆ ಏಳು ಜನ್ಮಗಳು ಬೇಡನಾಗಿಯೂ ಮೂರು ಜನ್ಮಗಳು ಹಂದಿಯಾಗಿಯೂ, ಏಳು ಜನ್ಮಗಳು ಕಪ್ಪೆಯಾಗಿಯೂ ಏಳು ಜನ್ಮಗಳು ಕಾಗೆಯಾಗಿಯೂ ಹುಟ್ಟಿ ಆಮೇಲೆ ಶುದ್ಧನಾಗುವನು. ॥೩೭-೩೮-೩೯-೪೦-೪೧॥

ವ್ರತ, ಉಪವಾಸ, ಶ್ರಾದ್ಧ, ದಿನಗಳಲ್ಲಿ ಯಾವನು ಕ್ಷೌರವನ್ನು ಮಾಡಿಸಿಕೊಳ್ಳುವನೋ ಅವನು ಅಶುಚಿಯಾದುದರಿಂದ ಯಾವ ಕರ್ಮಕ್ಕೂ ಯೋಗ್ಯನಲ್ಲ. ಅಂಥವನು ಎಷ್ಟು ದಿನಗಳು ಆ ಕರ್ಮವನ್ನು ಮಾಡಿದನೋ ಅಷ್ಟು ದೇವಮಾನದ ವರ್ಷಗಳ ವರೆಗೆ ನಖಾದಿಕುಂಡಗಳಲ್ಲಿದ್ದು ಅದನ್ನೇ ಆಹಾರಮಾಡಿಕೊಂಡು ನನ್ನ ಭಟರ ದೊಣ್ಣೆಯ ಏಟನ್ನು ಸಹಿಸುತ್ತಿರುವನು. ॥೪೨-೪೩॥

ಸಕೇಶಂ ಪಾರ್ಥಿವಂ ಲಿಂಗಂ ಯೋ ವಾಽರ್ಚಯತಿ ಭಾರತೇ ॥೪೪॥

ಸ ತಿಷ್ಠತಿ ಕೇಶಕುಂಡೇ ಮೃದ್ರೇಣುಮಾನವರ್ಷಕಂ ।
ತದಂತೇ ಯಾವನೀಂ ಯೋನಿಂ ಪ್ರಯಾತಿ ಹರಕೋಪತಃ ॥೪೫॥

ಶತಾಬ್ದಾಚ್ಛುದ್ಧಿಮಾಪ್ನೋತಿ ರಾಕ್ಷಸಃ ಸ ಭವೇದ್ಧ್ರುವಂ ।
ಪಿತೄಣಾಂ ಯೋ ವಿಷ್ಣುಪದೇ ಪಿಂಡಂ ನೈವ ದದಾತಿ ಚ ॥೪೬॥

ಸ ಚ ತಿಷ್ಠತ್ಯಸ್ಥಿಕುಂಡೇ ಸ್ವಲೋಮಾಬ್ದಂ ಮಹೋಲ್ಬಣೇ ।
ತತಃ ಸು(ಶ್ವ)ಯೋನಿಂ ಸಂಪ್ರಾಪ್ಯ ಕುಖಂಜಃ ಸಪ್ತಜನ್ಮಸು ॥೪೭॥

ಭವೇನ್ಮಹಾದರಿದ್ರಶ್ಚ ತತಃ ಶುದ್ಧೋ ಹಿ ದೇಹತಃ ।
ಯಃ ಸೇವತೇ ಮಹಾಮೂಢೋ ಗುರ್ವಿಣೀಂ ಚ ಸ್ವಕಾಮಿನೀಂ ॥೪೮॥

ಪ್ರತಪ್ತೇ ತಾಮ್ರಕುಂಡೇ ಚ ಶತವರ್ಷಂ ಸ ತಿಷ್ಠತಿ ।

---

ಪಾರ್ಥಿವಲಿಂಗವನ್ನು ಮಾಡುವಾಗ ಮಣ್ಣಿನಲ್ಲಿ ಕೂದಲಿದ್ದರೆ ಅಂತಹ ಮಣ್ಣಿನಲ್ಲಿ ಮಾಡಿದ ಲಿಂಗವನ್ನು ಪೂಜೆಮಾಡಿದವನು ಮಣ್ಣಿನ ರೇಣುಗಳ ಸಂಖ್ಯೆಯಷ್ಟು ವರ್ಷಗಳ ವರೆಗೆ ಕೇಶಕುಂಡನರಕದಲ್ಲಿ ದುಃಖವನ್ನನುಭವಿಸಿ ಶಿವನ ಕೋಪದಿಂದ ಮ್ಲೇಚ್ಛನಾಗಿ ಹುಟ್ಟಿ ಬಳಿಕ ರಾಕ್ಷಸನಾಗುವನು. ನೂರು ವರ್ಷಗಳ ಮೇಲೆ ಶುದ್ಧನಾಗುವನು. ॥೪೪-೪೫॥

ಗಯೆಯಲ್ಲಿರುವ ವಿಷ್ಣುಪಾದದ ಮೇಲೆ ಯಾವನು ಪಿತೃಗಳಿಗೆ ಪಿಂಡವನ್ನು ಹಾಕುವುದಿಲ್ಲವೋ ಅವನು ತನ್ನ ಶರೀರದಲ್ಲಿರುವ ಲೋಮಗಳಷ್ಟು ಸಂಖ್ಯೆಯ ವರ್ಷಗಳ ವರೆಗೆ ಅಸ್ಥಿಕುಂಡವೆಂಬ ನರಕದಲ್ಲಿದ್ದು ಬಳಿಕ ಮನುಷ್ಯನಾಗಿ ಹುಟ್ಟಿ ಏಳು ಜನ್ಮಗಳವರೆಗೆ ಕುಂಟನಾಗಿ ದರಿದ್ರನಾಗಿದ್ದು ಬಳಿಕ ಶುದ್ಧವಾದ ದೇಹವುಳ್ಳವನಾಗುವನು. ॥೪೬-೪೭॥

ಮೂಢನಾದ ಯಾವ ಮನುಷ್ಯನು ಗರ್ಭಿಣಿಯಾದ ಹೆಂಡಿತಿಯಲ್ಲಿ ಭೋಗಿಸುವನೋ ಅವನು ಸುಡುತ್ತಿರುವ ತಾಮ್ರಕುಂಡವೆಂಬ ನರಕದಲ್ಲಿ ನೂರು ವರ್ಷಗಳ ವರೆಗೆ ದುಃಖಿಸುತ್ತಾ ಇರುವನು. ॥೪೮॥

ಅವೀರಾನ್ನಂ ಚ ಯೋ ಭುಙ್ಕ್ತೇ ಋತುಸ್ನಾತಾನ್ನಮೇವ ಚ ॥೪೯॥

ಲೋಹಕುಂಡೇ ಶತಾಬ್ದಂ ಚ ಸ ಚ ತಿಷ್ಠತಿ ತಪ್ತಕೇ ।
ಸ ವ್ರಜೇದ್ರಜಕೀಯೋನಿಂ ಕಾಕಾನಾಂ ಸಪ್ತಜನ್ಮಸು ॥೫೦॥

ಮಹಾವ್ರಣೀ ದರಿದ್ರಶ್ಚ ತತಃ ಶುದ್ಧೋ ಭವೇನ್ನರಃ ।
ಯೋ ಹಿ ಚರ್ಮಾಕ್ತಹಸ್ತೇನ ದೇವದ್ರವ್ಯಮುಪಸ್ಪೃಶೇತ್ ॥೫೧॥

ಶತವರ್ಷಪ್ರಮಾಣಂ ಚ ಚರ್ಮಕುಂಡೇ ಸ ತಿಷ್ಠತಿ ।
ಯಃ ಶೂದ್ರೇಣಾಭ್ಯನುಜ್ಞಾತೋ ಭುಂಙ್ಕ್ತೇ ಶೂದ್ರಾನ್ನಮೇವ ಚ ॥೫೨॥

ಸ ಚ ತಪ್ತಸುರಾಕುಂಡೇ ಶತಾಬ್ದಂ ತಿಷ್ಠತಿ ದ್ವಿಜಃ ।
ತತೋ ಭವೇಚ್ಛೂದ್ರಯಾಜೀ ಬ್ರಾಹ್ಮಣಃ ಸಪ್ತಜನ್ಮಸು ॥೫೩॥

ಶೂದ್ರಶ್ರಾದ್ಧಾನ್ನಭೋಜೀ ಚ ತತಃ ಶುದ್ಧೋ ಭವೇದ್ಧ್ರುವಂ ।

---

ಗಂಡನೂ ಮಕ್ಕಳೂ ಇಲ್ಲದ ವಿಧವೆಯು ಸಂಪಾದನೆ ಮಾಡಿದ ಅನ್ನವನ್ನೂ, ಸುಮಂಗಲಿಯರು ಬಹಿಷ್ಠೆಯರಾಗಿ ನಾಲ್ಕನೆಯ ದಿನ ಸ್ನಾನಮಾಡಿ ಬಂದು ಮುಟ್ಟಿದ ಅನ್ನವನ್ನೂ, ಊಟಮಾಡಿದವನು ಸುಡುತ್ತಿರುವ ಲೋಹಕುಂಡವೆಂಬ ನರಕದಲ್ಲಿ ನೂರು ವರ್ಷಗಳಿದ್ದು ಆಮೇಲೆ ಅಗಸರ ಹೆಂಗುಸಾಗಿ ಹುಟ್ಟಿ ಏಳು ಜನ್ಮಗಳ ವರೆಗೆ ಕಾಗೆಯಾಗಿದ್ದು ಬಳಿಕ ಗಾಯಗಳಿಂದ ಕೂಡಿದ ಶರೀರವುಳ್ಳವನೂ ದರಿದ್ರನೂ ಆಗಿ ಹುಟ್ಟಿ ತರುವಾಯ ಶುದ್ಧನಾಗುವನು. ॥೪೯-೫೦॥

ಯಾವನು ಚರ್ಮವನ್ನು ಮುಟ್ಟಿದ ಕೈಯನ್ನು ತೊಳೆದುಕೊಳ್ಳದೆ ದೇವ ಪೂಜೆಗೆ ಉಪಯುಕ್ತವಾದ ಪದಾರ್ಥಗಳನ್ನು ಮುಟ್ಟುವನೋ ಅವನು ನೂರುವರ್ಷಗಳ ವರೆಗೆ ಚರ್ಮಕುಂಡವೆಂಬ ನರಕದಲ್ಲಿರುವನು. ॥೫೧॥

ಯಾವ ಬ್ರಾಹ್ಮಣನು ಶೂದ್ರನಿಂದ ಊಟಕ್ಕೆ ಕರೆಯಿಸಿಕೊಂಡು ಶೂದ್ರನ ಅನ್ನವನ್ನು ಭೋಜನಮಾಡುತ್ತಾನೆಯೋ ಅವನು ನೂರು ವರ್ಷಗಳ ವರೆಗೆ ಕುದಿಯುತ್ತಿರುವ ಹೆಂಡದ ಗುಂಡಿಯಲ್ಲಿದ್ದು ಬಳಿಕ ಏಳುಜನ್ಮಗಳವರೆಗೆ ಶೂದ್ರನಿಗೆ ಪುರೋಹಿತನಾದ ಬ್ರಾಹ್ಮಣನಾಗಿ ಹುಟ್ಟುವನು. ॥೫೨-೫೩॥

ಅಲ್ಲದೆ ಅವನು ಶೂದ್ರನು ಮಾಡಿದ ಶ್ರಾದ್ಧದ ಸಂಬಂಧವಾದ ಅನ್ನವನ್ನು ಭೋಜನಮಾಡುವನು. ಆ ಜನ್ಮವು ಕಳೆದ ಮೇಲೆ ಶುದ್ಧನಾಗುವನು.

ವಾಗ್ದುಷ್ಟಃ ಕಟುಕೋ ವಾಚಾ ತಾಡಯೇತ್ಸ್ವಾಮಿನಂ ಸದಾ ॥೫೪॥

ತೀಕ್ಷ್ಣಕಂಟಕಕುಂಡೇ ಸ ತದ್ಭೋಜೀ ತತ್ರ ತಿಷ್ಠತಿ ।
ತಾಡಿತೋ ಯಮದೂತೇನ ದಂಡೇನ ಚ ಚತುರ್ಯುಗಂ ॥೫೫॥

ತತ ಉಚ್ಚೈಃ ಶ್ರವಾಃ ಸಪ್ತಜನ್ಮಸ್ವೇವ ತತಃ ಶುಚಿಃ ।
ವಿಷೇಣ ಜೀವಿನಂ ಹಂತಿ ನಿರ್ದಯೋ ಯೋ ಹಿ ಮಾನವಃ ॥೫೬॥

ವಿಷಕುಂಡೇ ಚ ತದ್ಭೋಜೀ ಸಹಸ್ರಾಬ್ದಂ ಚ ತಿಷ್ಠತಿ ।
ತತೋ ಭವೇನ್ನೃಘಾತೀ ಚ ವ್ರಣೀ ಚ ಶತಜನ್ಮಸು ॥೫೭॥

ಸಪ್ತಜನ್ಮಸು ಕುಷ್ಠೀ ಚ ತತಃ ಶುದ್ಧೋ ಭವೇದ್ಧ್ರುವಂ ।
ದಂಡೇನ ತಾಡಯೇದ್ಗಾಂ ಹಿ ವೃಷಂ ಚ ವೃಷವಾಹಕಃ ॥೫೮॥

ಭೃತ್ಯದ್ವಾರಾ ಸ್ವತಂತ್ರೋ ವಾ ಪುಣ್ಯಕ್ಷೇತ್ರೇ ಚ ಭಾರತೇ ।
ಪ್ರತಪ್ತೇ ತೈಲಕುಂಡೇಽಗ್ನೌ ತಿಷ್ಠತಿ ಸ್ಮ ಚತುರ್ಯುಗಂ ॥೫೯॥
ಗವಾಂ ಲೋಮಪ್ರಮಾಣಾಬ್ದಂ ವೃಷೋ ಭವತಿ ತತ್ಪರಂ ।

---

ಕ್ರೂರವಾಗಿ ಮಾತನಾಡುತ್ತಾ ತನ್ನ ಯಜಮಾನವನ್ನು ತೊಂದರೆಪಡಿಸುವ ಕೆಟ್ಟಮಾತುಗಳನ್ನಾಡುವ ಮನುಜನು ನಾಲ್ಕರಷ್ಟು ಯಮದೂತರ' ದಂಡದ ಬಾಧೆಯನ್ನು ಹೊಂದುತ್ತಾ ತೀಕ್ಷ್ಣಕಂಟಕವೆಂಬ ನರಕದಲ್ಲಿ ದುಃಖವನ್ನನುಭವಿಸುತ್ತಾ ಇದ್ದು ಏಳು ಜನ್ಮಗಳವರೆಗೆ ಕುದುರೆಯಾಗಿ ಹುಟ್ಟಿ ಬಳಿಕ ಶುದ್ಧನಾಗುವನು. ॥೫೪-೫೫॥

ಯಾವ ಮನುಷ್ಯನು ಪ್ರಾಣಿಗಳಲ್ಲಿ ದಯವಿಲ್ಲದವನಾಗಿ ವಿಷವನ್ನು ಹಾಕಿ ಪ್ರಾಣಿಗಳನ್ನು ಕೊಲ್ಲುವನೋ ಅವನು ಸಾವಿರ ವರ್ಷಗಳಕಾಲ ವಿಷಕುಂಡವೆಂಬ ನರಕದಲ್ಲಿ ವಿಷವನ್ನು ತಿನ್ನುತ್ತಿದ್ದು ಆ ಮೇಲೆ ನೂರುಜನ್ಮಗಳವರೆಗೆ ಮನುಷ್ಯರನ್ನು ಕೊಲ್ಲತಕ್ಕ ಬೇಡರವನಾಗಿಯೂ ಹುಣ್ಣುಗಳುಳ್ಳ ಶರೀರವುಳ್ಳವನಾಗಿಯೂ ಇದ್ದು ಏಳುಜನ್ಮಗಳ ವರೆಗೆ ಕುಷ್ಠರೋಗದಿಂದ ನರಳಿ ಬಳಿಕ ಶುದ್ಧನಾಗುವನು. ॥೫೬-೫೭॥

ಯಾವ ಮನುಷ್ಯನು ತಾನಾಗಲೀ ತನ್ನ ಆಳುಗಳಿಂದಾಗಲೀ ಹಸುವನ್ನಾಗಲೀ ಎತ್ತನ್ನಾಗಲೀ ಕೋಲಿನಿಂದ ಹೊಡೆದು ಹೊಡೆಸುವನೋ ಅವನು ಕುದಿಯುತ್ತಿರುವ

**ಕುಂತೇನ ಹಂತಿ ಯೋ ಜೀವಂ ವಹ್ನಿಲೋಹೇನ ಹೇಲಯಾ ॥೬೦॥**

**ಕುಂತಕುಂಡೇ ವಸೇತ್ಸೋಽಪಿ ವರ್ಷಾಣಾಮಯುತಂ ಸತಿ ।**
**ತತಃ ಸುಯೋನಿಂ ಸಂಪ್ರಾಪ್ಯ ಚೋದರೇ ವ್ಯಾಧಿಸಂಯುತಃ ॥೬೧॥**

**ಜನ್ಮನೈಕೇನ ಕೇಶೇನ ತತಃ ಶುದ್ಧೋ ಭವೇನ್ನರಃ ।**
**ಯೋ ಭುಂಕ್ತೇ ಚ ವೃಥಾ ಮಾಂಸಂ ಮಾಂಸಲೋಭಾದ್ದ್ವಿಜಾಧಮಃ॥೬೨॥**

**ಹರೇರನೈವೇದ್ಯಭೋಜೀ ಕೃಮಿಕುಂಡಂ ಪ್ರಯಾತಿ ಸಃ ।**
**ಸ್ವಲೋಮಮಾನವರ್ಷಂ ಚ ತದ್ಭೋಜೀ ತತ್ರ ತಿಷ್ಠತಿ ॥೬೩॥**

**ತತೋ ಭವೇನ್ಮ್ಲೇಚ್ಛಜಾತಿಸ್ತ್ರಿಜನ್ಮನಿ ತತೋ ದ್ವಿಜಃ ।**
**ಬ್ರಾಹ್ಮಣಃ ಶೂದ್ರಯಾಜೀ ಚ ಶೂದ್ರಶ್ರಾದ್ಧಾನ್ನಭೋಜಕಃ ॥೬೪॥**

**ಶೂದ್ರಾಣಾಂ ಶವದಾಹೀ ಚ ಪೂಯಕುಂಡೇ ವಸೇದ್ಧ್ರುವಂ ।**
**ಯಾವಲ್ಲೋಮಪ್ರಮಾಣಾಬ್ದಂ ಯಮದಂಡೇನ ಸುವ್ರತೇ ॥೬೫॥**

---

ಎಣ್ಣೆಯಗುಂಡಿ ಎಂಬ ನರಕದಲ್ಲಿ ನಾಲ್ಕು ಯುಗಗಳ ವರೆಗೆ ಇದ್ದು ಗೋವುಗಳ ರೋಮಗಳ ಸಂಖ್ಯೆಯಷ್ಟು ವರ್ಷಗಳವರೆಗೆ ಎತ್ತಾಗಿ ಹುಟ್ಟುವನು. ॥೫೮-೫೯॥

ಬೆಂಕಿಯಲ್ಲಿ ಕಾಯಿಸಿದ ಕುಂತವೆಂಬ ಕಬ್ಬಿಣದ ಸಲಾಕಿಯಿಂದ ಪ್ರಾಣಿಗಳನ್ನು ಆಟಕ್ಕಾಗಲೀ ಯಾವನು ಹೊಡೆಯುವನೋ ಅವನು ಹತ್ತುಸಾವಿರ ವರ್ಷಗಳ ವರೆಗೆ ಕುಂತಕುಂಡವೆಂಬ ನರಕದಲ್ಲಿದ್ದು ಬಳಿಕ ಉತ್ತಮವಾದ ಜನ್ಮದಲ್ಲಿ ಹುಟ್ಟಿ ಹೊಟ್ಟೆನೋವಿನಿಂದ ಒಂದು ಜನ್ಮದುಃಖವನ್ನನುಭವಿಸಿ ಆ ಮೇಲೆ ಶುದ್ಧನಾಗುವನು. ॥೬೦-೬೧॥

ಯಾವ ನೀಚ ಬ್ರಾಹ್ಮಣನು ಯಜ್ಞಾರ್ಥವಲ್ಲದ ಮಾಂಸವನ್ನು ತಿನ್ನುವನೋ, ದೇವರ ನೈವೇದ್ಯಮಾಡದೆ ಭೋಜನ ಮಾಡುವನೋ ಅವನು ತನ್ನ ಶರೀರದಲ್ಲಿರುವ ಲೋಮಗಳ ಸಂಖ್ಯೆಯಷ್ಟುವರ್ಷ ಕೃಮಿಕುಂಡವೆಂಬ ನರಕದಲ್ಲಿ ಮಾಂಸಾಹಾರವನ್ನೇ ಮಾಡುತ್ತಿದ್ದು ಆ ಮೇಲೆ ಮೂರುಜನ್ಮಗಳ ವರೆಗೆ ಮ್ಲೇಚ್ಛನಾಗಿ ಹುಟ್ಟಿದ ಬಳಿಕ ಬ್ರಾಹ್ಮಣನಾಗಿ ಹುಟ್ಟುವನು. ॥೬೨-೬೩॥

ಶೂದ್ರನಿಗೆ ಯಜ್ಞವನ್ನು ಮಾಡಿಸುವ, ಅವನ ಅನ್ನವನ್ನು ತಿನ್ನುವ ಮತ್ತು ಶೂದ್ರರ ಶವವನ್ನು ಸುಡುವ ಬ್ರಾಹ್ಮಣನು ಕೀವಿನಿಂದ ತುಂಬಿದ ಗುಂಡಿಯಲ್ಲಿ ತನ್ನ

ತಾಡಿತೋ ಯಮದೂತೇನ ತದ್ಭೋಜೀ ತತ್ರ ತಿಷ್ಠತಿ ।
ತತೋ ಭಾರತಮಾಗತ್ಯ ಸ ಶೂದ್ರಃ ಸಪ್ತಜನ್ಮಸು ॥೬೬॥

ಮಹಾರೋಗೀ ದರಿದ್ರಶ್ಚ ಬಧಿರೋ ಮೂಕ ಏವ ಚ ।
ಕೃಷ್ಣಂ ಪದ್ಮಂ ಚ ಕೇ ಯಸ್ಯ ತಂ ಸರ್ಪಂ ಹಂತಿ ಯೋ ನರಃ॥೬೭॥

ಸ್ವಲೋಮಮಾನವರ್ಷಂ ಚ ಸರ್ಪಕುಂಡಂ ಪ್ರಯಾತಿ ಸಃ ।
ಸರ್ಪೇಣ ಭಕ್ಷಿತಃ ಸೋಽಥ ಮಮ ದೂತೇನ ತಾಡಿತಃ ॥೬೮॥

ವಸೇಚ್ಚ ಸರ್ಪವಿಡ್ಭೋಜೀ ತತಃ ಸರ್ಪೋ ಭವೇದ್ಧ್ರುವಂ ।
ತತೋ ಭವೇನ್ಮಾನವಶ್ಚ ಸ್ವಲ್ಪಾಯುರ್ದದ್ರುಸಂಯುತಃ ॥೬೯॥

ಮಹಾಕ್ಲೇಶೇನ ತನ್ಮೃತ್ಯುಃ ಸರ್ಪೇಣ ಭಕ್ಷಿತೋಧ್ರುವಂ ।
ವಿಧಿಪ್ರದತ್ತಜೀವ್ಯಾಂಶ್ಚ ಕ್ಷುದ್ರಜಂತೂಂಶ್ಚ ಹಂತಿ ಯಃ ॥೭೦॥

---

ಶರೀರದ ರೋಮಗಳ ಸಂಖ್ಯೆಯಷ್ಟು ವರ್ಷಗಳ ವರೆಗೆ ಯಮದೂತರ ದೊಣ್ಣೆಯ ಏಟನ್ನು ತಿನ್ನುತ್ತಾ ಆ ಕೀವನ್ನೇ ಆಹಾರಮಾಡಿಕೊಂಡಿದ್ದು ಆಮೇಲೆ ಭರತಖಂಡ ದಲ್ಲಿ ಏಳು ಜನ್ಮಗಳ ವರೆಗೆ ಶೂದ್ರನಾಗಿ ಮಹಾರೋಗಿಯಾಗಿಯೂ, ದರಿದ್ರ ನಾಗಿಯೂ ಕಿವುಡನಾಗಿಯೂ ಮೂಗನಾಗಿಯೂ ಹುಟ್ಟುವನು. ॥೬೪-೬೫-೬೬॥

ಯಾವುದರ ತಲೆಯ ಮೇಲೆ ಕಮಲದ ಗುರುತಿರುವುದೋ ಅಂತಹ ಕೃಷ್ಣ ಸರ್ಪವನ್ನು ಯಾವನು ಕೊಲ್ಲುವನೋ ಅವನು ತನ್ನ ಲೋಮಗಳಷ್ಟು ವರ್ಷ ಸರ್ಪಕುಂಡವೆಂಬ ನರಕದಲ್ಲಿ ಸರ್ಪಗಳಿಂದ ಕಚ್ಚಿಸಿಕೊಳ್ಳುತ್ತಾ ಯಮದೂತರ ಏಟನ್ನು ತಿನ್ನುತ್ತಾ, ಸರ್ಪದ ಮಲವನ್ನು ತಿನ್ನುತ್ತಾ ದುಃಖವನ್ನನುಭವಿಸಿ ಸರ್ಪ ವಾಗಿ ಹುಟ್ಟಿ ಬಳಿಕ ಮನುಷ್ಯನಾಗಿ ಅಲ್ಪಾಯಸ್ಸುಳ್ಳವನಾಗಿಯೂ ಮೈಯಲ್ಲೆಲ್ಲ ಹುಣ್ಣುಗಳುಳ್ಳವನಾಗಿಯೂ ಇದ್ದು ಕೊನೆಗೆ ಸರ್ಪದಿಂದ ಕಚ್ಚಿಸಿಕೊಂಡು ಕಷ್ಟ ದಿಂದ ಮರಣಹೊಂದುವನು. ॥೬೭-೬೮-೬೯॥

ಯಾರಿಗೂ ತೊಂದರೆ ಮಾಡದೆ ದೇವರು ಕೊಟ್ಟ ಆಹಾರವನ್ನು ತಿಂದು ಬದುಕುವ ಸಣ್ಣ ಸಣ್ಣ ಪ್ರಾಣಿಗಳನ್ನು ಕೊಲ್ಲುವವನು ಸೊಳ್ಳೆ ನೊಣಗಳ ಕುಂಡದಲ್ಲಿ ತಾನು ಕೊಂದ ಪ್ರಾಣಿಗಳ ಸಂಖೆಯಷ್ಟು ವರ್ಷಗಳ ವರೆಗೆ ಹಗಲೂ ರಾತ್ರಿಯೂ ಅವುಗಳಿಂದ ಕಚ್ಚಿಸಿಕೊಳ್ಳುತ್ತಾ ಕೈಕಾಲುಗಳನ್ನು ಕಟ್ಟಿ ಯಮದೂತರು ಹೊಡೆ

ಸ ದಂಶಮಶಯೋಃ ಕುಂಡೇ ಜಂತುಮಾನಾಬ್ದಮೇವಚ ।
ದಿವಾನಿಶಂ ಭಕ್ಷಿತಸ್ತೈರನಾಹಾರಶ್ಚ ಶಬ್ದವಾನ್ ॥೭೦॥
ಹಸ್ತಪಾದಾದಿಬದ್ಧಶ್ಚ ಯಮದೂತೇನ ತಾಡಿತಃ ।
ತತೋ ಭವೇತ್ಕ್ಷುದ್ರಜಂತುಃ ಜಾತಿಶ್ಚ ಯಾವನೀ ಭವೇತ್ ॥೭೧॥
ತತೋ ಭವೇನ್ಮ್ಲೇಚ್ಛವಶ್ಚ ಸೋಽಂಗಹೀನಸ್ತತಃ ಶುಚಿಃ ।
ಯೋ ಮೂಢೋ ಮಧುಮಶ್ನಾತಿ ಹತ್ವಾ ಚ ಮಧುಮಕ್ಷಿಕಾಃ ॥೭೩॥
ಸ ಏವ ಗಾರಲೇ ಕುಂಡೇ ಜೀವಮಾನಾಬ್ದಕಂ ವಸೇತ್ ।
ಭಕ್ಷಿತೋ ಗರಲೈರ್ದಗ್ಧೋ ಮಮ ದೂತೇನ ತಾಡಿತಃ ॥೭೪॥
ತತೋ ಹಿ ಮಕ್ಷಿಕಾ ಜಾತಿಃ ತತಃ ಶುದ್ಧೋ ಭವೇನ್ನರಃ ।
ದಂಡಂ ಕರೋತ್ಯದಂಡೇ(ಡ್ಯೇ)ಚ ವಿಪ್ರೇ ದಂಡಂ ಕರೋತಿ ಚ॥೭೫॥
ಸ ಕುಂಡಂ ವಜ್ರದಂಷ್ಟ್ರಾಣಾಂ ಕೀಟಾನಾಂ ಯಾತಿ ಸತ್ವರಂ ।
ಸ ತಲ್ಲೋಮಪ್ರಮಾಣಾಬ್ದಂ ತತ್ರ ತಿಷ್ಠತ್ಯಹರ್ನಿಶಂ ॥೭೬॥
ಶಬ್ದಕೃದ್ಭಕ್ಷಿತಸ್ತೈಸ್ತು ಮಮ ದೂತೇನ ತಾಡಿತಃ ।
ಕರೋತಿ ರೋದನಂ ಭದ್ರೇ ಹಾಹಾಕಾರಂ ಕ್ಷಣೇ ಕ್ಷಣೇ ॥೭೭॥

---

ಯುತ್ತಿರಲು ಆಹಾರವಿಲ್ಲದೆ ಕಿರಿಚಿಕೊಳ್ಳುತ್ತಾ ದುಃಖವನ್ನನುಭವಿಸಿ ಕ್ಷುದ್ರಜಂತುವಾಗಿ ಹುಟ್ಟಿ ಬಳಿಕ ಮ್ಲೇಚ್ಛನಾಗಿ ಆ ಮೇಲೆ ಅಂಗಹೀನನಾಗಿ ಹುಟ್ಟಿ ತರುವಾಯ ಶುದ್ಧನಾಗುವನು. ॥೭೦-೭೧-೭೨॥

ಯಾವನು ಜೇನುನೊಣಗಳನ್ನು ಕೊಂದು ಜೇನನ್ನು ಕುಡಿಯುವನೋ ಅವನು ಗರಲಕುಂಡವೆಂಬ ನರಕದಲ್ಲಿ ಆ ಸತ್ತಜೇನುನೊಣಗಳ ಸಂಖ್ಯೆಯಷ್ಟು ವರ್ಷ ವಿಷದನೊಣಗಳಿಂದ ಕಚ್ಚಿಸಿಕೊಂಡು ಯಮದೂತರ ಏಟನ್ನು ಸಹಿಸಿ ಆಮೇಲೆ ನೊಣವಾಗಿ ಹುಟ್ಟಿ ತರುವಾಯ ಶುದ್ಧನಾಗುವನು. ॥೭೩-೭೪॥

ತಪ್ಪಿಲ್ಲದವನನ್ನೂ ಬ್ರಾಹ್ಮಣನನ್ನೂ ಯಾವನು ದಂಡಿಸುವನೋ ಅವನು ವಜ್ರದಂಷ್ಟ್ರವೆಂಬ ಹುಳುಗಳಿಂದ ತುಂಬಿದ ನರಕದಲ್ಲಿ ಬೀಳುವನು. ಅಲ್ಲಿ ಬಹಳ ಕಾಲ ಹಗಲೂ ರಾತ್ರಿಯೂ ಆ ಹುಳುಗಳಿಂದ ಕಚ್ಚಿಸಿಕೊಳ್ಳುತ್ತಾ ನನ್ನ ದೂತರ

ಪುನಃ ಸೂಕರಯೋನೌ ಚ ಜಾಯತೇ ಸಪ್ತಜನ್ಮಸು ।
ತ್ರಿಜನ್ಮನಿ ಕಾಕಯೋನೌ ತತಃ ಶುದ್ಧೋ ಭವೇನ್ನರಃ ॥೭೮॥

ಅರ್ಥಲೋಭೇನ ಯೋ ಮೂಢಃ ಪ್ರಜಾದಂಡಂ ಕರೋತಿ ಸಃ ।
ವೃಶ್ಚಿಕಾನಾಂ ಚ ಕುಂಡಂ ಚ ತಲ್ಲೋಮಾಬ್ದಂ ವಸೇದ್ಧ್ರುವಂ॥೭೯॥

ತತೋ ವೃಶ್ಚಿಕಜಾತಿಶ್ಚ ಸಪ್ತಜನ್ಮಸು ಭಾರತೇ ।
ತತೋ ನರಶ್ಚಾಂಗಹೀನೋ ವ್ಯಾಧಿಶುದ್ಧೋ ಭವೇದ್ಧ್ರುವಂ ॥೮೦॥

ಬ್ರಾಹ್ಮಣಃ ಶಸ್ತ್ರಧಾರೀ ಯೋ ಹ್ಯನ್ಯೇಷಾಂ ಧಾವತೋ ಭವೇತ್ ।
ಸಂಧ್ಯಾಹೀನಶ್ಚ ಯೋ ವಿಪ್ರೋ ಹರಿಭಕ್ತಿವಿಹೀನಕಃ ॥೮೧॥

ಸ ತಿಷ್ಠತಿ ಸ್ವಲೋಮಾಬ್ದಂ ಕುಂಡೇಷು ಚ ಶರಾದಿಷು ।
ವಿದ್ಧಃ ಶರಾದಿಭಿಃ ಶಶ್ವತ್ತತಃ ಶುದ್ಧೋ ಭವೇನ್ನರಃ ॥೮೨॥

ಕಾರಾಗಾರೇ ಸಾಂಧಕಾರೇ ಪ್ರಣಿಹಂತಿ ಪ್ರಜಾಶ್ಚ ಯಃ ।
ಪ್ರಮತ್ತಃ ಸ್ವಸ್ಯ ದೋಷೇಣ ಗೋಲಕುಂಡಂ ಪ್ರಯಾತಿ ಸಃ ॥೮೩॥

---

ಏಟನ್ನು ತಿನ್ನುತ್ತಾ ಕ್ಷಣಕ್ಷಣಕ್ಕೂ ಹಾಹಾಕಾರಮಾಡಿ ಅಳುತ್ತಾ ದುಃಖವನ್ನನುಭವಿಸಿ ಏಳುಜನ್ಮಗಳು ಹಂದಿಯಾಗಿಯೂ ಮೂರು ಜನ್ಮಗಳು ಕಾಗೆಯಾಗಿಯೂ ಹುಟ್ಟಿ ಬಳಿಕ ಶುದ್ಧನಾಗುವನು. ॥೭೫-೭೬-೭೭-೭೮॥

ಹಣದಾಸೆಯಿಂದ ಯಾವ ಬುದ್ಧಿಹೀನನು ಪ್ರಜೆಗಳಿಗೆ ದಂಡನೆಯನ್ನು ಮಾಡುವನೋ ಅವನು ಅನೇಕವರ್ಷ ಚೇಳುಗಳಿಂದ ತುಂಬಿದ ನರಕದಲ್ಲಿದ್ದು ಏಳು ಜನ್ಮಗಳವರೆಗೆ ಚೇಳಾಗಿ ಹುಟ್ಟಿ ಆಮೇಲೆ ಅಂಗಹೀನನಾಗಿ ಹುಟ್ಟಿ ಅನೇಕ ರೋಗಗಳನ್ನು ಅನುಭವಿಸಿ ತರುವಾಯ ಶುದ್ಧನಾಗುವನು. ॥೭೯-೮೦॥

ಬ್ರಾಹ್ಮಣನು ಕ್ಷತ್ರಿಯ ಯೋಗ್ಯವಾದ ಶಸ್ತ್ರಾದಿಗಳನ್ನು ಧರಿಸಿದರೂ, ಇತರ ವರ್ಣದವರ ಬಟ್ಟೆಗಳನ್ನೊಗೆದರೂ, ಸಂಧ್ಯಾವಂದನೆಯನ್ನು ಮಾಡದಿದ್ದರೂ, ದೇವ ಭಕ್ತಿ ಇಲ್ಲದಿದ್ದರೂ, ಅವನು ಬಹಳಕಾಲ ಶಸ್ತ್ರಕುಂಡದಲ್ಲಿ ಆಯುಧಗಳ ಬಾಧೆಯನ್ನು ಸಹಿಸುತ್ತಿದ್ದು ಬಳಿಕ ಶುದ್ಧನಾಗುವನು. ॥೮೧-೮೨॥

ಯಾವ ರಾಜನು ಮದಿಸಿದವನಾಗಿ ಕತ್ತಲೆಯ ಸೆರೆಮನೆಯಲ್ಲಿ ಪ್ರಜೆಗಳನ್ನು ಕೊಲ್ಲುವನೋ ಅವನು ಬಿಸಿನೀರಿನಿಂದ ನೆನೆದ ಕೆಸರಿನಿಂದ ತುಂಬಿದ ಕತ್ತಲೆಯಿಂದ

ಸ ಪಂಕತಪ್ತತೋಯಾಕ್ತಂ ಸಾಂಧಕಾರಂ ಭಯಂಕರಂ ।
ತೀಕ್ಷ್ಣದಂಷ್ಟ್ರೈಶ್ಚ ಕೀಟೈಶ್ಚ ಸಂಯುಕ್ತಂ ಗೋಲಕುಂಡಕಂ॥೮೪॥

ಕೀಟೈರ್ವಿದ್ಧೋ ವಸೇತ್ತತ್ರ ಪ್ರಜಾಲೋಮಾಬ್ದಮೇವ ಚ ।
ತತೋ ಭವೇತ್ಪ್ರಜಾಭೃತ್ಯಸ್ತತಃ ಶುದ್ಧೋ ಭವೇತ್ಕ್ರಮಾತ್॥೮೫॥

ಸರೋವರಾದುತ್ಥಿತಾಂಶ್ಚ ನಕ್ರಾದೀನ್ಹಂತಿ ಯೋ ನರಃ ।
ನಕ್ರಕಂಟಕಮಾನಾಬ್ದಂ ನಕ್ರಕುಂಡಂ ಪ್ರಯಾತಿ ಸಃ ॥೮೬॥

ತತೋ ನಕ್ರಾದಿಜಾತೀಯೋ ಭವೇನ್ನಕ್ರಾದಿಷು ಧ್ರುವಂ ।
ತತಃ ಸದ್ಯೋ ವಿಶುದ್ಧೋ ಹಿ ದಂಡೇನೈವ ಪುನಃ ಪುನಃ ॥೮೭॥

ವಕ್ಷಃ ಶ್ರೋಣೀ ಸ್ತನಾಸ್ಯಂ ಚ ಯಃ ಪಶ್ಯತಿ ಪರಸ್ತ್ರಿಯಃ ।
ಕಾಮೇನ ಕಾಮುಕೋ ಯೋ ಹಿ ಪುಣ್ಯಕ್ಷೇತ್ರೇ ಚ ಭಾರತೇ ॥೮೮॥

ಸ ವಸೇತ್ಕಾಕಕುಂಡೇ ಚ ಕಾಕೈಃ ಸಂಚೂರ್ಣಲೋಚನಃ ।
ತತಃ ಸ್ವಲೋಮಮಾನಾಬ್ದಂ ಭವೇದ್ದಗ್ಧಸ್ತ್ರಿಜನ್ಮನಿ ॥೮೯॥

---

ಭಯಂಕರವಾದ ಗೋಲಕುಂಡವೆಂಬ ನರಕದಲ್ಲಿ ಕ್ರೂರವಾದ ಹಲ್ಲುಗಳಿರುವ ಹುಳುಗಳಿಂದ ಕಚ್ಚಿಸಿಕೊಳ್ಳುತ್ತಾ ಆ ಪ್ರಜೆಗಳ ರೋಮಗಳಷ್ಟು ವರ್ಷ ದುಃಖವನ್ನನುಭವಿಸುತ್ತಾ ಆಮೇಲೆ ಪ್ರಜೆಗಳ ಆಳಾಗಿ ಹುಟ್ಟಿ ಕ್ರಮವಾಗಿ ಶುದ್ಧನಾಗುವನು. ||೮೩-೮೪-೮೫||

ಸರೋವರದಲ್ಲಿ ಹುಟ್ಟಿದ ಮೊಸಳೆ, ಮೀನು ಮುಂತಾದ ಪ್ರಾಣಿಗಳನ್ನು ಅವು ಹೊರಕ್ಕೆ ಬಂದಾಗ ಯಾವನು ಕೊಲ್ಲುತ್ತಾನೆಯೋ ಅವನು ನಕ್ರಕುಂಡದಲ್ಲಿದ್ದು ಮೊಸಳೆ ಮುಂತಾದ ಜನ್ಮವನ್ನು ಪಡೆದು ಪುನಃ ಪುನಃ ತನಗುಂಟಾದ ದಂಡನೆಯಿಂದಲೇ ಶುದ್ಧನಾಗುವನು. ||೮೬-೮೭||

ಪುಣ್ಯಕ್ಷೇತ್ರವಾದ ಭರತಖಂಡದಲ್ಲಿ ಯಾವ ಮನುಷ್ಯನು ಕಾಮಾಸಕ್ತನಾಗಿ ಪರಸ್ತ್ರೀಯ ಎದೆ, ತೊಡೆ, ಸ್ತನಗಳು, ಮುಖ, ಇವುಗಳನ್ನು ನೋಡುತ್ತಾನೆಯೋ ಅವನು ಕಾಕಕುಂಡವೆಂಬ ನರಕದಲ್ಲಿ ಕಾಗೆಗಳಿಂದ ತನ್ನ ಕಣ್ಣನ್ನು ಕುಕ್ಕಿಸಿಕೊಳ್ಳುತ್ತಾ ತನ್ನ ರೋಮಗಳ ಸಂಖ್ಯೆಯಷ್ಟು ವರ್ಷಗಳ ಕಾಲವಿದ್ದು ಮೂರುಜನ್ಮಗಳಲ್ಲಿ ಬೆಂಕಿಗೆ ಬಿದ್ದು ಶರೀರವನ್ನು ಬಿಡುವನು. ||೮೮-೮೯||

ಸ್ವರ್ಣಸ್ತೇಯೀ ಚ ಯೋ ಮೂಢೋ ಭಾರತೇ ಸುರವಿಪ್ರಯೋಃ ।
ಸ ಚ ಮಂಥಾನಕುಂಡೇ ವೈ ಸ್ವಲೋಮಾಬ್ದಂ ವಸೇದ್ಧ್ರುವಂ॥೯೦॥

ತಾಡಿತೋ ಯಮದೂತೇನ ಮಂಥಾನೈಶ್ಛನ್ನಲೋಚನಃ ।
ತದ್ವಿಡ್ಭೋಜೀ ಚ ತತ್ರೈವ ತತಶ್ಚಾಂಧಸ್ತ್ರಿಜನ್ಮನಿ ॥೯೧॥

ಸಪ್ತಜನ್ಮದರಿದ್ರಶ್ಚ ಮಹಾಕ್ರೂರಶ್ಚ ಪಾತಕೀ ।
ಭಾರತೇ ಸ್ವರ್ಣಕಾರಶ್ಚ ಸ ಚ ಸ್ವರ್ಣವಣಿಕ್ತತಃ ॥೯೨॥

ಯೋ ಭಾರತೇ ತಾಮ್ರಚೋರೋ ಲೋಹಚೋರಶ್ಚ ಸುಂದರಿ ।
ಸ ಚ ಸ್ವಲೋಮಮಾನಾಬ್ದಂ ಬೀಜಕುಂಡಂ ಪ್ರಯಾತಿ ಸಃ ॥೯೩॥

ತತ್ರೈವ ಬೀಜವಿಡ್ಭೋಜೀ ಬೀಜೈಶ್ಚ ಛನ್ನಲೋಚನಃ ।
ತಾಡಿತೋ ಯಮದೂತೇನ ತತಃ ಶುದ್ಧೋ ಭವೇನ್ನರಃ ॥೯೪॥

---

ದೇವತೆಗಳ ಮತ್ತು ಬ್ರಾಹ್ಮಣರ ಚಿನ್ನವನ್ನು ಕದ್ದ ಮೂಢನು ಮಂಥಾನ ಕುಂಡವೆಂಬ ನರಕದಲ್ಲಿ ತನ್ನ ರೋಮಗಳಷ್ಟು ವರ್ಷ ವಾಸಮಾಡುತ್ತಾ ಯಮ ದೂತರ ಪೆಟ್ಟನ್ನು ಸಹಿಸಿ ಮಂಥಾನವೆಂಬ ಕ್ರಿಮಿಗಳು ಕಣ್ಣುತುಂಬಾ ತುಂಬಿಕೊಂಡಿ ರಲು ಆ ಕ್ರಿಮಿಗಳ ಮಲವನ್ನು ತಿನ್ನುತ್ತಾ ದುಃಖವನ್ನನುಭವಿಸಿ ಆಮೇಲೆ ಮೂರು ಜನ್ಮಗಳು ಕುರುಡನಾಗಿ ಹುಟ್ಟಿ ಏಳು ಜನ್ಮಗಳು ದರಿದ್ರನಾಗಿ ಮಹಾಕ್ರೂರಿಯೂ ಮಹಾ ಪಾಪಿಯೂ ಆಗಿ ಬಳಿಕ ಭರತಖಂಡದಲ್ಲಿ ಅಕ್ಕಸಾಲೆಯಾಗಿ ಆ ಜನ್ಮ ಕಳೆದ ಮೇಲೆ ಚಿನ್ನದ ವ್ಯಾಪಾರಮಾಡುವ ವರ್ತಕನಾಗಿ ಹುಟ್ಟುವನು. ॥೯೦-೯೧-೯೨॥

ಸಾವಿತ್ರಿಯೇ, ಕೇಳು. ಭರತಖಂಡದಲ್ಲಿ ತಾಮ್ರವನ್ನಾಗಲೀ ಮತ್ತು ಲೋಹ ವನ್ನಾಗಲೀ ಕದ್ದವನು ತನ್ನ ಲೋಮಗಳಷ್ಟು ವರ್ಷ ಬೀಜಕುಂಡವೆಂಬ ನರಕದಲ್ಲಿ ಬೀಜವೆಂಬ ಕ್ರಿಮಿಗಳ ಮಲವನ್ನು ತಿನ್ನುತ್ತಾ ಆ ಕ್ರಿಮಿಗಳು ಕಣ್ಣನ್ನು ಮುತ್ತಿ ಕೊಂಡಿರಲು ಯಮದೂತರ ಏಟುಗಳನ್ನು ಸಹಿಸುತ್ತಾ ದುಃಖವನ್ನನುಭವಿಸಿ ಬಳಿಕ ಶುದ್ಧನಾಗುವನು. ॥೯೩-೯೪॥

ಭಾರತೇ ದೇವಚೋರಶ್ಚ ದೇವದ್ರವ್ಯಾಪಹಾರಕಃ ।
ಸ ದುಸ್ತರೇ ವಜ್ರಕುಂಡೇ ಸ್ವಲೋಮಾಬ್ದಂ ವಸೇದ್ಧ್ರುವಂ ॥೯೫॥

ದೇಹದಗ್ಧೋಽಪಿ ತದ್ವಜ್ರೈರನಾಹಾರಶ್ಚ ಶಬ್ದಕೃತ್ ।
ತಾಡಿತೋ ಯಮದೂತೈಶ್ಚ ತತಃ ಶುದ್ಧೋ ಭವೇನ್ನರಃ ॥೯೬॥

ರೌಪ್ಯಗವ್ಯಾಂಶುಕಾನಾಂ ಚ ಯಶ್ಚೋರಃ ಸುರವಿಪ್ರಯೋಃ ।
ತಪ್ತಪಾಷಾಣಕುಂಡೇ ಚ ಸ್ವಲೋಮಾಬ್ದಂ ವಸೇದ್ಧ್ರುವಂ ॥೯೭॥

ತ್ರಿಜನ್ಮನಿ ಚ ಕಂಸೋಽಪಿ ಶ್ವೇತರೂಪಸ್ತ್ರಿಜನ್ಮನಿ ।
ಜನ್ಮೈಕಂ ಶ್ವೇತಚಿನ್ಹಶ್ಚ ತತೋಽನ್ಯೇ ಶ್ವೇತಪಕ್ಷಿಣಃ ॥೯೮॥

ತತೋ ರಕ್ತವಿಕಾರೀ ಚ ಶೂಲೀ ನ್ವೈ ಮಾನವೋ ಭವೇತ್ ।
ಸಪ್ತಜನ್ಮಸು ಚಾಲ್ಪಾಯುಸ್ತತಃ ಶುದ್ಧೋ ಭವೇನ್ನರಃ ॥೯೯॥

---

ಭರತಖಂಡದಲ್ಲಿ ದೇವತೆಗಳ ದ್ರವ್ಯವನ್ನು ಅಪಹರಿಸಿದವನು ಭಯಂಕರವಾದ ವಜ್ರಕುಂಡವೆಂಬ ನರಕದಲ್ಲಿ ತನ್ನ ರೋಮಗಳಷ್ಟು ವರ್ಷ ವಾಸಮಾಡುತ್ತಾ ಆ ವಜ್ರಗಳಿಂದ ತನ್ನ ಶರೀರವು ಸುಡುತ್ತಿದ್ದರೂ ಆಹಾರವಿಲ್ಲದೆ ಗಟ್ಟಿಯಾಗಿ ಕೂಗಿಕೊಳ್ಳುತ್ತಾ ಯಮದೂತರ ಏಟನ್ನು ತಿನ್ನುತ್ತಾ ದುಃಖವನ್ನನುಭವಿಸಿ ಶುದ್ಧನಾಗುವನು. ॥೯೫-೯೬॥

ಯಾವನು ದೇವಬ್ರಾಹ್ಮಣರ ಬೆಳ್ಳಿ, ಗೋಸಂಬಂಧವಾದ, ಹಾಲು, ಮೊಸರು ಮುಂತಾದುವು, ಬಟ್ಟೆಗಳು ಇವುಗಳನ್ನು ಕದಿಯುವನೋ ಅವನು ತನ್ನ ಲೋಮಗಳಷ್ಟು ವರ್ಷ ತಪ್ತಪಾಷಾಣಕುಂಡವೆಂಬ ನರಕದಲ್ಲಿದ್ದು ಮೂರು ಜನ್ಮಗಳು ಆಮೆಯಾಗಿಯೂ ಮೂರುಜನ್ಮಗಳು ಕಪ್ಪೆಯಾಗಿಯೂ ಮೂರು ಜನ್ಮಗಳು ಕುಷ್ಠರೋಗಿಯಾಗಿಯೂ ಒಂದುಜನ್ಮ ಕುಷ್ಠರೋಗದ ಗುರುತುಳ್ಳವನಾಗಿಯೂ ಆಮೇಲೆ ಬಿಳಿಯ ಬಣ್ಣದ ಹಕ್ಕಿಗಳಾಗಿಯೂ ಬಳಿಕ ಮನುಷ್ಯನಾಗಿ ರಕ್ತವಿಕಾರವಾದ ರೋಗವುಳ್ಳವನಾಗಿಯೂ ಶೂಲವೆಂಬ ರೋಗವುಳ್ಳವನಾಗಿಯೂ ಏಳು ಜನ್ಮಗಳು ಅಲ್ಪಾಯಸ್ಸುಳ್ಳವನಾಗಿಯೂ ಹುಟ್ಟಿ ಬಳಿಕ ಶುದ್ಧನಾಗುವನು. ॥೯೭-೯೮-೯೯॥

ರೈತಂ ಕಾಂಸ್ಯಮಯಂ ಪಾತ್ರಂ ಯೋ ಹರೇದ್ದೇವವಿಪ್ರಯೋಃ ।
ತೀಕ್ಷ್ಣಪಾಷಾಣಕುಂಡೇ ಚ ಸ್ವಲೋಮಾಬ್ದಂ ವಸೇನ್ನರಃ ॥೧೦೦॥

ಸ ಭವೇದಶ್ವಜಾತಿಶ್ಚ ಭಾರತೇ ಸಪ್ತಜನ್ಮಸು ।
ತತೋಽಧಿಕಾಂಗಜಾತಿಶ್ಚ ಪಾದರೋಗೀ ತತಃ ಶುಚಿಃ ॥೧೦೧॥

ಪುಂಶ್ಚಲ್ಯನ್ನಂ ಚ ಯೋ ಭುಂಙ್ತೇ ಪುಂಶ್ಚಲೀಜೀವ್ಯಜೀವಿನಃ ।
ಸ್ವಲೋಮಮಾನವರ್ಷಂ ಚ ಲಾಲಾಕುಂಡೇ ವಸೇದ್ಧ್ರುವಂ ॥೧೦೨॥

ತಾಡಿತೋ ಯಮದೂತೇನ ತದ್ಭೋಜೀ ತತ್ರ ದುಃಖಿತಃ ।
ತತಃ ಚಕ್ಷುಃ ಶೂಲರೋಗೀ ತತಃ ಶುದ್ಧಃ ಕ್ರಮೇಣ ಸಃ ॥೧೦೩॥

ಮ್ಲೇಚ್ಛಸೇವೀ ಮಸೀಜೀವೀ ಯೋ ವಿಪ್ರೋ ಭಾರತೇ ಭುವಿ ।
ವಸೇತ್ಸ್ವಲೋಮಮಾನಾಬ್ದಂ ಮಸೀಕುಂಡೇ ಸ ದುಃಖಭಾಕ್ ॥೧೦೪॥

ತಾಡಿತೋ ಯಮದೂತೇನ ತದ್ಭೋಜೀ ತತ್ರ ತಿಷ್ಠತಿ ।
ತತಸ್ತ್ರಿಜನ್ಮನಿ ಭವೇತ್ಕೃಷ್ಣವರ್ಣಃ ಪಶುಃ ಸತಿ ॥೧೦೫॥

ತ್ರಿಜನ್ಮನಿ ಭವೇಚ್ಛಾಗಃ ಕೃಷ್ಣವರ್ಣಸ್ತ್ರಿಜನ್ಮನಿ ।
ತತಃ ಸ ತಾಲವೃಕ್ಷಶ್ಚ ತತಃ ಶುದ್ಧೋ ಭವೇನ್ನರಃ ॥೧೦೬॥

---

ದೇವಬ್ರಾಹ್ಮಣರ ಹಿತ್ತಾಳೆ ಕಂಚು ಮುಂತಾದ ಪಾತ್ರೆಗಳನ್ನು ಕದ್ದವನು ತನ್ನ ರೋಮಗಳಷ್ಟು ವರ್ಷ ತೀಕ್ಷ್ಣಪಾಷಾಣಕುಂಡವೆಂಬ ನರಕದಲ್ಲಿದ್ದು ಭರತಖಂಡದಲ್ಲಿ ಏಳು ಜನ್ಮಗಳು ಕುದುರೆಯಾಗಿದ್ದು ಆಮೇಲೆ ಅಂಡವೃದ್ಧಿರೋಗಿಯೂ ಪಾದರೋಗಿಯೂ ಆಗಿ ಹುಟ್ಟಿ ಬಳಿಕ ಶುದ್ಧನಾಗುವನು. ||೧೦೦-೧೦೧||

ಜಾರೆಯ ಅನ್ನವನ್ನು ತಿಂದವನೂ ಜಾರತನದಿಂದ ಜೀವನಮಾಡತಕ್ಕವರೂ ಬಹಳ ಕಾಲದವರೆಗೆ ಲಾಲಾಕುಂಡವೆಂಬ ನರಕದಲ್ಲಿ ಯಮದೂತರ ಏಟನ್ನು ಸಹಿಸಿ ಲಾಲಾರಸವನ್ನೇ ಆಹಾರಮಾಡಿಕೊಂಡು ದುಃಖವನ್ನನುಭವಿಸಿ ಬಳಿಕ ಕಣ್ಣು ನೋವಿನ ರೋಗಿಯಾಗಿ ಹುಟ್ಟಿ ಆಮೇಲೆ ಶುದ್ಧನಾಗುವನು. ||೧೦೨-೧೦೩||

ಮ್ಲೇಚ್ಛರ ಸೇವಕನೂ ಮಸಿಯಿಂದ ಜೀವಿಸುವವನೂ ಆದ ಬ್ರಾಹ್ಮಣನು ಬಹಳಕಾಲ ಮಸೀಕುಂಡವೆಂಬ ನರಕದಲ್ಲಿ ಯಮದೂತರ ಹಿಂಸೆಯನ್ನನುಭವಿ

ಧಾನ್ಯಾದಿಶಸ್ಯಂ ತಾಂಬೂಲಂ ಯೋ ಹರೇತ್ಸುರವಿಪ್ರಯೋಃ ।
ಆಸನಂ ಚ ತಥಾ ಕಲ್ಪಂ ಚೂರ್ಣಕುಂಡೇ ಪ್ರಯಾತಿ ಸಃ ॥೧೦೭॥

ಶತಾಬ್ದಂ ತತ್ರ ನಿವಸೇದ್ಯಮದೂತೇನ ತಾಡಿತಃ ।
ತತೋ ಭವೇನ್ಮೇಷಜಾತಿಃ ಕುಕ್ಕುಟಶ್ಚ ತ್ರಿಜನ್ಮನಿ ॥೧೦೮॥

ತತೋ ಭವೇದ್ವಾನರಶ್ಚ ಕಾಸವ್ಯಾಧಿಯುತೋ ಭುವಿ ।
ವಂಶಹೀನೋ ದರಿದ್ರಶ್ಚ ಅಲ್ಪಾಯುಶ್ಚ ತತಃ ಶುಚಿಃ ॥೧೦೯॥

ಕರೋತಿ ಚಕ್ರಂ ವಿಪ್ರಾಣಾಂ ಹೃತ್ವಾ ದ್ರವ್ಯಂ ಚ ಯೋ ನರಃ ।
ಸ ವಸೇಚ್ಚಕ್ರಕುಂಡೇ ಚ ಶತಾಬ್ದಂ ದಂಡತಾಡಿತಃ ॥೧೧೦॥

ತತೋ ಭವೇನ್ಮಾಸವಶ್ಚ ತೈಲಕಾರಸ್ತ್ರಿಜನ್ಮನಿ ।
ವ್ಯಾಧಿಯುಕ್ತೋ ಭವೇದ್ರೋಗೀ ವಂಶಹೀನಸ್ತತಃ ಶುಚಿಃ ॥೧೧೧॥

---

ಸುತ್ತಾ ಮಸಿಯನ್ನೇ ಆಹಾರಮಾಡಿಕೊಂಡು ಇದ್ದು ಆಮೇಲೆ ಮೂರು ಜನ್ಮಗಳು ಕಪ್ಪುಬಣ್ಣದ ಪಶುವಾಗಿ ಮೂರುಜನ್ಮಗಳು ಕರಿಯ ಮೇಕೆಯಾಗಿ ಬಳಿಕ ತಾಳೆಯ ಮರವಾಗಿ ಆಮೇಲೆ ಶುದ್ಧನಾಗುವನು. ॥೧೦೪-೧೦೫-೧೦೬॥

ದೇವಬ್ರಾಹ್ಮಣರ ಧಾನ್ಯಾದಿಗಳನ್ನೂ ಪ್ರಶಸ್ತವಸ್ತುಗಳನ್ನೂ ತಾಂಬೂಲವನ್ನೂ ಪೀಠವನ್ನೂ ಹಾಸಿಗೆಯನ್ನೂ ಕದ್ದವನು ನೂರುವರ್ಷಗಳ ವರೆಗೆ ಚೂರ್ಣಕುಂಡವೆಂಬ ನರಕದಲ್ಲಿ ಯಮದೂತರ ಹಿಂಸೆಯನ್ನನುಭವಿಸಿ ಆಡಾಗಿ ಹುಟ್ಟಿ ಮೂರು ಜನ್ಮಗಳು ಕೋಳಿಯಾಗಿಯೂ ಆ ಮೇಲೆ ಕಪಿಯಾಗಿಯೂ ಉಬ್ಬುಸದ ರೋಗಿಯಾಗಿಯೂ ದರಿದ್ರನೂ ವಂಶಹೀನನೂ ಅಲ್ಪಾಯುವೂ ಆಗಿ ಹುಟ್ಟಿ ತರುವಾಯ ಶುಚಿಯಾಗುವನು. ॥೧೦೭-೧೦೮-೧೦೯॥

ಬ್ರಾಹ್ಮಣರ ಹಣವನ್ನಪರಿಸಿ ಅದರಿಂದ ಚಕ್ರಪೂಜೆಯನ್ನು ಅಥವಾ ಕುಂಬಾರನ ಚಕ್ರವೇ ಮೊದಲಾದುವನ್ನು ಮಾಡಿದವನು ನೂರುವರ್ಷದವರೆಗೆ ಯಮ ದೂತರ ಹಿಂಸೆಯಿಂದ ಚಕ್ರಕುಂಡವೆಂಬ ನರಕದಲ್ಲಿದ್ದು ಬಳಿಕ ಮನುಷ್ಯನಾಗಿ ಮೂರು ಜನ್ಮಗಳು ಗಾಣಿಗನಾಗಿ ಆಮೇಲೆ ರೋಗಿಯಾಗಿ ವಂಶಹೀನನಾಗಿ ಹುಟ್ಟಿ ಬಳಿಕ ಶುದ್ಧಿಯಾಗುವನು. ॥೧೧೦-೧೧೧॥

ಗೋಧನೇಷು ಚ ವಿಪ್ರೇಷು ಕರೋತಿ ವಕ್ರತಾಂ ಪುಮಾನ್ ।
ಪ್ರಯಾತಿ ವಕ್ರಕುಂಡಂ ಸ ತಿಷ್ಠೇದ್ಯುಗಶತಂ ಸತಿ ॥೧೧೨॥

ತತೋ ಭವೇತ್ಸ ವಕ್ರಾಂಗೋ ಹೀನಾಂಗಃ ಸಪ್ತಜನ್ಮನಿ ।
ದರಿದ್ರೋ ವಂಶಹೀನಶ್ಚ ಭಾರ್ಯಾಹೀನಸ್ತತಃ ಶುಚಿಃ ॥೧೧೪॥

ತತೋ ಭವೇದ್ಗೃಧ್ರಜನ್ಮಾ ತ್ರಿಜನ್ಮನಿ ಚ ಸೂಕರಃ ।
ತ್ರಿಜನ್ಮನಿ ಬಿಡಾಲಶ್ಚ ಮಯೂರಶ್ಚ ತ್ರಿಜನ್ಮನಿ ॥೧೧೪॥

ನಿಷಿದ್ಧಂ ಕೂರ್ಮಮಾಂಸಂ ಚ ಬ್ರಾಹ್ಮಣೋ ಯೋ ಹಿ ಭಕ್ಷತಿ ।
ಕೂರ್ಮಕುಂಡೇ ವಸೇತ್ಸೋಽಪಿ ಶತಾಬ್ದಂ ಕೂರ್ಮಭಕ್ಷಿತಃ॥೧೧೫॥

ತತೋ ಭವೇತ್ಕೂರ್ಮಜನ್ಮಾ ತ್ರಿಜನ್ಮನಿ ಚ ಸೂಕರಃ ।
ತ್ರಿಜನ್ಮನಿ ಬಿಡಾಲಶ್ಚ ಮಯೂರಶ್ಚ ತತಃ ಶುಚಿಃ ॥೧೧೬॥

ಘೃತಂ ತೈಲಾದಿಕಂ ಚೈವ ಯೋ ಹರೇತ್ಸುರವಿಪ್ರಯೋಃ ।
ಸ ಯಾತಿ ಜ್ವಾಲಾಕುಂಡಂ ಚ ಭಸ್ಮಕುಂಡಂ ಚ ಪಾತಕೀ ॥೧೧೭॥

---

ಗೋವಿನಲ್ಲಿಯೂ ಬ್ರಾಹ್ಮಣರಲ್ಲಿಯೂ ವಕ್ರಹೃದಯನ್ನು ಮಾಡಿದ ಮನುಷ್ಯನು ನೂರು ಯುಗಗಳವರೆಗೆ ವಕ್ರಕುಂಡವೆಂಬ ನರಕದಲ್ಲಿದ್ದು ಆಮೇಲೆ ವಕ್ರವಾದ ಅವಯವಗಳುಳ್ಳವನಾಗಿ ಅಂಗಹೀನನಾಗಿ ಏಳು ಜನ್ಮಗಳನ್ನು ಕಳೆದು ಹದ್ದಾಗಿ ಹುಟ್ಟಿ ಮೂರುಜನ್ಮಗಳು ಹಂದಿಯಾಗಿ ಮೂರು ಜನ್ಮಗಳು ಬೆಕ್ಕಾಗಿ ಮೂರು ಜನ್ಮಗಳು ನವಿಲಾಗಿ ಬಳಿಕ ದರಿದ್ರನೂ ವಂಶಹೀನನೂ ಹೆಂಡಿತಿಯಿಲ್ಲದವನೂ ಆಗಿದ್ದು ತರುವಾಯ ಶುದ್ಧನಾಗುವನು. ॥೧೧೨-೧೧೩-೧೧೪॥

ನಿಷಿದ್ಧವಾದ ಆಮೆಯ ಮಾಂಸವನ್ನು ತಿಂದ ಬ್ರಾಹ್ಮಣನು ನೂರುವರ್ಷಗಳು ಕೂರ್ಮಕುಂಡವೆಂಬ ನರಕದಲ್ಲಿ ಆಮೆಗಳಿಂದ ಕಚ್ಚಿಸಿಕೊಳ್ಳುತ್ತಾ ಇದ್ದು ಆಮೇಲೆ ಆಮೆಯಾಗಿ ಹುಟ್ಟಿ ಮೂರುಜನ್ಮಗಳು ಹಂದಿಯಾಗಿಯೂ ಮೂರು ಜನ್ಮಗಳು ಬೆಕ್ಕಾಗಿಯೂ ಮೂರು ಜನ್ಮಗಳು ನವಿಲಾಗಿಯೂ ಹುಟ್ಟಿ ಬಳಿಕ ಶುದ್ಧನಾಗುವನು. ॥೧೫-೧೬॥

ದೇವಬ್ರಾಹ್ಮಣರ ತುಪ್ಪ, ಎಣ್ಣೆ ಮುಂತಾದುವನ್ನು ಕದ್ದವನು ಜ್ವಾಲಾಕುಂಡ ಭಸ್ಮಕುಂಡ ಎಂಬ ನರಕಗಳಲ್ಲಿ ನೂರುವರ್ಷಗಳಿದ್ದು ಯಮದೂತರಿಂದ ಎಣ್ಣೆಯಲ್ಲಿ

ತತ್ರ ಸ್ಥಿತ್ವಾ ಶತಾಬ್ದಂ ಚ ಸ ಭವೇತ್ತೈಲಪಾಚಿತಃ ।
ಸಪ್ತಜನ್ಮನಿ ಮತ್ಸ್ಯಶ್ಚ ಮೂಷಕಶ್ಚ ತತಃ ಶುಚಿಃ ॥೧೧೮॥

ಸುಗಂಧಿ ತೈಲಂ ಧಾತ್ರೀಂ ವಾ ಗಂಧದ್ರವ್ಯಾನ್ಯದೇವ ವಾ ।
ಭಾರತೇ ಪುಣ್ಯವರ್ಷೇ ಚ ಯೋ ಹರೇತ್ಸುರವಿಪ್ರಯೋಃ ॥೧೧೯॥

ಸ ವಸೇದ್ದಗ್ಧಕುಂಡೇ ಚ ಭವೇದ್ದಗ್ಧೋ ದಿವಾನಿಶಂ ।
ಸ್ವಲೋಮಮಾನವರ್ಷಂ ಚ ತತೋ ದುರ್ಗಂಧಿಕೋ ಭವೇತ್ ॥೧೨೦॥

ದುರ್ಗಂಧಿಕಃ ಸಪ್ತಜನ್ಮ ಮೃಗನಾಭಿಸ್ತ್ರಿಜನ್ಮನಿ ।
ಸಪ್ತಜನ್ಮಸು ಮಂಥಾನಸ್ತತೋ ಹಿ ಮಾನವೋ ಭವೇತ್ ॥೧೨೧॥

ಬಲೇನೈವ ಛಲೇನೈವ ಹಿಂಸಾರೂಪೇಣ ವಾ ಸತಿ ।
ಬಲಿಷ್ಠಶ್ಚ ಹರೇದ್ಭೂಮಿಂ ಭಾಸತೇ ಪರಪೈತೃಕೀಂ ॥೧೨೨॥

ಸ ವಸೇತ್ತಪ್ತಸೂಚೀಂ ಚ ಭವೇತ್ತಾಪೀ ದಿವಾನಿಶಂ ।
ತಪ್ತತೈಲೇ ಯಥಾ ಜೀವೋ ದಗ್ಧೋ ಭವತಿ ಸಂತತಂ ॥೧೨೩॥

ಭಸ್ಮಸಾನ್ನ ಭವತ್ಯೇವ ಭೋಗೇ ದೇಹೋ ನ ನಶ್ಯತಿ ।
ಸಪ್ತಮನ್ವಂತರಂ ಪಾಪೀ ಸಂತಪ್ತಸ್ತತ್ರ ತಿಷ್ಠತಿ ॥೧೨೪॥

---

ಹುರಿಸಿಕೊಂಡು ಏಳು ಜನ್ಮಗಳು ಮೀನಾಗಿಯೂ ಇಲಿಯಾಗಿಯೂ ಹುಟ್ಟಿ ಬಳಿಕ ಶುದ್ಧನಾಗುವನು. ॥೧೧೭-೧೧೮॥

ದೇವಬ್ರಾಹ್ಮಣರ ಸುಗಂಧ ತೈಲವನ್ನೂ ನೆಲ್ಲಿಯಕಾಯನ್ನೂ ಇತರ ಸುಗಂಧ ದ್ರವ್ಯಗಳನ್ನೂ ಕದ್ದವನು ದಗ್ಧಕುಂಡವೆಂಬ ನರಕದಲ್ಲಿ ಹಗಲೂ ರಾತ್ರಿಯೂ ಉರಿಯುತ್ತಿದ್ದು ಏಳು ಜನ್ಮಗಳವರೆಗೆ ಕೆಟ್ಟವಾಸನೆಯ ಶರೀರವುಳ್ಳವನಾಗಿ ಹುಟ್ಟಿ ಮೂರು ಜನ್ಮಗಳು ಖಡ್ಗಮೃಗವಾಗಿ ಏಳು ಜನ್ಮಗಳವರೆಗೆ ಕಡೆಗೋಲಾಗಿದ್ದು ಆಮೇಲೆ ಮನುಷ್ಯನಾಗುವನು. ॥೧೧೯-೧೨೦-೧೨೧॥

ಬಲಿಷ್ಠನಾದವನು ಬಲದಿಂದಲಾಗಲೀ ಹಟದಿಂದಲಾಗಲೀ ಹಿಂಸೆಯಿಂದಲಾಗಲೀ ಮತ್ತೊಬ್ಬನ ಭೂಮಿಯನ್ನು ಕಿತ್ತುಕೊಂಡರೆ ಅವನು ತಪ್ತಸೂಚಿ ಎಂಬ ನರಕದಲ್ಲಿ ಹಗಲೂ ರಾತ್ರಿಯೂ ಕಾದ ಎಣ್ಣೆಯಲ್ಲಿ ಬಿದ್ದ ಪ್ರಾಣಿಯಂತೆ ಸಂತಾಪ ಹೊಂದಿ

ಶಬ್ದಂ ಕರೋತ್ಯನಾಹಾರೋ ಯಮದೂತೇನ ತಾಡಿತಃ ।
ಷಷ್ಟಿರ್ವರ್ಷಸಹಸ್ರಾಣಿ ವಿಟ್ಕ್ರಿಮಿಶ್ಚ ಭವೇತ್ತತಃ ॥೧೨೫॥

ತತೋ ಭವೇದ್ಭೂಮಿಹೀನೋ ದರಿದ್ರಶ್ಚ ತತಃ ಶುಚಿಃ ।
ತತಃ ಸ್ವಯೋನಿಂ ಸಂಪ್ರಾಪ್ಯ ಶುಭಕರ್ಮಾಚರೇತ್ಪುನಃ ॥೧೨೬॥

## ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ನವಮಸ್ಕಂಧೇ ತ್ರಯಸ್ತ್ರಿಂಶೋಽಧ್ಯಾಯಃ

---

ಶರೀರವು ಬೂದಿಯಂತೆ ಬೆಂಡಾಗಿ ಯಾತನಾಶರೀರವು ನಾಶವಾಗದೆ ಕಷ್ಟವನ್ನನುಭವಿಸುವನು. ಏಳು ಮನ್ವಂತರಗಳ ವರೆಗೆ ಆಹಾರವಿಲ್ಲದೆ ಕೂಗಿಕೊಳ್ಳುತ್ತಾ ಯಮದೂತರ ಹಿಂಸೆಯನ್ನು ಸಹಿಸಿ ಅರವತ್ತುಸಾವಿರ ವರ್ಷಗಳವರೆಗೆ ಮಲದಲ್ಲಿ ಹುಳುವಾಗಿ ಆಮೇಲೆ ಭೂಮಿಯಿಲ್ಲದ ದರಿದ್ರನಾಗಿ ಹುಟ್ಟಿ ಬಳಿಕ ಶುದ್ಧನಾಗಿ ಹಿಂದಿನ ಜನ್ಮವನ್ನು ಪಡೆದು ಶುಭಕರ್ಮವನ್ನಾಚರಿಸುವನು. ॥೧೨೨-೧೨೩-೧೨೪-೧೨೫-೧೨೬॥

ಇಲ್ಲಿಗೆ ದೇವೀಭಾಗವತಮಹಾಪುರಾಣದ ಒಂಬತ್ತನೆಯ ಸ್ಕಂಧದಲ್ಲಿ ಮೂವತ್ತುಮೂರನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ನವಮಸ್ಕಂಧೇ

### || ಚತುಸ್ತ್ರಿಂಶೋಽಧ್ಯಾಯಃ ||

### ಮೂವತ್ತುನಾಲ್ಕನೆಯ ಅಧ್ಯಾಯವು

|| ಯಮಧರ್ಮ ಉವಾಚ ||

ಛಿನತ್ತಿ ಜೀವಂ ಖಡ್ಗೇನ ದಯಾಹೀನಃ ಸುದಾರುಣಃ ।
ನರಘಾತೀ ಹಂತಿ ನರಮರ್ಥಲೋಭೇನ ಭಾರತೇ ||೧||

ಅಸಿಪತ್ರೇ ವಸೇತ್ಸೋಽಪಿ ಯಾವದಿಂದ್ರಾಶ್ಚತುರ್ದಶ
ತೇಷು ಯೋ ಬ್ರಾಹ್ಮಣಾನ್ಹಂತಿ ಶತಮನ್ವಂತರಂ ವಸೇತ್ ||೨||

ಛಿನ್ನಾಂಗಃ ಸ ವಸೇತ್ಸೋಽಪಿ ಖಡ್ಗಧಾರೇಣ ಸಂತತಂ ।
ಅನಾಹಾರಃ ಶಬ್ದಮುಚ್ಚೈರ್ಯಮದೂತೇನ ತಾಡಿತಃ ||೩||

ಮಂಥಾನಃ ಶತಜನ್ಮಾನಿ ಶತಜನ್ಮಾನಿ ಸೂಕರಃ ।
ಕುಕ್ಕುಟಃ ಸಪ್ತಜನ್ಮಾನಿ ಸೃಗಾಲಃ ಸಪ್ತಜನ್ಮಸು ||೪||

---

ಯಮಧರ್ಮರಾಯನು ಹೇಳಿದನು—ಹಣದಾಸೆಯಿಂದ ಕತ್ತಿಯಿಂದ ಪ್ರಾಣಿಯನ್ನು ಕಡಿದವನೂ ಮನುಷ್ಯನನ್ನು ಕಡಿದವನೂ ಅಸಿಪತ್ರವೆಂಬ ನರಕದಲ್ಲಿ ಹದಿನಾಲ್ಕು ದೇವೇಂದ್ರರ ಕಾಲದವರೆಗೆ ಇರುವನು. ಕಡಿದವನು ಬ್ರಾಹ್ಮಣನಾದರೆ ನೂರು ಮನ್ವಂತರಗಳವರೆಗೆ ಆ ನರಕದಲ್ಲಿರುವನು. ಯಮದೂತರು ಅವನನ್ನು ಕತ್ತಿಯಿಂದ ಕತ್ತರಿಸುವರು. ಯಾವಾಗಲೂ ದುಃಖವನ್ನನುಭವಿಸುತ್ತಾ ಆಹಾರ ವಿಲ್ಲದೆ ಗಟ್ಟಿಯಾಗಿ ಕಿರುಚಿಕೊಳ್ಳುತ್ತಾ ಕಷ್ಟವನ್ನನುಭವಿಸಿ ನೂರುಜನ್ಮಗಳು ಮಂಥಾನವೆಂಬ ಹುಳುವಾಗಿಯೂ ನೂರುಜನ್ಮಗಳು ಹಂದಿಯಾಗಿಯೂ ಏಳುಜನ್ಮ

ವ್ಯಾಘ್ರಶ್ಚ ಸಪ್ತಜನ್ಮಾನಿ ವೃಕಶ್ಚೈವ ತ್ರಿಜನ್ಮಸು ।
ಸಪ್ತಜನ್ಮಸು ಮಂಡೂಕೋ ಯಮದೂತೇನ ತಾಡಿತಃ ॥೫॥

ಸ ಭವೇದ್ಭಾರತೇ ವರ್ಷೇ ಮಹಿಷಶ್ಚ ತತಃ ಶುಚಿಃ ।
ಗ್ರಾಮಾಣಾಂ ನಗರಾಣಾಂ ವಾ ದಹನಂ ಯಃ ಕರೋತಿ ಚ ॥೬॥

ಕ್ಷುರಧಾರೇ ವಸೇತ್ಸೋಽಪಿ ಛಿನ್ನಾಂಗಸ್ತ್ರಿಯುಗಂ ಸತಿ ।
ತತಃ ಪ್ರೇತೋ ಭವೇತ್ಸದ್ಯೋ ವಹ್ನಿವಕ್ತ್ರೋ ಭ್ರಮನ್ಮಹೀಂ ॥೭॥

ಸಪ್ತಜನ್ಮಾಽಮೇಧ್ಯಭೋಜೀ ಕಪೋತಃ ಸಪ್ತಜನ್ಮಸು ।
ತತೋ ಭವೇನ್ಮಹಾಶೂಲೀ ಮಾನವಃ ಸಪ್ತಜನ್ಮನಿ ॥೮॥

ಸಪ್ತಜನ್ಮಗಲತ್ಕುಷ್ಠೀ ತತಃ ಶುದ್ಧೋ ಭವೇನ್ನರಃ ।
ಪರಕರ್ಣೇ ಮುಖಂ ದತ್ವಾ ಪರನಿಂದಾಂ ಕರೋತಿ ಯಃ ॥೯॥

ಪರದೋಷೇ ಮಹಾಶ್ಲಾಘೀ ದೇವಬ್ರಾಹ್ಮಣನಿಂದಕಃ ।
ಸೂಚೀಮುಖೇ ವಸೇತ್ಸೋಽಪಿ ಸೂಚೀವಿದ್ಧೋ ಯುಗತ್ರಯಂ ॥೧೦॥

---

ಗಳು ಕೋಳಿ, ನರಿ, ಹುಲಿ, ಕಪ್ಪೆಗಳಾಗಿಯೂ ಮೂರುಜನ್ಮ ತೋಳನಾಗಿಯೂ ಆಮೇಲೆ ಭರತಖಂಡದಲ್ಲಿ ಎಮ್ಮೆಯಾಗಿಯೂ ಹುಟ್ಟಿ ಶುದ್ಧನಾಗುವನು. ॥೧-೨-೩-೪-೫॥

ಗ್ರಾಮಗಳನ್ನಾಗಲೀ, ಪಟ್ಟಣವನ್ನಾಗಲೀ ಸುಟ್ಟವನು ಮೂರು ಯುಗಗಳ ವರೆಗೆ ಕ್ಷುರಧಾರವೆಂಬ ನರಕದಲ್ಲಿ ಕತ್ತರಿಸಿದ ಅವಯವಗಳುಳ್ಳವನಾಗಿ ದುಃಖವನ್ನನು ಭವಿಸಿ ಬಳಿಕ ಬಾಯಲ್ಲಿ ಬೆಂಕಿಯುಳ್ಳ ಪಿಶಾಚಿಯಾಗಿ ಭೂಮಿಯಲ್ಲಿ ಅಲೆಯುತ್ತಿದ್ದು ಏಳುಜನ್ಮಗಳು ಮಲವನ್ನು ತಿನ್ನುತ್ತಿದ್ದ ಪಾರಿವಾಳದ ಹಕ್ಕಿಯಾಗಿ ಏಳುಜನ್ಮಗಳ ವರೆಗೆ ಶೂಲರೋಗವುಳ್ಳ ಮನುಷ್ಯನಾಗಿದ್ದು ಏಳು ಜನ್ಮಗಳು ಗಲತ್ಕುಷ್ಠವೆಂಬ ರೋಗವನ್ನನುಭವಿಸಿ ಬಳಿಕ ಶುದ್ಧನಾಗುವನು. ॥೬-೭-೮॥

ಮತ್ತೊಬ್ಬನ ಕಿವಿಯಲ್ಲಿ ಪರನಿಂದೆಯನ್ನು ಮಾಡುವವನೂ ದೇವಬ್ರಾಹ್ಮಣ ರನ್ನು ನಿಂದಿಸುವವನೂ ಪರರು ತಪ್ಪುಮಾಡಿದರೆ ಅದನ್ನು ವಿಶೇಷವಾಗಿ ಹೊಗಳು ವವನೂ ಆದ ಮನುಷ್ಯನು ಮೂರು ಯುಗಗಳವರೆಗೆ ಸೂಚೀಮುಖವೆಂಬ ನರಕ ದಲ್ಲಿ ಸೂಚಿಯಿಂದ ಚುಚ್ಚಿಸಿಕೊಳ್ಳುತ್ತಾ ದುಃಖವನ್ನನುಭವಿಸಿ ಆ ಮೇಲೆ ಏಳೇಳು

ತತೋ ಭವೇದ್ವೃಶ್ಚಿಕಶ್ಚ ಸರ್ಪಶ್ಚ ಸಪ್ತಜನ್ಮಸು ।
ವಜ್ರಕೀಟಃ ಸಪ್ತಜನ್ಮ ಭಸ್ಮಕೀಟಃ ತತಃ ಪರಂ ॥೧೧॥

ತತೋ ಭವೇನ್ಮಾನವಶ್ಚ ಮಹಾವ್ಯಾಧಿಸ್ತತಃ ಶುಚಿಃ ।
ಗೃಹಿಣಾಂ ಹಿ ಗೃಹಂ ಭಿತ್ವಾ ವಸ್ತುಸ್ತೇಯಂ ಕರೋತಿ ಯಃ ॥೧೨॥

ಗಾಶ್ಚ ಛಾಗಾಂಶ್ಚ ಮೇಷಾಂಶ್ಚ ಯಾತಿ ಗೋಕಾಮುಖೇ ಚ ಸಃ ।
ತಾಡಿತೋ ಯಮದೂತೇನ ವಸೇತ್ತತ್ರ ಯುಗತ್ರಯಂ ॥೧೩॥

ತತೋ ಭವೇತ್ಸಪ್ತಜನ್ಮ ಗೋಜಾತಿರ್ವ್ಯಾಧಿಸಂಯುತಃ ।
ತ್ರಿಜನ್ಮನಿ ಮೇಷಜಾತಿಶ್ಛಾಗಜಾತಿಸ್ತ್ರಿಜನ್ಮನಿ ॥೧೪॥

ತತೋ ಭವೇನ್ಮಾನವಶ್ಚ ನಿತ್ಯರೋಗೀ ದರಿದ್ರಕಃ ।
ಭಾರ್ಯಾಹೀನೋ ಬಂಧುಹೀನಃ ಸಂತಾಪೀ ಚ ತತಃ ಶುಚಿಃ ॥೧೫॥

ಸಾಮಾನ್ಯದ್ರವ್ಯಚೌರಶ್ಚ ಯಾತಿ ನಕ್ರಮುಖಂ ಚ ಸಃ ।
ತಾಡಿತೋ ಯಮದೂತೇನ ವಸೇತ್ತತ್ರಾಬ್ದಕತ್ರಯಂ ॥೧೬॥

---

ಜನ್ಮಗಳು ಚೇಳಾಗಿಯೂ ಹಾವಾಗಿಯೂ ವಜ್ರಕೀಟವೆಂಬ ಹುಳುವಾಗಿಯೂ ಹುಟ್ಟಿ ಬಳಿಕ ಭಸ್ಮಕೀಟವೆಂಬ ಹುಳುವಾಗಿ ತರುವಾಯ ಮಹಾರೋಗಿಯಾಗಿ ಯಾದ ಮನುಷ್ಯನಾಗಿ ಆಮೇಲೆ ಶುದ್ಧನಾಗುವನು. ॥೯-೧೦-೧೧॥

ಗೃಹಸ್ಥರ ಮನೆಗೆ ಕನ್ನವನ್ನು ಹಾಕಿ ಮನೆಯಲ್ಲಿದ್ದ ವಸ್ತುಗಳನ್ನು ಹಸು, ಆಡು, ಕುರಿ ಇವುಗಳನ್ನೂ ಕದ್ದವನು ಗೋಕಾಮುಖವೆಂಬ ನರಕದಲ್ಲಿ ಬೀಳುವನು. ಅಲ್ಲಿ ಮೂರು ಯುಗಗಳವರೆಗೆ ಯಮದೂತರ ಹಿಂಸೆಯನ್ನನುಭವಿಸಿ ಏಳು ಜನ್ಮಗಳ ವರೆಗೆ ರೋಗದ ಗೋಜಾತಿಯಾಗಿಯೂ ಮೂರುಜನ್ಮ ಕುರಿಯಜಾತಿಯಾಗಿಯೂ ಮೂರುಜನ್ಮ ಆಡಿನಜಾತಿಯಾಗಿಯೂ ಬಳಿಕ ನಿತ್ಯರೋಗಿಯೂ ದರಿದ್ರನೂ ಆದ ಮನುಷ್ಯನಾಗಿಯೂ ನೆಂಟರೂ ಹೆಂಡತಿಯೂ ಇಲ್ಲದವನಾಗಿಯೂ ಸಂತಾಪಪಡುತ್ತಿದ್ದು ಬಳಿಕ ಶುದ್ಧನಾಗುವನು. ॥೧೨-೧೩-೧೪-೧೫॥

ಸಾಮಾನ್ಯವಾದ ವಸ್ತುವನ್ನು ಕದ್ದವನು ಮೂರುವರ್ಷ ನಕ್ರಮುಖವೆಂಬ ನರಕದಲ್ಲಿ ಯಮದೂತರ ಹಿಂಸೆಯನ್ನು ಸಹಿಸಿ ಬಳಿಕ ಏಳುಜನ್ಮಗಳು ರೋಗದ

ತತೋ ಭವೇತ್ಸಪ್ತಜನ್ಮ ಗೋಪತಿರ್ವ್ಯಾಧಿಸಂಯುತಃ ।
ತತೋ ಭವೇನ್ಮಾನವಶ್ಚ ಮಹಾರೋಗೀ ತತಃ ಶುಚಿಃ ॥೧೭॥

ಹಂತಿ ಗಾಶ್ಚ ಗಜಾಂಶ್ಚೈವ ತುರಗಾಂಶ್ಚ ನಗಾಂಸ್ತಥಾ ।
ಸ ಯಾತಿ ಗಜದಂಶಂ ಚ ಮಹಾಪಾಪೀ ಯುಗತ್ರಯಂ ॥೧೮॥

ತಾಡಿತೋ ಯಮದೂತೇನ ನಾಗದಂತೇನ ಸಂತತಂ ।
ಸ ಭವೇದ್ಗಜಜಾತಿಶ್ಚ ತುರಗಶ್ಚ ತ್ರಿಜನ್ಮನಿ ॥೧೯॥

ಗೋಜಾತಿರ್ಮ್ಲೇಚ್ಛಜಾತಿಶ್ಚ ತತಃ ಶುದ್ಧೋ ಭವೇನ್ನರಃ ।
ಜಲಂ ಪಿಬಂತೀಂ ತೃಷಿತಾಂ ಗಾಂ ವಾರಯತಿ ಯಃ ಪುಮಾನ್॥೨೦॥

ನರಕಂ ಗೋಮುಖಾಕಾರಂ ಕೃಮಿತಪ್ತೋದಕಾನ್ವಿತಂ ।
ತತ್ರ ತಿಷ್ಠತಿ ಸಂತಪ್ತೋ ಯಾವನ್ಮನ್ವಂತರಾವಧಿ ॥೨೧॥

ತತೋ ನರೋಽಪಿ ಗೋಹೀನೋ ಮಹಾರೋಗೀ ದರಿದ್ರಕಃ ।
ಸಪ್ತಜನ್ಮಾಂತ್ಯಜಾತಿಶ್ಚ ತತಃ ಶುದ್ಧೋ ಭವೇನ್ನರಃ ॥೨೨॥

---

ಎತ್ತಾಗಿ ಆಮೇಲೆ ಮಹಾರೋಗಿಯಾದ ಮನುಷ್ಯನಾಗಿ ತರುವಾಯ ಶುದ್ಧನಾಗುವನು. ||೧೬-೧೭||

ಗೋವುಗಳನ್ನೂ ಆನೆ, ಕುದುರೆ, ಮರಗಳು, ಇವುಗಳನ್ನೂ ನಾಶಮಾಡತಕ್ಕ ಮಹಾಪಾಪಿಯು ಗಜದಂಶವೆಂಬ ನರಕದಲ್ಲಿ ಮೂರು ಯುಗಗಳ ವರೆಗೆ ಆನೆಯ ಕೊಂಬಿನಿಂದ ಯಮದೂತರು ಯಾವಾಗಲೂ ಹೊಡೆಯುತ್ತಿರುವ ಏಟನ್ನು ಸಹಿಸುತ್ತಾ ದುಃಖವನ್ನನುಭವಿಸಿ ಮೂರು ಜನ್ಮಗಳವರೆಗೆ ಆನೆ, ಕುದುರೆ, ಹಸು, ಮ್ಲೇಚ್ಛಜಾತಿಗಳಾಗಿ ಹುಟ್ಟಿ ಬಳಿಕ ಶುದ್ಧನಾಗುವನು. ||೧೮-೧೯||

ಬಾಯಾರಿಕೆಯಿಂದ ನೀರನ್ನು ಕುಡಿಯುತ್ತಿರುವ ಹಸುವನ್ನು ಓಡಿಸುವ ಮನುಷ್ಯನು ಹುಳುಗಳಿಂದಲೂ ಬಿಸಿನೀರಿನಿಂದಲೂ ತುಂಬಿದ ಗೋಮುಖಾಕಾರವಾದ ನರಕದಲ್ಲಿ ಮನ್ವಂತರ ಕಳೆಯುವವರೆಗೂ ದುಃಖಪಟ್ಟು ಆಮೇಲೆ ಮಹಾರೋಗಿಯೂ ದರಿದ್ರನೂ, ಗೋವುಗಳಿಲ್ಲದವನೂ ಆಗಿ ಹುಟ್ಟಿ ಏಳು ಜನ್ಮಗಳು ಚಂಡಾಲನಾಗಿ ಬಳಿಕ ಶುದ್ಧನಾಗುವನು. ||೨೦-೨೧-೨೨||

ಗೋಹತ್ಯಾಂ ಬ್ರಹ್ಮಹತ್ಯಾಂ ಚ ಕರೋತಿ ಹ್ಯತಿದೇಶಿಕೀಂ ।
ಯೋ ಹಿ ಗಚ್ಛತ್ಯಗಮ್ಯಾಂ ಚ ಯಃ ಸ್ತ್ರೀಹತ್ಯಾಂ ಕರೋತಿ ಚ॥೨೩॥

ಭಿಕ್ಷುಹತ್ಯಾಂ ಮಹಾಪಾಪೀ ಭ್ರೂಣಹತ್ಯಾಂ ಚ ಭಾರತೇ ।
ಕುಂಭೀಪಾಕೇ ವಸೇತ್ಸೋಽಪಿ ಯಾವದಿಂದ್ರಾಶ್ಚತುರ್ದಶ ॥೨೪॥

ತಾಡಿತೋ ಯಮದೂತೇನ ಚೂರ್ಣ್ಯಮಾನಶ್ಚ ಸಂತತಂ ।
ಕ್ಷಣಂ ಪತತಿ ವಹ್ನೌ ಚ ಕ್ಷಣಂ ಪತತಿ ಕಂಟಕೇ ॥೨೫॥

ಕ್ಷಣಂ ಪತೇತ್ತಪ್ತತೈಲೇ ತಪ್ತೋ ಯೇನ ಕ್ಷಣಂ ಕ್ಷಣಂ ।
ಕ್ಷಣಂ ಚ ತಪ್ತಲೋಹೇ ಚ ಕ್ಷಣಂ ಚ ತಪ್ತತಾಮ್ರಕೇ ॥೨೬॥

ಗೃಧ್ರೋ ಜನ್ಮಸಹಸ್ರಾಣಿ ಶತಜನ್ಮಾನಿ ಸೂಕರಃ ।
ಕಾಕಶ್ಚ ಸಪ್ತಜನ್ಮಾನಿ ಸರ್ಪಶ್ಚ ಸಪ್ತಜನ್ಮಸು ॥೨೭॥

ಷಷ್ಟಿವರ್ಷಸಹಸ್ರಾಣಿ ವಿಷ್ಠಾಯಾಂ ಜಾಯತೇ ಕೃಮಿಃ ।
ನಾನಾಜನ್ಮಸು ಸ ವೃಷಸ್ತತಃ ಕುಷ್ಠೀ ದರಿದ್ರಕಃ ॥೨೮॥

---

ಶಾಸ್ತ್ರವಚನೋಕ್ತವಾದ ಅತಿದೇಶ ಎಂದರೆ ತಪ್ಪಾದ ಹೋಲಿಕೆಯಿಂದ ಗೋಹತ್ಯವನ್ನೂ ಬ್ರಹ್ಮಹತ್ಯೆಯನ್ನೂ ಮಾಡಿದವನೂ ಅಗಮ್ಯಾಗಮನ, ಸ್ತ್ರೀಹತ್ಯೆ, ಭಿಕ್ಷುಹತ್ಯೆ, ಭ್ರೂಣಹತ್ಯೆ, ಇವುಗಳನ್ನೂ ಮಾಡಿದವನು ಮಹಾಪಾಪಿಯೂ ಹದಿನಾಲ್ಕುಜನ ದೇವೇಂದ್ರರ ಅಧಿಕಾರ ಮುಗಿಯುವವರೆಗೂ ಕುಂಭೀಪಾಕವೆಂಬ ನರಕದಲ್ಲಿ ಯಮದೂತರ ಏಟನ್ನು ತಿನ್ನುತ್ತಾ ಒಂದು ಕ್ಷಣದಲ್ಲಿ ಬೆಂಕಿಯಲ್ಲಿಯೂ ಮತ್ತೊಂದು ಕ್ಷಣದಲ್ಲಿ ಮುಳ್ಳಿನಮೇಲೆಯೂ ಹೀಗೆಯೇ ಕ್ಷಣೇ ಕ್ಷಣೇ ಕಾದ ಎಣ್ಣೆ, ಕಾದ ಕಬ್ಬಿಣ, ಕಾದ ತಾಮ್ರ ಇವುಗಳಲ್ಲಿ ಬೀಳುತ್ತಾ ದುಃಖವನ್ನನುಭವಿಸಿ ಸಾವಿರಜನ್ಮಗಳು ಹದ್ದಾಗಿಯೂ ನೂರುಜನ್ಮ ಹಂದಿಯಾಗಿಯೂ ಏಳೇಳುಜನ್ಮ ಕಾಗೆ ಮತ್ತು ಸರ್ಪವಾಗಿ ಹುಟ್ಟಿ ಅರವತ್ತುಸಾವಿರ ವರ್ಷಗಳವರೆಗೆ ಮಲದಲ್ಲಿ ಕ್ರಿಮಿಯಾಗಿದ್ದು ಅನೇಕಜನ್ಮಗಳು ಎತ್ತಾಗಿ ಆಮೇಲೆ ಕುಷ್ಠರೋಗಿಯಾಗಿಯೂ ದರಿದ್ರನಾಗಿಯೂ ಹುಟ್ಟುವನು. ॥೨೩-೨೪-೨೫-೨೬-೨೭-೨೮॥

ವಿಪ್ರಹತ್ಯಾ ಚ ಗೋಹತ್ಯಾ ಕಿಂ ವಿಧಾ ಚಾಽತಿದೇಶಿಕೀ।
ಕಾ ವಾ ನೃಣಾಮಗಮ್ಯಾ ಚ ಕೋ ವಾ ಸಂಧ್ಯಾವಿಹೀನಕಃ ॥೨೯॥

ಅದೀಕ್ಷಿತಃ ಪುಮಾನ್ಕೋ ವಾ ಕೋ ವಾ ತೀರ್ಥಪ್ರತಿಗ್ರಹೀ ।
ದ್ವಿಜಃ ಕೋ ವಾ ಗ್ರಾಮಯಾಜೀ ಕೋ ವಾ ವಿಪ್ರೋಽಥ ದೇವಲಃ ॥೩೦॥

ಶೂದ್ರಾಣಾಂ ಸೂಪಕಾರಶ್ಚ ಪ್ರಮತ್ತೋ ವೃಷಲೀಪತಿಃ ।
ಏತೇಷಾಂ ಲಕ್ಷಣಂ ಸರ್ವಂ ವದ ವೇದವಿದಾಂ ವರಂ ॥೩೧॥

॥ ಧರ್ಮರಾಜ ಉವಾಚ ॥

ಶ್ರೀಕೃಷ್ಣೇ ಚ ತದರ್ಚಾಯಾಮನ್ಯೇಷಾಂ ಪ್ರಕೃತೌ ಸತಿ ।
ಶಿವೇ ಚ ಶಿವಲಿಂಗೇ ಚ ಸೂರ್ಯೇ ಸೂರ್ಯಮಣೌ ತಥಾ ॥೩೨॥

ಗಣೇಶೇ ವಾಽಥ ದುರ್ಗಾಯಾಮೇವಂ ಸರ್ವತ್ರ ಸುಂದರಿ ।
ಯಃ ಕರೋತಿ ಭೇದಬುದ್ಧಿಂ ಬ್ರಹ್ಮಹತ್ಯಾಂ ಲಭೇತ್ತು ಸಃ ॥೩೩॥

---

ಸಾವಿತ್ರಿಯು ಯಮಧರ್ಮರಾಜನನ್ನು ಕುರಿತು ವೇದವನ್ನು ತಿಳಿದವರಲ್ಲಿ ಶ್ರೇಷ್ಠನಾದ ಧರ್ಮರಾಜನೇ, ಅತಿ ದೇಶಿಕೀ ಗೋಹತ್ಯೆ, ವಿಪ್ರಹತ್ಯೆಗಳೆಂದರೇನು? ಅಗಮ್ಯಳು ಯಾರು? ಸಂಧ್ಯಾಹೀನ, ಅದೀಕ್ಷಿತ, ತೀರ್ಥಪ್ರತಿಗ್ರಹೀ, ಗ್ರಾಮಯಾಜೀ, ದೇವಲ, ಶೂದ್ರ ಸೂಪಕಾರ, ಪ್ರಮತ್ತ, ವೃಷಲೀಪತಿ ಇವರ ಲಕ್ಷಣಗಳೇನು? ಇವೆಲ್ಲವನ್ನೂ ನನಗೆ ಹೇಳಬೇಕು. ॥೨೯-೩೦-೩೧॥

ಧರ್ಮರಾಜನು ಹೇಳಿದನು—ಶ್ರೀಕೃಷ್ಣನಲ್ಲಿಯೂ ಕೃಷ್ಣನ ಪ್ರತಿಮೆಯಲ್ಲಿಯೂ ಶಿವನಲ್ಲಿಯೂ ಶಿವಲಿಂಗದಲ್ಲಿಯೂ ಸೂರ್ಯನಲ್ಲಿಯೂ ಸೂರ್ಯಕಾಂತ ಮಣಿಯಲ್ಲಿಯೂ, ಗಣೇಶ, ದುರ್ಗಾ ಮುಂತಾದ ದೇವತೆಗಳಲ್ಲಿಯೂ ಆ ದೇವ ಪ್ರತಿಮೆಗಳಲ್ಲಿಯೂ ಪರಸ್ಪರ ಭೇದಬುದ್ಧಿಯನ್ನು ಯಾರು ಮಾಡುವರೋ ಅವರು ಬ್ರಹ್ಮಹತ್ಯೆಯನ್ನು ಹೊಂದುವರು. ಇದು ವಚನ ಬೋಧಿತವಾದುದರಿಂದ ಅತಿ ದೇಶಿಕೀ ಬ್ರಹ್ಮಹತ್ಯೆಯು. ಸಾಕ್ಷಾದ್ಬ್ರಹ್ಮಹತ್ಯೆಗೆ ಸಮಾನವಾದ ಫಲವುಳ್ಳದು ಹೀಗೆಯೇ ಮುಂದೆಯೂ ತಿಳಿಯತಕ್ಕುದು. ॥೩೨-೩೩॥

ಸ್ವಗುರೌ ಸ್ವೇಷ್ಟದೇವೇ ಚ ಜನ್ಮದಾತರಿ ಮಾತರಿ ।
ಕರೋತಿ ಭೇದಬುದ್ಧಿಂ ಯೋ ಬ್ರಹ್ಮಹತ್ಯಾಂ ಲಭೇತ್ತು ಸಃ ॥೩೪॥

ವೈಷ್ಣವೇಷು ಚ ಭಕ್ತೇಷು ಬ್ರಾಹ್ಮಣೇಷ್ವಿತರೇಷು ಚ ।
ಕರೋತಿ ಭೇದಬುದ್ಧಿಂ ಯೋ ಬ್ರಹ್ಮಹತ್ಯಾಂ ಲಭೇತ್ತು ಸಃ ॥೩೫॥

ವಿಪ್ರಪಾದೋದಕೇ ಚೈವ ಶಾಲಗ್ರಾಮೋದಕೇ ತಥಾ ।
ಕರೋತಿ ಭೇದಬುದ್ಧಿಂ ಯೋ ಬ್ರಹ್ಮಹತ್ಯಾಂ ಲಭೇತ್ತು ಸಃ ॥೩೬॥

ಶಿವನೈವೇದ್ಯಕೇ ಚೈವ ಹರಿನೈವೇದ್ಯಕೇ ತಥಾ ।
ಕರೋತಿ ಭೇದಬುದ್ಧಿಂ ಯೋ ಬ್ರಹ್ಮಹತ್ಯಾಂ ಲಭೇತ್ತು ಸಃ ॥೩೭॥

---

ತನ್ನ ಗುರುವಿಗೂ ಇಷ್ಟದೇವತೆಗೂ, ಹೆತ್ತತಾಯಿಗೂ ಭೇದವನ್ನೆಣಿಸುವವನೂ, ವಿಷ್ಣುಭಕ್ತರಿಗೂ ಹಾಗೆಯೇ ಇತರ ದೇವಭಕ್ತರಿಗೂ ಸಾಮಾನ್ಯ ಬ್ರಾಹ್ಮಣ ಪಾದೋದಕಕ್ಕೂ ಸಾಲಗ್ರಾಮತೀರ್ಥಕ್ಕೂ ಪರಸ್ಪರ ಭೇದಬುದ್ಧಿಯುಳ್ಳವರು ಬ್ರಹ್ಮಹತ್ಯೆಯನ್ನು ಪಡೆವರು. "ಗುರೌ ಮನುಷ್ಯಬುದ್ಧಿಂ ಚ ಮಂತ್ರೇ ಚಾಕ್ಷರಬುದ್ಧಿತಾಂ । ಪ್ರತಿಮಾಸು ಶಿಲಾಬುದ್ಧಿಂ ಕುರ್ವಾಣೋ ನರಕಂ ವ್ರಜೇತ್ ॥" ಎಂದು ಪ್ರಮಾಣವಿರುವುದು. ಆದುದರಿಂದ ಮೇಲೆ ಹೇಳಿದವರು ಪರಸ್ಪರ ಸಮಾನಗೌರವಾರ್ಹರೆಂದು ಭಾವವು. ॥೩೪-೩೫-೩೬॥

ಶಿವನೈವೇದ್ಯಕ್ಕೂ ಹರಿನೈವೇದ್ಯಕ್ಕೂ ಭೇದಬುದ್ಧಿಯನ್ನು ಎಣಿಸುವವನು ಬ್ರಹ್ಮಹತ್ಯೆಯನ್ನು ಹೊಂದುವನು. ಶಿವನೈವೇದ್ಯಕ್ಕೆಷ್ಟು ಮಹಿಮೆಯೋ ಹರಿನೈವೇನೈವೇದ್ಯಕ್ಕೂ ಅಷ್ಟೇಮಹಿಮೆಯು. ಒಂದು ಕಡಿಮೆ ಒಂದು ಹೆಚ್ಚು ಎಂಬ ಭಾವವನ್ನಿಡಬಾರದು. ಹಾಗೆ ಭೇದವನ್ನೆಣಿಸಿದರೆ ಬ್ರಹ್ಮಹತ್ಯೆಯನ್ನು ಪಡೆಯುವರು ಎಂದು ಭಾವವು. ಶಿವಮಂತ್ರದೀಕ್ಷಿತರಿಗೆ ಶಿವನೈವೇದ್ಯ ಭಕ್ಷಣೆಯು ಅವಶ್ಯಕವಾಗಿ ವಿಹಿತವಾದುದು. ಶಿವನೈವೇದ್ಯಭಕ್ಷಣೆಯ ನಿಷೇಧವಾಕ್ಯಗಳಿಗೆ ಮಂತ್ರದೀಕ್ಷಿತರಲ್ಲದವರು ಶಿವನೈವೇದ್ಯಭಕ್ಷಣೆಯನ್ನು ಮಾಡಬಾರದೆಂದು ಅಪ್ಪಯ್ಯದೀಕ್ಷಿತರ ಗ್ರಂಥಗಳಲ್ಲಿ ಅರ್ಥವನ್ನು ಸ್ಪಷ್ಟವಾಗಿ ಹೇಳಿದೆ. ॥೩೭॥

ಸರ್ವೇಶ್ವರೇಶ್ವರೇ ಕೃಷ್ಣೇ ಸರ್ವಕಾರಣಕಾರಣೇ ।
ಸರ್ವಾದ್ಯೇ ಸರ್ವದೇವಾನಾಂ ಸೇವ್ಯೇ ಸರ್ವಾಂತರಾತ್ಮನಿ ॥೩೮॥

ಮಾಯಯಾಽನೇಕರೂಪೇ ವಾಽಪ್ಯೇಕಏವ ಹಿ ನಿರ್ಗುಣೇ ।
ಕರೋತೀಶೇನ ಭೇದಂ ಯೋ ಬ್ರಹ್ಮಹತ್ಯಾಂ ಲಭೇತ್ತು ಸಃ ॥೩೯॥

ಶಕ್ತಿಭಕ್ತೇ ದ್ವೇಷಬುದ್ಧಿಂ ಶಕ್ತಿಶಾಸ್ತ್ರೇ ತಥೈವ ಚ ।
ದ್ವೇಷಂ ಯಃ ಕುರುತೇ ಮರ್ತ್ಯೋ ಬ್ರಹ್ಮಹತ್ಯಾಂ ಲಭೇತ್ತು ಸಃ ॥೪೦॥

ಪಿತೃದೇವಾರ್ಚನಂ ಯೋ ವಾ ತ್ಯಜೇದ್ವೇದನಿರೂಪಿತಂ ।
ಯಃ ಕರೋತಿ ನಿಷಿದ್ಧಂ ಚ ಬ್ರಹ್ಮಹತ್ಯಾಂ ಲಭೇತ್ತು ಸಃ ॥೪೧॥

ಯೋ ನಿಂದತಿ ಹೃಷಿಕೇಶಂ ತನ್ಮಂತ್ರೋಪಾಸಕಂ ತಥಾ ।
ಪವಿತ್ರಾಣಾಂ ಪವಿತ್ರಂ ಚ ಜ್ಞಾನಾನಂದಂ ಸನಾತನಂ ॥೪೨॥

ಪ್ರಧಾನಂ ವೈಷ್ಣವಾನಾಂ ಚ ದೇವಾನಾಂ ಸೇವ್ಯಮೀಶ್ವರಂ ।
ಯೇ ನಾರ್ಚಯಂತಿ ನಿಂದಂತಿ ಬ್ರಹ್ಮಹತ್ಯಾಂ ಲಭಂತಿ ತೇ ॥೪೩॥

---

ಸರ್ವೇಶ್ವರರಿಗೂ ಸ್ವಾಮಿಯಾದ ಸಮಸ್ತಕಾರಣ ವಸ್ತುಗಳಿಗೂ ಕಾರಣನಾದ ಸಮಸ್ತಕ್ಕೂ ಆದಿಯಾದ ಸಮಸ್ತದೇವತೆಗಳಿಗೂ ಸೇವ್ಯನಾದ ಸರ್ವಾಂತರ್ಯಾಮಿಯಾದ ನಿರ್ಗುಣಪರಬ್ರಹ್ಮನಿಗೂ ಮಾಯೆಯಿಂದ ಅನೇಕರೂಪನಾದ ಸಗುಣಬ್ರಹ್ಮನಾದ ಕೃಷ್ಣನಿಗೂ ಮಹಾದೇವನಿಗೂ ಪರಸ್ಪರ ಭೇದವನ್ನೆಣಿಸುವವನು ಬ್ರಹ್ಮಹತ್ಯೆಯನ್ನು ಪಡೆವನು. ॥೩೮-೩೯॥

ಶಕ್ತಿದೇವಿಯ ಭಕ್ತರಲ್ಲೂ ಶಕ್ತಿದೇವತಾಸಂಬಂಧವಾದ ಶಾಸ್ತ್ರಗಳಲ್ಲಿಯೂ ದ್ವೇಷಮಾಡತಕ್ಕವನು ಬ್ರಹ್ಮಹತ್ಯೆಯನ್ನು ಪಡೆಯುವನು. ॥೪೦॥

ವೇದದಲ್ಲಿ ಹೇಳಿರುವ ಪಿತೃಗಳ ಮತ್ತು ದೇವತೆಗಳ ಪೂಜೆಯನ್ನು ಬಿಟ್ಟು ವೇದದಲ್ಲಿ ನಿಷಿದ್ಧವಾದ ಕರ್ಮವನ್ನು ಮಾಡುವವರೂ, ಇಂದ್ರಿಯಗಳಿಗೆ ಒಡೆಯನಾದ ವಿಷ್ಣುವನ್ನೂ ಆ ವಿಷ್ಣುಮಂತ್ರೋಪಾಸಕರನ್ನೂ ದೂಷಣೆಮಾಡುವವರು ಅತ್ಯಂತ ಪರಿಶುದ್ಧನೂ ಜ್ಞಾನಾನಂದಸ್ವರೂಪನೂ ಅನಾದಿಯಾದವನೂ ವಿಷ್ಣುಭಕ್ತರಿಗೆ ಮುಖ್ಯನೂ ದೇವತೆಗಳಿಗೆ ಪೂಜಾಯೋಗ್ಯನೂ ಆದ ಸರ್ವೇಶ್ವರನನ್ನು ಯಾರು

ಯೋ ನಿಂದತಿ ಮಹಾದೇವೀಂ ಕಾರಣಬ್ರಹ್ಮರೂಪಿಣೀಂ ।
ಸರ್ವಶಕ್ತಿಸ್ವರೂಪಾಂ ಚ ಪ್ರಕೃತಿಂ ಸರ್ವಮಾತರಂ ॥೪೪॥

ಸರ್ವದೇವಸ್ವರೂಪಾಂ ಚ ಸರ್ವೇಷಾಂ ವಂದಿತಾಂ ಸದಾ ।
ಸರ್ವಕಾರಣರೂಪಾಂ ಚ ಬ್ರಹ್ಮಹತ್ಯಾಂ ಲಭಂತಿ ತೇ ॥೪೫॥

ಕೃಷ್ಣಜನ್ಮಾಷ್ಟಮೀಂ ರಾಮನವಮೀಂ ಚ ಸುಪುಣ್ಯದಾಂ ।
ಶಿವರಾತ್ರಿಂ ತಥಾ ಚೈಕಾದಶೀಂ ವಾರೇ ರವೇಸ್ತಥಾ ॥೪೬॥

ಪಂಚಪರ್ವಾಣಿ ಪುಣ್ಯಾನಿ ಯೇ ನ ಕುರ್ವಂತಿ ಮಾನವಾಃ ।
ಲಭಂತಿ ಬ್ರಹ್ಮಹತ್ಯಾಂ ತೇ ಚಂಡಾಲಾಧಿಕಪಾಪಿನಃ ॥೪೭॥

ಅಂಬುವಾಚ್ಯಾಂ ಭೂಖನನಂ ಜಲಶೌಚಾದಿಕಂ ಚ ಯೇ ।
ಕುರ್ವಂತಿ ಭಾರತೇ ವರ್ಷೇ ಬ್ರಹ್ಮಹತ್ಯಾಂ ಲಭಂತಿ ತೇ ॥೪೮॥

---

ಪೂಜಿಸುವುದಿಲ್ಲವೋ ಯಾರು ನಿಂದಿಸುವರೋ ಅವರು ಬ್ರಹ್ಮಹತ್ಯೆಯನ್ನು ಪಡೆವರು. ॥೪೧-೪೨-೪೩॥

ಸಮಸ್ತಕ್ಕೂ ಕಾರಣಳಾದ ಬ್ರಹ್ಮಸ್ವರೂಪಳೂ, ಸಮಸ್ತಶಕ್ತಿಸ್ವರೂಪಳೂ ಸಮಸ್ತದೇವತಾಸ್ವರೂಪಳೂ, ಸಮಸ್ತ ಪ್ರಪಂಚಕ್ಕೂ ತಾಯಿಯಂತಿರತಕ್ಕವಳೂ ಸಮಸ್ತರಿಗೂ ನಮಸ್ಕಾರಯೋಗ್ಯಳೂ ಆದ ಮೂಲಪ್ರಕೃತಿಯಾದ ಭುವನೇಶ್ವರೀ ದೇವಿಯನ್ನು ಯಾರು ನಿಂದಿಸುವರೋ ಅವರು ಬ್ರಹ್ಮಹತ್ಯೆಯನ್ನು ಪಡೆವರು. ॥೪೪-೪೫॥

ಕೃಷ್ಣಾಷ್ಟಮೀ, ರಾಮನವಮೀ, ಶಿವರಾತ್ರಿ, ಏಕಾದಶೀ, ಭಾನುವಾರ ಈ ಐದು ವ್ರತಗಳನ್ನು ಯಾವನು ಮಾಡುವುದಿಲ್ಲವೋ ಅವರು ಬ್ರಹ್ಮಹತ್ಯೆಯು ಪಾಪವನ್ನು ಪಡೆಯುವರಲ್ಲದೆ ಚಂಡಾಲರಿಗಿಂತಲೂ ಹೆಚ್ಚು ಪಾಪಿಗಳಾಗುವರು. ॥೪೬-೪೭॥

ಆರಿದ್ರಾನಕ್ಷತ್ರದ ಮೊದಲನೆಯ ಪಾದದಿಂದ ಮೂರುದಿನ ಭೂಮಿಯು ರಜಸ್ವಲೆಯಾದಳೆಂದೂ ಆ ದಿನವೇ ಅಂಬುವಾಚೀ ದಿನವೆಂದೂ ಜ್ಯೋತಿಶ್ಶಾಸ್ತ್ರದಲ್ಲಿ ಹೇಳಿರುವುದು. ಆ ದಿನ ಭೂಮಿಯಲ್ಲಿ ವ್ಯವಸಾಯಾದಿಗಳನ್ನು ಮಾಡುವುದಕ್ಕೆ ಭೂಮಿಯನ್ನಗೆಯಬಾರದು. ಆ ದಿನ ಭೂಮಿಯನ್ನಗೆದರೂ ಜಲಶೌಚಾದಿಗಳನ್ನು ಮಾಡಿದರೂ ಬ್ರಹ್ಮಹತ್ಯಾದೋಷವು ಬರುವುದು. ॥೪೮॥

ಗುರುಂ ಚ ಮಾತರಂ ತಾತಂ ಸಾಧ್ವೀಂ ಭಾರ್ಯಾಂ ಸುತಂ ಸುತಾಂ ।
ಅನಿಂದ್ಯಾಂ ಯೋ ನ ಪುಷ್ಣಾತಿ ಬ್ರಹ್ಮಹತ್ಯಾಂ ಲಭೇತ್ತು ಸಃ ॥೪೯॥

ವಿವಾಹೋ ಯಸ್ಯ ನ ಭವೇನ್ನ ಪಶ್ಯತಿ ಸುತಂ ತು ಯಃ ।
ಹರಿಭಕ್ತಿವಿಹೀನೋ ಯೋ ಬ್ರಹ್ಮಹತ್ಯಾಂ ಲಭೇತ್ತು ಸಃ ॥೫೦॥

ಹರೇರನೈವೇದ್ಯಭೋಜೀ ನಿತ್ಯಂ ವಿಷ್ಣುಂ ನ ಪೂಜಯೇತ್ ।
ಪುಣ್ಯಂ ಪಾರ್ಥಿವಲಿಂಗಂ ಚ ಬ್ರಹ್ಮಹಾಽಸೌ ಪ್ರಕೀರ್ತಿತಃ ॥೫೧॥

ಗೋಪ್ರಹಾರಂ ಪ್ರಕುರ್ವಂತಂ ದೃಷ್ಟ್ವಾ ಯೋ ನ ನಿವಾರಯೇತ್ ।
ಯಾತಿ ಗೋವಿಪ್ರಯೋರ್ಮಧ್ಯೇ ಗೋಹತ್ಯಾಂ ತು ಲಭೇತ್ತು ಸಃ ॥೫೨॥

ದಂಡೈರ್ಗಾಸ್ತಾಡಯೇನ್ಮೂಢೋ ಯೋ ವಿಪ್ರೋ ವೃಷವಾಹನಃ ।
ದಿನೇ ದಿನೇ ಗೋವಧಂ ಚ ಲಭತೇ ನಾಽತ್ರ ಸಂಶಯಃ ॥೫೩॥

---

ಗುರುವನ್ನೂ ತಾಯಿಯನ್ನೂ ತಂದೆಯನ್ನೂ ಪತಿವ್ರತೆಯಾದ ಹೆಂಡತಿಯನ್ನೂ ಮಗನನ್ನೂ, ದೋಷವಿಲ್ಲದ ಮಗಳನ್ನೂ ಯಾವನು ಕಾಪಾಡುವುದಿಲ್ಲವೋ ಅವನು ಬ್ರಹ್ಮಹತ್ಯೆಗೆ ಸಮಾನವಾದಷ್ಟು ದೋಷವನ್ನು ಪಡೆವನು. ॥೪೯॥

ಯಾವನು ವಿವಾಹಮಾಡಿಕೊಂಡು ಗೃಹಸ್ಥನಾಗಿರುವುದಿಲ್ಲವೋ ಯಾವನಿಗೆ ಮಗನಾಗುವುದಿಲ್ಲವೋ ಯಾವನು ವಿಷ್ಣುಭಕ್ತಿಯಿಲ್ಲದವನೋ ಇವರೆಲ್ಲರೂ ಬ್ರಹ್ಮಹತ್ಯಾದೋಷವನ್ನು ಪಡೆವರು. ॥೫೦॥

ಹರಿಯ ನೈವೇದ್ಯವನ್ನು ಭೋಜನಮಾಡದವನೂ ಪ್ರತಿದಿದವೂ ವಿಷ್ಣುಪೂಜೆಯನ್ನಾಗಲಿ ಪಾರ್ಥಿವಲಿಂಗಪೂಜೆಯನ್ನಾಗಲಿ ಮಾಡದವನೂ ಬ್ರಹ್ಮಹತ್ಯಮಾಡಿದವನಾಗುವನು. ॥೫೧॥

ಗೋವನ್ನು ಹೊಡೆಯುತ್ತಿರುವ ಮನುಷ್ಯನನ್ನು ನೋಡಿ ಯಾವನು ತಡೆಯುವುದಿಲ್ಲವೋ, ಹಸುವಿಗೂ ಬ್ರಾಹ್ಮಣನಿಗೂ ನಡುವೆ ಯಾವನು ಹೋಗುವನೋ ಇವರಿಬ್ಬರೂ ಗೋಹತ್ಯೆಯ ಫಲವನ್ನು ಹೊಂದುವರು. ॥೫೨॥

ಯಾವ ಮೂಢನು ದೊಣ್ಣೆಯಿಂದ ಹಸುವನ್ನು ಹೊಡೆಯುವನೋ ಯಾವ ಬ್ರಾಹ್ಮಣನು ಎತ್ತಿನ ಮೇಲೆ ಕುಳಿತು ಸವಾರಿ ಮಾಡುವನೋ ಇವರಿಬ್ಬರೂ ಪ್ರತಿದಿನವೂ ಗೋಹತ್ಯೆಯ ಫಲವನ್ನು ಹೊಂದುವರು. ಸಂದೇಹವಿಲ್ಲವು. ॥೫೩॥

ದದಾತಿ ಗೋಭ್ಯ ಉಚ್ಛಿಷ್ಟಂ ಭೋಜಯೇದ್ವೃಷವಾಹಕಂ ।
ಭುನಕ್ತಿ ವೃಷವಾಹಾನ್ನಂ ಸ ಗೋಹತ್ಯಾಂ ಲಭೇದ್ಧ್ರುವಂ ॥೩೪॥

ವೃಷಲೀಪತಿಂ ಯಾಜಯೇದ್ಯೋ ಭುಂಕ್ತೇಽನ್ನಂ ತಸ್ಯ ಯೋ ನರಃ ।
ಗೋಹತ್ಯಾಶತಕಂ ಸೋಽಪಿ ಲಭತೇ ನಾತ್ರ ಸಂಶಯಃ ॥೩೫॥

ಪಾದಂ ದದಾತಿ ವಹ್ನೌ ಯೋ ಗಾಶ್ಚ ಪಾದೇನ ತಾಡಯೇತ್ ।
ಗೇಹಂ ವಿಶೇದಧೌತಾಂಘ್ರಿಃ ಸ್ನಾತ್ವಾ ಗೋವಧಮಾಪ್ನುಯಾತ್ ॥೩೬॥

ಯೋ ಭುಙ್ಕ್ತೇ ಸ್ನಿಗ್ಧಪಾದೇನ ಶೇತೇ ಸ್ನಿಗ್ಧಾಂಘ್ರಿರೇವ ಚ ।
ಸೂರ್ಯೋದಯೇ ಚ ಯೋ ಭುಙ್ಕ್ತೇ ಸ ಗೋಹತ್ಯಾಂ ಲಭೇದ್ಧ್ರುವಂ॥

ಅವೀರಾನ್ನಂ ಚ ಯೋ ಭುಙ್ಕ್ತೇ ಯೋನಿಜೀವ್ಯಸ್ಯ ಚ ದ್ವಿಜಃ ।
ಯಸ್ತ್ರಿಸಂಧ್ಯಾವಿಹೀನಶ್ಚ ಗೋಹತ್ಯಾಂ ಲಭತೇ ಚ ಸಃ ॥೩೮॥

---

ಹಸುಗಳಿಗೆ ಎಂಜಲನ್ನು ತಿನ್ನಿಸಿದರೂ ಎತ್ತನ್ನು ಸವಾರೀ ಕೆಲಸಗಳಿಗೆ ಉಪಯೋಗಿಸುವವನಿಗೆ ಅನ್ನವನ್ನಿಕ್ಕಿದರೂ ಅಂಥವನ ಅನ್ನವನ್ನುಂಡರೂ ಅವರಿಗೆ ಗೋಹತ್ಯೆಯ ಪಾಪವು ಬರುವುದು. ||೩೪||

ಶೂದ್ರಸ್ತ್ರೀಯ ಗಂಡನಾದ ಬ್ರಾಹ್ಮಣನಿಗೆ ಯಾರು ಯಜ್ಞವನ್ನು ಮಾಡಿಸುವರೋ ಅವನ ಅನ್ನವನ್ನು ಯಾರು ಊಟಮಾಡುವರೋ ಅವರು ನೂರು ಗೋಹತ್ಯೆಮಾಡಿದ ಪಾಪಫಲವನ್ನು ಹೊಂದುವರು. ||೩೫||

ಬೆಂಕಿಯ ಮೇಲೆ ಕಾಲಿಟ್ಟವನೂ ಹಸುವನ್ನು ಕಾಲಿನಿಂದ ಒದ್ದವನೂ ಕಾಲು ತೊಳೆಯದೆ ದೇವರ ಮನೆಯನ್ನು ಹೊಕ್ಕವನೂ ಕಾಲುತೊಳೆಯದೆ ಸ್ನಾನಮಾಡಿದವನೂ ಇವರೆಲ್ಲರೂ ಗೋವಧೆಯ ಫಲವನ್ನು ಪಡೆವರು. ||೩೬||

ಒದ್ದೆಯಾದ ಕಾಲಿನಲ್ಲಿ ಕುಳಿತು ಯಾರು ಊಟಮಾಡುವರೋ ಮತ್ತು ಮಲಗುವರೋ ಸೂರ್ಯೋದಯಕಾಲದಲ್ಲಿ ಊಟಮಾಡುವರೋ, ಅವರೂ, ಗಂಡು ಮಕ್ಕಳಿಲ್ಲದವಳು ಸಂಪಾದಿಸಿದ ಅನ್ನವನ್ನು ಭೋಜನಮಾಡುವವರೂ ಸ್ತ್ರೀಯರಿಗೆ ಕೆಟ್ಟನಡತೆಯನ್ನು ಕಲಿಸಿ ಜೀವನಮಾಡುವವನ ಅನ್ನವನ್ನು ಊಟಮಾಡುವವರೂ ಮೂರುಕಾಲದಲ್ಲೂ ಸಂಧ್ಯಾವಂದನೆಯನ್ನು ಮಾಡದ ಬ್ರಾಹ್ಮಣನೂ ಇವರೆಲ್ಲರೂ ಗೋಹತ್ಯೆಯ ಫಲವನ್ನು ಪಡೆವರು. ||೩೭-೩೮||

ಸ್ವ ಭರ್ತರಿ ಚ ದೇವೇ ವಾ ಭೇದಬುದ್ಧಿಂ ಕರೋತಿ ಯಾ ।
ಕಟೂಕ್ತ್ಯಾ ತಾಡಯೇತ್ಕಾಂತಂ ಸಾ ಗೋಹತ್ಯಾಂ ಲಭೇದ್ಧ್ರುವಂ ॥೫೯॥

ಗೋಮಾರ್ಗವರ್ಜನಂ ಕೃತ್ವಾ ದದಾತಿ ಸಸ್ಯಮೇವ ವಾ ।
ತಡಾಗೇ ವಾ ತು ದುರ್ಗೇ ವಾ ಸ ಗೋಹತ್ಯಾಂ ಲಭೇದ್ಧ್ರುವಂ ॥೬೦॥

ಪ್ರಾಯಶ್ಚಿತ್ತೇ ಗೋವಧಸ್ಯ ಯಃ ಕರೋತಿ ವ್ಯತಿಕ್ರಮಂ ।
ಪುತ್ರಲೋಭಾದಥಾಜ್ಞಾನಾತ್ಸ ಗೋಹತ್ಯಾಂ ಲಭೇದ್ಧ್ರುವಂ ॥೬೧॥

ರಾಜಕೇ ದೈವಕೇ ಯತ್ನಾದ್ಗೋಸ್ವಾಮೀ ಗಾಂ ನ ರಕ್ಷತಿ ।
ದುಃಖಂ ದದಾತಿ ಯೋ ಮೂಢೋ ಗೋಹತ್ಯಾಂ ಸ ಲಭೇದ್ಧ್ರುವಂ॥೬೨॥

ಪ್ರಾಣಿನೋ ಲಂಘಯೇದ್ಯೋ ಹಿ ದೇವಾರ್ಚಾಮನಲಂ ಜಲಂ ।
ನೈವೇದ್ಯಂ ಪುಷ್ಪಮನ್ನಂ ಚ ಸ ಗೋಹತ್ಯಾಂ ಲಭೇದ್ಧ್ರುವಂ ॥೬೩॥

---

ತನ್ನ ಗಂಡನಿಗೂ ದೇವರಿಗೂ ಭೇದವಿರುವುದೆಂದು ಯಾವಳು ತಿಳಿಯು ವಳೋ ಮತ್ತು ಕ್ರೂರವಾದ ಮಾತಿನಿಂದ ಗಂಡನನ್ನು ಬಾಧೆಪಡಿಸುವಳೋ ಅವಳಿಗೆ ಗೋಹತ್ಯೆಯ ಪಾಪವು ಖಂಡಿತವಾಗಿ ಬರುವುದು. ॥೫೯॥

ಗೋಮಾಳದ ಭೂಮಿಯಲ್ಲಿ ಸಸ್ಯವನ್ನು ಬೆಳೆದು ಆ ಸಸ್ಯವನ್ನು ದಾನಮಾಡಿ ದರೂ, ಕೆರೆಯನ್ನಾಗಲೀ ನಾಶಮಾಡಿ ಸಸ್ಯವನ್ನು ಬೆಳೆದು ಅದನ್ನು ದಾನಮಾಡಿ ದರೂ ಗೋಹತ್ಯೆಯ ಫಲವು ಬರುವುದು. ॥೬೦॥

ಮಗನು ಗೋಹತ್ಯೆಯನ್ನು ಮಾಡಿ ಅದಕ್ಕೆ ಪ್ರಾಯಶ್ಚಿತ್ತಮಾಡಿಕೊಳ್ಳುವ ಸಂದರ್ಭದಲ್ಲಿ ತಂದೆಯು ಮಗನ ಮೇಲಿನ ಪ್ರೀತಿಯಿಂದಲೋ, ಅಜ್ಞಾನದಿಂದಲೋ ಆ ಪ್ರಾಯಶ್ಚಿತ್ತವನ್ನು ಮಾಡದಿರುವಂತೆ ಮಾಡಿದರೆ ತಂದೆಗೂ ಗೋವಧೆಯ ಪಾತಕವು ಬರುವುದು. ॥೬೧॥

ರಾಜೋಪದ್ರವವಾದ ಯುದ್ಧಾದಿಗಳಲ್ಲಿಯೂ ದೈವೋಪದ್ರವವಾದ ಅನಾ ವೃಷ್ಟಿಯಲ್ಲಿಯೂ ಯಜಮಾನನು ಗೋವುಗಳನ್ನು ಕಾಪಾಡದಿದ್ದರೆ ಮತ್ತು ಅವುಗಳಿಗೆ ದುಃಖವನ್ನು ಕೊಟ್ಟರೆ ಗೋಹತ್ಯೆಯ ಪಾಪವನ್ನು ಪಡೆವನು. ॥೬೨॥

ಪ್ರಾಣಿಗಳನ್ನೂ ದೇವರಪೂಜೆಯನ್ನೂ ಅಗ್ನಿಯನ್ನೂ ನೀರನ್ನೂ ದೇವರ ನೈವೇದ್ಯವನ್ನೂ ಹೂವನ್ನೂ ಅನ್ನವನ್ನೂ ತಿರಸ್ಕಾರಮಾಡಿದವನು ಖಂಡಿತವಾಗಿ ಗೋಹತ್ಯೆಯ ಪಾಪವನ್ನು ಹೊಂದುವನು. ॥೬೩॥

ಶಶ್ವನ್ನಾಸ್ತೀತಿ ಯೋ ವಾದೀ ಮಿಥ್ಯಾವಾದೀ ಪ್ರತಾರಕಃ ।
ದೇವದ್ವೇಷೀ ಗುರುದ್ವೇಷೀ ಸ ಗೋಹತ್ಯಾಂ ಲಭೇದ್ಧ್ರುವಂ ॥೬೪॥

ದೇವತಾಪ್ರತಿಮಾಂ ದೃಷ್ಟ್ವಾ ಗುರುಂ ವಾ ಬ್ರಾಹ್ಮಣಂ ಸತಿ ।
ಸಂಭ್ರಮಾನ್ನ ನಮೇದ್ಯೋ ಹಿ ಸ ಗೋಹತ್ಯಾಂ ಲಭೇದ್ಧ್ರುವಂ ॥೬೫॥

ನ ದದಾತ್ಯಾಶಿಷಂ ಕೋಪಾತ್ಪ್ರಣತಾಯ ಚ ಯೋ ದ್ವಿಜಃ ।
ವಿದ್ಯಾರ್ಥಿನೇ ಚ ವಿದ್ಯಾಂ ಚ ಸ ಗೋಹತ್ಯಾಂ ಲಭೇದ್ಧ್ರುವಂ ॥೬೬॥

ಗೋಹತ್ಯಾ ವಿಪ್ರಹತ್ಯಾ ಚ ಕಥಿತಾ ಚಾತಿದೇಶಿಕೀ ।
ಗಮ್ಯಾಂ ಸ್ತ್ರಿಯಂ ನೃಣಾಮೇವ ನಿಬೋಧ ಕಥಯಾಮಿ ತೇ ॥೬೭॥

ಸ್ವಸ್ತ್ರೀ ಗಮ್ಯಾ ಚ ಸರ್ವೇಷಾಮಿತಿ ವೇದಾನುಶಾಸನಂ ।
ಅಗಮ್ಯಾ ಚ ತದನ್ಯಾ ಯಾ ಚೇತಿ ವೇದವಿದೋ ವಿದುಃ ॥೬೮॥

---

ಅತಿಥಿಗಳಿಗೆ ಮತ್ತೆ ಮತ್ತೆ ಇಲ್ಲವೆಂದು ಹೇಳುವವನೂ ಸುಳ್ಳನ್ನು ಹೇಳಿ ವಂಚಿಸುವವನೂ ದೇವತೆಗಳನ್ನೂ ಗುರುವನ್ನೂ ದ್ವೇಷಮಾಡತಕ್ಕವನೂ ಗೋಹತ್ಯೆಯ ಪಾಪವನ್ನು ಪಡೆವನು. ॥೬೪॥

ದೇವರ ಪ್ರತಿಮೆಯನ್ನೂ ಗುರುವನ್ನೂ ಬ್ರಾಹ್ಮಣನನ್ನೂ ನೋಡಿ ಯಾವನು ನಮಸ್ಕಾರ ಮಾಡುವುದಿಲ್ಲವೋ ಅವನಿಗೆ ಗೋಹತ್ಯೆಯು ಬರುವುದು. ॥೬೫॥

ನಮಸ್ಕಾರಮಾಡಿದವನಿಗೆ ಆಶೀರ್ವಾದ ಮಾಡದಿರುವ, ವಿದ್ಯಾರ್ಥಿಗೆ ವಿದ್ಯೆಯನ್ನು ಹೇಳಿಕೊಡದಿರುವ, ಬ್ರಾಹ್ಮಣನೂ ಗೋಹತ್ಯೆಯ ಫಲವನ್ನು ಪಡೆವನು.॥೬೬॥

ಶಾಸ್ತ್ರವಚನೋಕ್ತವಾದ ಗೋಹತ್ಯೆಗೂ ಬ್ರಹ್ಮಹತ್ಯೆಗೂ ಸಮವಾದ ಪಾಪಗಳನ್ನು ಹೇಳಿದೆನು. ಇನ್ನು ಮನುಷ್ಯನಿಗೆ ಗಮ್ಯವಾದ ಸ್ತ್ರೀ ಯಾರು? ಎಂಬುದನ್ನು ಹೇಳುವೆನು ಕೇಳು. ॥೬೭॥

ಸಮಸ್ತರಿಗೂ ತಾನು ಮದುವೆಮಾಡಿಕೊಂಡ ಸ್ತ್ರೀಯು ಗಮ್ಯಳು. ಎಂದರೆ ಸುಖಾನುಭವಯೋಗ್ಯಳು. ಉಳಿದವರು ಅಗಮ್ಯರು. ಎಂದು ತಿಳಿದವರು ಹೇಳುವರು. ॥೬೮॥

ಸಾಮಾನ್ಯಂ ಕಥಿತಂ ಸರ್ವಂ ವಿಶೇಷಂ ಶೃಣು ಸುಂದರಿ ।
ಅತ್ಯಗಮ್ಯಾ ಹಿ ಯಾ ಯಾಶ್ಚ ನಿಬೋಧ ಕಥಯಾಮಿ ತಾಃ ॥೬೯॥

ಶೂದ್ರಾಣಾಂ ವಿಪ್ರಪತ್ನೀ ಚ ವಿಪ್ರಾಣಾಂ ಶೂದ್ರಕಾಮಿನೀ ।
ಅತ್ಯಗಮ್ಯಾ ಚ ನಿಂದ್ಯಾ ಚ ಲೋಕೇ ವೇದೇ ಪತಿವ್ರತೇ ॥೭೦॥

ಶೂದ್ರಶ್ಚ ಬ್ರಾಹ್ಮಣೀಂ ಗತ್ವಾ ಬ್ರಹ್ಮಹತ್ಯಾಶತಂ ಲಭೇತ್ ।
ತತ್ಸಮಂ ಬ್ರಾಹ್ಮಣೀ ಚಾಪಿ ಕುಂಭೀಪಾಕಂ ಲಭೇದ್ಧ್ರುವಂ ॥೭೧॥

ಶೂದ್ರಾಣಾಂ ವಿಪ್ರಪತ್ನೀ ಚ ವಿಪ್ರಾಣಾಂ ಶೂದ್ರಕಾಮಿನೀ ।
ಯದಿ ಶೂದ್ರಾಂ ವ್ರಜೇದ್ವಿಪ್ರೋ ವೃಷಲೀಪತಿರೇವ ಸಃ ॥೭೨॥

ಸ ಭ್ರಷ್ಟೋ ವಿಪ್ರಜಾತೇಶ್ಚ ಚಂಡಾಲಾತ್ಸೋಽಧಮಃ ಸ್ಮೃತಃ ।
ವಿಷ್ಠಾ ಸಮಶ್ಚ ತತ್ಪಿಂಡೋ ಮೂತ್ರಂ ತಸ್ಯ ಚ ತರ್ಪಣಂ ॥೭೩॥

---

ಸುಂದರಿಯಾದ ಸಾವಿತ್ರಿಯೇ, ಕೇಳು. ಸಾಮಾನ್ಯವಾಗಿ ಗಮ್ಯಾಗಮ್ಯಾ ಸ್ತ್ರೀಯರು ಯಾರು? ಎಂಬುವುದನ್ನು ಹೇಳಿದೆನು. ಇನ್ನು ವಿಶೇಷವಿಷಯವಾದ ಅತ್ಯಗಮ್ಯಾಸ್ತ್ರೀಯರು ಯಾರು ? ಎಂಬುದನ್ನು ಹೇಳುವೆನು ಕೇಳು. ॥೬೯॥

ಶೂದ್ರರಿಗೆ ಬ್ರಾಹ್ಮಣಪತ್ನಿಯೂ ಬ್ರಾಹ್ಮಣರಿಗೆ ಶೂದ್ರಪತ್ನಿಯೂ ಅತ್ಯಗಮ್ಯರಾದ ಸ್ತ್ರೀಯರು ಎಂದೂ ಅವರು ನಿಂದ್ಯರಾಗುವರೆಂದೂ ವೇದದಲ್ಲಿ ಹೇಳಿರುವುದು. ಲೋಕಪ್ರಸಿದ್ಧಿಯೂ ಹಾಗೆಯೇ ಇರುವುದು. ॥೭೦॥

ಶೂದ್ರನು ಬ್ರಾಹ್ಮಣಸ್ತ್ರೀಸಂಗವನ್ನು ಮಾಡಿದರೆ ನೂರು ಬ್ರಹ್ಮಹತ್ಯೆಯ ಪಾಪವನ್ನು ಹೊಂದುವನು. ಆ ಬ್ರಾಹ್ಮಣಸ್ತ್ರೀಗೂ ಅಷ್ಟೇ ಪಾಪವು ಬರುವುದು. ಇವರಿಬ್ಬರೂ ಕುಂಭೀಪಾಕವೆಂಬ ನರಕಕ್ಕೆ ಹೋಗುವುದು ಖಂಡಿತ. ॥೭೧॥

ಶೂದ್ರನ ಸಂಗಮಾಡಿದ ಬ್ರಾಹ್ಮಣಪತ್ನಿಯೂ ಬ್ರಾಹ್ಮಣನ ಸಂಗಮಾಡಿದ ಶೂದ್ರಪತ್ನಿಯೂ ಇಬ್ಬರೂ ಕುಂಭೀಪಾಕವೆಂಬ ನರಕಕ್ಕೆ ಹೋಗುವರು. ಬ್ರಾಹ್ಮಣನು ಸ್ತ್ರೀಸಂಗಮಾಡಿದರೆ ಅವನನ್ನು ವೃಷಲೀಪತಿಯೆನ್ನುವರು. ಅವನು ಬ್ರಾಹ್ಮಣಜಾತಿಯಿಂದ ಭ್ರಷ್ಟನಾಗಿ ಚಂಡಾಲನಿಗಿಂತಲೂ ನೀಚನಾಗುವನು. ಅವನು ಪಿತೃಗಳಿಗೆ ಹಾಕಿದ ಪಿಂಡವು ಮಲಕ್ಕೆ ಸಮವಾದುದು. ತರ್ಪಣದ ನೀರು ಮೂತ್ರಕ್ಕೆ ಸಮವಾದುದು. ಆದುದರಿಂದ ಅವನು ಕೊಟ್ಟದ್ದಾವುದೂ ದೇವತೆಗಳಿಗಾಗಲೀ ಪಿತೃಗಳಿಗಾಗಲೀ ಸೇರುವುದಿಲ್ಲ. ॥೭೨-೭೩॥

ನ ಪಿತೄಣಾಂ ಸುರಾಣಾಂ ಚ ತದ್ದತ್ತಮುಪತಿಷ್ಠತಿ ।
ಕೋಟಿಜನ್ಮಾರ್ಜಿತಂ ಪುಣ್ಯಂ ತಸ್ಯಾರ್ಚಾ ತಪಸಾಽರ್ಜಿತಂ ॥೭೪॥

ದ್ವಿಜಸ್ಯ ವೃಷಲೀಲೋಭಾನ್ನಶ್ಯತ್ಯೇವ ನ ಸಂಶಯಃ ।
ಬ್ರಾಹ್ಮಣಶ್ಚ ಸುರಾಪೀತೀ ವಿಡ್ಭೋಜೀ ವೃಷಲೀಪತಿಃ ॥೭೫॥

ತಪ್ತ ಮುದ್ರಾ ದಗ್ಧದೇಹಸ್ತಪ್ತಶೂಲಾಂಕಿತಸ್ತಥಾ ।
ಹರಿವಾಸರಭೋಜೀ ಚ ಕುಂಭೀಪಾಕಂ ವ್ರಜೇ ದ್ದ್ವಿಜಃ ॥೭೬॥

ಗುರುಪತ್ನೀಂ ರಾಜಪತ್ನೀಂ ಸಪತ್ನೀಮಾತರಂ ಧ್ರುವಂ ।
ಸುತಾಂ ಪುತ್ರವಧೂಂ ಶ್ವಶ್ರೂಂ ಸ್ವಗರ್ಭಾಂ ಭಗಿನೀಂ ಸತೀಂ ॥೭೭॥

ಸೋದರಭ್ರಾತೃಜಾಯಾಂ ಚ ಮಾತುಲಾನೀಂ ಪಿತುಃ ಪ್ರಸೂಂ ।
ಮಾತುಃ ಪ್ರಸೂತಂ ತ್ಸ್ವಸಾರಂ ಭಗಿನೀಂ ಭ್ರಾತೃಕನ್ಯಕಾಂ· ॥೭೮॥

ಶಿಷ್ಯಾಂ ಶಿಷ್ಯಸಪತ್ನೀಂ ಚ ಭಾಗಿನೇಯಸ್ಯ ಕಾಮಿನೀಂ ।
ಭ್ರಾತುಃ ಪುತ್ರಪ್ರಿಯಾಂ ಚೈವಾಽತ್ಯಗಮ್ಯಾ ಆಹ ಪದ್ಮಜಃ ॥೭೯॥

---

ಬ್ರಾಹ್ಮಣನು ತಪಸ್ಸಿನಿಂದಲೂ ಪೂಜೆಯಿಂದಲೂ ಒಂದು ಕೋಟಿ ಜನ್ಮಗಳಿಂದ ಗಳಿಸಿದ ಪುಣ್ಯವೆಲ್ಲವೂ ಬ್ರಾಹ್ಮಣನಿಗೆ ಉಂಟಾದ ಶೂದ್ರಸ್ತ್ರೀಯ ಸಂಗದಲ್ಲಿ ಅತ್ಯಾಶೆಯಿಂದಲೇ ನಾಶವಾಗುವುದು. ಸಂದೇಹವಿಲ್ಲ. ॥೭೪॥

ಹೆಂಡವನ್ನು ಕುಡಿಯುವ, ಮಲವನ್ನು ತಿನ್ನುವ, ಶೂದ್ರಸ್ತ್ರೀಗಂಡನಾದ ಬ್ರಾಹ್ಮಣನೂ, ಕಾಯಿಸಿದ ಮುದ್ರೆಯಿಂದ ಸುಟ್ಟದೇಹವುಳ್ಳ, ಕಾಯಿಸಿದ ಶೂಲದ ಗುರುತುಳ್ಳ ದ್ವಿಜನೂ, ಏಕಾದಶೀದಿನ ಅನ್ನವನ್ನು ಊಟಮಾಡುವವನೂ ಕುಂಭೀಪಾಕವೆಂಬ ನರಕಕ್ಕೆ ಹೋಗುವರು. ॥೭೫-೭೬॥

ಗುರುವಿನ ಹೆಂಡಿತಿ, ರಾಜನ ಹೇಂಡಿತಿ, ತಾಯಿಯ ಸವತಿ, ಮಗಳು, ಸೊಸೆ, ಅತ್ತೆ, ಗರ್ಭಿಣೀ, ಸಹೋದರೀ, ಅಣ್ಣತಮ್ಮಂದಿರ ಹೆಂಡಿತಿಯರು, ಸೋದರತ್ತೆ, ತಂದೆತಾಯಿಯರ ತಾಯಿಯರ, ಅಕ್ಕತಂಗಿಯರು, ಸಹೋದರೀ, ಅಣ್ಣತಮ್ಮಂದಿರ ಮಗಳು, ಶಿಷ್ಯಳು, ಶಿಷ್ಯನ ಹೆಂಡಿತಿ ಸಹೋದರಿಯ ಮಗನ ಹೆಂಡಿತಿ ಸಹೋದರನ ಮಗನ ಹೆಂಡಿತಿ ಇವರೆಲ್ಲರೂ ಅತ್ಯಗಮ್ಯಾ ಸ್ತ್ರೀಯರೆಂದು ಬ್ರಹ್ಮನು ಹೇಳಿರುವನು. ೭೭-೭೮-೭೯॥

ಏತಾಃ ಕಾಮೇನ ಕಾಂತೋ ಯೋ ವ್ರಜೇದ್ವೈ ಮಾನವಾಧಮಃ ।
ಸ ಮಾತೃಗಾಮೀ ವೇದೇಷು ಬ್ರಹ್ಮಹತ್ಯಾಶತಂ ವ್ರಜೇತ್ ॥೮೦॥

ಅಕರ್ಮಾರ್ಹೋಽಸ್ಪೃಸಂಸ್ಪೃಶ್ಯೋ ಲೋಕೇ ವೇದೇ ಚ ನಿಂದಿತಃ ।
ಸ ಯಾತಿ ಕುಂಭೀಪಾಕೇ ಚ ಮಹಾಪಾಪೀ ಸುದುಷ್ಕರೇ ॥೮೧॥

ಕರೋತ್ಯಶುದ್ಧಾಂ ಸಂಧ್ಯಾಂ ವಾ ನ ಸಂಧ್ಯಾಂ ವಾ ಕರೋತಿ ಚ ।
ತ್ರಿಸಂಧ್ಯಂ ವರ್ಜಯೇದ್ಯೋ ವಾ ಸಂಧ್ಯಾಹೀನಶ್ಚ ಸ ದ್ವಿಜಃ ॥೮೨॥

ವೈಷ್ಣವಂ ಚ ತಥಾ ಶೈವಂ ಶಾಕ್ತಂ ಸೌರಂ ಚ ಗಾಣಪಂ ।
ಯೋಽಹಂಕಾರಾನ್ನ ಗೃಹ್ಣಾತಿ ಮಂತ್ರಂ ಸೋಽದೀಕ್ಷಿತಃ ಸ್ಮೃತಃ ॥೮೩॥

ಪ್ರವಾಹಮವಧಿಂ ಕೃತ್ವಾ ಯಾವದ್ಧಸ್ತಚತುಷ್ಟಯಂ ।
ತತ್ರ ನಾರಾಯಣಃ ಸ್ವಾಮೀ ಗಂಗಾಗರ್ಭಾಂತರೇ ವಸೇತ್ ॥೮೪॥

ತತ್ರ ನಾರಾಯಣಕ್ಷೇತ್ರೇ ಮೃತೋ ಯಾತಿ ಹರೇಃ ಪದಂ ।
ವಾರಾಣಸ್ಯಾಂ ಬದರ್ಯಾಂ ಚ ಗಂಗಾಸಾಗರಸಂಗಮೇ ॥೮೫॥

---

ಮನುಷ್ಯನು ಕಾಮದಿಂದ ಈ ಸ್ತ್ರೀಯರ ಸಂಗವನ್ನು ಮಾಡಿದರೆ ಅವನು ಮಾತೃಗಾಮಿ ಎನಿಸಿಕೊಂಡು ನೂರುಬ್ರಹ್ಮಹತ್ಯೆಯ ಪಾಪವನ್ನು ಪಡೆದು ಸ್ಪರ್ಶಯೋಗ್ಯನೂ, ಕರ್ಮಯೋಗ್ಯನೂ ಆಗದೆ ವೇದಶಾಸ್ತ್ರಗಳಿಂದಲೂ ಜನರಿಂದಲೂ ನಿಂದಿತನಾಗಿ ಕುಂಭೀಪಾಕವೆಂಬ ನರಕಕ್ಕೆ ಹೋಗುವನು. ॥೮೦-೮೧॥

ಶಾಸ್ತ್ರೋಕ್ತಕ್ರಮವನ್ನು ಬಿಟ್ಟು ಸಂಧ್ಯೆಯನ್ನು ಮಾಡಿದರೆ ಅಶುದ್ಧ ಸಂಧ್ಯೆಯು. ಇದನ್ನು ಮಾಡಿದವನೂ, ಸಂಧ್ಯೆಯನ್ನು ಮಾಡದವನೂ, ಮೂರು ಕಾಲಗಳಲ್ಲೂ ಸಂಧ್ಯೆಯನ್ನು ಬಿಟ್ಟವನೂ ಸಂಧ್ಯಾಹೀನರೆಂದೆನಿಸುವರು. ॥೮೨॥

ಯಾವನು ಅಹಂಕಾರದಿಂದ ವಿಷ್ಣು, ಶಿವ, ಶಕ್ತಿ, ಸೂರ್ಯ, ಗಣಪತಿ, ಈ ದೇವತೆಗಳ ಮಂತ್ರಗಳಲ್ಲಿ ಒಂದನ್ನಾದರೂ ಉಪದೇಶ ತೆಗೆದುಕೊಳ್ಳದಿರುವನೋ ಅವನು ಅದೀಕ್ಷಿತನು. ॥೮೩॥

ಗಂಗಾನದಿಯಲ್ಲಿ ಪ್ರವಾಹವನ್ನು ಎಲ್ಲೆಯಾಗಿ ಮಾಡಿಕೊಂಡು ನಾಲ್ಕು ಮೊಳದ ದೂರದವರೆಗೆ ನಾರಾಯಣನು ಗಂಗೆಯ ಗರ್ಭದಲ್ಲಿ ವಾಸವಾಗಿರುವನು. ಆ ಪ್ರದೇಶವನ್ನು ನಾರಾಯಣಕ್ಷೇತ್ರವೆಂದು ಕರೆಯುವರು. ಅಲ್ಲಿ ಮರಣಹೊಂದಿ

ಪುಷ್ಕರೇ ಹರಿಹರಕ್ಷೇತ್ರೇ ಪ್ರಭಾಸೇ ಕಾಮರೂಪ್ಥಲೇ ।
ಹರಿದ್ವಾರೇ ಚ ಕೇದಾರೇ ತಥಾ ಮಾತೃಪುರೇಽಪಿ ಚ ॥೮೬॥

ಸರಸ್ವತೀನದೀತೀರೇ ಪುಣ್ಯೇ ವೃಂದಾವನೇ ವನೇ ।
ಗೋದಾವರ್ಯಾಂ ಚ ಕೌಶಿಕ್ಯಾಂ ತ್ರಿವೇಣ್ಯಾಂ ಚ ಹಿಮಾಚಲೇ ॥೮೭॥

ಏಷು ತೀರ್ಥೇಷು ಯೋ ದಾನಂ ಪ್ರತಿಗೃಹ್ಣಾತಿ ಕಾಮತಃ ।
ಸ ಚ ತೀರ್ಥೇ ಪ್ರತಿಗ್ರಾಹೀ ಕುಂಭೀಪಾಕೇ ಪ್ರಯಾತಿ ಸಃ ॥೮೮॥

ಶೂದ್ರಸೇವೀ ಶೂದ್ರಯಾಜೀ ಗ್ರಾಮಯಾಜೀತಿ ಕೀರ್ತಿತಃ ।
ತಥಾ ದೇವೋಪಜೀವೀ ಚ ದೇವಲಃ ಪರಿಕೀರ್ತಿತಃ ॥೮೯॥

ಶೂದ್ರಪಾಕೋಪಜೀವೀ ಯಃ ಸೂಪಕಾರ ಇತಿ ಸ್ಮೃತಃ ।
ಸಂಧ್ಯಾಪೂಜನಹೀನಶ್ಚ ಪ್ರಮತ್ತಃ ಪತಿತಃ ಸ್ಮೃತಃ ॥೯೦॥

---

ದವರು ವೈಕುಂಠಕ್ಕೆ ಹೋಗುವರು. ಕಾಶಿ, ಬದರಿಕಾಶ್ರಮ, ಗಂಗಾಸಾಗರ ಸಂಗಮ, ಪುಷ್ಕರಕ್ಷೇತ್ರ, ಹರಿಹರಕ್ಷೇತ್ರವಾದ ತ್ರ್ಯಂಬಕ, ಪ್ರಭಾಸಕ್ಷೇತ್ರ, ಕಾಮರೂಪದೇಶ, ಹರಿದ್ವಾರ, ಕೇದಾರ, ಮಾತೃಪುರವೆಂಬ ರೇಣುಕಾಸ್ಥಾನ ಸರಸ್ವತೀ ತೀರ, ವೃಂದಾವನ, ಗೋದಾವರೀ ತೀರ, ಕೌಶಿಕನದಿಯ ತೀರ, ತ್ರಿವೇಣೀ ಸಂಗಮವಾದ ಪ್ರಯಾಗ, ಹಿಮಾಲಯ, ಈ ಪುಣ್ಯಕ್ಷೇತ್ರಗಳಲ್ಲಿ ಅತ್ಯಾಸೆಯಿಂದ ಯಾವನು ದಾನವನ್ನು ಪ್ರತಿಗ್ರಹಿಸುವನೋ ಅವನು ತೀರ್ಥಪ್ರತಿಗ್ರಾಹೀ ಎಂಬ ಹೆಸರನ್ನು ಹೊಂದುವನು. ಅವನಿಗೆ ಕುಂಭೀಪಾಕವೆಂಬ ನರಕವು ಆಗುವುದು. ||೮೪-೮೫-೮೬ ೮೭-೮೮||

ಶೂದ್ರನನ್ನು ಸೇವಿಸುವವನೂ ಅವನಿಗೆ ಯಜ್ಞಾದಿಕರ್ಮಗಳನ್ನು ಮಾಡಿಸುವವನೂ ಗ್ರಾಮಯಾಜೀ ಎಂದು ಹೆಸರನ್ನು ಹೊಂದುವನು. ದೇವಾಲಯದಲ್ಲಿ ಪೂಜಾದಿಗಳನ್ನು ಮಾಡಿ ಅದರಿಂದಲೇ ಜೀವಿಸುವವನು ದೇವಲನೆಂದು ಹೆಸರುಳ್ಳವನು ಆಗುವನು. ||೮೯||

ಶೂದ್ರನಿಗೆ ಅಡಿಗೆಮಾಡಿ ಅದರಿಂದ ಜೀವನಮಾಡುವವನಿಗೆ ಸೂಪಕಾರನೆಂದು ಹೆಸರು. ಸಂಧ್ಯಾವಂದನೆಯೂ ಪೂಜೆಯೂ ಇಲ್ಲದವನಿಗೆ ಪ್ರಮತ್ತನೆಂದೂ ಪತಿತನೆಂದೂ ಹೆಸರು. ಮಂಗಳಕರಳಾದ ಸಾವಿತ್ರಿಯೇ, ವೃಷಲೀಪತಿಯ ಲಕ್ಷಣವನ್ನು ಹಿಂದೆಯೇ ಹೇಳಿರುವೆನು. ||೯೦||

ಉಕ್ತಂ ಸರ್ವಂ ಮಯಾ ಭದ್ರೇ ಲಕ್ಷಣಂ ವೃಷಲೀಪತೇಃ ।
ಏತೇ ಮಹಾಪಾತಕಿನಃ ಕುಂಭೀಪಾಕಂ ಪ್ರಯಾಂತಿ ತೇ   ॥೯೧॥
ಕುಂಡಾನ್ಯನ್ಯಾನಿ ಯೇ ಯಾಂತಿ ನಿಬೋಧ ಕಥಯಾಮಿ ತೇ ।

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ನವಮಸ್ಕಂಧೇ
ಚತುಸ್ತ್ರಿಂಶೋಽಧ್ಯಾಯಃ

---

ಈ ಮಹಾಪಾಪಗಳನ್ನು ಮಾಡಿದವರೆಲ್ಲರೂ ಕುಂಭೀಪಾಕವೆಂಬ ನರಕಕ್ಕೆ ಹೋಗುವರು. ಬೇರೆ ಬೇರೆ ನರಕಗಳಿಗೆ ಯಾರು ಯಾರು ಹೋಗುವರೋ ಅದನ್ನು ಹೇಳುವೆನು ಕೇಳು. ॥೯೧॥

ಇಲ್ಲಿಗೆ ದೇವೀಭಾಗವತಮಹಾಪುರಾಣದ ಒಂಬತ್ತನೆಯ ಸ್ಕಂಧದಲ್ಲಿ
ಮೂವತ್ತುನಾಲ್ಕನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ನವಮಸ್ಕಂಧೇ

### ॥ ಪಂಚತ್ರಿಂಶೋಽಧ್ಯಾಯಃ ॥

### ಮೂವತ್ತೈದನೆಯ ಅಧ್ಯಾಯವು

॥ ಧರ್ಮರಾಜ ಉವಾಚ ॥

**ದೇವಸೇವಾಂ ವಿನಾ ಸಾಧ್ವಿ ನ ಭವೇತ್ಕರ್ಮಕೃಂತನಂ ।**
**ಶುದ್ಧಕರ್ಮ ಶುದ್ಧಬೀಜಂ ನರಕಶ್ಚ ಕುಕರ್ಮಣಾ ॥೧॥**

**ಪುಂಶ್ಚಲ್ಯನ್ನಂ ಚ ಯೋ ಭುಂಙ್ಕ್ತೇ ಯೋಽಸ್ಯಾಂ ಗಚ್ಛೇತ್ಪತಿವ್ರತೇ ।**
**ಸ ದ್ವಿಜಃ ಕಾಲಸೂತ್ರಂ ಚ ಮೃತೋ ಯಾತಿ ಸುದುರ್ಗಮಂ ॥೨॥**

**ಶತವರ್ಷಂ ಕಾಲಸೂತ್ರೇ ಸ್ಥಿರೀಭೂತೋ ಭವೇದ್ಧ್ರುವಂ ।**
**ತತ್ರ ಜನ್ಮನಿ ರೋಗೀ ಚ ತತಃ ಶುದ್ಧೋ ಭವೇದ್ದ್ವಿಜಃ ॥೩॥**

---

ಪತಿವ್ರತೆಯಾದ ಸಾವಿತ್ರಿಯೇ, ದೇವತೆಗಳ ಸೇವೆಯನ್ನು ಮಾಡದೆ ಕರ್ಮ ಫಲವು ನಾಶವಾಗುವುದಿಲ್ಲ. ಶುದ್ಧವಾದ ಕರ್ಮವನ್ನು ಮಾಡುತ್ತಿದ್ದರೆ ಶುದ್ಧಕರ್ಮ ಸಂಸ್ಕಾರವು ಹೆಚ್ಚುವುದು. ಕೆಟ್ಟಕರ್ಮದಿಂದ ಕೆಟ್ಟಕರ್ಮಪ್ರವರ್ತನವು ಹೆಚ್ಚುವುದು. ಮತ್ತು ನರಕ ದುಃಖವೂ ಉಂಟಾಗುವುದು. ॥೧॥

ಜಾರೆಯ (ಹಾದರಗಿತ್ತಿ) ಅನ್ನವನ್ನು ಊಟಮಾಡುವವನೂ ಅವಳ ಸಂಗ ವನ್ನು ಮಾಡುವವನೂ ಸತ್ತಮೇಲೆ ಕಾಲಸೂತ್ರವೆಂಬ ನರಕದಲ್ಲಿ ನೂರುವರ್ಷಗ ಳಿದ್ದು ರೋಗಿಯಾಗಿ ಜನ್ಮವೆತ್ತಿ ಬಳಿಕ ಶುದ್ಧನಾಗುವನು. ॥೨-೩॥

ಪತಿವ್ರತಾ ಚೈಕಪತೌ ದ್ವಿತೀಯೇ ಕುಲಟಾ ಸ್ಮೃತಾ ।
ತೃತೀಯಾ ಧರ್ಷಿಣೀ ಜ್ಞೇಯಾ ಚತುರ್ಥೇ ಪುಂಶ್ಚಲೀತ್ಯಪಿ ॥೪॥

ವೇಶ್ಯಾ ಚ ಪಂಚಮೇ ಷಷ್ಠೇ ಪುಂಗೀ ಚ ಸಪ್ತಮೇಽಷ್ಟಮೇ ।
ತತ ಊರ್ಧ್ವಂ ಮಹಾವೇಶ್ಯಾ ಸಾಽಸ್ಪೃಶ್ಯಾ ಸರ್ವಜಾತಿಷು ॥೫॥

ಯೋ ದ್ವಿಜಃ ಕುಲಟಾಂ ಗಚ್ಛೇದ್ಧರ್ಷಿಣೀಂ ಪುಂಶ್ಚಲೀಮಪಿ ।
ಪುಂಗೀ ವೇಶ್ಯಾಂ ಮಹಾವೇಶ್ಯಾಂ ಮತ್ಸ್ಯೋದೇ ಯಾತಿ ನಿಶ್ಚಿತಂ ॥೬॥

ಶತಾಬ್ದಂ ಕುಲಟಾಗಾಮೀ ಧೃಷ್ಟಾಗಾಮೀ ಚತುರ್ಗುಣಂ ।
ಷಡ್ಗುಣಂ ಪುಂಶ್ಚಲೀಗಾಮೀ ವೇಶ್ಯಾಗಾಮೀ ಗುಣಾಷ್ಟಕಂ ॥೭॥

ಪುಂಗೀಗಾಮೀ ದಶಗುಣಂ ವಸೇತ್ತತ್ರ ನ ಸಂಶಯಃ ।
ಮಹಾವೇಶ್ಯಾಕಾಮುಕಶ್ಚ ತತೋ ದಶಗುಣಂ ಭವೇತ್ ॥೮॥
ತತ್ರೈವ ಯಾತನಾಂ ಭುಂಕ್ತೇ ಯಮದೂತೇನ ತಾಡಿತಃ ।

---

ಸ್ತ್ರೀಗೆ ಒಬ್ಬನೇ ಗಂಡನಿದ್ದರೆ ಅವಳು ಪತಿವ್ರತೆ. ಇಬ್ಬರಿದ್ದರೆ ಕುಲಟೆ ಎಂದೂ ಮೂವರಿದ್ದರೆ ಧರ್ಷಿಣೀ ಎಂದೂ, ನಾಲ್ಕುಜನ ಗಂಡಂದಿರಿದ್ದರೆ ಪುಂಶ್ಚಲೀ ಎಂದೂ ಹೆಸರು. ||೪||

ಐದು ಆರು ಜನ ಗಂಡಂದಿರಿದ್ದರೆ ವೇಶ್ಯೆ ಎಂದೂ, ಏಳೆಂಟು ಜನರಿದ್ದರೆ ಪುಂಗೀ ಎಂದೂ ಅದಕ್ಕಿಂತ ಹೆಚ್ಚು ಜನರಿದ್ದರೆ ಮಹಾವೇಶ್ಯೆ ಎಂದೂ ಹೆಸರು ಬರುವುದು. ಮಹಾವೇಶ್ಯೆಯು ಸಮಸ್ತಜಾತಿಯವರಿಗೂ ಸ್ಪರ್ಶಯೋಗ್ಯಳಲ್ಲ. ||೫||

ಯಾವ ಬ್ರಾಹ್ಮಣನು ಕುಲಟಾದಿ ಸ್ತ್ರೀಯರ ಸಂಗಮಾಡುವನೋ ಅವನು ಮತ್ಸ್ಯೋದವೆಂಬ ನರಕಕ್ಕೆ ಹೋಗುವನು. ಅಲ್ಲಿ ಕುಲಟಾಸಂಗಮಾಡಿದವನು ನೂರು ವರ್ಷವೂ, ಧೃಷ್ಟೆಯ ಸಂಗ ಮಾಡಿದವನು ನಾಲ್ಕರಷ್ಟು ವರ್ಷವೂ, ಪುಂಶ್ಚಲಿಯ ಸಂಗದಿಂದ ಆರುಪಾಲು, ವೇಶ್ಯೆಯ ಸಂಗಕ್ಕೆ ಎಂಟುಪಾಲು, ಪುಂಗೀಸಂಗಕ್ಕೆ ಹತ್ತು ಪಾಲು ಹೆಚ್ಚುಕಾಲ ವಾಸಮಾಡುವನು. ಮಹಾವೇಶ್ಯಾಸಂಗಮಾಡಿದವನು ಪುಂಗೀ ಸಂಗದ ಹತ್ತರಷ್ಟು ಕಾಲ ಆ ನರಕದಲ್ಲಿ ಯಮದೂತರ ಹಿಂಸೆಯಿಂದುಂಟಾದ ಯಾತನೆಯನ್ನು ಅನುಭವಿಸುತ್ತಿರುವನು. ||೬-೭-೮||

ತಿತ್ತಿರಿಃ ಕುಲಟಾಗಾಮೀ ಧೃಷ್ಟಾಗಾಮೀ ಚ ವಾಯಸಃ ॥೯॥

ಕೋಕಿಲಃ ಪುಂಶ್ಚಲೀಗಾಮೀ ವೇಶ್ಯಾಗಾಮೀ ವೃಕಃ ಸ್ಮೃತಃ ।
ಪುಂಗೀಗಾಮೀ ಸೂಕರಶ್ಚ ಸಪ್ತಜನ್ಮನಿ ಭಾರತೇ ॥೧೦॥

ಮಹಾವೇಶ್ಯಾಪ್ರಗಾಮೀ ಚ ಜಾಯತೇ ಶಾಲ್ಮಲೀತರುಃ ।
ಯೋ ಭುಂಙ್ಕ್ತೇ ಜ್ಞಾನಹೀನಶ್ಚ ಗ್ರಹಣೇ ಚಂದ್ರಸೂರ್ಯಯೋಃ ॥೧೧॥

ಅರುಂತುದಂ ಸ ಯಾತ್ಯೇವಾಽಪ್ಯನ್ನಮಾನಾಬ್ದಮೇವ ಚ ।
ತತೋ ಭವೇನ್ಮಾನವಶ್ಚಾಽಪ್ಯುದರೇ ರೋಗಪೀಡಿತಃ ॥೧೨॥

ಗುಲ್ಮಯುಕ್ತಶ್ಚ ಕಾಣಶ್ಚ ದಂತಹೀನಸ್ತತಃ ಶುಚಿಃ ।
ವಾಕ್ಪ್ರದತ್ತಾಂ ಸ್ವಕನ್ಯಾಂ ಚ ಯೋಽನ್ಯಸ್ಮೈ ಪ್ರದದಾತಿ ಚ ॥೧೩॥

---

ಆ ನರಕವನ್ನನುಭವಿಸಿದ ಮೇಲೆ ಅವನು ಭರತಖಂಡದಲ್ಲಿ ಏಳುಜನ್ಮಗಳವರೆಗೆ ಕುಲಟೆಯ ಸಂಗಕ್ಕೆ ತಿತ್ತಿರೀಪಕ್ಷಿ, ದೃಷ್ಟೆಯ ಸಂಗಕ್ಕೆ ಕಾಗೆ, ಪುಂಶ್ಚಲಿಯ ಸಂಗಕ್ಕೆ ಕೋಗಿಲೆ, ವೇಶ್ಯೆಯ ಸಂಗಕ್ಕೆ ತೋಳ, ಪುಂಗೀಸಂಗಕ್ಕೆ ಹಂದಿ, ಈ ಜನ್ಮಗಳನ್ನು ಪಡೆವನು. ಮಹಾವೇಶ್ಯಾಸಂಗಮಾಡಿದವನು ಬೂರುಗದ ಮರವಾಗಿ ಹುಟ್ಟಿ ದುಃಖವನ್ನನುಭವಿಸುವನು. ॥೯-೧೦॥

ಯಾವ ಬ್ರಾಹ್ಮಣನು ಜ್ಞಾನವಿಲ್ಲದವನಾಗಿ ಚಂದ್ರಸೂರ್ಯರ ಗ್ರಹಣಕಾಲದಲ್ಲಿ ಭೋಜನಮಾಡುವನೋ ಅವನು ಕೃಮಿಕಂತುಕವೆಂಬ ನರಕದಲ್ಲಿ ಅವನು ತಿಂದ ಅನ್ನದ ಅಗುಳಿನ ಸಂಖ್ಯೆಯುಷ್ಟು ವರುಷ ಮರ್ಮಸ್ಥಾನವನ್ನು ಭೇದಿಸುವ ಹುಳುಗಳಿಂದ ಯಾತನೆಯನ್ನನುಭವಿಸಿ ಹೊಟ್ಟೆನೋವಿನ ರೋಗದಿಂದ ಪೀಡಿತನಾದ ಮನುಷ್ಯನಾಗಿ ಹುಟ್ಟುವನು. ॥೧೧-೧೨॥

ಆಮೇಲೆ ಹೊಟ್ಟೆಯಲ್ಲಿ ಗೆಡ್ಡೆಯುಳ್ಳವನಾಗಿಯೂ ಕುರುಡನಾಗಿಯೂ ಹಲ್ಲಿಲ್ಲದವನಾಗಿಯೂ ಹುಟ್ಟಿ ಬಳಿಕ ಶುದ್ಧನಾಗುವನು.

ತನ್ನ ಮಗಳನ್ನು ಒಬ್ಬನಿಗೆ ಕೊಡುತ್ತೇನೆಂದು ಮಾತುಕೊಟ್ಟು ಮತ್ತೊಬ್ಬನಿಗೆ ಕೊಟ್ಟವನು ನೂರುವರ್ಷ ಪಾಂಸುಕುಂಡವಲ್ಲಿ ಧೂಳನ್ನು ಕುಡಿಯುತ್ತಾ ಇರುವನು. ಆ ಕನ್ಯೆಯ ಹಣವನ್ನು ಕಿತ್ತುಕೊಂಡವನು ಪಾಂಸುವೇಷ್ಟನ ಕುಂಡದಲ್ಲಿ

ಸ ವಸೇತ್ತಾಂಸು ಕುಂಡೇ ಚ ತದ್ಭೋಜೀ ಶತವತ್ಸರಂ ।
ತದ್ದ್ರವ್ಯಹಾರೀ ಯಃ ಸಾಧ್ವಿ ಪಾಂಸುವೇಷ್ಟಿತ ಶಬ್ದಕಂ ॥೧೪॥

ನಿವಸೇಚ್ಛರಶಯ್ಯಾಯಾಂ ಮಮ ದೂತೇನ ತಾಡಿತಃ ।
ಭಕ್ತ್ಯಾ ನ ಪೂಜಯೇದ್ವಿಪ್ರಃ ಶಿವಲಿಂಗಂ ಚ ಪಾರ್ಥಿವಂ ॥೧೫॥

ಸ ಯಾತಿ ಶೂಲಿನಃ ಕೋಪಾಚ್ಛೂಲಪ್ರೋತಂ ಸುದಾರುಣಂ ।
ಸ್ಥಿತ್ವಾ ಶತಾಬ್ದಂ ತತ್ರೈವ ಶ್ವಾಪದಃ ಸಪ್ತಜನ್ಮಸು ॥೧೬॥

ತತೋ ಭವೇದ್ದೇವಲಶ್ಚ ಸಪ್ತಜನ್ಮ ತತಃ ಶುಚಿಃ ।
ಕರೋತಿ ಕುಂಠಿತಂ ವಿಪ್ರಂ ಯದ್ಭಿಯಾ ಕಂಪತೇ ದ್ವಿಜಃ ॥೧೭॥

ಪ್ರಕಂಪನೇ ವಸೇತ್ಸೋಽಪಿ ವಿಪ್ರಲೋಮಾಬ್ದಮೇವ ಚ ।
ಪ್ರಕೋಪವದನಾ ಕೋಪಾತ್ಸ್ವಾಮಿನಂ ಯಾ ಚ ಪಶ್ಯತಿ ॥೧೮॥

ಕಟೂಕ್ತಿಂ ತಂ ಪ್ರವದತಿ ಸೋಲ್ಮುಕಂ ಸಂಪ್ರಯಾತಿ ಹಿ ।
ಉಲ್ಕಾಂ ದದಾತಿ ತದ್ವಕ್ತ್ರೇ ಸತತಂ ಮಮ ಕಿಂಕರಃ ॥೧೯॥

---

ಬಾಣದ ಹಾಸಿಗೆಯ ಮೇಲೆ ನನ್ನ ದೂತರ ಹಿಂಸೆಯನ್ನು ಸಹಿಸುತ್ತಿರುವನು. ॥೧೩-೧೪॥

ಬ್ರಾಹ್ಮಣನು ಭಕ್ತಿಯಿಂದ ಶಿವನ ಪಾರ್ಥಿವಲಿಂಗವನ್ನು ಪೂಜಿಸದಿದ್ದರೆ ಆ ಪಾಪದಿಂದ ಶೂಲಪ್ರೋತವೆಂಬ ನರಕಕ್ಕೆ ಹೋಗಿ ನೂರುವರ್ಷ ಅಲ್ಲಿದ್ದು, ಏಳು ಜನ್ಮಗಳವರೆಗೆ ಕ್ರೂರಮೃಗವಾಗಿ ಹುಟ್ಟಿ ಆಮೇಲೆ ಏಳು ಜನ್ಮಗಳ ವರೆಗೆ ದೇವಲನಾಗಿದ್ದು ಬಳಿಕ ಶುದ್ಧನಾಗುವನು. (ದೇವಲ=ಪೂಜಾರಿ=ದೇವದ್ರವ್ಯದಿಂದ ಜೀವಿಸುವವನು.) ॥೧೫-೧೬॥

ಕುತರ್ಕದಿಂದ ಬ್ರಾಹ್ಮಣನನ್ನು ಯಾವನು ಸೋಲಿಸುವನೋ ಯಾವನ ಭಯದಿಂದ ಬ್ರಾಹ್ಮಣನು ನಡುಗುವನೋ ಅವನು ಬ್ರಾಹ್ಮಣನ ಲೋಮಗಳ ಸಂಖ್ಯೆಯಷ್ಟು ವರುಷ ಪ್ರಕಂಪನವೆಂಬ ನರಕದಲ್ಲಿರುವನು. ॥೧೭॥

ಯಾವಳು ಕೋಪದಿಂದ ಗಂಡನನ್ನು ನೋಡಿ ಕ್ರೂರವಾದ ಮಾತನಾಡುವಳೋ ಅವಳು ಉಲ್ಮುಕವೆಂಬ ನರಕಕ್ಕೆ ಹೋಗುವಳು. ಅಲ್ಲಿ ನನ್ನ ದೂತನು ಯಾವಾಗಲೂ ಅವಳ ಬಾಯಿಗೆ ಕೊಳ್ಳಿಯನ್ನು ತುರುಕುತ್ತಿರಲು ದೊಣ್ಣೆಯಿಂದ

ದಂಡೇನ ತಾಡಯೇನ್ಮೂರ್ಧ್ನಿ ತಲ್ಲೋಮಾಬ್ದಪ್ರಮಾಣಕಂ ।
ತತೋ ಭವೇನ್ಮಾನವೀ ಚ ವಿಧವಾ ಸಪ್ತಜನ್ಮಸು ॥೨೦॥

ಸಾ ಭುಕ್ತ್ವಾ ಚೈವ ವೈಧವ್ಯಂ ವ್ಯಾಧಿಯುಕ್ತಾ ತತಃ ಶುಚಿಃ ।
ಯಾ ಬ್ರಾಹ್ಮಣೀ ಶೂದ್ರಭೋಗ್ಯಾ ಚಾಂಧಕೂಪೇ ಪ್ರಯಾತಿ ಸಾ ॥೨೧॥

ತಪ್ತಶೌಚೋದಕೇ ಧ್ವಾಂತೇ ತದಾಹಾರೀ(ರಾ) ದಿವಾನಿಶಂ ।
ನಿವಸೇದತಿ ಸಂತಪ್ತಾ ಯಮದೂತೇನ ತಾಡಿತಾ ॥೨೨॥

ಶೌಚೋದಕೇ ನಿಮಗ್ನಾ ಸಾ ಯಾವದಿಂದ್ರಾಶ್ಚತುರ್ದಶ ।
ಕಾಕೀ ಜನ್ಮಸಹಸ್ರಾಣಿ ಶತಜನ್ಮಾನಿ ಸೂಕರೀ ॥೨೩॥

ಸೃಗಾಲೀ ಶತಜನ್ಮಾನಿ ಶತಜನ್ಮಾನಿ ಕುಕ್ಕುಟೀ ।
ಪಾರಾವತೀ ಸಪ್ತಜನ್ಮ ವಾನರೀ ಸಪ್ತಜನ್ಮಸು ॥೨೪॥

ತತೋ ಭವೇತ್ಸಾ ಚಂಡಾಲೀ ಸರ್ವಭೋಗ್ಯಾ ಚ ಭಾರತೇ ।
ತತೋ ಭವೇಚ್ಚ ರಜಕೀ ಯಕ್ಷ್ಮಗ್ರಸ್ತಾ ಚ ಪುಂಶ್ಚಲೀ ॥೨೫॥
ತತಃ ಕುಷ್ಠಯುತಾ ತೈಲಕಾರೀ ಶುದ್ಧಾ ಭವೇತ್ತತಃ ।

---

ತಲೆಯ ಮೇಲೆ ಹೊಡೆಯುವನು. ತನ್ನ ಲೋಮಗಳಷ್ಟು ವರುಷ ಅವಳು ದುಃಖವನ್ನನುಭವಿಸಿ ಬಳಿಕ ಏಳು ಜನ್ಮಗಳು ವಿಧವೆಯಾಗಿದ್ದು ದುಃಖವನ್ನನುಭವಿಸಿದ ಮೇಲೆ ರೋಗಿಯಾಗಿ ಹುಟ್ಟಿ ತರುವಾಯ ಶುದ್ಧಿಯಾಗುವಳು. ॥೧೮-೧೯-೨೦॥

ಶೂದ್ರನ ಸಂಗವನ್ನು ಮಾಡಿದ ಬ್ರಾಹ್ಮಣಸ್ತ್ರೀಯು ಅಂಧಕೂಪವೆಂಬ ನರಕಕ್ಕೆ ಹೋಗುವಳು. ಅಶುಚಿಯಾದ ನೀರಿನಿಂದ ಕೂಡಿದ ಕತ್ತಲೆಯಾದ ಆ ನರಕದಲ್ಲಿ ಯಮದೂತರ ಹಿಂಸೆಯನ್ನನುಭವಿಸುತ್ತಾ ಆ ನೀರಿನಲ್ಲಿಯೇ ಮುಳುಗಿ ಅದನ್ನೇ ಕುಡಿಯುತ್ತಾ ಹದಿನಾಲ್ಕು ದೇವೇಂದ್ರರ ಅಧಿಕಾರ ಮುಗಿಯುವ ವರೆಗೂ ದುಃಖವನ್ನನುಭವಿಸುತ್ತಾ ಸಾವಿರ ಜನ್ಮಗಳು ಹೆಣ್ಣುಕಾಗೆಯಾಗಿಯೂ ನೂರುಜನ್ಮಗಳು ಹೆಣ್ಣುಹಂದಿಯಾಗಿಯೂ ನೂರು ಜನ್ಮಗಳು ಹೆಣ್ಣು ನರಿಯಾಗಿಯೂ, ನೂರು ಜನ್ಮಗಳು ಹೆಣ್ಣುಕೋಳಿಯಾಗಿಯೂ, ಏಳು ಜನ್ಮಗಳು ಹೆಣ್ಣುಪಾರಿವಾಳವಾಗಿಯೂ ಏಳು ಜನ್ಮಗಳು ಹೆಣ್ಣು ಕಪಿಯಾಗಿಯೂ ಈ ಜನ್ಮಗಳನ್ನು ಕಳೆದು ಭರತಖಂಡದಲ್ಲಿ ಚಂಡಾಲಿಯಾಗಿ ಹುಟ್ಟಿ ಆ ಮೇಲೆ ಜಾರೆಯೂ ರೋಗಿಯೂ ಆದ ಅಗಸರವಳಾಗಿ

ನಿವಸೇದ್ವೇಧನೇ ವೇಶ್ಯಾ ಪುಂಗೀ ಚ ದಂಡತಾಡನೇ ॥೨೬॥

ಜಲರಂಧ್ರೇ ವಸೇದ್ವೇಶ್ಯಾ ಕುಲಟಾ ದೇಹಚೂರ್ಣಕೇ ।
ಸ್ವೈರಿಣೀ ದಲನೇ ಚೈವ ಧೃಷ್ಟಾ ಚ ಶೋಷಣೇ ತಥಾ ॥೨೭॥

ನಿವಸೇದ್ಯಾತನಾಯುಕ್ತಾ ಮಮ ದೂತೇನ ತಾಡಿತಾ ।
ವಿಣ್ಮೂತ್ರಭಕ್ಷಾ ಸತತಂ ಯಾವನ್ಮನ್ವಂತರಂ ಸತಿ ॥೨೮॥

ತತೋ ಭವೇದ್ವಿಟ್ಕೃಮಿಶ್ಚ ಲಕ್ಷವರ್ಷಂ ತತಃ ಶುಚಿಃ ।
ಬ್ರಾಹ್ಮಣೋ ಬ್ರಾಹ್ಮಣೀಂ ಗಚ್ಛೇತ್ಕ್ಷತ್ರಿಯಾಂ ವಾಽಪಿ ಕ್ಷತ್ರಿಯಃ ॥೨೯॥

ವೈಶ್ಯೋ ವೈಶ್ಯಾಂ ಚ ಶೂದ್ರಾಂ ವಾ ಶೂದ್ರಶ್ಚಾಪಿ ವ್ರಜೇದ್ಯದಿ ।
ಸವರ್ಣಪರದಾರೈಶ್ಚ ಕಷಾಯಂ ಯಾಂತಿ ತೇ ಜನಾಃ ॥೩೦॥

ಭುಕ್ತ್ವಾ ಕಷಾಯ ತಪ್ತೋದಂ ನಿವಸೇದ್ವಾ ಶತಾಬ್ದಕಂ ।
ತತೋ ವಿಪ್ರೋ ಭವೇಚ್ಛುದ್ಧಸ್ತತೋ ವೈ ಕ್ಷತ್ರಿಯಾದಯಃ ॥೩೧॥
ಯೋಷಿತಶ್ಚಾಪಿ ಶುದ್ಧ್ಯಂತೀತ್ಯೇವಮಾಹ ಪಿತಾಮಹಃ ।

---

ಹುಟ್ಟಿ ಬಳಿಕ ಕುಷ್ಠರೋಗದಿಂದ ಕೂಡಿದ ಗಾಣಿಗಿತ್ತಿಯಾಗಿ ತರುವಾಯ ಶುದ್ಧ ಳಾಗುವಳು. ॥೨೧-೨೨-೨೩-೨೪-೨೫॥

ವೇಶ್ಯೆಯು ವೇಧನವೆಂಬ ನರಕದಲ್ಲಿಯೂ, ಪುಂಗಿಯು ದಂಡತಾಡನವೆಂಬ ನರಕದಲ್ಲಿಯೂ, ಮಹಾವೇಶ್ಯೆಯು ಜಲರಂಧ್ರವೆಂಬ ನರಕದಲ್ಲಿಯೂ, ಕುಲಟೆಯು ದೇಹಚೂರ್ಣವೆಂಬ ನರಕದಲ್ಲಿಯೂ, ಸ್ವೈರಿಣಿಯು ದಲನವೆಂಬ ನರಕದಲ್ಲಿಯೂ, ಧೃಷ್ಟೆಯು ಶೋಷಣವೆಂಬ ನರಕದಲ್ಲಿಯೂ, ನನ್ನ ದೂತರು ಕೊಡುವ ಯಾತನೆ ಯನ್ನು ಅನುಭವಿಸುತ್ತಾ ಮಲಮೂತ್ರಗಳನ್ನು ಭಕ್ಷಿಸುತ್ತಾ ಒಂದು ಮನ್ವಂತರದ ವರೆಗೆ ವಾಸಮಾಡಿ ಒಂದುಲಕ್ಷವರ್ಷ ಮಲದಲ್ಲಿ ಹುಳುವಾಗಿದ್ದು ಬಳಿಕ ಶುದ್ಧಳಾಗು ವಳು. ॥೨೬-೨೭-೨೮॥

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರು, ತಮ್ಮ ತಮ್ಮ ವರ್ಣದ ಪರಸ್ತ್ರೀ ಸಂಗವನ್ನು ಮಾಡಿದರೆ ಆ ಸ್ತ್ರೀಪುರುಷರಿಬ್ಬರೂ ಕಷಾಯವೆಂಬ ನರಕಕ್ಕೆ ಹೋಗು ವರು. ಅಲ್ಲಿ ಬಿಸಿಯಾದ ಕಷಾಯದ ನೀರನ್ನು ಕುಡಿಯುತ್ತಾ ನೂರುವರ್ಷವಿದ್ದು ಎಲ್ಲರೂ ಶುದ್ಧರಾಗುವರೆಂದು ಬ್ರಹ್ಮನು ಹೇಳಿದನು. ॥೨೯-೩೦-೩೧॥

ಕ್ಷತ್ರಿಯೋ ಬ್ರಾಹ್ಮಣೀಂ ಗಚ್ಛೇದ್ವೈಶ್ಯೋ ವಾಽಪಿ ಪತಿವ್ರತೇ ॥೩೨॥

ಮಾತೃಗಾಮೀ ಭವೇತ್ಸೋಽಪಿ ಶೂರ್ಪೇ ಚ ನರಕೇ ವಸೇತ್ ।
ಶೂರ್ಪಾಕಾರೈಶ್ಚ ಕೃಮಿಭಿರ್ಬ್ರಾಹ್ಮಣ್ಯಾ ಸಹ ಭಕ್ಷಿತಃ ॥೩೩॥

ಪ್ರತಪ್ತಮೂತ್ರಭೋಜೀ ಚ ಯಮದೂತೇನ ತಾಡಿತಃ ।
ತತ್ರೈವ ಯಾತನಾಂ ಭುಂಙ್ಕ್ತೇ ಯಾವದಿಂದ್ರಾಶ್ಚತುರ್ದಶ ॥೩೪॥

ಸಪ್ತಜನ್ಮವರಾಹಶ್ಚ ಛಾಗಲಶ್ಚ ತತಃ ಶುಚಿಃ ।
ಕರೇ ಧೃತ್ವಾ ತು ತುಲಸೀಂ ಪ್ರತಿಜ್ಞಾಂ ಯೋ ನ ಪಾಲಯೇತ್ ॥೩೫॥

ಮಿಥ್ಯಾ ವಾ ಶಪಥಂ ಕುರ್ಯಾತ್ಸಚ ಜ್ವಾಲಾಮುಖಂ ವ್ರಜೇತ್ ।
ಗಂಗಾತೋಯಂ ಕರೇ ಕೃತ್ವಾ ಪ್ರತಿಜ್ಞಾಂ ಯೋ ನ ಪಾಲಯೇತ್ ॥೩೬॥

ಶಿಲಾಂ ವಾ ದೇವಪ್ರತಿಮಾಂ ಸ ಚ ಜ್ವಾಲಾಮುಖಂ ವ್ರಜೇತ್ ।
ದತ್ವಾ ದಕ್ಷಿಣಹಸ್ತಂ ಚ ಪ್ರತಿಜ್ಞಾಂ ಯೋ ನ ಪಾಲಯೇತ್ ॥೩೭॥

ಸ್ಥಿತ್ವಾ ದೇವಗೃಹೇ ವಾಽಪಿ ಸ ಚ ಜ್ವಾಲಾಮುಖಂ ವ್ರಜೇತ್ ।
ಆಸ್ಪೃಶ್ಯ ಬ್ರಾಹ್ಮಣಂ ಗಾಂ ಚ ಜ್ವಾಲಾವಹ್ನಿಂ ವ್ರಜೇದ್ವಿಜಃ ॥೩೮॥

---

ಪತಿವ್ರತೆಯಾದ ಸಾವಿತ್ರಿಯೇ, ಕ್ಷತ್ರಿಯನಾಗಲೀ, ವೈಶ್ಯನಾಗಲೀ ಬ್ರಾಹ್ಮಣ ಸ್ತ್ರೀಸಂಗವನ್ನು ಮಾಡಿದರೆ ಮಾತೃಗಾಮಿಯ ಪಾಪವನ್ನು ಹೊಂದಿ ಶೂರ್ಪಕುಂಡ ನರಕದಲ್ಲಿ ಆ ಬ್ರಾಹ್ಮಣಸ್ತ್ರೀಯ ಜೊತೆಯಲ್ಲಿಯೇ ಮೊರದ ಆಕಾರವಾದ ಕ್ರಿಮಿಗಳಿಂದ ಕಚ್ಚಿಸಿಕೊಳ್ಳುತ್ತಾ ಕಾಯಿಸಿ ಬಿಸಿಯಾದ ಮೂತ್ರವನ್ನು ಕುಡಿಯುತ್ತಾ ಯಮದೂತರ ಹಿಂಸೆಯನ್ನನುಭವಿಸುತ್ತಾ ಹದಿನಾಲ್ಕು ಜನ ಇಂದ್ರರ ಅಧಿಕಾರ ಕಾಲದ ವರೆಗೆ ದುಃಖವನ್ನನುಭವಿಸಿ ಏಳು ಜನ್ಮ ಹಂದಿ, ಏಳು ಜನ್ಮ ಆಡಾಗಿ, ಹುಟ್ಟಿ ಬಳಿಕ ಶುದ್ಧನಾಗುವನು. ॥೩೨-೩೩-೩೪॥

ಕೈಯಲ್ಲಿ ತುಲಸಿಯನ್ನೂ, ಗಂಗೆಯ ನೀರನ್ನೂ, ಸಾಲಿಗ್ರಾಮಶಿಲೆಯನ್ನೂ, ದೇವತಾ ಪ್ರತಿಮೆಯನ್ನೂ, ಇವುಗಳಲ್ಲಿ ಯಾವುದಾದರೊಂದನ್ನು ಹಿಡಿದು ಪ್ರತಿಜ್ಞೆ ಮಾಡಿ ಅದರಂತೆ ನಡೆಯದಿದ್ದರೂ, ಸುಳ್ಳುಪ್ರತಿಜ್ಞೆಮಾಡಿದರೂ ತನ್ನ ಬಲಗೈಯನ್ನು ಮತ್ತೊಬ್ಬನ ಕೈಮೇಲೆ ಇಟ್ಟು ಮಾತನ್ನು ಕೊಟ್ಟು ತಪ್ಪಿದರೂ, ದೇವರ

ನ ಪಾಲಯೇತ್ಪ್ರತಿಜ್ಞಾಂ ಚ ಸ ಚ ಜ್ವಾಲಾಮುಖಂ ವ್ರಜೇತ್ ।
ಮಿತ್ರದ್ರೋಹೀ ಕೃತಘ್ನಶ್ಚ ಯಶ್ಚ ವಿಶ್ವಾಸಘಾತುಕಃ ॥೩೯॥

ಮಿಥ್ಯಾಸಾಕ್ಷ್ಯಪ್ರದಶ್ಚೈವ ಸ ಚ ಜ್ವಾಲಾಮುಖಂ ವ್ರಜೇತ್ ।
ಏತೇ ತತ್ರ ವಸಂತ್ಯೇವ ಯಾವದಿಂದ್ರಾಶ್ಚತುರ್ದಶ ॥೪೦॥

ತಥಾಽಂಗಾರಪ್ರದಗ್ಧಾಶ್ಚ ಯಮದೂತೇನ ತಾಡಿತಾಃ ।
ಚಂಡಾಲಸ್ತುಲಸೀಂ ಸ್ಪೃಷ್ಟ್ವಾ ಸಪ್ತಜನ್ಮ ತತಃ ಶುಚಿಃ ॥೪೧॥

ಮ್ಲೇಚ್ಛೋ ಗಂಗಾಜಲಸ್ಪರ್ಶೀ ಪಂಚಜನ್ಮ ತತಃ ಶುಚಿಃ
ಶಿಲಾಸ್ಪರ್ಶೀ ವಿಟ್ಕೃಮಿಶ್ಚ ಸಪ್ತಜನ್ಮಸು ಸುಂದರಿ ॥೪೨॥

ಅರ್ಚಾಸ್ಪರ್ಶೀ ಬ್ರಹ್ಮಕೃಮಿಃ ಸಪ್ತಜನ್ಮ ತತಃ ಶುಚಿಃ ।
ದಕ್ಷಹಸ್ತಪ್ರದಾತಾ ಚ ಸ್ಪರ್ಶಶ್ಚ ಸಪ್ತಜನ್ಮಸು ॥೪೩॥

---

ಮನೆಯಲ್ಲಿ ನಿಂತುಕೊಂಡು ಬ್ರಾಹ್ಮಣನನ್ನೂ ಗೋವನ್ನೂ ಮುಟ್ಟಿಯೂ ಮಾಡಿದ ಪ್ರತಿಜ್ಞೆಯಂತೆ ನಡೆಯದೆಹೋದವರೂ ಜ್ವಾಲಾಮುಖವೆಂಬ ನರಕಕ್ಕೆ ಹೋಗುವರು. ॥೩೫-೩೬-೩೭-೩೮॥

ಹಿಂದೆ ಹೇಳಿದಂತೆ ಯಾವ ಶಪಥವನ್ನೂ ಮಾಡದೆ ಸಾಮಾನ್ಯವಾಗಿ ಮಾಡಿದ ಪ್ರತಿಜ್ಞೆಯನ್ನು ಪಾಲಿಸದೇ ಹೋದವನೂ, ಮಿತ್ರದ್ರೋಹಮಾಡಿದವನೂ, ಉಪಕಾರಕ್ಕೆ ಪ್ರತಿಯಾಗಿ ಅಪಕಾರಮಾಡಿದವನೂ, ಸುಳ್ಳುಸಾಕ್ಷಿ ಹೇಳಿದವನೂ ಇವರೆಲ್ಲರೂ ಜ್ವಾಲಾಮುಖವೆಂಬ ನರಕಕ್ಕೆ ಹೋಗಿ ಹದಿನಾಲ್ಕು ಜನ ಇಂದ್ರರ ಅಧಿಕಾರ ಮುಗಿಯುವ ವರೆಗೂ ಬೆಂಕಿಯಿಂದ ಸುಡಿಸಿಕೊಳ್ಳುತ್ತಾ ಯಮದೂತರ ಹಿಂಸೆಯನ್ನು ಸಹಿಸುತ್ತಾ ದುಃಖಪಟ್ಟು, ಆಮೇಲೆ ಶುದ್ಧನಾಗುವನು. ತುಲಸಿಯನ್ನು ಮುಟ್ಟಿ ಪ್ರತಿಜ್ಞೆಮಾಡಿ ತಪ್ಪಿದವನು ಏಳು ಜನ್ಮಗಳ ವರೆಗೆ ಚಂಡಾಲನಾಗಿ ಹುಟ್ಟಿ ಬಳಿಕ ಶುದ್ಧನಾಗುವನು. ॥೩೯-೪೦-೪೧॥

ಪ್ರತಿಜ್ಞೆಮಾಡಿದವರಲ್ಲಿ ಗಂಗಾಜಲವನ್ನು ಮುಟ್ಟಿದವನು ಐದು ಜನ್ಮ ಮ್ಲೇಚ್ಛನಾಗಿಯೂ, ಪೂಜೆಯಲ್ಲಿರುವ ಸಾಲಿಗ್ರಾಮವನ್ನು ಮುಟ್ಟಿದವನು ಏಳು ಜನ್ಮ ಬ್ರಾಹ್ಮಣನ ಮನೆಯಲ್ಲಿ ಕ್ರಿಮಿಯಾಗಿಯೂ, ಬಲಗೈಯನ್ನು ತಟ್ಟಿ ಮಾತು ಕೊಟ್ಟು ತಪ್ಪಿದವನು ಏಳು ಜನ್ಮ ಸರ್ಪವಾಗಿಯೂ ಹುಟ್ಟಿ, ಬಳಿಕ ಮನುಷ್ಯರಲ್ಲಿ ನೀಚಬ್ರಾಹ್ಮಣನಾಗಿದ್ದು ಅನಂತರ ಶುದ್ಧನಾಗುವನು. ॥೪೨-೪೩॥

ತತೋ ಭವೇದ್ಬ್ರಹ್ಮಹೀನೋ ಮಾನವಶ್ಚ ತತಃ ಶುಚಿಃ ।
ಮಿಥ್ಯಾವಾದೀ ದೇವಗೃಹೀ ದೇವಲಃ ಸಪ್ತಜನ್ಮಸು ॥೪೪॥

ವಿಪ್ರಾದಿಸ್ಪರ್ಶಕಾರೀ ಚ ವ್ಯಾಘ್ರಜಾತಿರ್ಭವೇ ದ್ಧ್ರುವಂ ।
ತತೋ ಭವೇಚ್ಚ ಮೂಕಃ ಸ ಬಧಿರಶ್ಚ ತ್ರಿಜನ್ಮನಿ ॥೪೫॥

ಭಾರ್ಯಾಹೀನೋ ಬಂಧುಹೀನೋ ವಂಶಹೀನಸ್ತತಃ ಶುಚಿಃ ।
ಮಿತ್ರದ್ರೋಹೀ ಚ ನಕುಲಃ ಕೃತಘ್ನಶ್ಚಾಪಿ ಗಂಡಕಃ ॥೪೬॥

ವಿಶ್ವಾಸಘಾತೀ ವ್ಯಾಘ್ರಶ್ಚ ಸಪ್ತಜನ್ಮಸು ಭಾರತೇ ।
ಮಿಥ್ಯಾಸಾಕ್ಷೀ ಚ ವಕ್ತವ್ಯೇ ಮಂಡೂ(ಭಲ್ಲೂ)ಕಃ ಸಪ್ತಜನ್ಮಸು॥೪೭॥

ಪೂರ್ವಾನ್ಸಪ್ತಾಃಪರಾನ್ಸಪ್ತ ಪುರುಷಾನ್ಹಂತಿ ಚಾತ್ಮನಃ ।
ನಿತ್ಯಕ್ರಿಯಾವಿಹೀನಶ್ಚ ಜಡತ್ವೇನ ಯುತೋ ದ್ವಿಜಃ ॥೪೮॥
ಯಸ್ಯಾನಾಸ್ಥಾ ವೇದವಾಕ್ಯೇ ಮಂದಂ ಹಸತಿ ಸಂತತಂ ।

---

ಸುಳ್ಳು ಹೇಳುವವನು ದೇವಸ್ಥಾನದಲ್ಲಿ ಏಳು ಜನ್ಮಗಳು ದೇವಲನಾಗಿಯೂ (ಪೂಜಾರಿ) ಬ್ರಾಹ್ಮಣಾದಿಗಳನ್ನು ಮುಟ್ಟಿ ಪ್ರತಿಜ್ಞೆಮಾಡಿದವನು ಹುಲಿಯ ಜಾತಿಯಾಗಿಯೂ, ಮೂರು ಜನ್ಮ ಮೂಗನಾಗಿಯೂ, ಕಿವುಡನಾಗಿಯೂ, ಹೆಂಡಿತಿಯೂ, ಬಂಧುಗಳೂ, ವಂಶವೂ, ಇಲ್ಲದವನಾಗಿಯೂ ಹುಟ್ಟಿ ಬಳಿಕ ಶುದ್ಧನಾಗುವನು. ||೪೪-೪೫||

ಸ್ನೇಹಿತನಿಗೆ ಮೋಸಮಾಡಿದವನು ಕೀರನಾಗಿಯೂ, ಉಪಕಾರಕ್ಕೆ ಅಪಕಾರ ಮಾಡಿದವನು ಯಾವ ಕೆಲಸಕ್ಕೂ ವಿಘ್ನಮಾಡುವ ಮನುಷ್ಯನಾಗಿಯೂ, ನಂಬಿಕೆಗೆ ದ್ರೋಹಮಾಡುವವನು ಏಳು ಜನ್ಮ ಹುಲಿಯಾಗಿಯೂ, ಸುಳ್ಳುಸಾಕ್ಷಿ ಹೇಳಿದವನು ಏಳು ಜನ್ಮ ಕಪ್ಪೆಯಾಗಿಯೂ (ಭಲ್ಲೂಕ ಎಂದರೆ ಕರಡಿ ಎಂದು ಪಾಠಾಂತರವು) ಹುಟ್ಟಿ ಬಳಿಕ ಶುದ್ಧರಾಗುವರು. ಇವರೆಲ್ಲರ ಪಾಪಕ್ಕೂ ಅವರವರ ವಂಶದಲ್ಲಿ ಹಿಂದಿನ ಏಳು ತಲೆ ಮುಂದಿನ ಏಳು ತಲೆಯ ವರೆಗೂ ಪಿತೃಗಳಾದವರು ನರಕಕ್ಕೆ ಹೋಗುವರು. ||೪೬-೪೭||

ಬ್ರಾಹ್ಮಣನು ಜಡನಾಗಿ ನಿತ್ಯಕರ್ಮವನ್ನು ಮಾಡದೆ ವೇದವಾಕ್ಯದಲ್ಲಿ ಆಸಕ್ತಿಯೂ ನಂಬಿಕೆಯೂ ಇಲ್ಲದೆ ಯಾವಾಗಲೂ ಹಾಸ್ಯಮಾಡುತ್ತಾ ಉಪವಾಸಾದಿ

ವ್ರತೋಪವಾಸಹೀನಶ್ಚ ಸದ್ವಾಕ್ಯೈ ಪರನಿಂದಕಃ ॥೪೯॥

ಧೂಮ್ರಾಂಧೇ ಚ ವಸೇತ್ಸೋಽಪಿ ಶತಾಬ್ದಂ ದೂಮ್ರಭಕ್ಷಕಃ ।
ಜಲಜಂತುರ್ಭವೇತ್ಸೋಽಪಿ ಶತಜನ್ಮಕ್ರಮೇಣ ಚ ॥೫೦॥

ತತೋ ನಾನಾಪ್ರಕಾರಶ್ಚ ಮತ್ಸ್ಯಜಾತಿಸ್ತತಃ ಶುಚಿಃ ।
ಯಃ ಕರೋತ್ಯುಪಹಾಸಂ ಚ ದೇವಬ್ರಾಹ್ಮಣಯೋರ್ಧನೇ ॥೫೧॥

ಪಾತಯಿತ್ವಾ ಸ ಪುರುಷಾನ್ ದಶಪೂರ್ವಾನ್ ದಶಾಪರಾನ್ ।
ಸೋಽಯಂ ಯಾತಿ ಚ ಧೂಮ್ರಾಂಧಂ ಧೂಮಧ್ವಾಂತಸಮನ್ವಿತಂ ॥೫೨॥

ಧೂಮ್ರಕ್ಲಿಷ್ಟೋ ಧೂಮ್ರಭೋಜೀ ವಸೇತ್ತತ್ರ ಚತುರ್ಯುಗಂ ।
ತತೋ ಮೂಷಿಕಜಾತಿಶ್ಚ ಸಪ್ತಜನ್ಮಸು ಭಾರತೇ ॥೫೩॥

ತತೋ ನಾನಾವಿಧಾಃ ಪಕ್ಷಿಜಾತಯಃ ಕೃಮಿಜಾತಿಭಿಃ ।
ತತೋ ನಾನಾವಿಧಾ ವೃಕ್ಷಾಃ ಪಶವಶ್ಚ ತತೋ ನರಃ ॥೫೪॥

---

ವ್ರತಗಳನ್ನು ಮಾಡದೆ ಸದ್ವಾಕ್ಯಗಳನ್ನೂ ಪರರನ್ನೂ ದೂಷಿಸುತ್ತಾ ಇದ್ದರೆ ಅವನು ಧೂಮ್ರಾಂಧವೆಂಬ ನರಕಕ್ಕೆ ಹೋಗಿ ನೂರು ವರ್ಷಗಳ ವರೆಗೆ ಹೊಗೆಯನ್ನೇ ಆಹಾರಮಾಡಿಕೊಂಡು ಇದ್ದು, ನೂರು ಜನ್ಮಗಳು ಜಲಜಂತುವಾಗಿ, ಬಳಿಕ ನಾನಾ ಬಗೆಯ ಮೀನಿನ ಜಾತಿಯಾಗಿ ಹುಟ್ಟಿ ಆಮೇಲೆ ಶುದ್ಧನಾಗುವನು. ॥೪೮-೪೯-೫೦॥

ದೇವತೆಗಳ ಮತ್ತು ಬ್ರಾಹ್ಮಣರ ಪದಾರ್ಥಗಳನ್ನು ನೋಡಿ ಯಾವನು ಹಾಸ್ಯಮಾಡುವನೋ ಅವನು ತನ್ನ ಹಿಂದಿನ ಹತ್ತು ತಲೆಯವರನ್ನೂ ಮುಂದಿನ ಹತ್ತು ತಲೆಯವರನ್ನೂ ನರಕದಲ್ಲಿ ಕೆಡವಿ ತಾನೂ ಹೊಗೆಯ ಕತ್ತಲೆಯಿಂದ ಕೂಡಿದ ಧೂಮ್ರಾಂಧವೆಂಬ ನರಕದಲ್ಲಿ ಬಿದ್ದು ಅಲ್ಲಿ ಹೊಗೆಯಿಂದ ಕಷ್ಟವನ್ನನುಭವಿಸುತ್ತಾ ಆ ಹೊಗೆಯನ್ನೇ ಆಹಾರಮಾಡಿಕೊಂಡು ಹಿಂದಿನ ಪಾಪಗಳ ಫಲಾನುಭವದ ಕಾಲಕ್ಕಿಂತಲೂ ನಾಲ್ಕರಷ್ಟು ಕಾಲ ಅಲ್ಲಿದ್ದು, ಭರತಖಂಡದಲ್ಲಿ ಏಳು ಜನ್ಮ ಇಲಿಯ ಜಾತಿಯಾಗಿಯೂ, ಆಮೇಲೆ ಬಗೆಬಗೆಯ ಪಕ್ಷಿಯಜಾತಿಯಾಗಿಯೂ, ಬಗೆಬಗೆಯ ಕ್ರಿಮಿಯ ಜಾತಿಯಾಗಿಯೂ, ಬಗೆಬಗೆಯ ಮರವಾಗಿಯೂ, ಪಶುಜಾತಿಗಳಾಗಿಯೂ ಹುಟ್ಟಿ ಬಳಿಕ ಮನುಷ್ಯನಾಗುವನು. ॥೫೧-೫೨-೫೩-೫೪॥

ವಿಪ್ರೋ ದೈವಜ್ಞಜೀವೀ ಚ ವೈದ್ಯಜೀವೀ ಚಿಕಿತ್ಸಕಃ ।
ಲಾಕ್ಷಾಲೋಹಾದಿವ್ಯಾಪಾರೀ ರಸಾದಿವಿಕ್ರಯೀ ಚ ಯಃ ॥೫೫॥

ಸ ಯಾತಿ ನಾಗವೇಷ್ಟಂ ಚ ನಾಗೈರ್ವೇಷ್ಟಿತನೋವ ಚ ।
ವಸೇತ್ಸ ಲೋಮಮಾನಾಬ್ದಂ ತತ್ರೈವ ನಾಗಪಾಶಿತಃ ॥೫೬॥

ತತೋ ನಾನಾವಿಧಾಃ ಪಕ್ಷಿಜಾತಯಶ್ಚ ತತೋ ನರಃ ।
ತತೋ ಭವೇತ್ಸ ಗಣಕೋ ವೈದ್ಯಶ್ಚ ಸಪ್ತಜನ್ಮಸು ॥೫೭॥

ಗೋಪಶ್ಚ ಕರ್ಮಕಾರಶ್ಚ ರಂಗಕಾರಸ್ತತಃ ಶುಚಿಃ ।
ಪ್ರಸಿದ್ಧಾನಿ ಚ ಕುಂಡಾನಿ ಕಥಿತಾನಿ ಪತಿವ್ರತೇ ॥೫೮॥

ಅನ್ಯಾನಿ ಚಾಪ್ರಸಿದ್ಧಾನಿ ಕ್ಷುದ್ರಾಣಿ ಸಂತಿ ತತ್ರ ವೈ ।
ಸಂತಿ ಪಾತಕಿನಸ್ತೇಷು ಸ್ವಕರ್ಮಫಲಭೋಗಿನಃ ॥೫೯॥
ಭ್ರಮಂತಿ ನಾನಾಯೋನಿಂ ಚ ಕಿಂ ಭೂಯಃ ಶ್ರೋತುಮಿಚ್ಛಸಿ ।

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ನವಮಸ್ಕಂಧೇ
ಪಂಚತ್ರಿಂಶೋಽಧ್ಯಾಯಃ

---

ಬ್ರಾಹ್ಮಣನು ಜ್ಯೋತಿಶ್ಶಾಸ್ತ್ರದಿಂದ ಜೀವಿಸಿದರೂ ವೈದ್ಯದಿಂದ ಜೀವಿಸಿದರೂ ಅರಗು ಲೋಹ ರಸದ್ರವ್ಯಗಳಾದ ಉಪ್ಪು ಬೆಲ್ಲ ಮುಂತಾದುವುಗಳನ್ನು ವ್ಯಾಪಾರ ಮಾಡಿದರೂ ನಾಗವೇಷ್ಟನವೆಂಬ ನರಕಕ್ಕೆ ಹೋಗುವನು. ಅಲ್ಲಿ ತನ್ನ ಶರೀರದಲ್ಲಿರುವ ರೋಮಗಳಷ್ಟು ವರುಷ ನಾಗಪಾಶದಿಂದ ಕಟ್ಟಲ್ಪಟ್ಟು ಹಾವುಗಳಿಂದ ಕಚ್ಚಿಸಿಕೊಳ್ಳುತ್ತಾ ಇರುವನು. ॥೫೫-೫೬॥

ಬಳಿಕ ನಾನಾವಿಧವಾದ ಪಕ್ಷಿಜಾತಿಗಳಾಗಿ ಹುಟ್ಟಿ, ಆಮೇಲೆ ಮನುಷ್ಯನಾಗಿ, ಜೋಯಿಸನಾಗಿ, ಏಳು ಜನ್ಮಗಳ ವರೆಗೆ ವೈದ್ಯನಾಗಿ, ಗೊಲ್ಲನೂ ಕಮ್ಮಾರನೂ ರಂಗಾರೆಯವನೂ ಆಗಿ, ಆಮೇಲೆ ಶುದ್ಧನಾಗುವನು. ॥೫೭॥

ಪತಿವ್ರತೆಯಾದ ಸಾವಿತ್ರಿಯೇ, ಪ್ರಸಿದ್ಧವಾದ ನರಕಕುಂಡಗಳನ್ನೆಲ್ಲವನ್ನೂ ವಿವರಿಸಿದೆನು. ಅಪ್ರಸಿದ್ಧವಾದ ಅಲ್ಪವಾದ ಕುಂಡಗಳೂ ಅಲ್ಲಿವೆ. ಅವುಗಳಿಲ್ಲೆಲ್ಲಾ

ತಮ್ಮ ಕರ್ಮಫಲವನ್ನನುಭವಿಸುವ ಪಾಪಿಗಳೂ ಇರುವರು. ಅವರೂ ಅನೇಕ ಜನ್ಮಗಳನ್ನೆತ್ತುತ್ತಾ ಸುತ್ತುತ್ತಿರುವರು. ಮತ್ತೇನನ್ನು ಕೇಳಬೇಕೆಂದಿರುವೆ ? ||೫೮-೫೯||

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಒಂಬತ್ತನೆಯ ಸ್ಕಂಧದಲ್ಲಿ<br>ಮೂವತ್ತೈದನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ನವಮಸ್ಕಂಧೇ

### || ಷಟ್ತ್ರಿಂಶೋಽಧ್ಯಾಯಃ ||

### ಮೂವತ್ತಾರನೆಯ ಅಧ್ಯಾಯವು

|| ಸಾವಿತ್ರ್ಯುವಾಚ ||

**ಧರ್ಮರಾಜ ಮಹಾಭಾಗ ವೇದವೇದಾಂಗಪಾರಗ ।**
**ನಾನಾಪುರಾಣೇತಿಹಾಸೇ ಯತ್ಸಾರಂ ತತ್ಪ್ರದರ್ಶಯ** ||೧||

**ಸರ್ವೇಷು ಸಾರಭೂತಂ ಯತ್ಸರ್ವೇಷ್ಟಂ ಸರ್ವಸಂಮತಂ ।**
**ಕರ್ಮಚ್ಛೇದ ಬೀಜರೂಪಂ ಪ್ರಶಸ್ತಂ ಸುಖದಂ ನೃಣಾಂ** ||೨||

---

ವೇದವನ್ನೂ ವೇದಾಂಗಗಳನ್ನೂ ಸಂಪೂರ್ಣವಾಗಿ ತಿಳಿದ ಮಹಾತ್ಮನಾದ ಧರ್ಮರಾಜನೇ, ನಾನಾವಿಧವಾದ ಪುರಾಣ ಇತಿಹಾಸಗಳಲ್ಲಿ ಸಾರವಾದುದಾವುದು ? ಅದನ್ನು ನನಗೆ ವಿಸ್ತರಿಸಿ ಹೇಳು. ಈ ಅನೇಕ ಬಗೆಯ ಅನಿವಾರ್ಯವಾಗಿರುವ ಪಾಪಗಳ ಮಧ್ಯದಲ್ಲೂ ಮಾನವನನ್ನು ಉದ್ಧರಿಸಿ ಕಾಪಾಡಬಲ್ಲ ಸಾಧನವಾದುದನ್ನೂ ಹೇಳು. ಏಕೆಂದರೆ, ನರಕಕುಂಡಗಳ ವರ್ಣನೆಯನ್ನೂ ಆ ನರಕಕ್ಕೆ ಹೋಗತಕ್ಕವರ ಪಾಪಸ್ವರೂಪಗಳನ್ನೂ ಆ ನರಕಯಾತನೆಗಳನ್ನೂ ಕೇಳಿದ ಸಾವಿತ್ರಿಯು, ಮನುಷ್ಯನಾಗಿ ಹುಟ್ಟಿದವನು ಯಾವನಾದರೂ ಒಂದು ಪಾಪವನ್ನೂ ಮಾಡದಿರುವನೇ ? ಹಾಗಾದರೆ ಮನುಷ್ಯನಿಗೆ ಸದ್ಗತಿ ಹೇಗೆ ಉಂಟಾದೀತು ? ಎಂದು ಯೋಚಿಸಿ ಭಯದಿಂದ ಯಮಧರ್ಮರಾಜನನ್ನು ಕುರಿತು ಪ್ರಶ್ನೆಮಾಡಿದಳು. ||೧||

ಸಮಸ್ತ ಪದಾರ್ಥಗಳಲ್ಲಿಯೂ ಸಾರವಾದ, ಸಂಸಾರೋದ್ಧಾರಕಾರಕವಾದ ವಸ್ತುವಾವುದು ? ಎಲ್ಲರಿಗೂ ಒಪ್ಪಿಗೆಯಾದ ಎಲ್ಲರಿಗೂ ಬೇಕಾದ ಸುಕೃತ ದುಷ್ಕೃತ ಕರ್ಮಫಲಗಳನ್ನು ನಾಶಮಾಡುವುದಕ್ಕೆ ಕಾರಣವಾದ, ಶ್ರೇಷ್ಠವಾದ, ಮನುಜರಿಗೆ

ಸರ್ವಪ್ರದಂ ಚ ಸರ್ವೇಷಾಂ ಸರ್ವಮಂಗಲಕಾರಣಂ ।
ಭಯಂ ದುಃಖಂ ನ ಪಶ್ಯಂತಿ ಯೇನ ವೈ ಸರ್ವಮಾನವಾಃ ॥೩॥

ಕುಂಡಾನಿ ತೇ ನ ಪಶ್ಯಂತಿ ತೇಷು ನೈವ ಪತಂತಿ ಚ ।
ನ ಭವೇದ್ಯೇನ ಜನ್ಮಾದಿ ತತ್ಕರ್ಮ ವದ ಸಾಂಪ್ರತಂ ॥೪॥

ಕಿಮಾಕಾರಾಣಿ ಕುಂಡಾನಿ ತಾನಿ ವಾ ನಿರ್ಮಿತಾನಿ ಚ ।
ಕೇನ ಕೇನೈವ ರೂಪೇಣ ತತ್ರ ತಿಷ್ಠಂತಿ ಪಾಪಿನಃ ॥೫॥

ಸ್ವದೇಹೇ ಭಸ್ಮಸಾದ್ಭೂತೇ ಯಾತಿ ಲೋಕಾಂತರಂ ನರಃ ।
ಕೇನ ದೇಹೇನ ವಾ ಭೋಗಂ ಕರೋತಿ ಚ ಶುಭಾಶುಭಂ ॥೬॥

ಸುಚಿರಂ ಕ್ಲೇಶಭೋಗೇನ ಕಥಂ ದೇಹೋ ನ ನಶ್ಯತಿ ।
ದೇಹೋ ವಾ ಕಿಂ ವಿಧೋ ಬ್ರಹ್ಮಂಸ್ತನ್ಮೇ ವ್ಯಾಖ್ಯಾತುಮರ್ಹಸಿ॥೭॥

---

ಸುಖವನ್ನು ಕೊಡತಕ್ಕ, ಸಮಸ್ತರಿಗೂ ಅವರವರ ಇಷ್ಟಾನುಸಾರವಾದ ಪದಾರ್ಥಗಳನ್ನು ಕೊಡತಕ್ಕ, ಎಲ್ಲ ಮಂಗಲಗಳಿಗೂ ಕಾರಣವಾದ ವಸ್ತುವಾವುದು ? ಯಾವುದರಿಂದ ಸಮಸ್ತ ಜನರೂ ಭಯವನ್ನೂ, ದುಃಖವನ್ನೂ ನೋಡುವುದಿಲ್ಲವೋ, ನರಕಗಳನ್ನು ನೋಡಿ ಅದರಲ್ಲಿ ಬೀಳುವುದಿಲ್ಲವೋ, ಯಾವುದರಿಂದ ಜನನ ಮರಣಾದಿಗಳುಂಟಾಗುವುದಿಲ್ಲವೋ ಅಂತಹ ಕರ್ಮವನ್ನು ಈಗ ನನಗೆ ಹೇಳು. ॥೨-೩-೪॥

ಪರಬ್ರಹ್ಮಸ್ವರೂಪನಾದ ಧರ್ಮರಾಜನೇ, ನರಕಕುಂಡಗಳು ಯಾವ ಆಕಾರದಿಂದ ಇರುತ್ತವೆ ? ಅವುಗಳನ್ನು ನಿರ್ಮಿಸಿದುದು ಹೇಗೆ ? ಪಾಪಿಗಳು ಯಾವ ರೂಪದಿಂದ ಅಲ್ಲಿರುತ್ತಾರೆ ? ಭೂಮಿಯಲ್ಲಿ ಪಂಚಭೂತಸಂಬಂಧವಾದ ದೇಹವು ಬೂದಿಯಾದ ಮೇಲೆ ಜೀವನು ಯಾವ ದೇಹದಿಂದ ಲೋಕಾಂತರಕ್ಕೆ ಹೋಗಿ ಶುಭಾಶುಭಕರ್ಮಫಲಗಳನ್ನನುಭವಿಸುವನು ? ಬೆಂಕಿಯಲ್ಲಿ ಬಿದ್ದ ವಸ್ತುವು ಒಂದು ಕ್ಷಣದಲ್ಲಿ ಸುಟ್ಟುಹೋಗುವುದು. ಹೀಗಿರುವಲ್ಲಿ ಅನೇಕವರ್ಷ ವಹ್ನಿಕುಂಡ ಮುಂತಾದ ನರಕಗಳಲ್ಲಿ ದುಃಖಾನುಭವದಿಂದ ದೇಹವು ಹೇಗೆ ನಾಶವಾಗದೇ ಇದ್ದೀತು ? ಆ ದೇಹದ ಸ್ವರೂಪವೆಂತಹುದು ? ಇವುಗಳನ್ನೆಲ್ಲವನ್ನೂ ನನಗೆ ವಿವರಿಸಬೇಕು ? ॥೫-೬-೭॥

|| ನಾರಾಯಣ ಉವಾಚ ||

ಸಾವಿತ್ರೀವಚನಂ ಶ್ರುತ್ವಾ ಧರ್ಮರಾಜೋ ಹರಿಂ ಸ್ಮರನ್ ।
ಕಥಾಂ ಕಥಿತುಮಾರೇಭೇ ಕರ್ಮಬಂಧನಿಕೃಂತನೀಂ ||೮||

|| ಧರ್ಮರಾಜ ಉವಾಚ ||

ವತ್ಸೇ ಚತುರ್ಷು ವೇದೇಷು ಧರ್ಮೇಷು ಸಂಹಿತಾಸು ಚ ।
ಪುರಾಣೇಷ್ವಿತಿಹಾಸೇಷು ಪಾಂಚರಾತ್ರಾದಿಕೇಷು ಚ ||೯||

ಅನ್ಯೇಷು ಧರ್ಮಶಾಸ್ತ್ರೇಷು ವೇದಾಂಗೇಷು ಚ ಸುವ್ರತೇ ।
ಸರ್ವೇಷ್ಟಂ ಸಾರಭೂತಂ ಚ ಪಂಚ ದೇವಾನುಸೇವನಂ ||೧೦||

ಜನ್ಮಮೃತ್ಯುಜರಾವ್ಯಾಧಿ ಶೋಕಸಂತಾಪನಾಶನಂ ।
ಸರ್ವಮಂಗಲರೂಪಂ ಚ ಪರಮಾನಂದಕಾರಣಂ ||೧೧||

ಕಾರಣಂ ಸರ್ವಸಿದ್ಧೀನಾಂ ನರಕಾರ್ಣವತಾರಣಂ ।
ಭಕ್ತಿವೃಕ್ಷಾಂಕುರಕರಂ ಕರ್ಮವೃಕ್ಷನಿಕೃಂತನಂ ||೧೨||

---

ಸಾವಿತ್ರಿಯ ಮಾತನ್ನು ಕೇಳಿ ಧರ್ಮರಾಜನು ನಾರಾಯಣನನ್ನು ಸ್ಮರಿಸುತ್ತಾ ಕರ್ಮಬಂಧನವನ್ನು ನಾಶಮಾಡುವುದಕ್ಕೆ ಸಾಧನವನ್ನು ತಿಳಿಸುವ ಕಥೆಯನ್ನು ಹೇಳಲು ಪ್ರಾರಂಭಿಸಿದನು. ||೮||

ಒಳ್ಳೆಯ ವ್ರತಫಲಗಳನ್ನುಳ್ಳ ಸಾವಿತ್ರಿಯೇ, ಸಮಸ್ತ ವೇದಗಳಲ್ಲಿಯೂ ಧರ್ಮಸಂಹಿತೆಗಳಲ್ಲಿಯೂ, ಪುರಾಣ, ಇತಿಹಾಸಗಳಲ್ಲಿಯೂ, ಪಾಂಚರಾತ್ರಾದಿ ಆಗಮಗಳಲ್ಲಿಯೂ, ಇತರ ಧರ್ಮಶಾಸ್ತ್ರಗಳಲ್ಲಿಯೂ, ವೇದಾಂಗಗಳಲ್ಲಿಯೂ ಪಂಚದೇವತೆಗಳನ್ನು ಪೂಜಿಸುವುದೇ ಸಾರಭೂತವಾದ ಸಕಲ ಇಷ್ಟಾರ್ಥಗಳನ್ನೂ ಕೊಡತಕ್ಕ ಕರ್ಮವೆಂದು ಹೇಳಿರುವುದು. ಶಿವ, ಶಕ್ತಿ, ವಿಷ್ಣು, ಗಣಪತಿ, ಸೂರ್ಯ ಇವರೇ ಆ ಪಂಚದೇವತೆಗಳು. ||೯-೧೦||

ಪಂಚಾಯತನ ಪೂಜೆಯು ಹುಟ್ಟು, ಸಾವು, ಮುಪ್ಪು, ರೋಗ, ದುಃಖ, ಸಂತಾಪ ಇವುಗಳನ್ನು ನಾಶಮಾಡುವುದು. ಎಲ್ಲ ಮಂಗಲಗಳನ್ನೂ ಉಂಟುಮಾಡಿ ಪರಮಾನಂದಾನುಭವಕ್ಕೆ ಕಾರಣವಾಗುವುದು. ಸಮುಸ್ತಸಿದ್ಧಿಗಳೂ ಇದರಿಂದುಂಟಾಗುವುವು. ಅದು ನರಕ ಸಮುದ್ರವನ್ನು ದಾಟಿಸುವುದು. ಭಕ್ತಿ ಎಂಬ ಮರದ ಮೊಳಕೆಯಾಗಿ ಕರ್ಮವೆಂಬ ಮರವನ್ನು ನಾಶಮಾಡುವುದು. ||೧೧-೧೨||

ವಿನೋಕ್ಷಸೋಪಾನಮಿದಮವಿನಾಶಪದಂ ಸ್ಮೃತಂ ।
ಸಾಲೋಕ್ಯ ಸಾರ್ಷ್ಟಿಸಾರೂಪ್ಯಸಾಮಿಾಪ್ಯಾದಿಪ್ರದಂ ಶುಭಂ   ॥೧೩॥

ಕುಂಡಾನಿ ಯಮದೂತೈಶ್ಚ ರಕ್ಷಿತಾನಿ ಸದಾ ಶುಭೇ।
ನ ಹಿ ಪಶ್ಯಂತಿ ಸ್ವಪ್ನೇ ಚ ಪಂಚದೇವಾರ್ಚಕಾ ನರಾಃ   ॥೧೪॥

ದೇವೀಭಕ್ತಿವಿಹೀನಾ ಯೇ ತೇ ಪಶ್ಯಂತಿ ಮಮಾಲಯಂ ।
ಯಾಂತಿ ಯೇ ಹರಿತೀರ್ಥಂ ವಾ ಶ್ರಯಂತಿ ಹರಿವಾಸರಂ   ॥೧೫॥

ಪ್ರಣಮಂತಿ ಹರಿಂ ನಿತ್ಯಂ ಹರ್ಯರ್ಚಾಂ ಕಲಯಂತಿ ಚ ।
ನ ಯಾಂತಿ ತೇಽಪಿ ಘೋರಾಂ ಚ ಮಮ ಸಂಯಮಿನೀಂ ಪುರೀಂ॥೧೬॥

ತ್ರಿಸಂಧಿಪೂತಾ ವಿಪ್ರಾಶ್ಚ ಶುದ್ಧಾಚಾರಸಮನ್ವಿತಾಃ ।
ನಿವೃತ್ತಿಂ ನೈವ ಲಪ್ಸ್ಯಂತಿ ದೇವೀಸೇವಾಂ ವಿನಾ ನರಾಃ   ॥೧೭॥

---

ಇದು ಮೋಕ್ಷದ ಮೆಟ್ಟಿಲಾಗಿ ಶಾಶ್ವತವಾದ ಪದವಿಯನ್ನು ಉಪಾಸನೆ ಉದ್ದೇಶಗಳಿಗೆ ತಕ್ಕಂತೆ ಸಾಲೋಕ್ಯ, ಸಾರೂಪ್ಯ, ಸಾಮಿಾಪ್ಯ, ಸಾಯುಜ್ಯ,ವೆಂಬ ನಾಲ್ಕು ವಿಧವಾದ ಪದವಿಯನ್ನೂ ಕೊಡುವುದಾಗಿ ಮಂಗಳಕರವಾಗಿ ಇರುವುದು. ॥೧೩॥

ಮಂಗಳಕರಳಾದ ಸಾವಿತ್ರಿಯೇ, ನರಕಕುಂಡಗಳನ್ನೆಲ್ಲವನ್ನೂ ಯಮದೂತರು ಕಾಪಾಡಿಕೊಂಡಿರುವರು. ಪಂಚದೇವತೆಗಳನ್ನು ಪೂಜೆಮಾಡುವ ಜನರು ಸ್ವಪ್ನದಲ್ಲಿಯೂ ಈ ನರಕಗಳನ್ನು ನೋಡುವುದಿಲ್ಲ. ॥೧೪॥

ದೇವಭಕ್ತಿಯಿಲ್ಲದವರು ನನ್ನ ಮನೆಯನ್ನು ನೋಡುವರು. ಯಾರು ವಿಷ್ಣು ಕ್ಷೇತ್ರಕ್ಕೆ ಹೋಗುವರೋ, ಏಕಾದಶಿಯ ವ್ರತವನ್ನು ಮಾಡುವರೋ, ಪ್ರತಿದಿನವೂ ವಿಷ್ಣುವಿನ ಪೂಜೆಯನ್ನು ಮಾಡಿ ನಮಸ್ಕಾರಮಾಡುವರೋ, ಅವರು ಕ್ರೂರವಾದ ನನ್ನ ಸಂಯಮಿನೀ ಪಟ್ಟಣಕ್ಕೆ ಹೋಗುವುದಿಲ್ಲ. ॥೧೫-೧೬॥

ತ್ರಿಕಾಲಸಂಧ್ಯೆಯನ್ನು ಮಾಡಿ ಶುದ್ಧರಾಗಿ ಒಳ್ಳೆಯ ಆಚಾರದಿಂದ ಕೂಡಿದ ಬ್ರಾಹ್ಮಣರೂ ಕೂಡ ದೇವಿಯ ಸೇವೆಯನ್ನು ಮಾಡದೆ ನರಕ ನಿವೃತ್ತಿಯನ್ನು ಪಡೆಯಲಾರರು. ॥೧೭॥

ಸ್ವಧರ್ಮನಿರ(ಯು)ತಾ ಚಾರಾಃ ಸ್ವಧರ್ಮನಿರತಾಸ್ತಥಾ ।
ಗಚ್ಛಂತೋ ಮೃತ್ಯುಲೋಕಂ ಚ ದುರ್ದೃಶಾ ಮಮ ಕಿಂಕರಾಃ॥೧೮॥

ಭೀತಾಃ ಶಿವೋಪಾಸಕೇಭ್ಯೋ ವೈನತೇಯಾದಿವೋರಗಾಃ ।
ಸ್ವದೂತಂ ಪಾಶಹಸ್ತಂ ಚ ಗಚ್ಛಂತಂ ವಾರಯಾಮ್ಯಹಂ ॥೧೯॥

ಯಾಸ್ಯಂತಿ ತೇ ಚ ಸರ್ವತ್ರ ಹರಿದಾಸಾಶ್ರಯಂ ವಿನಾ ।
ಕೃಷ್ಣ ಮಂತ್ರೋಪಾಸಕಾಚ್ಚ ವೈನತೇಯಾದಿವೋರಗಾಃ ॥೨೦॥

ದೇವೀಮಂತ್ರೋಪಾಸಕಾನಾಂ ನಾಮ್ನಾಂ ಚೈವ ನಿಕೃಂತನಂ ।
ಕರೋತಿ ನಖಲೇಖನ್ಯಾ ಚಿತ್ರಗುಪ್ತಶ್ಚ ಭೀತಣತ್ ॥೨೧॥

ಮಧುಪರ್ಕಾದಿಕಂ ತೇಷಾಂ ಕುರುತೇ ಚ ಪುನಃ ಪುನಃ ।
ವಿಲಂಘ್ಯ ಬ್ರಹ್ಮಲೋಕಂ ಚ ಲೋಕಂ ಗಚ್ಛಂತಿ ತೇ ಸತಿ ॥೨೨॥

---

ತಮ್ಮ ವರ್ಣಾಶ್ರಮಧರ್ಮದಲ್ಲಿ ಮನಸ್ಸುಳ್ಳವರೂ ತಮ್ಮ ಆ ಧರ್ಮವನ್ನು ನಡೆಸತಕ್ಕವರೂ ಮರಣಹೊಂದಿದರೆ ಅವರಿಗೆ ನನ್ನ ದೂತರು ಕಾಣಿಸುವುದಿಲ್ಲ. ||೧೮||

ಗರುಡನಿಗೆ ಹಾವುಗಳು ಹೆದರುವಂತೆ ಶಿವೋಪಾಸಕನಿಗೆ ನನ್ನ ದೂತರು ಹೆದರುವರು. ಪಾಶಾಯುಧವನ್ನು ಕೈಯಲ್ಲಿ ಹಿಡಿದು ಓಡುವ ಅಂಥಾ ನನ್ನ ದೂತ ನನ್ನು ನಾನು ತಡೆಯುವೆನು. ||೧೯||

ನನ್ನ ದೂತರು ವಿಷ್ಣುಭಕ್ತನ ಮನೆಯನ್ನು ಬಿಟ್ಟು ಎಲ್ಲ ಕಡೆಗೂ ಹೋಗುವರು. ಕೃಷ್ಣಮಂತ್ರೋಪಾಸಕನಿಗೆ ಗರುಡನಿಗೆ ಸರ್ಪಗಳು ಹೆದರುವಂತೆ ಆವರು ಹೆದರುವರು. ||೨೦||

ಚಿತ್ರಗುಪ್ತನು ಹೆದರಿ ಅಜ್ಞಾನದಿಂದ ಬರೆದುಕೊಂಡಿದ್ದ ದೇವೀಮಂತ್ರೋಪಾಸಕರ ಹೆಸರುಗಳನ್ನು ತನ್ನ ಉಗುರಿನ ಲೇಖನಿಯಿಂದ ಹೊಡೆದು ಹಾಕುವನು. ಎಂದರೆ ದೇವೀಮಂತ್ರೋಪಾಸಕರಿಗೆ ಯಮಲೋಕಗಮನವಿಲ್ಲವೆಂದು ಭಾವವು. ||೨೧||

ದೇವಿಯ ಭಕ್ತರಿಗೆ ದೇವತೆಗಳು ಮತ್ತೆ ಮತ್ತೆ ಮಧುಪರ್ಕ ಮೊದಲಾದ ಸತ್ಕಾರಗಳನ್ನು ಮಾಡುವರು. ಅವರು ಬ್ರಹ್ಮಲೋಕವನ್ನೂ ದಾಟಿ ಮಣಿದ್ವೀಪವೆಂಬ ದೇವಿಯ ಲೋಕಕ್ಕೆ ಹೋಗುವರು. ||೨೨||

ದುರಿತಾನಿ ಚ ನಶ್ಯಂತಿ ಯೇಷಾಂ ಸಂಸ್ಪರ್ಶಮಾತ್ರತಃ ।
ತೇ ಮಹಾಭಾಗ್ಯವಂತೋ ಹಿ ಸಹಸ್ರಕುಲಪಾವನಾಃ ॥೭೩॥

ಯಥಾ ಚ ಪ್ರಜ್ವಲದ್ವಹ್ನೌ ಶುಷ್ಕಾಣಿ ಚ ತೃಣಾನಿ ಚ ।
ಪ್ರಾಪ್ನೋತಿ ಮೋಹಃ ಸಂಮೋಹಂ ತಾಂಶ್ಚ ದೃಷ್ಟ್ವಾ ಚ ಭೀತವತ್ ॥೨೪॥

ಕಾಮಶ್ಚ ಕಾಮಿನಂ ಯಾತಿ ಲೋಭಕ್ರೋಧೌ ತತಃ ಸತಿ ।
ಮೃತ್ಯುಃ ಪ್ರಲೀಯತೇ ರೋಗೋ ಜರಾ ಶೋಕೋ ಭಯಂ ತಥಾ ॥೨೫॥

ಕಾಲಃ ಶುಭಾಶುಭಂ ಕರ್ಮ ಹರ್ಷೋ ಭೋಗಸ್ತಥೈವ ಚ ।
ಯೇ ಯೇ ನ ಯಾಂತಿ ತಾಂ ಪೀಡಾಂ ಕಥಿತಾಸ್ತೇ ಮಯಾ ಸತಿ ॥೨೬॥

ಶೃಣು ದೇಹವಿವರಣಂ ಕಥಯಾಮಿ ಯಥಾಗಮಂ ।
ಪೃಥಿವೀ ವಾಯು ರಾಕಾಶಃ ತೇಜಸ್ತೋಯಮಿತಿ ಸ್ಫುಟಂ ॥೨೭॥

ದೇಹಿನಾಂ ದೇಹಬೀಜಂ ಚ ಸ್ರಷ್ಟು ಸೃಷ್ಟಿವಿಧೌ ಪರಂ ।
ಪೃಥಿವ್ಯಾದಿ ಪಂಚಭೂತೈರ್ಯೋ ದೇಹೋ ನಿರ್ಮಿತೋ ಭವೇತ್ ॥೨೮॥

---

ದೇವಿಯ ಭಕ್ತರು ಮಹಾಭಾಗ್ಯವಂತರು. ಅವರು ಸಾವಿರ ಕುಲಗಳನ್ನು ಪರಿಶುದ್ಧಮಾಡುವರು. ಅವರನ್ನು ಮುಟ್ಟಿದ ಮಾತ್ರದಿಂದಲೇ, ಉರಿಯುತ್ತಿರುವ ಬೆಂಕಿಯಲ್ಲಿ ಒಣಗಿದ ಹುಲ್ಲಿನಂತೆ, ಮುಟ್ಟಿದವರ ಪಾಪಗಳು ನಾಶವಾಗುವುವು. ॥೨೩॥

ದೇವಿಯ ಭಕ್ತರನ್ನು ನೋಡಿ ಭಯದಿಂದ ಅಜ್ಞಾನಕ್ಕೆ ಕಾರಣವಾದ ಪಾಪಕ್ಕೂ ಅಜ್ಞಾನವು ಬರುವುದು. ಎಂದರೆ ಅದು ತನ್ನ ಫಲವಾದ ದುಃಖವನ್ನು ಉಂಟುಮಾಡಲಾರದೆ ಸುಮ್ಮನಾಗುವುದು. ಕಾಮ, ಕ್ರೋಧ, ಲೋಭಗಳು ತಮ ಗಾಶ್ರಯರಾಗಿದ್ದ ಆ ಜನರನ್ನು ಬಿಟ್ಟುಹೋಗುವುವು. ಮರಣ, ರೋಗ, ಮುಪ್ಪು, ದುಃಖ ಇವುಗಳೂ ನಾಶವಾಗುವುವು. ॥೨೪-೨೫॥

ಕಾಲ, ಶುಭಾಶುಭಕರ್ಮಗಳು ಸುಖದುಃಖಗಳ ಅನುಭವ ಇವುಗಳ ವಿಕಾರ ಗಳನ್ನು ಯಾರು ಯಾರು ಹೊಂದುವುದಿಲ್ಲವೆಂಬುದನ್ನು ನಾನು ಹಿಂದೆಯೇ ಹೇಳಿರು ವೆನು. (ಪಂಚಾಯತನ ಪೂಜೆಯನ್ನು ಮಾಡುವವರಿಗೆ ಈ ವಿಕಾರಗಳು ಇಲ್ಲವೆಂದು ಹಿಂದೆ ಹೇಳಿದೆ.) ॥೨೬॥

ಶಾಸ್ತ್ರಾನುಸಾರವಾಗಿ ಬರುವ ಈ ಯಾತನಾದೇಹದ ವಿಷಯವನ್ನು ವಿವರಿಸು ವೆನು ಕೇಳು. ಭೂಮಿ, ನೀರು, ಗಾಳಿ, ಬೆಂಕಿ, ಆಕಾಶ ಎಂಬ ಐದು ಭೂತಗಳು

ಸ ಕೃತ್ರಿಮೋ ನಶ್ವರಶ್ಚ ಭಸ್ಮಸಾಚ್ಚ ಭವೇದಿಹ ।
ಬದ್ಧೋಽಂಗುಷ್ಠಪ್ರಮಾಣಶ್ಚ ಯೋ ಜೀವಃ ಪುರುಷಃ ಕೃತಃ ॥೨೯॥

ಬಿಭರ್ತಿ ಸೂಕ್ಷ್ಮಂ ದೇಹಂ ತಂ ತದ್ರೂಪಂ ಭೋಗಹೇತವೇ ।
ಸ ದೇಹೋ ನ ಭವೇದ್ಭಸ್ಮ ಜ್ವಲದಗ್ನೌ ಯಮಾಲಯೇ ॥೩೦॥

ಜಲೇನ ನಷ್ಟೋ ದೇಹೀ ವಾ ಪ್ರಹಾರೇ ಸುಚಿರಂ ಕೃತೇ ।
ನ ಶಸ್ತ್ರೇಣ ನ ವಾಽಸ್ತ್ರೇಣ ಸುತೀಕ್ಷ್ಣಕಂಟಕೇ ತಥಾ ॥೩೧॥

ತಪ್ತದ್ರವೇ ತಪ್ತಲೋಹೇ ತಪ್ತಪಾಷಾಣ ಏವ ಚ ।
ಪ್ರತಪ್ತಪ್ರತಿಮಾಶ್ಲೇಷೇ ಯತ್ಪೂರ್ವಪತನೇಽಪಿ ಚ ॥೩೨॥

ನದಗ್ಧೋ ನ ಚ ಭಗ್ನಃ ಸ ಭುಂಜ್ತೇ ಸಂತಾಪಮೇವ ಚ ।
ಕಥಿತೋ ದೇಹವೃತ್ತಾಂತಃ ಕಾರಣಂ ಚ ಯಥಾಗಮಂ ॥೩೩॥

---

ಸಾಮಾನ್ಯವಾಗಿ ಬ್ರಹ್ಮಸೃಷ್ಟಿಯಲ್ಲಿ ದೇಹಗಳಿಗೆ ಕಾರಣವಾಗಿರುವುವು. ಪೃಥಿವ್ಯಾದಿ ಪಂಚಭೂತಗಳಿಂದಲೇ ಈನಮ್ಮೆಲ್ಲರ ದೇಹವು ನಿರ್ಮಾಣವಾಗಿರುವುದು. ॥೨೭-೨೮॥

ಪಂಚಭೂತಗಳಿಂದ ನಿರ್ಮಿತವಾದ ಈ ದೇಹವು ಜನ್ಯವಾದುದು, ಆದುದರಿಂದ ನಾಶವಾಗತಕ್ಕುದು. ಕಡೆಗೆ ಅದು ಬೂದಿಯಾಗುವುದು. ಪುರುಷನಾದ ಜೀವನು ಅಂಗುಷ್ಠಪ್ರಮಾಣದ ಲಿಂಗದೇಹದಿಂದ ಯಮದೂತರ ಬಂಧನೆಗೆ ಒಳಗಾಗಿ ಸುಖದುಃಖಾನುಭವಗಳಿಗೋಸ್ಕರ ಸೂಕ್ಷ್ಮವಾದ ಅದೇ ಆಕಾರದ ದೇಹವನ್ನು ಧರಿಸುವನು. ಈ ದೇಹಕ್ಕೆ ಯಾತನಾಶರೀರವೆಂದು ಹೆಸರು. ॥೨೯॥

ಆ ಸೂಕ್ಷ್ಮದೇಹವು ಯಮನ ಮನೆಯಲ್ಲಿ ಉರಿಯುತ್ತಿರುವ ಬೆಂಕಿಯಲ್ಲಿ ಬೂದಿಯಾಗುವುದಿಲ್ಲ; ನೀರಿನಲ್ಲಿ ನಾಶವಾಗುವುದಿಲ್ಲ. ಬಹಳ ಹೊತ್ತು ಏಟು ಹೊಡೆದರೂ, ಶಸ್ತ್ರಾಸ್ತ್ರಗಳಿಂದಲೂ ಮೊನೆಯಾದ ಮುಳ್ಳುಗಳಿಂದಲೂ ಕುದಿಯುತ್ತಿರುವ ಲೋಹ ಕಲ್ಲುಗಳಿಂದಲೂ, ಬೆಂಕಿಯಿಂದ ಕಾದ ಪ್ರತಿಮೆಗಳನ್ನು ತಬ್ಬಿಕೊಳ್ಳುವುದರಿಂದಲೂ, ಮೇಲಿನಿಂದ ಕೆಳಕ್ಕೆ ಬೀಳುವುದರಿಂದಲೂ ಆ ಶರೀರವಾಗಲೀ ಜೀವನಾಗಲೀ ನಾಶವಾಗುವುದಿಲ್ಲ. ॥೩೦-೩೧-೩೨॥

ಜೀವನು ಸೂಕ್ಷ್ಮಶರೀರದೊಡನೆ ಸುಟ್ಟುಹೋಗದೆ ಮುರಿದು ಹೋಗದೆ ದುಃಖವನ್ನು ಮಾತ್ರವೇ ಅನುಭವಿಸುವನು. ದೇಹವೃತ್ತಾಂತವನ್ನೂ ಅದರ ಕಾರಣ

ಕುಂಡಾನಾಂ ಲಕ್ಷಣಂ ಸರ್ವಂ ಬೋಧಾಯ ಕಥಯಾಮಿ ತೇ ।

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ನವಮಸ್ಕಂಧೇ
ಷಟ್ತ್ರಿಂಶೋಽಧ್ಯಾಯಃ

---

ವನ್ನೂ ಶಾಸ್ತ್ರಾನುಸಾರವಾಗಿ ಹೇಳಿರುವೆನು. ಇನ್ನು ನರಕಕುಂಡಗಳ ಲಕ್ಷಣವನ್ನು ನಿನ್ನ ತಿಳಿವಳಿಕೆಗೋಸ್ಕರ ಹೇಳುವೆನು. ॥೩೩॥

ಇಲ್ಲಿಗೆ ದೇವೀಭಾಗವತಮಹಾಪುರಾಣದ ಒಂಬತ್ತನೆಯ ಸ್ಕಂಧದಲ್ಲಿ
ಮೂವತ್ತಾರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ನವಮಸ್ಕಂಧೇ

### ॥ ಸಪ್ತತ್ರಿಂಶೋಽಧ್ಯಾಯಃ ॥

### ಮೂವತ್ತೇಳನೆಯ ಅಧ್ಯಾಯವು

॥ ಧರ್ಮರಾಜ ಉವಾಚ ॥

**ಪೂರ್ಣೇಂದುಮಂಡಲಾಕಾರಂ ಸರ್ವಂ ಕುಂಡಂ ಚ ವರ್ತುಲಂ ।**
**ನಿಮ್ನಂ ಪಾಷಾಣಭೇದೈಶ್ಚ ಪಾಚಿತಂ ಬಹುಭಿಃ ಸತಿ ॥೧॥**

**ನ ನಶ್ವರಂ ಚಾಽಪ್ರಲಯಂ ನಿರ್ಮಿತಂ ಚೇಶ್ವರೇಚ್ಛಯಾ ।**
**ಕ್ಲೇಶದಂ ಪಾತಕಾನಾಂ ಚ ನಾನಾರೂಪಂ ತದಾಲಯಂ ॥೨॥**

**ಜ್ವಲದಂಗಾರರೂಪಂ ಚ ಶತಹಸ್ತಶಿಖಾನ್ವಿತಂ ।**
**ಪರಿತಃ ಕ್ರೋಶಮಾನಂ ಚ ವಹ್ನಿಕುಂಡಂ ಪ್ರಕೀರ್ತಿತಂ ॥೩॥**

**ಮಹಾಶಬ್ದಂ ಪ್ರಕುರ್ವದ್ಭಿಃ ಪಾಪಿಭಿಃ ಪರಿಪೂರಿತಂ ।**
**ರಕ್ಷಿತಂ ಮಮ ದೂತೈಶ್ಚ ತಾಡಿತೈಶ್ಚಾಪಿ ಸಂತತಂ ॥೪॥**

---

ಪೂರ್ಣಚಂದ್ರಮಂಡಲದ ಆಕಾರದಂತೆ ಸಮಸ್ತಕುಂಡಗಳೂ ಗುಂಡಾಗಿರುವುವು. ಆಳವಾಗಿ ವಿಲಕ್ಷಣವಾದ ಕಲ್ಲಿನ ಕೆಂಡಗಳಿಂದ ಉರಿಯುತ್ತಿರುವುವು. ॥೧॥

ಪ್ರಳಯಕಾಲದವರೆಗೂ ಆ ಕುಂಡಗಳು ನಾಶವಾಗತಕ್ಕವುಗಳಲ್ಲ. ಈಶ್ವರನ ಇಚ್ಛೆಯಿಂದಲೇ ಮಾಡಲ್ಪಟ್ಟವು. ಪಾಪಗಳಿಗೆ ಫಲವಾದ ದುಃಖವನ್ನು ಕೊಡತಕ್ಕವುಗಳಾಗಿ ಬಗೆಬಗೆಯ ರೂಪಗಳಿಂದ ಇರುವುವು. ॥೨॥

ವಹ್ನಿಕುಂಡವೆಂಬುದು ಉರಿಯುತ್ತಿರುವ ಕೆಂಡದಂತೆ ಸುತ್ತಲೂ ಒಂದು ಹರಿದಾರಿ ಅಳತೆಯಲ್ಲಿ ನೂರು ಮೊಳಮೇಲಕ್ಕೆ ಉರಿಯನ್ನೆರಚುತ್ತಾ ಇರುವುದು. ನನ್ನ

ಪ್ರತಪ್ತೋದಕಪೂರ್ಣಂ ಚ ಹಿಂಸ್ರಜಂತುಸಮನ್ವಿತಂ ।
ಮಹಾಘೋರಂ ಕಾಕುಶಬ್ದಂ ಪ್ರಹಾರೇಣ ದೃಢೇನ ಚ ॥೫॥

ಕ್ರೋಶಾರ್ಧಮಾನಂ ತದ್ದೂತೈಸ್ತಾಡಿತೈರ್ಮಮ ಪಾರ್ಷದೈಃ ।
ತಪ್ತಕ್ಷಾರೋದಕೈಃ ಪೂರ್ಣಂ ಪುನಃ ಕಾಕೈಶ್ಚ ಸಂಕುಲಂ ॥೬॥

ಸಂಕುಲಂ ಪಾಪಿಭಿಶ್ಚೈವ ಕ್ರೋಶಮಾನಂ ಭಯಾನಕಂ ।
ತ್ರಾಹೀತಿ ಶಬ್ದಂ ಕುರ್ವದ್ಭಿರ್ಮಮ ದೂತೈಶ್ಚ ತಾಡಿತೈಃ ॥೭॥

ಪ್ರಚಲದ್ಭಿರನಾಹಾರೈಃ ಶುಷ್ಕಕಂಠೋಷ್ಠತಾಲುಕೈಃ ।
ವಿಡ್ಭಿರೇವ ಕೃತಂ ಪೂರ್ಣಂ ಕ್ರೋಶಮಾನಂ ಚ ಕುತ್ಸಿತಂ ॥೮॥

ಅತಿದುರ್ಗಂಧಸಂಸಕ್ತಂ ವ್ಯಾಪ್ತಂ ಪಾಪಿಭಿರನ್ವಹಂ ।
ತಾಡಿತೈರ್ಮಮ ದೂತೈಶ್ಚ ತದಾಹಾರೈಃ ಸುದಾರುಣೈಃ ॥೯॥
ರಕ್ಷೇತಿ ಶಬ್ದಂ ಕುರ್ವದ್ಭಿಸ್ತತ್ಕೀಟೈರೇವ ಭಕ್ಷಿತೈಃ ।

---

ದೂತರು ಅದನ್ನು ರಕ್ಷಿಸುತ್ತಾ ಪಾಪಿಗಳನ್ನು ಹೊಡೆಯುತ್ತಿರುವರು. ಘಟ್ಟಿಯಾಗಿ ಕೂಗಿಕೊಳ್ಳುತ್ತಾ ಅನೇಕ ಪಾಪಿಗಳು ಅಲ್ಲಿ ತುಂಬಿಕೊಂಡಿರುವರು. ॥೩-೪॥

ತಪ್ತಕುಂಡವೆಂಬುದು ಕುದಿಯುತ್ತಿರುವ ನೀರಿನಿಂದಲೂ ಹಿಂಸೆಮಾಡುವ ಪ್ರಾಣಿಗಳಿಂದಲೂ ಕೂಡಿ ಅರ್ಧಹರಿದಾರಿಯ ಅಳತೆಯುಳ್ಳುದಾಗಿದೆ. ನನ್ನ ದೂತರು ಅಲ್ಲಿರುವ ಪಾಪಿಗಳನ್ನು ಬಲವಾಗಿ ಹೊಡೆಯುತ್ತಿರಲು ಭಯಂಕರವಾಗಿ ಹಾ ಹೂ ಎಂದು ಕೂಗಿಕೊಳ್ಳುತ್ತಿರುವ ಪಾಪಿಗಳಿಂದ ಕೂಡಿರುವುದು. ॥೫॥

ತಪ್ತಕ್ಷಾರೋದ ಕುಂಡವು ಕುದಿಯುತ್ತಿರುವ ಉಪ್ಪುನೀರಿನಿಂದ ತುಂಬಿ ಒಂದು ಹರಿದಾರಿಯ ಅಳತೆಯುಳ್ಳದ್ದಾಗಿ ಅನೇಕಕಾಗೆಗಳು ಸುತ್ತಿಕೊಂಡು ಭಯಂಕರವಾಗಿರುವುದು (ಅಸಹ್ಯಕರವಾಗಿರುವುದು). ॥೬॥

ಭಯಾನಕಕುಂಡವು ಆಹಾರವಿಲ್ಲದೆ ಗಂಟಲು ತುಟಿಗಳು ಒಣಗಿಹೋಗಿ ನನ್ನ ದೂತರ ಏಟನ್ನು ಸಹಿಸಿಕೊಂಡು, ನಮ್ಮನ್ನು ಕಾಪಾಡಿ, ಎಂದು ಕೂಗಿಕೊಂಡು, ನಡುಗುತ್ತಿರುವ ಪಾಪಿಗಳಿಂದ ಕೂಡಿರುವುದು. ॥೭॥

ವಿಟ್ಕುಂಡವೆಂಬುದು ಒಂದು ಹರಿದಾರಿಯ ಅಳತೆಯಲ್ಲಿ ಮಲದಿಂದ ತುಂಬಿ ಕೆಟ್ಟನಾತದ ವಸ್ತುಗಳಿಂದ ಕೂಡಿ ನನ್ನ ದೂತರು ಹೊಡೆಯುತ್ತಿರಲು ಆ ಮಲವನ್ನೇ

ತಪ್ತಮೂತ್ರದ್ರವೈಃ ಪೂರ್ಣಂ ಮೂತ್ರಕೀಟೈಶ್ಚ ಸಂಕುಲಂ ॥೧೦॥

ಯುಕ್ತಂ ಮಹಾಪಾತಕಿಭಿಸ್ತತ್ಕೀಟೈರ್ಭಕ್ಷಿತೈಃ ಸದಾ ।
ಗವ್ಯೂತಿಮಾನಂ ಧ್ವಾಂತಾಕ್ತಂ ಶಬ್ದಕೃದ್ಭಿಶ್ಚ ಸಂತತಂ ॥೧೧॥

ಮದ್ದೂತೈಸ್ತಾಡಿತೈರ್ಘೋರೈಃ ಶುಷ್ಕಕಂಠೋಷ್ಠತಾಲುಕೈಃ ।
ಶ್ಲೇಷ್ಮಪೂರ್ಣಂ ಪ್ರಶಮಿತಂ ತತ್ಕೀಟೈಃ ಪೂರಿತಂ ಸದಾ ॥೧೨॥

ತದ್ಭೋಜಿಭಿಃ ಪಾಪಿಭಿಶ್ಚ ವೇಷ್ಟಿತಂ ವೇಷ್ಟಿತೈಃ ಸದಾ ।
ಕ್ರೋಶಾರ್ಧಂ ಗರಕುಂಡಂ ಚ ಗರಭೋಜಿಭಿರನ್ವಿತಂ ॥೧೩॥

ಗರಕೀಟೈರ್ಭಕ್ಷಿತೈಶ್ಚ ಪಾಪಿಭಿಃ ಪೂರ್ಣಮೇವ ಚ ।
ತಾಡಿತೈರ್ಮಮ ದೂತೈಶ್ಚ ಶಬ್ದಕೃದ್ಭಿಶ್ಚ ಕಂಪಿತೈಃ ॥೧೪॥
ಸರ್ಪಾಕಾರೈರ್ವಜ್ರದಂಷ್ಟ್ರೈಃ ಶುಷ್ಕಕಂಠೈಃ ಸುದಾರುಣೈಃ ।

---

ತಿನ್ನುತ್ತಾ 'ರಕ್ಷಿಸಿ' ಎಂದು ಕೂಗಿಕೊಳ್ಳುತ್ತಾ ಇರುವ ಪಾಪಿಗಳಿಂದ ತುಂಬಿರುವುದು. ಮಲದ ಹುಳುಗಳು ಆ ಪಾಪಿಗಳನ್ನು ತಿನ್ನುತ್ತಿರುವುವು. ||೮-೯||

ಮೂತ್ರಕುಂಡವೆಂಬುದು ಎರಡು ಹರಿದಾರಿ ವಿಸ್ತಾರವಾಗಿ ಕತ್ತಲೆಯಲ್ಲಿ ಕುದಿಯುತ್ತಿರುವ ಮೂತ್ರದಿಂದ ತುಂಬಿ ಹುಳುಗಳಿಂದ ಕೂಡಿರುವುದು. ಅಲ್ಲಿ ಹುಳುಗಳು ಪಾಪಿಗಳನ್ನು ತಿನ್ನುತ್ತಿರುವುವು. ನನ್ನ ದೂತರು ಹೊಡೆಯುತ್ತಿರಲು ಗಂಟಲು ತುಟಿಗಳು ದವಡೆಗಳು ಒಣಗಿ ಆ ಪಾಪಿಗಳು ಯಾವಾಗಲೂ ಕೂಗಿಕೊಳ್ಳುತ್ತಿರುವರು. ||೧೦-೧೧||

ಶ್ಲೇಷ್ಮಕುಂಡವೆಂಬುದು ಶ್ಲೇಷ್ಮಗಳಿಂದಲೂ ಅದರ ಹುಳುಗಳಿಂದಲೂ ತುಂಬಿ ಆ ಶ್ಲೇಷ್ಮವನ್ನೇ ತಿನ್ನುತ್ತಿರುವ ಪಾಪಿಗಳಿಂದ ತುಂಬಿರುವುದು. ||೧೨||

ಗರಕುಂಡವೆಂಬುದು ಅರ್ಧಹರಿದಾರಿಯ ಆಳತೆಯಲ್ಲಿ ವಿಷದಿಂದ ತುಂಬಿ ಸರ್ಪಾಕಾರವಾಗಿರುವ ಕ್ರೂರವಾದ ಹಲ್ಲುಗಳಿಂದ ಕೂಡಿದ ವಿಷಕೀಟಗಳಿಂದ ತುಂಬಿರುವುದು. ಅಲ್ಲಿರುವ ಪಾಪಿಗಳನ್ನು ಆ ಕೀಟಗಳು ತಿನ್ನುತ್ತಿರಲು ನನ್ನ ದೂತರು ಅವರನ್ನು ಹೊಡೆಯುತ್ತಿರುವುದರಿಂದ ಅವರ ಗಂಟಲೊಣಗಿ ಕೂಗಿಕೊಳ್ಳುತ್ತಿರುವರು. ||೧೩-೧೪||

ನೇತ್ರಯೋರ್ಮಲಪೂರ್ಣಂ ಚ ಕ್ರೋಶಾರ್ಧಂ ಕೀಟಸಂಯುತಂ ॥೧೫॥

ಪಾಪಿಭಿಃ ಸಂಕುಲಂ ಶಶ್ವದ್ಭ್ರಮದ್ಭಿಃ ಕೀಟಭಕ್ಷಿತೈಃ ।
ವಸಾರಸೇನ ಸಂಪೂರ್ಣಂ ಕ್ರೋಶತುರ್ಯಂ ಸುದುಸ್ಸಹಂ ॥೧೬॥

ತದ್ಭೋಜಿಭಿಃ ಪಾತಕಿಭಿರ್ಯಮದೂತೈಶ್ಚ ತಾಡಿತೈಃ ।
ಶುಕ್ರಕುಂಡಂ ಕ್ರೋಶಮಿತಂ ಶುಕ್ರಕೀಟೈಶ್ಚ ಸಂಯುತಂ ॥೧೭॥

ಪಾಪಿಭಿಃ ಸಂಕುಲಂ ಶಶ್ವದ್ದ್ರವದ್ಭಿಃ ಕೀಟಭಕ್ಷಿತೈಃ ।
ದುರ್ಗಂಧಿರಕ್ತಪೂರ್ಣಂ ಚ ವಾಪೀ ಮಾನಂ ಗಭೀರಕಂ ॥೧೮॥

ತದ್ಭೋಜಿಭಿಃ ಪಾಪಿಭಿಶ್ಚ ಸಂಕುಲಂ ಕೀಟಭಕ್ಷಿತಂ ।
ಪೂರ್ಣಂ ನೇತ್ರಾಶ್ರುಭಿಸ್ತಪ್ತಂ ಬಹುಪಾಪಿಭಿರನ್ವಿತಂ ॥೧೯॥
ವಾಪೀ ತುರ್ಯಪ್ರಮಾಣಂ ಚ ರುದದ್ಭಿಃ ಕೀಟಭಕ್ಷಿತೈಃ ।

---

ದೂಷಿಕಾಕುಂಡವೆಂಬುದು ಕಣ್ಣಿನ ಕೊಳೆಯಿಂದ ತುಂಬಿ ಅರ್ಧ ಹರಿದಾರಿಯ ಆಳತೆಯಿಂದ ಕೂಡಿ ಹುಳುಗಳಿಂದ ತುಂಬಿರುವುದು. ಆ ಹುಳುಗಳು ಅಲ್ಲಿರುವ ಪಾಪಿಗಳನ್ನು ತಿನ್ನುತ್ತಿರುವುವು. ॥೧೫॥

ವಸಾಕುಂಡವೆಂಬುದು ಮನುಷ್ಯನ ಕೊಬ್ಬಿನ ರಸದಿಂದ ತುಂಬಿ ಕಾಲು ಹರಿದಾರಿಯ ಆಳತೆಯಲ್ಲಿ ಅಸಹ್ಯವಾಗಿರುವುದು. ಅಲ್ಲಿ ಪಾಪಿಗಳು ಅದನ್ನೇ ತಿನ್ನುತ್ತಾ ಯಮದೂತರ ಹಿಂಸೆಯನ್ನು ಸಹಿಸುತ್ತಿರುವರು. ॥೧೬॥

ಶುಕ್ರಕುಂಡವೆಂಬುದು ಒಂದು ಹರಿದಾರಿಯ ಆಳತೆಯುಳ್ಳದ್ದಾಗಿ ಶುಕ್ರಕೀಟಗಳಿಂದ ತುಂಬಿರುವುದು. ಆ ಹುಳುಗಳು ಅಲ್ಲಿರುವ ಪಾಪಿಗಳನ್ನು ತಿನ್ನುತ್ತಿರುವುವು. ಆ ಕಾರಣದಿಂದ ಪಾಪಿಗಳು ಕೂಗಿಕೊಳ್ಳುತ್ತಿರುವರು. ರಕ್ತಕುಂಡವೆಂಬುದು ಕೆಟ್ಟ ವಾಸನೆಯ ರಕ್ತದಿಂದ ತುಂಬಿ ಆಳವಾಗಿ ಇಳಿಯುವ ಭಾವಿಯ ಆಳತೆಯಿಂದಿರುವುದು. ಪಾಪಿಗಳು ಆ ರಕ್ತವನ್ನೇ ಕುಡಿಯುತ್ತಾ ಅಲ್ಲಿರುವ ಹುಳುಗಳಿಂದ ಕಚ್ಚಿಸಿಕೊಳ್ಳುತ್ತಿರುವರು. ॥೧೭-೧೮॥

ಅಶ್ರುಕುಂಡವೆಂಬುದು ಕಣ್ಣೀರಿನಿಂದ ತುಂಬಿ ವಾಪಿಯ ಕಾಲುಭಾಗದಷ್ಟಿರುತ್ತಾ ಆ ಭಾವಿಯಲ್ಲಿರುವ ಹುಳುಗಳಿಂದ ಕಚ್ಚಿಸಿಕೊಂಡು ಅಳುತ್ತಿರುವ ಅನೇಕ ಪಾಪಿಗಳಿಂದ ಕೂಡಿರುವುದು. ॥೧೯॥

ನೃಣಾಂ ಗಾತ್ರಮಲೈರ್ಯುಕ್ತಂ ತದ್ಭಕ್ಷ್ಯೈಃ ಪಾಪಿಭಿರ್ಯುತಂ ॥೨೦॥

ತಾಡಿತೈರ್ಯಮದೂತೈಶ್ಚ ವ್ಯಗ್ರೈಶ್ಚ ಕೀಟಭಕ್ಷಿತೈಃ ।
ಕರ್ಣವಿಟ್ಪರಿಪೂರ್ಣಂ ಚ ತದ್ಭಕ್ಷ್ಯೈಃ ಪಾಪಿಭಿರ್ವೃತಂ ॥೨೧॥

ವಾಪೀತುರ್ಯಪ್ರಮಾಣಂ ಚ ಬ್ರುವದ್ಭಿಃ ಕೀಟಭಕ್ಷಿತೈಃ ।
ಮಜ್ಜಾಪೂರ್ಣಂ ನರಾಣಾಂ ಚ ಮಹಾದುರ್ಗಂಧಸಂಯುತಂ ॥೨೨॥

ಮಹಾಪಾತಕಿಭಿರ್ಯುಕ್ತಂ ವಾಪೀತುರ್ಯಪ್ರಮಾಣಕಂ ।
ಪರಿಪೂರ್ಣಂ ಸ್ನಿಗ್ಧಮಾಂಸೈರ್ಯಮದೂತೈಶ್ಚ ತಾಡಿತೈಃ ॥೨೩॥

ಪಾಪಿಭಿಃ ಸಂಕುಲಂಚೈವ ವಾಪೀಮಾನಂ ಭಯಾನಕೈಃ ।
ಕನ್ಯಾವಿಕ್ರಯಿಭಿಶ್ಚೈವ ತದ್ಭಕ್ಷ್ಯೈಃ ಕೀಟಭಕ್ಷಿತೈಃ ॥೨೪॥

ಪಾಹೀತಿ ಶಬ್ದಂ ಕುರ್ವದ್ಭಿಃ ತ್ರಾಸಿತೈಶ್ಚ ಭಯಾನಕೈಃ ।
ವಾಪೀತುರ್ಯಪ್ರಮಾಣಂ ಚ ನಖಾದಿಕಚತುಷ್ಟಯಂ ॥೨೫॥
ಪಾಪಿಭಿಃ ಸಂಯುತಂ ಶಶ್ವದ್ಯಮದೂತೈಶ್ಚ ತಾಡಿತೈಃ ।

---

ಗಾತ್ರಮಲಕುಂಡವೆಂಬುದು ಮನುಷ್ಯನ ಮೈಕೊಳೆಯಿಂದ ತುಂಬಿ ಅದನ್ನೇ ತಿನ್ನುತ್ತಿರುವ ಪಾಪಿಗಳಿಂದ ತುಂಬಿರುವುದು. ಆ ಪಾಪಿಗಳನ್ನು ಯಮದೂತರು ಹೊಡೆಯುತ್ತಿರುವರು. ಅಲ್ಲಿರುವ ಹುಳುಗಳು ಅವರನ್ನು ಕಚ್ಚುತ್ತಿರುವುವು. ಕರ್ಣ ವಿಟ್ಕುಂಡವೆಂಬುದು ಕಿವಿಯ ಕೊಳೆಯಿಂದ ತುಂಬಿ ಅದನ್ನೇ ತಿನ್ನುತ್ತಿರುವ ಪಾಪಿಗಳಿಂದ ತುಂಬಿರುವುದು. ಭಾವಿಯ ನಾಲ್ಕನೆಯ ಒಂದು ಪ್ರಮಾಣವಿರುವುದು. ಅಲ್ಲಿರುವ ಕೀಟಗಳು ಆ ಪಾಪಿಗಳನ್ನು ಕಚ್ಚಲು ಅವರು 'ಹಾ' ಎಂದು ಕೂಗಿಕೊಳ್ಳುತ್ತಾ ಇರುವರು. ||೨೦-೨೧||

ಮಜ್ಜಾಕುಂಡವೆಂಬುದು ಕೆಟ್ಟವಾಸನೆಯ ಮನುಷ್ಯರ ಮಜ್ಜ ಎಂಬ ಧಾತುವಿನಿಂದ ತುಂಬಿ ಮಹಾಪಾಪಿಗಳಿಂದ ಕೂಡಿ ಭಾವಿಯ ನಾಲ್ಕನೆಯ ಒಂದುಪಾಲು ಅಳತೆಯುಳ್ಳದಾಗಿರುವುದು. ಕನ್ಯಾವಿಕ್ರಯ ಮಾಡಿದವರು ಅಸಹ್ಯವಾದ ಆ ಕುಂಡದಲ್ಲಿ ಅಲ್ಲಿರುವ ಹುಳುಗಳಿಂದ ಕಚ್ಚಿಸಿಕೊಳ್ಳುತ್ತಾ ಯಮದೂತರು ಹೆದರಿಸುತ್ತಿರಲು ಕಾಪಾಡು ಎಂದು ಕೂಗಿಕೊಳ್ಳುತ್ತಾ ಇರುವರು. ||೨೨-೨೩-೨೪||

ನಖ, ಲೋಮ, ಕೇಶ, ಅಸ್ಥಿ ಎಂಬ ನಾಲ್ಕು ಕುಂಡಗಳೂ ಭಾವಿಯ

**ಪ್ರತಪ್ತತಾಮ್ರಕುಂಡಂ ಚ ತಾಮ್ರೋಪರ್ಯುಲ್ಮುಕಾನ್ವಿತಂ ॥೨೬॥**

**ತಾಮ್ರಾಣಾಂ ಪ್ರತಿಮಾಲಕ್ಷೈಃ ಪ್ರತಪ್ತೈರ್ವ್ಯಾಪ್ತಂ ಸದಾ ।**
**ಪ್ರತ್ಯೇಕಂ ಪ್ರತಿಮಾಶ್ಲಿಷ್ಟೈ ರುದದ್ಭಿಃ ಪಾಪಿಭಿರ್ಯುತಂ ॥೨೭॥**

**ಗವ್ಯೂತಿಮಾನಂ ವಿಸ್ತೀರ್ಣಂ ಯಮದೂತೈಶ್ಚ ತಾಡಿತೈಃ ।**
**ಪ್ರತಪ್ತಲೋಹಧಾರಂ ಚ ಜ್ವಲದಂಗಾರಸಂಯುತಂ ॥೨೮॥**

**ಲೋಹಾನಾಂ ಪ್ರತಿಮಾಶ್ಲಿಷ್ಟೈ ರುದದ್ಭಿಃ ಪಾಪಿಭಿರ್ಯುತಂ ।**
**ಪ್ರತ್ಯೇಕಂ ಪ್ರತಿಮಾಶ್ಲಿಷ್ಟೈಃ ಶಶ್ವತ್ಪ್ರಜ್ವಲಿತೈರ್ಭಿಯಾ ॥೨೯॥**

**ರಕ್ಷರಕ್ಷೇತಿ ಶಬ್ದಂ ಚ ಕುರ್ವದ್ಭಿರ್ದೂತತಾಡಿತೈಃ ।**
**ಮಹಾಪಾತಕಿಭಿರ್ಯುಕ್ತಂ ದ್ವಿಗವ್ಯೂತಿಪ್ರಮಾಣಕಂ ॥೩೦॥**

**ಭಯಾನಕಂ ಧ್ವಾಂತಯುಕ್ತಂ ಲೋಹಕುಂಡಂ ಪ್ರಕೀರ್ತಿತಂ ।**
**ಚರ್ಮಕುಂಡಂ ತಪ್ತಸುರಾಕುಂಡಂ ವಾಪ್ಯರ್ಧಮೇವ ಚ ॥೩೧॥**
**ತದ್ಭೋಜಿ ಪಾಪಿಭಿರ್ವ್ಯಾಪ್ತಂ ಮಮ ದೂತೈಶ್ಚ ತಾಡಿತೈಃ ।**

---

ನಾಲ್ಕನೆಯ ಒಂದುಭಾಗ ಪ್ರಮಾಣವಿದ್ದು ಪಾಪಿಗಳಿಂದ ಕೂಡಿರುವುದು. ನನ್ನ ದೂತರು ಅವರನ್ನು ಹೊಡೆಯುತ್ತಿರುವರು. ॥೨೫॥

ಪ್ರತಪ್ತತಾಮ್ರಕುಂಡವೆಂಬುದು ತಾಮ್ರದ ಮೇಲೆ ಕೊಳ್ಳಿಗಳಿಂದ ಕೂಡಿರುವುದು. ಮತ್ತು ಕಾಯಿಸಿದ ತಾಮ್ರದ ಲಕ್ಷ ಸಂಖ್ಯೆಯ ಬೊಂಬೆಗಳಿಂದ ತುಂಬಿರುವುದು. ಅಲ್ಲಿ ಒಬ್ಬೊಬ್ಬ ಪಾಪಿಯೂ ಒಂದೊಂದು ಬೊಂಬೆಯನ್ನು ತಬ್ಬಿಕೊಂಡು ಅಳುತ್ತಿರುವನು. ಅದು ಎರಡು ಹರಿದಾರಿಯ ವಿಸ್ತಾರವಿರುವುದು. ॥೨೬-೨೭॥

ಲೋಹಕುಂಡವೆಂಬುದು ಕಾಯಿಸಿದ ಕಬ್ಬಿಣದ ಅಲಗುಗಳುಳ್ಳದಾಗಿ ಉರಿಯುತ್ತಿರುವ ಬೆಂಕಿಯ ಕೆಂಡಗಳಿಂದ ಕೂಡಿರುವುದು. ಅಲ್ಲಿ ಒಬ್ಬೊಬ್ಬ ಪಾಪಿಯೂ ಉರಿಯುವ ಒಂದೊಂದು ಲೋಹದ ಪ್ರತಿಮೆಯನ್ನು ತಬ್ಬಿಕೊಂಡು ಭಯದಿಂದ ಕೂಗಿಕೊಳ್ಳುತ್ತಾ ಇರುವನು. ಅದು ನಾಲ್ಕು ಹರಿದಾರಿ ವಿಸ್ತಾರವಾಗಿ ಕತ್ತಲೆಯಿಂದ ಕೂಡಿ ಭಯಂಕರವಾಗಿರುವುದು. ಮಹಾಪಾಪಮಾಡಿದವರು ಅಲ್ಲಿ ಯಮದೂತರ ಹಿಂಸೆಯಿಂದ " ಕಾಪಾಡು ಕಾಪಾಡು " ಎಂದು ಕೂಗಿಕೊಳ್ಳುವರು. ॥೨೮-೨೯-೩೦॥

ಚರ್ಮಕುಂಡ ತಪ್ತಸುರಾಕುಂಡಗಳೆರಡೂ ಅರ್ಧವಾಪೀಪ್ರಮಾಣವುಳ್ಳದು.

ಅತಃ ಶಾಲ್ಮಲಿಕುಂಡಂ ಚ ವೃಕ್ಷಕಂಟಕಶೋಭಿತಂ ॥೩೨॥

ಲಕ್ಷಪೌರುಷಮಾನಂ ಚ ಕ್ರೋಶಮಾನಂ ಚ ದುಃಖದಂ ।
ಧನುರ್ಮಾನೈಃ ಕಂಟಕೈಶ್ಚ ಸುತೀಕ್ಷ್ಣೈಃ ಪರಿವೇಷ್ಟಿತಂ ॥೩೩॥

ಪ್ರತ್ಯೇಕಂ ವಿದ್ಧಗಾತ್ರೈಶ್ಚ ಮಹಾಪಾತಕಿಭಿರ್ಯುತಂ ।
ವೃಕ್ಷಾಗ್ರಾನ್ನಿಪತದ್ಭಿಶ್ಚ ಯಮದೂತೈಶ್ಚ ತಾಡಿತೈಃ ॥೩೪॥

ಜಲಂ ದೇಹೀತಿ ಶಬ್ದಂ ಚ ಕುರ್ವದ್ಭಿಃ ಶುಷ್ಕತಾಲುಕೈಃ ।
ಮಹಾಭಿಯಾಃತಿವ್ಯಗ್ರೈಶ್ಚ ದಂಡೈಃ ಸಂಭಗ್ನಮಸ್ತಕೈಃ ॥೩೫॥

ಪ್ರಚಲದ್ಭಿರ್ಯಥಾ ತಪ್ತತೈಲಜೀವಿಭಿರೇವ ಚ ।
ವಿಷೋದೈಸ್ತಕ್ಷಕಾಣಾಂ ಚ ಪೂರ್ವಂ ಚ ಕ್ರೋಶಮಾನಕಂ ॥೩೬॥

ತದ್ಭಕ್ಷ್ಯೈಃ ಪಾಪಿಭಿರ್ಯುಕ್ತಂ ಮಮ ದೂತೈಶ್ಚ ತಾಡಿತೈಃ ।
ಪ್ರತಪ್ತತೈಲಪೂರ್ಣಂ ಚ ಕೀಟಾದಿ ಪರಿವರ್ಜಿತಂ ॥೩೭॥

---

ಪಾಪಿಗಳು ಆ ಕುಂಡಗಳಲ್ಲಿರುವ ಚರ್ಮ ಮತ್ತು ಹೆಂಡಗಳನ್ನೇ ಆಹಾರಮಾಡಿಕೊಂಡು ನನ್ನ ದೂತರ ಹಿಂಸೆಯನ್ನು ಸಹಿಸುತ್ತಿರುವರು. ॥೩೧॥

ಕಂಟಕಕುಂಡವೆಂಬುದು ಮುಳ್ಳುಮತ್ತುಗದ ಮುಳ್ಳುಗಳಿಂದ ತುಂಬಿದೆ. ಅದು ಒಂದು ಹರಿದಾರಿಯ ವಿಸ್ತಾರವೂ ಲಕ್ಷಪುರುಷಪ್ರಮಾಣ ಎತ್ತರವೂ ಇದ್ದು ನಾಲ್ಕು ಮೊಳದುದ್ದ ಉಳ್ಳ ಮೊನಚಾದ ಮುಳ್ಳುಗಳಿಂದ ತುಂಬಿರುವುದು. ಅಲ್ಲಿ ಮಹಾಪಾಪಿಗಳು ಪ್ರತಿಯೊಬ್ಬರಿಗೂ ಮೈಗೆ ಮುಳ್ಳು ಚುಚ್ಚಿಕೊಂಡು ಮರದ ತುದಿಯಿಂದ ಮುಳ್ಳಿನ ಮೇಲೆ ಬೀಳುತ್ತಾ ಯಮದೂತರ ಏಟನ್ನು ತಿನ್ನುತ್ತಾ ದೊಣ್ಣೆಯ ಏಟಿನಿಂದ ತಲೆಯು ಒಡೆದುಹೋಗಿರಲು ಬಾಯಿ ಒಣಗಿ ನೀರನ್ನು ಕೊಡಿರೆಂದು ಕೂಗಿಕೊಳ್ಳುತ್ತಾ ಕುದಿಯುತ್ತಿರುವ ಎಣ್ಣೆಯನ್ನು ಕುಡಿದವರಂತೆ ತಿರುಗುತ್ತಾ ಇರುವರು. ॥೩೨-೩೩-೩೪-೩೫॥

ವಿಷಕುಂಡವೆಂಬುದು ಹಾವುಗಳ ವಿಷದಿಂದ ತುಂಬಿ ಒಂದು ಹರಿದಾರಿಯ ಆಳತೆಯುಳ್ಳದಾಗಿರುವುದು. ಅಲ್ಲಿ ಪಾಪಿಗಳು ಆ ವಿಷವನ್ನೇ ಆಹಾರಮಾಡಿಕೊಂಡು ನನ್ನ ದೂತರ ಹಿಂಸೆಯನ್ನು ಸಹಿಸುತ್ತಿರುವರು. ॥೩೬॥

ಪ್ರತಪ್ತತೈಲಕುಂಡವೆಂಬುದು ಕಾಯಿಸಿದ ಎಣ್ಣೆಯಿಂದ ತುಂಬಿ ಕೀಟಾದಿಗಳಿಲ್ಲದೆ ಸುಡುತ್ತಿರುವ ಕೆಂಡಗಳಂತೆ ಸುಡುತ್ತಾ ಒಂದು ಹರಿದಾರಿ ವಿಸ್ತಾರವಾಗಿ ಕತ್ತಲೆ

ಮಹಾಪಾತಕಿಭಿರ್ಯುಕ್ತಂ ದಗ್ಧಾಂಗಾರೈಶ್ಚ ವೇಷ್ಟಿತಂ ।
ಕಾಕುಶಬ್ದಂ ಪ್ರಕುರ್ವದ್ಭಿಶ್ಚಲದ್ಭಿರ್ದೂತಪೀಡಿತೈಃ ॥೩೮॥

ಧ್ವಾಂತಯುಕ್ತಂ ಕ್ರೋಶಮಾನಂ ಕ್ಲೇಶದಂ ಚ ಭಯಾನಕಂ ।
ಶೂಲಕಾರೈಃ ಸುತೀಕ್ಷ್ಣಾಗ್ರೈರ್ಲೋಹಶಸ್ತ್ರೈಶ್ಚ ವೇಷ್ಟಿತಂ ॥೩೯॥

ಶಸ್ತ್ರತಲ್ಪಸ್ವರೂಪಂ ಚ ಕ್ರೋಶತುರ್ಯಪ್ರಮಾಣಕಂ ।
ವೇಷ್ಟಿತಂ ತತ್ಪಾತಕಿಭಿಃ ಕುಂತವಿದ್ಧೈಶ್ಚ ವೇಷ್ಟಿತೈಃ ॥೪೦॥

ತಾಡಿತೈರ್ಮಮ ದೂತೈಶ್ಚ ಶುಷ್ಕಕಂಠೋಷ್ಠತಾಲುಕೈಃ ।
ಕೀಟೈಶ್ಚ ಶಂಕುಪ್ರತಿಮೈಃ ಸರ್ಪಮಾನೈರ್ಭಯಂಕರೈಃ ॥೪೧॥

ತೀಕ್ಷ್ಣದಂತೈಶ್ಚ ವಿಕೃತೈರ್ವ್ಯಾಪ್ತಂ ಧ್ವಾಂತಯುತಂ ಸತಿ ।
ಮಹಾಪಾತಕಿಭಿರ್ಯುಕ್ತಂ ಮಮ ದೂತೈಶ್ಚ ತಾಡಿತೈಃ ॥೪೨॥

ದ್ವಿಗವ್ಯೂತಿಪ್ರಮಾಣಂ ಚ ಪೂಯಕುಂಡಂ ಪ್ರಚಕ್ಷತೇ ।
ತದ್ಭಕ್ಷೈಃ ಪ್ರಾಣಿಭಿರ್ಯುಕ್ತಂ ಯಮದೂತೈಶ್ಚ ತಾಡಿತೈಃ ॥೪೩॥

---

ಯಿಂದ ಕೂಡಿರುವುದು. ಅಲ್ಲಿ ಮಹಾಪಾಪಿಗಳು ನನ್ನ ದೂತರ ಹಿಂಸೆಯನ್ನು ತಾಳಲಾರದೆ ಕೂಗಿಕೊಳ್ಳುತ್ತಾ ಓಡಾಡುತ್ತಿರುವರು. ॥೩೭-೩೮॥

ಕುಂತಕುಂಡವೆಂಬುದು ಶೂಲಾಕಾರವಾದ ಹರಿತವಾದ ಮೊನಚಾಗಿರುವ ಕಬ್ಬಿಣದ ಆಯುಧಗಳಿಂದ ತುಂಬಿ ಶಸ್ತ್ರಗಳ ಹಾಸಿಗೆಯಂತೆ ಕಾಲು ಹರಿದಾರಿ ವಿಸ್ತಾರವಾಗಿರುವುದು. ಅಲ್ಲಿ ಪಾಪಿಗಳು ಕುಂತಾಯುಧಗಳಿಂದ ಚುಚ್ಚಿಸಿಕೊಂಡು ನನ್ನ ದೂತರ ಹಿಂಸೆಯಿಂದ ಗಂಟಲು ತುಟಿಗಳು ಒಣಗಿ ದುಃಖಿಸುವರು.॥೩೯-೪೦॥

ಕೃಮಿಕುಂಡವೆಂಬುದು ಶಂಕುವೆಂಬ ಆಯುಧಕ್ಕೆ ಸಮಾನವಾದ ಸರ್ಪದಂತೆ ಭಯಂಕರವಾದ ಹಲ್ಲುಗಳಿಂದ ಕೂಡಿದ ವಿಕಾರವಾದ ಹುಳುಗಳಿಂದ ತುಂಬಿ ಕತ್ತಲೆಯೊಳಗಿರುವುದು. ಅಲ್ಲಿರುವ ಪಾಪಿಗಳನ್ನು ನನ್ನ ದೂತರು ಹೊಡೆಯುತ್ತಿರುವರು. ॥೪೧-೪೨॥

ಪೂಯಕುಂಡವೆಂಬುದು ನಾಲ್ಕು ಹರಿದಾರಿ ವಿಸ್ತಾರವಾಗಿ ಕೀವಿನಿಂದ ತುಂಬಿರುವುದು. ಅಲ್ಲಿ ಪಾಪಿಗಳು ಅದನ್ನೇ ಆಹಾರಮಾಡಿಕೊಂಡು ಯಮದೂತರ ಹಿಂಸೆಯನ್ನು ಅನುಭವಿಸುವರು. ॥೪೩॥

ತಾಲವೃಕ್ಷಪ್ರಮಾಣೈಶ್ಚ ಸರ್ಪಕೋಟಿಭಿರಾವೃತಂ ।
ಸರ್ಪವೇಷ್ಟಿತಗಾತ್ರೈಶ್ಚ ಪಾಪಿಭಿಃ ಸರ್ಪಭಕ್ಷಿತೈಃ ॥೪೪॥

ಸಂಕುಲಂ ಶಬ್ದಕೃದ್ಭಿಶ್ಚ ಮಮ ದೂತೈಶ್ಚ ತಾಡಿತೈಃ ।
ಕುಂಡತ್ರಯಂ ಮಶಾದೀನಾಂ ಪೂರ್ಣಂ ಚ ಮಶಕಾದಿಭಿಃ ॥೪೫॥

ಸರ್ವಂ ಕ್ರೋಶಾರ್ಧಮಾನಂ ಚ ಮಹಾಪಾತಕಿಭಿರ್ಯುತಂ ।
ಹಸ್ತಪಾದಾದಿಬದ್ಧೈಶ್ಚ ಕ್ಷತಜೌಘೇನ ಲೋಹಿತೈಃ ॥೪೬॥

ಹಾಹೇತಿ ಶಬ್ದಂ ಕುರ್ವದ್ಭಿಸ್ತಾಡಿತೈರ್ಮಮ ಪಾರ್ಷದೈಃ ।
ವಜ್ರವೃಶ್ಚಿಕಯೋಃ ಕುಂಡಂ ತಾಭ್ಯಾಂ ಚ ಪರಿಪೂರಿತಂ ॥೪೭॥

ವಾಪ್ಯರ್ಧಂ ಪಾಪಿಭಿರ್ಯುಕ್ತಂ ವಜ್ರವೃಶ್ಚಿಕದಂಶಿತೈಃ ।
ಕುಂಡತ್ರಯಂ ಶರಾದೀನಾಂ ತೈರೇವ ಪರಿಪೂರಿತಂ ॥೪೮॥

---

ಸರ್ಪಕುಂಡವೆಂಬುದು ತಾಳೆಯ ಮರದಷ್ಟು ಗಾತ್ರವಾದ ಕೋಟಿಸರ್ಪಗಳಿಂದ ತುಂಬಿರುವುದು. ಅಲ್ಲಿರುವ ಪಾಪಿಗಳನ್ನು ಆ ಸರ್ಪಗಳು ತಿನ್ನುತ್ತಿರುವುವು. ನನ್ನ ದೂತರು ಅವರನ್ನು ಹೊಡೆಯುತ್ತಿರಲು ಆ ಪಾಪಿಗಳು ಕೂಗಿಕೊಳ್ಳುತ್ತಿರುವರು. ॥೪೪॥

ಮಶಕಕುಂಡ, ದಂಶಕುಂಡ, ಗರಕುಂಡವೆಂಬ ಮೂರುಕುಂಡಗಳು ಅರ್ಧ ಹರಿದಾರಿ ವಿಸ್ತಾರವುಳ್ಳವುಗಳಾಗಿ ಸೊಳ್ಳೆ, ನೊಣ, ವಿಷ, ಇವುಗಳಿಂದ ತುಬಿರುವುವು. ಅಲ್ಲಿ ಕೈಕಾಲುಗಳನ್ನು ಕಟ್ಟಿ ಮೈಯೆಲ್ಲವೂ ಗಾಯಗಳಿಂದ ಕೆಂಪಾಗಿರುವ ಮಹಾಪಾಪಿಗಳು ನನ್ನ ದೂತರ ಏಟನ್ನು ತಿನ್ನುತ್ತಾ ಹಾ ಎಂದು ಕೂಗುತ್ತಿರುವರು.॥೪೫-೪೬॥

ವಜ್ರದಂಷ್ಟ್ರಕುಂಡ, ವೃಶ್ಚಿಕಕುಂಡಗಳೆರಡೂ ಅರ್ಧಭಾವಿಯ ವಿಸ್ತಾರವುಳ್ಳುದಾಗಿ ವಜ್ರದಂಷ್ಟ್ರವೆಂಬ ಹುಳುಗಳಿಂದಲೂ ಚೇಳುಗಳಿಂದಲೂ ತುಂಬಿರುವುದು. ಅಲ್ಲಿರುವ ಪಾಪಿಗಳನ್ನು ಆ ಹುಳುಗಳು ಕಚ್ಚುತ್ತಿರುವುವು. ॥೪೭॥

ಶರಕುಂಡ, ಶೂಲಕುಂಡ, ಖಡ್ಗಕುಂಡಗಳೆಂಬ ಮೂರು ಕುಂಡಗಳು ಅರ್ಧಭಾವಿಯ ವಿಸ್ತಾರವುಳ್ಳುದಾಗಿ ಆಯುಧಗಳಿಂದ ತುಂಬಿಕೊಂಡಿರುವುದು. ಅಲ್ಲಿ ಪಾಪಿಗಳು ಆ ಆಯುಧಗಳ ಏಟುತಿಂದು ಮೈಯೆಲ್ಲವೂ ರಕ್ತವಾಗಿ ದುಃಖಿಸುತ್ತಿರುವರು. ॥೪೮॥

ತ್ರೈರ್ವಿದಗ್ಧೈಃ ಪಾಪಿಭಿರ್ಯುಕ್ತಂ ವಾಪ್ಯರ್ಧಂ ರಕ್ತಲೋಹಿತೈಃ ।
ತಪ್ತತೋಯೋದಕೈಃ ಪೂರ್ಣಂ ಸಧ್ವಾಂತಂ ಗೋಲಕುಂಡಕಂ ॥೪೯॥

ಕೀಟೈಃ ಸಂಕುಲಮಾನೈಶ್ಚ ಭಕ್ಷಿತೈಃ ಪಾಪಿಭಿರ್ಯುತಂ ।
ವಾಪ್ಯರ್ಧಮಾನಂ ಭೀತೈಶ್ಚ ಪಾಪಿಭಿಃ ಕೀಟಭಕ್ಷಿತೈಃ ॥೫೦॥

ರುದದ್ಭಿಃ ಕ್ರೋಶಮಾನೈಶ್ಚ ಯಮದೂತೈಶ್ಚ ತಾಡಿತೈಃ ।
ಅತಿದುರ್ಗಂಧ ಸಂಯುಕ್ತಂ ದುಃಖದಂ ಪಾಪಿನಾಂ ಸದಾ ॥೫೧॥

ದಾರುಣೈರ್ವಿಕೃತಾಕಾರೈರ್ಭಕ್ಷಿತಂ ಪಾಪಿಭಿರ್ಯುತಂ ।
ವಾಪ್ಯರ್ಧಂ ಪರಿಪೂರ್ಣಂ ಚ ಜಲಸ್ಥೈರ್ನಕ್ರಕೋಟಿಭಿಃ ॥೫೨॥

ವಿಣ್ಮೂತ್ರಶ್ಲೇಷ್ಮಭಕ್ಷ್ಯೈಶ್ಚ ಸಂಯುತಂ ಶತಕೋಟಿಭಿಃ ।
ಕಾಕೈಶ್ಚ ವಿಕೃತಾಕಾರೈರ್ಭಕ್ಷಿತೈಃ ಪಾಪಿಭಿರ್ಯುತಂ ॥೫೩॥

---

ಗೋಲಕುಂಡವೆಂಬುದು ಕೆಟ್ಟ ವಾಸನೆಯ ಬಿಸಿನೀರಿನಿಂದ ತುಂಬಿ ಅರ್ಧ ಭಾವಿಯ ಆಳತೆಯಿಂದ ಕೂಡಿ ಕತ್ತಲೆಯಲ್ಲಿರುವುದು. ಅದರಲ್ಲಿ ತುಂಬಿರುವ ಹುಳುಗಳು ಅಲ್ಲಿರುವ ಪಾಪಿಗಳ ಸೊಂಟವನ್ನು ತಿನ್ನುತ್ತಿರುವುವು. ಯಮದೂತರು ಆ ಪಾಪಿಗಳನ್ನು ಹೊಡೆಯುತ್ತಿರುವರು. ಅವರು ಅಳುತ್ತಾ ಗಟ್ಟಿಯಾಗಿ ಕೂಗಿಕೊಳ್ಳುತ್ತಿರುವರು. ಈ ನರಕವು ಯಾವಾಗಲೂ ಪಾಪಿಗಳಿಗೆ ದುಃಖವನ್ನುಂಟುಮಾಡುತ್ತಿರುವುದು. ॥೪೯-೫೦-೫೧॥

ನಕ್ರಕುಂಡವೆಂಬುದು ಭಯಂಕರವಾದ ಬಗೆಬಗೆಯ ಆಕಾರದ ಅನೇಕ ಮೊಸಳೆಗಳಿಂದ ಕೂಡಿ ನೀರಿನಿಂದ ತುಂಬಿರುವ ಅರ್ಧಭಾವಿಯ ಪ್ರಮಾಣದ ನರಕವು. ಅಲ್ಲಿರುವ ಹೂಳುಗಳು ಪಾಪಿಗಳನ್ನು ಆಗಾಗ್ಗೆ ತಿನ್ನುತ್ತಿರುವುವು. ॥೫೨॥

ಕಾಕಕುಂಡವೆಂಬುದು ಮಲಮೂತ್ರಶ್ಲೇಷ್ಮ ಇವುಗಳನ್ನು ತಿನ್ನುವ ಅನೇಕ ವಿಕಾರವಾದ ಕಾಗೆಗಳಿಂದ ಕೂಡಿರುವುದು. ಅಲ್ಲಿರುವ ಪಾಪಿಗಳನ್ನು ಆ ಕಾಗೆಗಳು ತಿನ್ನುತ್ತಿರುವುವು. ॥೫೩॥

ಮಂಥಾನಕುಂಡಂ ಬೀಜಕುಂಡಂ ತಾಭ್ಯಾಂ ಪೂರ್ಣಂ ಧನುಶ್ಶತಂ ।
ಭಕ್ಷಿತೈಃ ಪಾಪಿಭಿರ್ಯುಕ್ತಂ ಶಬ್ದಕೃದ್ಭಿಶ್ಚ ಸಂತತಂ ॥೫೪॥

ಧನುಶ್ಶತಂಜೀವಯುಕ್ತಂ ಪಾಪಿಭಿಃ ಸಂಕುಲಂ ಸದಾ ।
ಶಬ್ದಕೃದ್ಭಿರ್ವಜ್ರದಂಷ್ಟ್ರೈಃ ಸಾಂದ್ರಧ್ವಾಂತಮಯಂ ಪರಂ ॥೫೫॥

ವಾಪೀದ್ವಿಗುಣಮಾನಂ ಚ ತಪ್ತಪ್ರಸ್ತರನಿರ್ಮಿತಂ ।
ಜ್ವಲದಂಗಾರಸದೃಶಂ ಜ್ವಲದ್ಭಿಃ ಪಾಪಿಭಿರ್ಯುತಂ ॥೫೬॥

ಕ್ಷುರಧಾರೋಪಮೈಸ್ತೀಕ್ಷ್ಣೈಃ ಪಾಷಾಣೈರ್ನಿರ್ಮಿತಂ ಪರಂ ।
ಮಹಾಪಾತಕಿಭಿರ್ಯುಕ್ತಂ ಲಾಲಾಕುಂಡಂ ಚ ಲೋಹಿತಂ ॥೫೭॥

ಕ್ರೋಶಮಾತ್ರಂ ಚ ಗಂಭೀರಂ ಮಮ ದೂತೈಶ್ಚ ತಾಡಿತೈಃ ।
ತಪ್ತಾಂಜನಾಚಲಾಕಾರೈಃ ಪರಿಪೂರ್ಣಂ ಧನುಶ್ಶತಂ ॥೫೮॥

---

ಮಂಥಾನ, ಬೀಜಕುಂಡಗಳೆರಡೂ ನೂರು ಧನುಸ್ಸಿನ ಪ್ರಮಾಣ ಅಂದರೆ ನಾನೂರು ಮೊಳ ವಿಸ್ತಾರವಾಗಿರುವುವು. ಅವುಗಳಲ್ಲಿರುವ ಮಂಥಾನ ಮತ್ತು ಬೀಜ ಎಂಬ ಕ್ರಿಮಿಗಳು ಪಾಪಿಗಳನ್ನು ತಿನ್ನುತ್ತಿದ್ದರೆ ಅವರು ಯಾವಾಗಲೂ ಕೂಗಿಕೊಳ್ಳು ತ್ತಿರುವರು. ॥೫೪॥

ವಜ್ರಕುಂಡವೆಂಬುದು ನಾನೂರು ಮೊಳ ವಿಸ್ತಾರವುಳ್ಳದಾಗಿ ವಜ್ರದ ಆಕಾರ ವಾದ ಹಲ್ಲುಗಳಿಂದ ಕೂಡಿದ ಪ್ರಾಣಿಗಳಿಂದ ತುಂಬಿದ ಒತ್ತಾದ ಕತ್ತಲೆಯಲ್ಲಿರು ವುದು. ಅಲ್ಲಿ ಪಾಪಿಗಳು ಯಾತನೆಯನ್ನು ತಡೆಯಲಾರದೆ ಕೂಗಿಕೊಳ್ಳುವರು.॥೫೫॥

ತಪ್ತಪಾಷಾಣಕುಂಡವೆಂಬುದು ಭಾವಿಯ ಎರಡರಷ್ಟು ವಿಸ್ತಾರವಾಗಿ ಬೆಂಕಿ ಯಲ್ಲಿ ಕಾಸಿದ ಕಲ್ಲಿನಿಂದ ಮಾಡಿರುವುದು. ಉರಿಯುತ್ತಿರುವ ಕೆಂಡದಂತೆ ಚಲಿಸು ತ್ತಿರುವ ಪಾಪಿಗಳಿಂದ ಕೂಡಿರುವುದು. ॥೫೬॥

ತೀಕ್ಷ್ಣಪಾಷಾಣಕುಂಡವು ಕತ್ತಿಯ ಅಲಗಿನಂತಿರುವ ಹರಿತವಾದ ಕಲ್ಲಿನಿಂದ ಮಾಡಿರುವುದು. ಲಾಲಾಕುಂಡವು ಒಂದು ಹರಿದಾರಿ ವಿಸ್ತಾರವಾಗಿ ಆಳವಾಗಿ ಕೆಂಪಾ ಗಿರುವುದು. ಪಾಪಿಗಳು ನನ್ನ ದೂತರ ಹಿಂಸೆಯನ್ನನುಭವಿಸುತ್ತಾ ಅಲ್ಲಿರುವರು.॥೫೭॥

ಮಸೀಕುಂಡವೆಂಬುದು ಕಾಯಿಸಿದ ಅಂಜನಪರ್ವತದಂತೆ ನಾಲ್ಕುನೂರು

ಚಲದ್ಭಿಃ ಪಾಪಿಭಿರ್ಯುಕ್ತಂ ಮಮ ದೂತೈಶ್ಚ ತಾಡಿತೈಃ ।
ಪೂರ್ಣಂ ಚೂರ್ಣದ್ರವೈಃ ಕ್ರೋಶಮಾನಂ ಪಾಪಿಭಿರನ್ವಿತಂ ॥೫೯॥

ತದ್ಭೋಜಿಭಿಃ ಪ್ರದಗ್ಧೈಶ್ಚ ಮಮ ದೂತೈಶ್ಚ ತಾಡಿತೈಃ ।
ಕುಂಡಂ ಕುಲಾಲಚಕ್ರಂ ಚ ಘೂರ್ಣಮಾನಂ ಚ ಸಂತತಂ ॥೬೦॥

ಸುತೀಕ್ಷ್ಣಂ ಷೋಡಶಾರಂ ಚ ಚೂರ್ಣಿತೈಃ ಪಾಪಿಭಿರ್ಯುತಂ ।
ಅತೀವ ವಕ್ರಂ ನಿಮ್ನಂ ಚ ದ್ವಿಗವ್ಯೂತಿಪ್ರಮಾಣಕಂ ॥೬೧॥

ಕಂದರಾಕಾರನಿರ್ಮಾಣಂ ತಪ್ತೋದೈಶ್ಚ ಸಮನ್ವಿತಂ ।
ಮಹಾಪಾತಕಿಭಿರ್ಯುಕ್ತಂ ಭಕ್ಷಿತೈರ್ಜಲಜಂತುಭಿಃ ॥೬೨॥

ಜ್ವಲದ್ಭಿಃ ಶಬ್ದಕೃದ್ಭಿಶ್ಚ ಧ್ವಾಂತಯುಕ್ತಂ ಭಯಾನಕಂ ।
ಕೋಟಿಭಿರ್ವಿಕೃತಾಕಾರೈಃ ಕಚ್ಛಪೈಶ್ಚ ಸುದಾರುಣೈಃ ॥೬೩॥
ಜಲಸ್ಥೈಃ ಸಂಯುತಂ ತೈಶ್ಚ ಭಕ್ಷಿತೈಃ ಪಾಪಿಭಿರ್ಯುತಂ ।

---

ಮೊಳ ವಿಸ್ತಾರವಾಗಿರುವುದು. ಅಲ್ಲಿರುವ ಪಾಪಿಗಳನ್ನು ನನ್ನ ದೂತರು ಹೊಡೆಯುತ್ತಿರುವರು. ॥೫೮॥

ಚೂರ್ಣಕುಂಡವೆಂಬುದು ಒಂದು ಹರಿದಾರಿ ವಿಸ್ತಾರವಾಗಿ ಸುಣ್ಣದ ನೀರಿನಿಂದ ತುಂಬಿರುವುದು. ಅಲ್ಲಿ ಪಾಪಿಗಳು ಆ ನೀರನ್ನು ಕುಡಿದು ನನ್ನ ದೂತರ ಹಿಂಸೆಯನ್ನನುಭವಿಸುತ್ತಾ ಸಂತಾಪಪಡುವರು. ॥೫೯॥

ಚಕ್ರಕುಂಡವೆಂಬುದು ಹರಿತವಾದ ಹದಿನಾರು ಅಲಗುಗಳಿಂದ ಕೂಡಿದ ಕುಂಬಾರನ ಚಕ್ರದಂತೆ ಸುತ್ತುತ್ತಿರುವರು. ॥೬೦॥

ವಕ್ರಕುಂಡವೆಂಬುದು ನಾಲ್ಕು ಹರಿದಾರಿಯ ವಿಸ್ತಾರವುಳ್ಳುದಾಗಿ ಗುಹೆಯ ಆಕಾರವಾಗಿ ಆಳವಾಗಿಯೂ ವಿಶೇಷ ವಕ್ರವಾಗಿಯೂ ಇರುವುದು. ಅದರಲ್ಲಿ ಬಿಸಿನೀರು ತುಂಬಿರುವುದು. ಆ ನೀರಿನಲ್ಲಿರುವ ಹುಳುಗಳು ಅಲ್ಲಿರುವ ಮಹಾಪಾಪಿಗಳನ್ನು ತಿನ್ನುತ್ತಿರುವುವು. ಇದರಿಂದ ಅವರು ಕೂಗಿಕೊಳ್ಳುತ್ತಾ ಆ ಕತ್ತಲೆಯಲ್ಲಿ ಭಯಪಡುತ್ತಿರುವರು. ॥೬೧-೬೨॥

ಕೂರ್ಮಕುಂಡವೆಂಬುದು ವಿಕಾರವಾದ ಭಯಂಕರವಾದ ನೀರಿನಲ್ಲಿರುವ ಆಮೆಗಳಿಂದ ತುಂಬಿರುವುದು. ಆ ಆಮೆಗಳು ಅಲ್ಲಿರುವ ಪಾಪಿಗಳನ್ನು ತಿನ್ನುತ್ತಿರುವುವು. ॥೬೩॥

ಜ್ವಾಲಾಕಲಾಪೈಸ್ತೇಜೋಭಿರ್ನಿರ್ಮಿತಂ ಕ್ರೋಶಮಾನಕಂ ॥೬೪॥

ಶಬ್ದಕೃದ್ಭಿಃ ಪಾತಕಿಭಿಃ ಸಂಯುತಂ ಕ್ಲೇಶದಂ ಸದಾ ।
ಕ್ರೋಶಮಾನಂ ಚ ಗಂಭೀರಂ ತಪ್ತಭಸ್ಮಭಿರನ್ವಿತಂ ॥೬೫॥

ಶಶ್ವಜ್ಜ್ವಲದ್ಭಿಃ ಸಂಯುಕ್ತಂ ಪಾಪಿಭಿಃ ಭಸ್ಮಭಕ್ಷಿತೈಃ ।
ತಪ್ತಪಾಷಾಣಲೋಹಾನಾಂ ಸಮೂಹೈಃ ಪರಿಪೂರಿತೈಃ ॥೬೬॥

ಪಾಪಿಭಿರ್ದಗ್ಧಗಾತ್ರೈಶ್ಚ ಯುಕ್ತಂ ಚ ಶುಷ್ಕತಾಲುಕೈಃ ।
ಕ್ರೋಶಮಾನಂ ಧ್ವಾಂತಯುಕ್ತಂ ಗಂಭೀರಮತಿದಾರುಣಂ ॥೬೭॥

ತಾಡಿತೈಶ್ಚ ಪ್ರದಗ್ಧೈಶ್ಚ ದಗ್ಧಕುಂಡಂ ಪ್ರಕೀರ್ತಿತಂ ।
ಅತೀವೋರ್ಮಿಯುತಂ ತೋಯಂ ಪ್ರತಪ್ತಕ್ಷಾರಸಂಯುತಂ ॥೬೮॥

ನಾನಾಪ್ರಕಾರೈರ್ವಿಕೃತೈರ್ಜಲಜಂತುಭಿರನ್ವಿತಂ ।
ದ್ವಿಗವ್ಯೂತಿಪ್ರಮಾಣಂ ಚ ಗಂಭೀರಂ ಧ್ವಾಂತಸಂಯುತಂ ॥೬೯॥

---

ಜ್ವಾಲಾಕುಂಡವೆಂಬುದು ಒಂದು ಹರಿದಾರಿಯ ಆಳತೆಯಲ್ಲಿ ಉರಿಗಳ ಸಮೂಹದಿಂದಲೂ ತೇಜಸ್ಸುಗಳಿಂದಲೂ ಮಾಡಿದುದಾಗಿರುವುದು. ಅಲ್ಲಿ ಪಾಪಿಗಳು ಯಾವಾಗಲೂ ಕೂಗಿಕೊಳ್ಳುತ್ತಾ ದುಃಖಪಡುತ್ತಿರುವರು. ॥೬೪॥

ಭಸ್ಮಕುಂಡವು ಒಂದು ಹರಿದಾರಿ ವಿಸ್ತಾರವಾಗಿ ಆಳವಾಗಿ ಸುಟ್ಟ ಬೂದಿಯಿಂದ ತುಂಬಿರುವುದು. ಕಾದ ಕಲ್ಲುಗಳೂ ಲೋಹದ ತುಂಡುಗಳೂ ಅದರಲ್ಲಿರುವುವು. ಪಾಪಿಗಳು ಆ ಬೂದಿಯಲ್ಲಿ ಮುಳುಗಿದರೆ ಅವರ ಶರೀರಕ್ಕೆ ಉರಿ ಹತ್ತಿಕೊಂಡು ಶರೀರವೆಲ್ಲ ಸುಟ್ಟುಹೋಗುವುದು. ಬಾಯಿ ಒಣಗುವುದು. ॥೬೫-೬೬॥

ದಗ್ಧಕುಂಡವೆಂಬುದು ನಾಲ್ಕು ಹರಿದಾರಿಯ ಅಳತೆಯ ವಿಸ್ತಾರವಾಗಿ ಆಳವಾಗಿರುವುದು. ಅದರಲ್ಲಿ ಕುದಿಯುತ್ತಿರುವ ಉಪ್ಪುನೀರು ತುಂಬಿರುವುದು. ದೊಡ್ಡ ದೊಡ್ಡ ಅಲೆಗಳು ವಿಶೇಷವಾಗಿ ಬರುತ್ತಿರುವುವು. ಬಗೆಬಗೆಯಾಗಿ ಕೂಗುವ ಜಲಜಂತುಗಳಿರುವುವು. ಆ ಪ್ರದೇಶಗಳೆಲ್ಲವೂ ಕತ್ತಲೆಯಿಂದ ತುಂಬಿರುವುದು. ಯಮದೂತರು ಪಾಪಿಗಳನ್ನು ಹೊಡೆದು ಆ ಕುಂಡದಲ್ಲಿ ತಳ್ಳಲು ಅವರ ಶರೀರವು ಹತ್ತಿಕೊಂಡುದರಿಂದ ಅವರು ಕೂಗಿಕೊಳ್ಳುವರು. ಅಲ್ಲಿರುವ ಜಲಜಂತುಗಳು ಅವರನ್ನು

ತದ್ಭಕ್ಷ್ಯೈಃ ಪಾಪಿಭಿರ್ಯುಕ್ತಂ ದಂಶಿತೈರ್ಜಲಜಂತುಭಿಃ ।
ಜ್ವಲದ್ಭಿಃ ಶಬ್ದಕೃದ್ಭಿಶ್ಚ ನ ಪಶ್ಯದ್ಭಿಃ ಪರಸ್ಪರಂ ॥೭೦॥

ಪ್ರತಪ್ತಸೂಚೀಕುಂಡಂ ಚ ಕೀರ್ತಿತಂ ಚ ಭಯಾನಕಂ ।
ಅಸೀವ ಧಾರಾಪತ್ರಸ್ಯಾಽಪ್ಯುಚ್ಚೈಸ್ತಾಲತರೋರಧಃ ॥೭೧॥

ಕ್ರೋಶಾರ್ಧಮಾನಂ ಕುಂಡಂ ಚ ಪ್ರತಪ್ತತ್ರಸಮನ್ವಿತಂ ।
ಪಾಪಿನಾಂ ರಕ್ತಪೂರ್ಣಂ ಚ ವೃಕ್ಷಾಗ್ರಾತ್ಪತತಾಂಧ್ರುವಂ ॥೭೨॥

ಪರಿತ್ರಾಹೀತಿ ಶಬ್ದಂ ಚ ಕುರ್ವತಾಮುಸತಾಮಪಿ ।
ಗಂಭೀರಂ ಧ್ವಾಂತಯುಕ್ತಂ ಚ ರಕ್ತಕೀಟಸಮನ್ವಿತಂ ॥೭೩॥

ತದಸೀಪತ್ರಕುಂಡಂ ಚ ಕೀರ್ತಿತಂ ಚ ಭಯಾನಕಂ ।
ಧನುಶ್ಶತಪ್ರಮಾಣಂ ಚ ಕ್ಷುರಧಾರಾಸ್ತ್ರಸಂಯುತಂ ॥೭೪॥
ಪಾಪಿನಾಂ ರಕ್ತಪೂರ್ಣಂ ಚ ಕ್ಷುರಧಾರಂ ಭಯಾನಕಂ ।

---

ತಿನ್ನುವುವು. ಪಾಪಿಗಳು ತಮ್ಮ ಶರೀರಕ್ಕೆ ಉರಿಹತ್ತಿಕೊಂಡು ಕೂಗಿಕೊಳ್ಳುತ್ತಾ ಒಬ್ಬ ರನ್ನು ಮತ್ತೊಬ್ಬರು ನೋಡಲಾರದೆ ದುಃಖಪಡುತ್ತಿರುವರು. ||೬೭-೬೮-೬೯-೭೦||

ತಪ್ತಸೂಚೀಕುಂಡವೆಂಬುದು ಭಯಂಕರವಾದ ಪ್ರಸಿದ್ಧವಾದ ನರಕವು. ಅಸಿಪತ್ರಕುಂಡವೆಂಬುದು ಅರ್ಧಹರಿದಾರಿ ವಿಸ್ತಾರವಾಗಿರುವುದು. ಅದು ಒಂದು ಎತ್ತರವಾದ ತಾಳೆಯಮರದ ಕೆಳಗಿರುವುದು. ಆ ತಾಳೆಯ ಮರದ ಎಲೆಗಳ ಅಂಚು ಕತ್ತಿಯಂತೆ ಹರಿತವಾಗಿರುವುದು. ಆದರ ಎಲೆಗಳು ಕೆಳಗೆ ಉದುರಿರುವುವು. ಪಾಪಿಗಳು ಆ ಮರದ ತುದಿಯಿಂದ ಕೆಳಕ್ಕೆ ಬೀಳುತ್ತಲೂ ಆ ಮರದ ಎಲೆಗಳು ಅವರ ಶರೀರಕ್ಕೆ ತಗುಲಿ ರಕ್ತವು ಸುರಿದು ಅಲ್ಲಿ ಗುಂಡಿಯಾಗಿ ನಿಲ್ಲುವುದು. ಆ ರಕ್ತದಲ್ಲಿ ಹುಳುಗಳುಂಟಾಗಿರುವುವು. ಆ ಪ್ರದೇಶವು ಕತ್ತಲೆಯಿಂದ ಕೂಡಿ ಭಯಂಕರವಾಗಿರುವುದು. ನಮ್ಮನ್ನು ಕಾಪಾಡಿ ಎಂದು ಪಾಪಿಗಳು ಕೂಗುತ್ತಿರುವರು. ||೭೧-೭೨-೭೩||

ಕ್ಷುರಧಾರಾಕುಂಡವು ನಾಲ್ಕುನೂರು ಮೊಳದ ವಿಸ್ತಾರವಿರುವುದು. ಚೂರಿಯ ಅಲಗಿನಂತಿರುವ ಆಯುಧಗಳಿಂದ ಕೂಡಿರುವುದು. ಪಾಪಿಗಳ ರಕ್ತದಿಂದ ತುಂಬಿ ಅಸಹ್ಯವಾಗಿ ಕಾಣುತ್ತಿರುವುದು. ||೭೪||

ಸೂಚೀಮುಖಾಸ್ತ್ರಸಂಯುಕ್ತಂ ಪಾಪಿರಕ್ತೌಘಪೂರಿತಂ ॥೭೫॥

ಪಂಚಾಶದ್ಧನುರಾಯಾಮಂ ಕ್ಲೇಶದಂ ಚ ಸೂಚೀಮುಖಂ ।
ಕಸ್ಯಚಿಜ್ಜಂತುಭೇದಸ್ಯ ಗೋಕಾಖ್ಯಸ್ಯ ಮುಖಾಕೃತಿ ॥೭೬॥

ಕೂಪರೂಪಂ ಗಭೀರಂ ಚ ಧನುರ್ವಿಂಶಪ್ರಮಾಣಕಂ ।
ಮಹಾಪಾತಕಿನಾಂ ಚೈವ ಮಹಾಕ್ಲೇಶಪ್ರದಂ ಪರಂ ॥೭೭॥

ತತ್ಕೀಟಭಕ್ಷಿತಾನಾಂ ಚ ನಮ್ರಾಸ್ಯಾನಾಂ ಚ ಸಂತತಂ ।
ಕುಂಡಂ ನಕ್ರಮುಖಾಕಾರಂ ಧನುಃ ಷೋಡಶಮಾನಕಂ ॥೭೮॥

ಗಂಭೀರಂ ಕೂಪರೂಪಂ ಚ ಪಾಪಿನಾಂ ಸಂಕುಲಂ ಸದಾ ।
ಧನುಃ ಶತಪ್ರಮಾಣಂ ಚ ಕೀರ್ತಿತಂ ಗಜದಂಶನಂ ॥೭೯॥

ಧನುಸ್ತ್ರಿಂಶತ್ಪ್ರಮಾಣಂ ಚ ಕುಂಡಂ ಚ ಗೋಮುಖಾಕೃತಿ ।
ಪಾಪಿನಾಂ ಕ್ಲೇಶದಂ ಶಶ್ವದ್ಗೋಮುಖಂ ಪರಿಕೀರ್ತಿತಂ ॥೮೦॥

---

ಸೂಚೀಮುಖಕುಂಡವೆಂಬುದು ಸೂಜಿಯ ಮೊನೆಯಂತೆ ಇರುವ ಆಯುಧಗಳಿಂದ ತುಂಬಿ ಇನ್ನೂರುಮೊಳ ವಿಸ್ತಾರವಾಗಿ ಪಾಪಿಗಳ ರಕ್ತದಿಂದ ತುಂಬಿ ಆ ಪಾಪಿಗಳಿಗೆ ದುಃಖವನ್ನು ಕೊಡತಕ್ಕುದಾಗಿರುವುದು. ॥೭೫॥

ಗೋಕಾಮುಖಕುಂಡವು ಗೋಕಾ ಎಂಬ ಒಂದು ಜಂತುಮುಖದ ಆಕಾರವಾಗಿ ಎಂಬತ್ತುಮೊಳ ವಿಸ್ತಾರವಾಗಿ ಆಳವಾದ ಭಾವಿಯಂತಿರುವುದು. ಅದರಲ್ಲಿರುವ ಹುಳುಗಳು ಮಹಾಪಾಪಿಗಳನ್ನು ತಿಂದು ಯಾವಾಗಲೂ ಅವರಿಗೆ ದುಃಖವನ್ನುಂಟುಮಾಡುತ್ತಿರುವುವು. ॥೭೬-೭೭॥

ನಕ್ರಮುಖಾಕಾರ ಕುಂಡವು ಹದಿನಾರು ಧನುಸ್ಸಿನ ವಿಸ್ತಾರವಾಗಿ ಆಳವಾದ ಭಾವಿಯಂತಿರುವುದು. ಮೊಸಳೆಯ ಬಾಯಂತಿರುವ ಅದರಲ್ಲಿ ಪಾಪಿಗಳು ತುಂಬಿರುವರು. ॥೭೮॥

ಗಜದಂಶಕುಂಡವು ನೂರುಧನುಸ್ಸಿನ ಅಂದರೆ ನಾಲ್ಕುನೂರು ಮೊಳ ವಿಸ್ತಾರವಾಗಿ ಪಾಪಿಗಳಿಂದ ತುಂಬಿರುವುದು. ಗೋಮುಖಾಕಾರಕುಂಡವು ಹಸುವಿನ ಮುಖದ ಆಕಾರವಾಗಿ ಮೂವತ್ತು ಧನುಸ್ಸಿನ ವಿಸ್ತಾರವಾಗಿರುವುದು. ಇದು ಬಾರಿಬಾರಿಗೂ ಪಾಪಿಗಳಿಗೆ ನೋವನ್ನುಂಟುಮಾಡುವುದು. ॥೭೯-೮೦॥

ಕಾಲಚಕ್ರೇಣಸಂಯುಕ್ತಂ ಭ್ರಮಮಾಣಂ ಭಯಾನಕಂ ।
ಕುಭಾಕಾರಂ ಧ್ವಾಂತಯುಕ್ತಂ ದ್ವಿಗವ್ಯೂತಿಪ್ರಮಾಣಕಂ ॥೮೧॥

ಲಕ್ಷಪೌರುಷಮಾನಂ ಚ ಗಂಭೀರಂ ವಿಸ್ತೃತಂ ಸತಿ ।
ಕುತ್ರಚಿತ್ತಪ್ತತೈಲಂ ಚ ತಾಮ್ರಾದಿಕುಂಡಮೇವ ಚ ॥೮೨॥

ಪಾಪಿನಾಂ ಚ ಪ್ರಧಾನೈಶ್ಚ ಮೂರ್ಛಿತೈಃ ಕೃಮಿಭಿರ್ಯುತಂ ।
ಪರಸ್ಪರಂ ಚ ನಶ್ಯದ್ಭಿಃ ಶಬ್ದಕೃದ್ಭಿಶ್ಚ ಸಂತತಂ ॥೮೩॥

ತಾಡಿತೈರ್ಯಮದೂತೈಶ್ಚ ಮುಸಲೈರ್ಮುದ್ಗರೈಸ್ತಥಾ ।
ಘೂರ್ಣಮಾನೈಃ ಪತದ್ಭಿಶ್ಚ ಮೂರ್ಛಿತೈಶ್ಚ ಕ್ಷಣಂ ಕ್ಷಣಂ ॥೮೪॥

ಪಾತಿತೈರ್ಯಮದೂತೈಶ್ಚ ರುದಂತ್ಯಸ್ಮಾತ್ಕ್ಷಣಂ ಪುನಃ ।
ಯಾವಂತಃ ಪಾಪಿನಃ ಸಂತಿ ಸರ್ವಕುಂಡೇಷು ಸುಂದರಿ ॥೮೫॥

ತತಶ್ಚತುರ್ಗುಣಾಃ ಸಂತಿ ಕುಂಭೀಪಾಕೇ ಚ ದುಃಖದೇ ।
ಸುಚಿರಂ ವಧ್ಯಮಾನಾಸ್ತೇ ಭೋಗದೇಹಾ ನ ನಶ್ವರಾಃ ॥೮೬॥

---

ಕುಂಭೀಪಾಕವೆಂಬ ನರಕವು ಕಾಲಾಕಾರವಾದ ಭಯಂಕರ ಚಕ್ರದಿಂದ ಕೂಡಿ ಸುತ್ತುತ್ತಿರುವುದು. ಇದು ನಾಲ್ಕು ಹರಿದಾರಿಯ ವಿಸ್ತಾರವಾಗಿ ಕುಂಭಾಕಾರವಾಗಿ ಕತ್ತಲೆಯಿಂದ ಕೂಡಿ ಲಕ್ಷಪುರುಷಪ್ರಮಾಣ ಆಳವಾಗಿರುವುದು. ಇದರಲ್ಲಿ ತಪ್ತತೈಲ ಕುಂಡವೂ ತಾಮ್ರಾದಿಕುಂಡಗಳೂ ಇರುವುವು. ದೊಡ್ಡ ದೊಡ್ಡ ಪಾಪಮಾಡಿದವರೂ ಕ್ರೂರವಾದ ಕೃಮಿಗಳೂ ಇರುವುವು. ಇಲ್ಲಿ ಒಬ್ಬರಿಂದೊಬ್ಬರು ನಾಶವಾಗುತ್ತಾ ಯಾವಾಗಲೂ ಕೂಗಿಕೊಳ್ಳುತ್ತಾ ಇರುವರು. ಯಮದೂತರು ಪಾಪಿಗಳನ್ನು ಮುಸಲ ಮುದ್ಗರ ಮುಂತಾದ ಆಯುಧಗಳಿಂದ ಹೊಡೆಯುವರು. ಆ ಜೀವರು ತಲೆತಿರುಗಿ ಮೂರ್ಛಿತರಾಗಿ ಬೀಳುವರು, ಮತ್ತು ಅಳುವರು. ಸುಂದರಿಯಾದ ಸಾವಿತ್ರಿಯೇ, ಸಮಸ್ತ ನರಕಗಳಲ್ಲಿಯೂ ಎಷ್ಟು ಪಾಪಿಗಳಿರುವರೋ ಈ ದುಃಖಕರವಾದ ಕುಂಭೀ ಪಾಕದಲ್ಲಿ ಅದರ ನಾಲ್ಕರಷ್ಟಿರುವರು. ಬಹಳಕಾಲ ಆ ಪಾಪಿ ಜೀವರುಗಳನ್ನು ಕೊಲ್ಲುತ್ತಿದ್ದರೂ ಅವರ ದೇಹಗಳು ನಾಶವಾಗತಕ್ಕುವಲ್ಲವಾದುದರಿಂದ ನರಕದುಃಖವನ್ನನುಭವಿಸುತ್ತಿರುವರು. ಸಮಸ್ತ ನರಕಗಳಿಗಿಂತಲೂ ಈ ಕುಂಭೀಪಾಕವು ದೊಡ್ಡದಾಗಿಯೂ ಮುಖ್ಯವಾದುದಾಗಿಯೂ ಇರುವುದು. ॥೮೧-೮೨-೮೩-೮೪-೮೫-೮೬॥

ಸರ್ವ ಕುಂಡಪ್ರಧಾನಂ ಚ ಕುಂಭೀಪಾಕಂ ಪ್ರಕೀರ್ತಿತಂ ।
ಕಾಲನಿರ್ಮಿತಸೂತ್ರೇಣ ನಿಬದ್ಧಾ ಯತ್ರ ಪಾಪಿನಃ ॥೮೭॥

ಉತ್ಥಾಪಿತಾಶ್ಚ ದೂತೈಶ್ಚ ಕ್ಷಣಮೇವ ನಿಮಜ್ಜಿತಾಃ ।
ನಿಶ್ವಾಸಬದ್ಧಾಃ ಸುಚಿರಂ ತಥಾ ಮೋಹಂ ಗತಾಃ ಪುನಃ ॥೮೮॥

ಅತೀವಕ್ಲೇಶಸಂಯುಕ್ತಾ ದೇಹಭೋಗೇನ ಸುಂದರಿ ।
ಪ್ರತಪ್ತತೋಯಯುಕ್ತಂ ಚ ಕಾಲಸೂತ್ರಂ ಪ್ರಕೀರ್ತಿತಂ ॥೮೯॥

ಅವಟಃ ಕೂಪಭೇದಶ್ಚ ಮತ್ಸ್ಯೋದಃ ಸ ಉದಾಹೃತಃ ।
ಪ್ರತಪ್ತತೋಯಪೂರ್ಣಂ ಚ ಚತುರ್ವಿಂಶತ್ಪ್ರಮಾಣಕಂ ॥೯೦॥

ವ್ಯಾಪ್ತಂ ಮಹಾಪಾತಕಿಭಿರ್ವ್ಯಾಧಿಗ್ರಸ್ತಾಂಗೈಶ್ಚ ಸಂತತಂ ।
ಮದ್ದೂತೈಸ್ತಾಡಿತೈಃ ಶಶ್ವದವಟೋದಂ ಪ್ರಕೀರ್ತಿತಂ ॥೯೧॥

ಯತ್ರೋದಸ್ಪರ್ಶಮಾತ್ರೇಣ ಸರ್ವವ್ಯಾಧಿಶ್ಚ ಪಾಪಿನಾಂ ।
ಭವೇದಕಸ್ಮಾತ್ಪತತಾಂ ಯಸ್ಮಿನ್ಕುಂಡೇ ಧನುಶ್ಶತೇ ॥೯೨॥

---

ಯಮನಿಂದ ನಿರ್ಮಿತವಾದ ಕಠಿನವಾದ ನಿಯಮದಿಂದ ಪಾಪಿಗಳು ಬದ್ಧರಾಗಿರುವುದರಿಂದ ದೂತರು ಅವರನ್ನು ಎತ್ತಿ ಉತ್ತರಕ್ಷಣದಲ್ಲಿಯೇ ಮುಳುಗಿಸಿ ಉಸಿರುಕಟ್ಟುವಂತೆ ಮಾಡಿ ಮೂರ್ಛೆಗೊಳಿಸಿ ಅವರ ದೇಹಕ್ಕೆ ವಿಶೇಷ ಹಿಂಸೆಯನ್ನುಂಟುಮಾಡುವರು. ಅದರಲ್ಲಿ ಬಿಸಿಯಾದ ನೀರು ತುಂಬಿರುವುದು. ಇದೇ ಕಾಲಸೂತ್ರವೆಂಬುವುದು. ॥೮೭-೮೮-೮೯॥

ಮತ್ಸ್ಯೋದಕುಂಡವೆಂಬುದು ಇಪ್ಪತ್ತುನಾಲ್ಕು ಧನುಸ್ಸಿನ ವಿಸ್ತಾರವೂ ನೂರು ಧನುಸ್ಸಿನ ಆಳವೂ ಉಳ್ಳ ಒಂದು ಭಾವಿಯು. ಅದರಲ್ಲಿ ಬಿಸಿನೀರು ತುಂಬಿರುವುದು. ಮಹಾಪಾಪಿಗಳು ಅದರಲ್ಲಿ ತುಂಬಿರುವರು. ಅಲ್ಲಿ ಅವರ ಶರೀರವು ಸುಡುತ್ತಿರುವುದು. ನನ್ನ ದೂತರು ಅವರನ್ನು ಬಾರಿಬಾರಿಗೂ ಹೊಡೆಯುತ್ತಾ ಇರುವರು. ಅಕಸ್ಮಾತ್ತಾಗಿ ಆ ನರಕಕ್ಕೆ ಹೋಗುವ ಪ್ರಾಣಿಗಳು ಅಲ್ಲಿರುವ ನೀರನ್ನು ಮುಟ್ಟಿದ ಮಾತ್ರದಿಂದ ಅವರಿಗೆ ಸಮಸ್ತರೋಗಗಳೂ ಬಂದು ಬಿಡುವುವು. ॥೯೦-೯೧-೯೨॥

ಅರುಂತುದೈರ್ಭಕ್ಷಿತೈಸ್ತು ಪ್ರಾಣಿಭಿರ್ಯಚ್ಚ ಸಂಕುಲಂ ।
ಹಾಹೇತಿ ಶಬ್ದಂ ಕುರ್ವದ್ಭಿಸ್ತದೇವಾರುಂತುದಂ ವಿದುಃ ॥೯೩॥

ತಪ್ತಪಾಂಸುಭಿರಾಕೀರ್ಣಂ ಜ್ವಲದ್ಭಿಸ್ತುಷದಗ್ಧಕೈಃ ।
ತದ್ಭಕ್ಷೈಃ ಪಾಪಿಭಿರ್ಯುಕ್ತಂ ಪಾಂಸುಭೋಜ್ಯೈರ್ಧನುಶ್ಶತಂ ॥೯೪॥

ಪಾತಮಾತ್ರೇಣ ಪಾಪೀ ಚ ಪಾಶೇನ ವೇಷ್ಟಿತೋ ಭವೇತ್ ।
ಕ್ರೋಶಮಾತ್ರೇಣ ಕುಂಡಂ ಚ ತತ್ಪಾಶವೇಷ್ಟನಂ ವಿದುಃ ॥೯೫॥

ಪಾತಮಾತ್ರೇಣ ಪಾಪೀ ಚ ಶೂಲೇನ ವೇಷ್ಟಿತೋ ಭವೇತ್ ।
ಧನುರ್ವಿಂಶತ್ಪ್ರಮಾಣಂ ಚ ಶೂಲಪ್ರೋತಂ ಪ್ರಕೀರ್ತಿತಂ ॥೯೬॥

ಪತತಾಂ ಪಾಪಿನಾಂ ಯತ್ರ ಭವೇದೇವ ಪ್ರಕಂಪನಂ ।
ಅತೀವ ಹಿಮತೋಯಾಕ್ತಂ ಕ್ರೋಶಾರ್ಧಂ ಚ ಪ್ರಕಂಪನಂ ॥೯೭॥

---

ಕೃಮಿಕಂತುಕವೆಂಬ ನರಕದಲ್ಲಿ ಗಾಯವನ್ನು ನೋಯಿಸುವ ಪ್ರಾಣಿಗಳು ಪಾಪಿಗಳ ದೇಹವನ್ನು ತಿನ್ನುವುದರಿಂದ ಅವರು ಹಾ ಎಂದು ಕೂಗಿಕೊಳ್ಳುವರು. ಇದೇ ಅರುಂತುದವೆಂಬ ನರಕವು. ॥೯೩॥

ಪಾಂಸುಭೋಜ್ಯಕುಂಡವು ನೂರುಧನುಸ್ಸಿನ ವಿಸ್ತಾರವುಳ್ಳದಾಗಿ ಹೊಟ್ಟಿನಂತೆ ಸುಟ್ಟು ಉರಿಯುತ್ತಿರುವ ಧೂಳಿನಿಂದ ತುಂಬಿರುವುದು. ಅಲ್ಲಿರುವ ಪಾಪಿಗಳು ಆ ಧೂಳನ್ನೇ ತಿನ್ನುವರು. ॥೯೪॥

ಪಾಶವೇಷ್ಟನ ಕುಂಡವೆಂಬುದು ಒಂದು ಹರಿದಾರಿ ವಿಸ್ತಾರವಾದುದು. ಪಾಪಿಗಳು ಅದರಲ್ಲಿ ಬಿದ್ದಕೂಡಲೇ ಪಾಶವು ಅವರನ್ನು ಸುತ್ತಿಕೊಳ್ಳುವುದು. ॥೯೫॥ ಶೂಲಪ್ರೋತಕುಂಡವು ಇಪ್ಪತ್ತು ಧನುಸ್ಸಿನ (ಎಂಭತ್ತು ಮೊಳ) ವಿಸ್ತಾರವಾಗಿರುವುದು. ಪಾಪಿಯು ಅದರಲ್ಲಿ ಬಿದ್ದಕೂಡಲೇ ಶೂಲಾಯುಧವು ಅವನನ್ನು ಸುತ್ತಿಕೊಳ್ಳುವುದು. ॥೯೬॥

ಪ್ರಕಂಪನವೆಂಬ ಕುಂಡವು ಅರ್ಧಹರಿದಾರಿ ಆಳತೆಯುಳ್ಳದು. ವಿಶೇಷವಾದ ಹಿಮದ ನೀರಿನಿಂದ ತುಂಬಿರುವುದು ಪಾಪಿಗಳು ಅದರಲ್ಲಿ ಬಿದ್ದಕೂಡಲೇ ಅವರಿಗೆ ನಡುಕವುಂಟಾಗುವುದು. ॥೯೭॥

ದದತ್ಯೇವ ಹಿ ಮೇ ದೂತಾ ಯತ್ರೋಲ್ಕಾಃ ಪಾಪಿನಾಂ ಮುಖೇ ।
ಧನುರ್ವಿಂಶತ್ಪ್ರಮಾಣಂ ತದುಲ್ಕಾಭಿಶ್ಚ ಸುಸಂಕುಲಂ ॥೯೮॥

ಲಕ್ಷಪೌರುಷಮಾನಂ ಚ ಗಂಭೀರಂ ಚ ಧನುಶ್ಶತಂ ।
ನಾನಾಪ್ರಕಾರಕ್ರಿಮಿಭಿಃ ಸಂಯುಕ್ತಂ ಚ ಭಯಾನಕಂ ॥೯೯॥

ಅತ್ಯಂಧಕಾರವ್ಯಾಪ್ತಂ ಚ ಕೂಪಾಕಾರಂ ಚ ವರ್ತುಲಂ ।
ತದ್ಭಕ್ಷ್ಯೈಃ ಪಾಪಿಭಿರ್ಯುಕ್ತಂ ಪ್ರಣಶ್ಯದ್ಭಿಃ ಪರಸ್ಪರಂ ॥೧೦೦॥

ತಪ್ತತೋಯಪ್ರದಗ್ಧೈಶ್ಚ ಜ್ವಲದ್ಭಿಃ ಕೀಟಭಕ್ಷಿತೈಃ ।
ಧ್ವಾಂತೇನ ಚಕ್ಷುಷಾ ಚಾಂಧೈರಂಧಕೂಪಂ ಪ್ರಕೀರ್ತಿತಂ ॥೧೦೧॥

ನಾನಾಪ್ರಕಾರಶಸ್ತ್ರೌಘೈರ್ಯತ್ರ ವಿದ್ಧಾಶ್ಚ ಪಾಪಿನಃ ।
ಧನುರ್ವಿಂಶತ್ಪ್ರಮಾಣಂ ಚ ವೇಧನಂ ತತ್ಪ್ರಕೀರ್ತಿತಂ ॥೧೦೨॥

ದಂಡೇನ ತಾಡಿತಾ ಯತ್ರ ಯಮದೂತೈಶ್ಚ ಪಾಪಿನಃ ।
ಧನುಷ್ಷೋಡಶಮಾನಂ ಚ ತತ್ಕುಂಡಂ ದಂಡತಾಡನಂ ॥೧೦೩॥

---

ಉಲ್ಕಾಮುಖಕುಂಡವು ಇಪ್ಪತ್ತು ಧನುಸ್ಸಿನ ವಿಸ್ತಾರವುಳ್ಳದು. ಅದು ಕೊಳ್ಳಿಗಳಿಂದ ತುಂಬಿರುವುದು. ಅಲ್ಲಿ ನನ್ನ ದೂತರು ಪಾಪಿಗಳ ಬಾಯಿಗೆ ಕೊಳ್ಳಿಯನ್ನು ತುರುಕುತ್ತಿರುವರು. ॥೯೮॥

ಅಂಧಕೂಪವೆಂಬುದು ನೂರು ಧನುಸ್ಸಿನ ವಿಸ್ತಾರವೂ ಲಕ್ಷಪುರುಷಪ್ರಮಾಣವೂ ಇರುವ ಗುಂಡಾದ ಭಾವಿಯಂತಿರುವ ಹೆಚ್ಚು ಕತ್ತಲೆಯಿಂದ ಭಯಂಕರವಾದ ಬಗೆಬಗೆಯ ಕ್ರಿಮಿಗಳಿಂದ ತುಂಬಿದ ಒಂದು ಗುಂಡಿಯು. ಅಲ್ಲಿರುವ ಪಾಪಿಗಳು ಕತ್ತಲೆಯಿಂದ ಕಣ್ಣುಕಾಣದೆ ಒಬ್ಬರನ್ನೊಬ್ಬರು ಹೊಡೆದು ನಾಶವಾಗುವರು. ಅಲ್ಲಿರುವ ಬಿಸಿನೀರಿನಿಂದ ಮೈಯೆಲ್ಲವೂ ಸುಟ್ಟುಹೋಗಲು ಕ್ರಿಮಿಗಳು ಅವರ ಮೈಯನ್ನು ತಿನ್ನುವುವು. ॥೯೯-೧೦೦-೧೦೧॥

ವೇಧನ ಕುಂಡವು ಇಪ್ಪತ್ತು ಧನುಸ್ಸಿನ ವಿಸ್ತಾರವುಳ್ಳದಾಗಿರುವುದು. ಬಗೆಬಗೆಯ ಶಸ್ತ್ರಗಳು ಪಾಪಿಗಳನ್ನು ಅಲ್ಲಿ ಗಾಯಗೊಳಿಸುವುವು. ॥೧೦೨॥

ದಂಡತಾಡನವೆಂಬುದು ಹದಿನಾರು ಧನುಸ್ಸಿನ ವಿಸ್ತಾರವಾಗಿರುವುದು. ಅಲ್ಲಿ ನನ್ನ ದೂತರು ಪಾಪಿಗಳನ್ನು ದೊಣ್ಣೆಯಿಂದ ಹೊಡೆಯುತ್ತಿರುವರು. ॥೧೦೩॥

ನಿರುದ್ಧಾಶ್ಚ ಮಹಾಜಾಲೈರ್ಯಥಾ ಮೀನಾಶ್ಚ ಪಾಪಿನಃ ।
ಧನುರ್ವಿಂಶತ್ಪ್ರಮಾಣಂ ಚ ಜಾಲರಂಧ್ರಂ ಪ್ರಕೀರ್ತಿತಂ ॥೧೦೪॥

ಪತತಾಂ ಪಾಪಿನಾಂ ಕುಂಡೇ ದೇಹಚೂರ್ಣೋ ಭವೇದಿಹ ।
ಲೋಹಬಂದೀ-ನಿಬದ್ಧಾನಾಂ ಕೋಟಿಪೌರುಷಮಾನಕಂ ॥೧೦೫॥

ಗಂಭೀರಂ ಧ್ವಾಂತಸಂಯುಕ್ತಂ ಧನುರ್ವಿಂಶತ್ಪ್ರಮಾಣಕಂ ।
ಮೂರ್ಛಿತಾನಾಂ ಜಡಾನಾಂ ಚ ದೇಹಚೂರ್ಣಂ ಪ್ರಕೀರ್ತಿತಂ ॥೧೦೬॥

ದಲಿತಾಃ ಪಾಪಿನೋ ಯತ್ರ ಯಮದೂತೈಶ್ಚ ತಾಡಿತಾಃ ।
ಧನುಷ್ಷೋಡಶಮಾನಂ ಚ ತತ್ಕುಂಡಂ ದಲನಂ ಸ್ಮೃತಂ ॥೧೦೭॥

ಪತನೇನೈವ ಪಾಪೀ ಚ ಶುಷ್ಕಕಂಠೋಷ್ಠತಾಲುಕಃ ।
ವಾಲುಕಾಸು ಚ ತಪ್ತಾಸು ಧನುಸ್ತ್ರಿಂಶತ್ಪ್ರಮಾಣಕಂ ॥೧೦೮॥

ಶತಪೌರುಷಮಾನಂ ಚ ಗಂಭೀರಂ ಧ್ವಾಂತಸಂಯುತಂ ।
ಶೋಷಣಂ ಕುಂಡಮೇತದ್ಧಿ ಪಾಪಿನಾಂ ಪರದುಃಖದಂ ॥೧೦೯॥

---

ಜಾಲರಂಧ್ರವೆಂಬುದು ಇಪ್ಪತ್ತು ಧನುಸ್ಸಿನ ವಿಸ್ತಾರವಾದುದಾಗಿರುವುದು. ಅಲ್ಲಿ ಪಾಪಿಗಳು, ಮೀನುಗಳು ಬಲೆಯಲ್ಲಿ ಹೇಗೋ ಹಾಗೆ, ಸಿಕ್ಕಿಕೊಂಡಿರುವರು. ॥೧೦೪॥

ದೇಹಚೂರ್ಣವೆಂಬಕುಂಡವು ಇಪ್ಪತ್ತು ಧನುಸ್ಸಿನ ವಿಸ್ತಾರವಾಗಿ ಅನೇಕ ಪುರುಷ ಪ್ರಮಾಣ ಆಳವಾಗಿ ಕತ್ತಲೆಯಿಂದ ತುಂಬಿರುವುದು. ಕಬ್ಬಿಣದ ಬೇಡಿಗಳಿಂದ ಕಟ್ಟಿದ ಪಾಪಿಗಳು ಇದರಲ್ಲಿ ಬಿದ್ದರೆ ಮೂರ್ಛೆಹೊಂದುವರು. ಇಲ್ಲಿ ಅವರ ದೇಹವು ಚೂರ್ಣದಂತೆ ಪುಡಿಯಾಗುವುದು. ಆದರಿಂದ ಈ ನರಕಕ್ಕೆ ದೇಹಚೂರ್ಣವೆಂದು ಹೆಸರು ಬಂದಿರುವುದು. ॥೧೦೫-೧೦೬॥

ದಲನಕುಂಡವೆಂಬುದು ಹದಿನಾರು ಧನುಸ್ಸಿನ ಪ್ರಮಾಣವುಳ್ಳದು. ಇಲ್ಲಿಯ ಯಮದೂತರು ಪಾಪಿಗಳನ್ನು ಹೊಡೆದು ಸೀಳುವುದರಿಂದ ಈ ನರಕಕ್ಕೆ ದಲನಕುಂಡವೆಂದು ಹೆಸರಾಗಿರುವುದು. ॥೧೦೭॥

ಶೋಷಣಕುಂಡವೆಂಬುದು ಮೂವತ್ತು ಧನುಸ್ಸಿನ ವಿಸ್ತಾರವುಳ್ಳದಾಗಿರುವುದು. ಅದರಲ್ಲಿ ಕಾಯಿಸಿದ ಮರಳು ತುಂಬಿರುವುದು. ಪಾಪಿಗಳು ಅದರಲ್ಲಿ ಬೀಳುತ್ತಿದ್ದ ಹಾಗೆಯೇ ಅವರ ಗಂಟಲು, ತುಟಿ, ದವಡೆಗಳು ಒಣಗಿಹೋಗುವುದರಿಂದ ದುಃಖಕರವಾದ ಈ ನರಕಕ್ಕೆ ಶೋಷಣಕುಂಡವೆಂದು ಹೆಸರಿರುವುದು.॥೧೦೮-೧೦೯॥

ನಾನಾಚರ್ಮಕಷಾಯೋದಪರಿಪೂರ್ಣಂ ಧನುಶ್ಶತಂ ।
ದುರ್ಗಂಧಿಯುಕ್ತಂ ತದ್ಭಕ್ಷ್ಯೈಃ ಪ್ರಾಣಿಭಿಃ ಸಂಕುಲಂ ಕಷಂ ॥೧೧೦॥

ಶೂರ್ಪಾಕಾರಮುಖಂ ಕುಂಡಂ ಧನುರ್ದ್ವಾದಶಮಾನಕಂ ।
ತಪ್ತಲೋಹವಾಲುಕಾಭಿಃ ಪೂರ್ಣಂ ಪಾತಕಿಸಂಯುತಂ ॥೧೧೧॥

ದುರ್ಗಂಧಿಯುಕ್ತಂ ತದ್ಭಕ್ಷ್ಯೈಃ ಪಾಪಿಭಿಃ ಸಂಕುಲಂ ಸತಿ ।
ಶೂರ್ಪಾಕಾರಮುಖಂ ಕುಂಡಂ ಧನುರ್ದ್ವಾದಶಮಾತ್ರಕಂ ॥೧೧೨॥

ಪ್ರತಪ್ತವಾಲುಕಾಪೂರ್ಣಂ ಮಹಾಪಾತಕಿಭಿರ್ಯುತಂ ।
ಅಂತರಗ್ನಿಶಿಖಾನಾಂ ಚ ಜ್ವಾಲಾವ್ಯಾಪ್ತಮುಖಂ ಸದಾ ॥೧೧೩॥

ಧನುರ್ವಿಂಶತಿಮಾತ್ರಂ ಚ ಪ್ರಮಾಣಂ ಯಸ್ಯ ಸುಂದರಿ ।
ಜ್ವಾಲಾಭಿರ್ದಗ್ಧಗಾತ್ರೈಶ್ಚ ಪಾಪಿಭಿರ್ವ್ಯಾಪ್ತಮೇವ ಚ ॥೧೧೪॥

ತನ್ಮಹಾಕ್ಲೇಶದಂ ಶಶ್ವತ್ಕುಂಡಂ ಜ್ವಾಲಾಮುಖಂ ಸ್ಮೃತಂ ।
ಪಾತಮಾತ್ರಾದ್ಯತ್ರ ಪಾಪೀ ಮೂರ್ಛಿತೋ ವೈ ನರೋ ಭವೇತ್ ॥೧೧೫॥

---

ಕಷಕುಂಡವೆಂಬುದು ನೂರು ಧನುಸ್ಸಿನ ವಿಸ್ತಾರವುಳ್ಳದ್ದಾಗಿ ಕೆಟ್ಟವಾಸನೆಯಿಂದ ಕೂಡಿದ ಬಗೆಬಗೆಯ ಚರ್ಮಗಳ ಕಷಾಯದ ನೀರಿನಿಂದ ತುಂಬಿರುವುದು. ಅಲ್ಲಿ ಪಾಪಿಗಳು ಆ ನೀರನ್ನೇ ಕುಡಿಯುತ್ತಿರುವರು. ॥೧೧೦॥

ಶೂರ್ಪಕುಂಡವೆಂಬುದು ಹನ್ನೆರಡು ಧನುಸ್ಸಿನ ವಿಸ್ತಾರವುಳ್ಳುದಾಗಿರುವುದು. ಕಾಯಿಸಿದ ಕಬ್ಬಿಣ, ಮರಳು, ಇವುಗಳಿಂದ ತುಂಬಿರುವುದು. ಕೆಟ್ಟವಾಸನೆಯುಳ್ಳದ್ದಾಗಿರುವುದು. ಪಾಪಿಗಳು ಅದನ್ನೇ ತಿನ್ನುವರು. ಅದು ಮೊರದ ಆಕಾರವಾಗಿರುವುದರಿಂದ ಈ ಹೆಸರು ಬಂದಿರುವುದು. ॥೧೧೧-೧೧೨॥

ಜ್ವಾಲಾಮುಖಕುಂಡವೆಂಬುದು ಇಪ್ಪತ್ತು ಧನುಸ್ಸಿನ ವಿಸ್ತಾರವಾಗಿ ಕಾಯಿಸಿದ ಮರಳಿನಿಂದ ತುಂಬಿರುವುದು. ಅದರೊಳಗಿರುವ ಬೆಂಕಿಯ ಜ್ವಾಲೆಗಳು ಅದರ ಬಾಯಲ್ಲಿ ವ್ಯಾಪಿಸಿರುವುವು. ಆ ಉರಿಯಿಂದ ಸುಟ್ಟುಹೋದ ಶರೀರ ಉಳ್ಳವರಾದ ಪಾಪಿಗಳು ಅದರಲ್ಲಿ ಬಿದ್ದ ಕ್ಷಣದಲ್ಲಿಯೇ ಮೂರ್ಛೆಹೊಂದುವರು. ಈ ನರಕವು ಮಹಾದುಃಖಕರವಾದುದು. ॥೧೧೩-೧೧೪-೧೧೫॥

ತಪ್ತೇಷ್ಟಕಾಭ್ಯಂತರಿತಂ ನಾಪ್ಯರ್ಧಂ ಚಿನ್ಹಕುಂಡಕಂ ।
ಧೂಮ್ರಾಂಧಕಾರಸಂಯುಕ್ತಂ ಧೂಮ್ರಾಂಧೈಃ ಪಾಪಿಭಿರ್ಯುತಂ ॥೧೧೬॥

ಧನುಶ್ಶತಂ ಶ್ವಾಸರಂಧ್ರೈರ್ಧೂರ್ಮ್ರಾಂಧಂ ಪರಿಕೀರ್ತಿತಂ ।
ಪಾತಮಾತ್ರಾದ್ಯತ್ರ ಪಾಪೀ ನಾಗೈಶ್ಚ ವೇಷ್ಟಿತೋ ಭವೇತ್ ॥೧೧೭॥

ಧನುಶ್ಶತಂ ನಾಗಪೂರ್ಣಂ ತನ್ನಾಗೈರ್ವೇಷ್ಟಿತಂ ಭವೇತ್ ।
ಷಡಶೀತಿ ಚ ಕುಂಡಾನಿ ಮಯೋಕ್ತಾನಿ ನಿಶಾಮಯ ॥೧೧೮॥
ಲಕ್ಷಣಂ ಚಾಪಿ ತೇಷಾಂ ಚ ಕಿಂ ಭೂಯಃ ಶ್ರೋತುಮಿಚ್ಛಸಿ ।

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ನವಮಸ್ಕಂಧೇ
ಸಪ್ತತ್ರಿಂಶೋಽಧ್ಯಾಯಃ

---

ಧೂಮ್ರಾಂಧಕುಂಡವು ನೂರು ಧನುಸ್ಸಿನ ವಿಸ್ತಾರವಾಗಿ ಭಾವಿಯ ಅರ್ಧ ಪ್ರಮಾಣದಲ್ಲಿ ಕಾಯಿಸಿದ ಇಟ್ಟಿಗೆಗಳ ನಡುವೆ ವಕ್ರವಾಗಿರುವುದು. ಹೊಗೆಯ ಕತ್ತಲೆಯು ಅಲ್ಲಿ ತುಂಬಿಕೊಂಡಿರುವುದು. ಆ ಹೊಗೆಯಿಂದ ಕಣ್ಣುಕಾಣದೆ ಪಾಪಿಗಳು ಅಲ್ಲಿ ತುಂಬಿಕೊಂಡಿರುವರು. ॥೧೧೬॥

ನಾಗವೇಷ್ಟನ ಕುಂಡವು ನೂರು ಧನುಸ್ಸಿನ ವಿಸ್ತಾರವುಳ್ಳದು. ಸರ್ಪಗಳಿಂದ ತುಂಬಿರುವುದು. ಪಾಪಿಗಳು ಅದರಲ್ಲಿ ಬಿದ್ದಕೂಡಲೇ ಸರ್ಪಗಳು ಅವರನ್ನು ಸುತ್ತಿಕೊಳ್ಳುವುವು. ಅದರಿಂದ ಇದಕ್ಕೆ ನಾಗವೇಷ್ಟನವೆಂದು ಹೆಸರು. ॥೧೧೭॥

ಸಾವಿತ್ರಿಯೇ, ಎಂಭತ್ತಾರು ನರಕಕುಂಡಗಳ ಲಕ್ಷಣಗಳನ್ನೂ ಹೇಳಿರುವೆನು. ಇನ್ನೇನನ್ನು ಕೇಳಬೇಕೆಂದು ನಿನಗಿಷ್ಟವಿರುವುದು ? ॥೧೧೮॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಒಂಬತ್ತನೆಯ ಸ್ಕಂಧದಲ್ಲಿ
ಮೂವತ್ತೇಳನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ನವಮಸ್ಕಂಧೇ

### || ಅಷ್ಟತ್ರಿಂಶೋಽಧ್ಯಾಯಃ ||

### ಮೂವತ್ತೆಂಟನೆಯ ಅಧ್ಯಾಯವು

|| ಸಾವಿತ್ರ್ಯುವಾಚ ||

**ದೇವೀಭಕ್ತಿಂ ದೇಹಿ ಮಹ್ಯಂ ಸಾರಾಣಾಂ ಚೈವ ಸಾರಕಂ ।**
**ಪುಂಸಾಂ ಮುಕ್ತಿದ್ವಾರಬೀಜಂ ನರಕಾರ್ಣವತಾರಕಂ ||೧||**

**ಕಾರಣಂ ಮುಕ್ತಿಸಾರಾಣಾಂ ಸರ್ವಾಶುಭವಿನಾಶನಂ ।**
**ದಾರಕಂ ಕರ್ಮವೃಕ್ಷಾಣಾಂ ಕೃತಪಾಪೌಘಹಾರಕಂ ||೨||**

---

ಹಿಂದಿನ ಅಧ್ಯಾಯದಲ್ಲಿ ಬಗೆಬಗೆಯ ನೋವುಗಳನ್ನು ಕೊಡುವ ನರಕ ಕುಂಡಗಳ ವರ್ಣನೆಯನ್ನು ಕೇಳಿ, ಸಾವಿತ್ರೀದೇವಿಯು ಭಕ್ತಿಯಿಂದ ಈ ಸಮಸ್ತ ಭಯವೂ ನಾಶವಾಗುವುದೆಂದು ಹೇಳಿದ್ದ ಧರ್ಮರಾಜನ ಮಾತನ್ನು ಜ್ಞಾಪಿಸಿ ಕೊಂಡು, ಯಾವ ಭಕ್ತಿಯಿಂದ ಸಕಲ ದುಃಖಗಳೂ ನಾಶವಾಗುವುವೋ ಆ ಭಕ್ತಿಯು ಗುರುವಿನ ಅನುಗ್ರಹವಿಲ್ಲದೆ ಬರುವುದಿಲ್ಲವೆಂಬ ಅಭಿಪ್ರಾಯದಿಂದ ಗುರುವಾದ ಧರ್ಮ ರಾಜನನ್ನು ಕುರಿತು ದೇವೀಭಕ್ತಿಯನ್ನು ಯಾಚಿಸುವಳು.

ಎಲೈ ಧರ್ಮರಾಜನೇ, ಮನುಷ್ಯರಿಗೆ ಮೋಕ್ಷದ ಬಾಗಿಲನ್ನು ತೋರಿಸುವ, ನರಕವೆಂಬ ಸಮುದ್ರವನ್ನು ದಾಟಿಸುವ, ಸಾರವಸ್ತುಗಳಲ್ಲಿ ಅತ್ಯಂತ ಶ್ರೇಷ್ಠವಾದ ದೇವೀಭಕ್ತಿಯನ್ನು ನನಗೆ ಕರುಣಿಸು. ||೧||

ಆ ಭಕ್ತಿಯು ಸಮಸ್ತ ಅಮಂಗಲಗಳನ್ನೂ ನಾಶಮಾಡತಕ್ಕುದು. ಕರ್ಮ ವೆಂಬ ಮರಗಳನ್ನು ಶೀಳತಕ್ಕುದು. ಮಾಡಿದ ಪಾಪಗಳ ಸಮೂಹವನ್ನು ನಾಶಮಾಡ ತಕ್ಕುದು. ಮತ್ತು ಸಾರವಾದ ಮೋಕ್ಷಕ್ಕೆ ಕಾರಣವಾದುದು. ||೨||

ಮುಕ್ತಿಶ್ಚ ಕತಿಧಾಽಸ್ತ್ಯಸ್ತಿ ಕಿಂ ವಾ ತಾಸಾಂ ಚ ಲಕ್ಷಣಂ ।
ದೇವೀಭಕ್ತಿಂ ಭಕ್ತಿಭೇದಂ ನಿಷೇಕಸ್ಯಾಪಿ ಖಂಡನಂ ॥೩॥

ತತ್ತ್ವಜ್ಞಾನವಿಹೀನಾ ಚ ಸ್ತ್ರೀಜಾತಿರ್ವಿಧಿನಿರ್ಮಿತಾ ।
ಕಿಂಚಿತ್ ಜ್ಞಾನಂ ಸಾರಭೂತಂ ವದ ವೇದವಿದಾಂ ವರ ॥೪॥

ಸರ್ವಂ ದಾನಂ ಚ ಯಜ್ಞಶ್ಚ ತೀರ್ಥಸ್ನಾನಂ ವ್ರತಂ ತಪಃ ।
ಅಜ್ಞಾನಿಜ್ಞಾನದಾನಸ್ಯ ಕಲಾಂ ನಾರ್ಹಂತಿ ಷೋಡಶೀಂ ॥೫॥

---

ಮುಕ್ತಿಯು ಎಷ್ಟು ವಿಧವಾಗಿರುವುದು ? ಅವುಗಳ ಲಕ್ಷಣಗಳೇನು ? ದೇವೀ ಭಕ್ತಿಯ ಸ್ವರೂಪವೇನು? ಆ ಭಕ್ತಿಯ ಭೇದಗಳಾವುವು? ನಿಷೇಕವೆಂದರೆ ಮಾಡಿದ ಕರ್ಮಗಳ ಫಲಾನುಭವ (ಇದರ ಲಕ್ಷಣವನ್ನು ಮುಂದೆ ಹೇಳುವರು). ಇದರ ಖಂಡನವೆಂದರೇನು ? ಯಾವುದರಿಂದಾಗುವುದು ? ಇವುಗಳನ್ನೆಲ್ಲವನ್ನೂ ಹೇಳ ಬೇಕು. ॥೩॥

ಪೂರ್ವಜನ್ಮಕರ್ಮಸಂಬಂಧವಾದ ಅದೃಷ್ಟದಿಂದ ಸ್ತ್ರೀಜನ್ಮವು ಬಂದಿರುವುದು. ಸ್ತ್ರೀಯರಿಗೆ ವೇದಾಧ್ಯಯನದಲ್ಲಿ ಅಧಿಕಾರವಿಲ್ಲದುದರಿಂದ ತತ್ತ್ವಜ್ಞಾನಕ್ಕವಕಾಶವಿಲ್ಲದಿರುವುದು. ಹೀಗೆ ಮೂಢಳಾದ ನನಗೆ ಸೂಕ್ಷ್ಮವಾದ ಆತ್ಮತತ್ತ್ವವನ್ನು ತಿಳಿಯುವ ಬುದ್ಧಿಸಾಮರ್ಥ್ಯವೂ ಇಲ್ಲ. ಗುರುವಿನ ಅನುಗ್ರಹದಿಂದ ಸಾರವಾದ ವಿಷಯಗಳನ್ನು ಮೂಢನಾದರೂ ತಿಳಿಯಬಹುದು. ತರ್ಕಾದಿಶಾಸ್ತ್ರಜ್ಞಾನಗಳು ಬುದ್ಧಿವಂತರಿಗೆ ಮಾತ್ರ ಸಾಧ್ಯವಾದುವುಗಳು. ನೀನು ವೇದವನ್ನು ಬಲ್ಲವರಲ್ಲಿ ಶ್ರೇಷ್ಠನಾದುದರಿಂದ ಬಾಲಕನಾದ ನಚೀಕೇತನಿಗೆ ದಯೆಯಿಂದ ಬ್ರಹ್ಮವಿದ್ಯೆಯನ್ನು ಉಪದೇಶಿಸಿರುವೆ. ಇದು ಕಠೋಪನಿಷತ್ತಿನಲ್ಲಿ ಪ್ರಸಿದ್ಧವಾಗಿರುವುದು. ಆದುದರಿಂದ ಗುರುವಾದ ನೀನು ಸಾರವಾದ ಜ್ಞಾನವನ್ನು ನನಗೂ ಉಪದೇಶಿಸು. ॥೪॥

ಸಮಸ್ತವಾದ ದಾನಮಾಡುವುದು, ಯಜ್ಞಮಾಡುವುದು, ತೀರ್ಥಸ್ನಾನ, ವ್ರತ, ತಪಸ್ಸು, ಇವುಗಳನ್ನು ಮಾಡುವುದೂ ಇವುಗಳ ಫಲವು ಅಜ್ಞಾನಿಗೆ ಜ್ಞಾನದಾನಮಾಡುವ ಫಲದ ಹದಿನಾರನೆಯ ಒಂದು ಭಾಗಕ್ಕೂ ಸಮಾನವಾಗಲಾರದು. ॥೫॥

ಪಿತುಃ ಶತಗುಣಾ ಮಾತಾ ಗೌರವೇ ಚೇತಿ ನಿಶ್ಚಿತಂ ।
ಮಾತುಃ ಶತಗುಣಃ ಪೂಜ್ಯೋ ಜ್ಞಾನದಾತಾ ಗುರುಃ ಪ್ರಭೋ ॥೬॥

॥ ಧರ್ಮರಾಜ ಉವಾಚ ॥

ಪೂರ್ವಂ ಸರ್ವೋ ವರೋ ದತ್ತೋ ಯಸ್ತೇ ಮನಸಿ ವಾಂಛಿತಂ ।
ಅಧುನಾ ಶಕ್ತಿಭಕ್ತಿಸ್ತೇ ವತ್ಸೇ ಭವತು ಮದ್ವರಾತ್ ॥೭॥

ಶ್ರೋತುಮಿಚ್ಛಸಿ ಕಲ್ಯಾಣಿ ಶ್ರೀದೇವೀಗುಣಕೀರ್ತನಂ ।
ವಕ್ತ್ರೃಣಾಂ ಪೃಚ್ಛಕಾನಾಂ ಚ ಶ್ರೋತ್ರೃಣಾಂ ಕುಲಕಾರಣಂ ॥೮॥

ಶೇಷೋ ವಕ್ತ್ರಸಹಸ್ರೇಣ ನಹಿ ಯದ್ವಕ್ತುಮೀಶ್ವರಃ ।
ಮೃತ್ಯುಂಜಯೋ ನ ಕ್ಷಮಶ್ಚ ವಕ್ತುಂ ಪಂಚಮುಖೇನ ಚ ॥೯॥

ಧಾತಾ ಚತುರ್ಣಾಂ ವೇದಾನಾಂ ವಿಧಾತಾ ಜಗತಾಮಪಿ ।
ಬ್ರಹ್ಮಾ ಚತುರ್ಮುಖೇನೈವ ನಾಲಂ ವಿಷ್ಣುಶ್ಚ ಸರ್ವವಿತ್ ॥೧೦॥

---

ತಂದೆಗೆ ನೂರರಷ್ಟು ತಾಯಿಯಲ್ಲಿ ಗೌರವವಿರುವುದು ಲೋಕಪ್ರಸಿದ್ಧವಾದುದು. ಆ ತಾಯಿಗಿಂತಲೂ ಜ್ಞಾನೋಪದೇಶಮಾಡಿದ ಗುರುವು ನೂರರಷ್ಟು ಪೂಜ್ಯನಾದವನು. ಆದುದರಿಂದ ಓ ಗುರುವಾದ ಧರ್ಮರಾಜನೇ, ನನಗೆ ಜ್ಞಾನವನ್ನು ಬೋಧಿಸು. ॥೬॥

ಧರ್ಮರಾಜನು ಹೇಳಿದನು—ಮಗಳೇ, ನಿನ್ನ ಮನಸ್ಸಿನಲ್ಲಿ ಅಪೇಕ್ಷಿಸಿದ ವರಗಳನ್ನು ಮೊದಲೇ ಕೊಟ್ಟಿರುವೆನು. ಮೂಲಪ್ರಕೃತಿಯಾದ ಭುವನೇಶ್ವರಿಯ ಅನುಗ್ರಹದಿಂದ ನಿನಗೆ ಜ್ಞಾನವುಂಟಾಗುವುದು ಎಂಬ ನಂಬಿಕೆಯಿರುವುದರಿಂದ ಈಗಲೇ ನನ್ನ ವರದಿಂದ ಆ ದೇವಿಯ ಭಕ್ತಿಯು ನಿನಗೆ ಉಂಟಾಗಲಿ. ॥೭॥

ಎಲೌ ಮಂಗಳಕರಳಾದ ಸಾವಿತ್ರಿಯೇ, ಹೇಳುವವರ, ಕೇಳುವವರ, ಮತ್ತು ಪ್ರಶ್ನೆಮಾಡುವವರ ವಂಶವನ್ನೇ ದುಃಖಸಮುದ್ರದಿಂದ ದಾಟಿಸುವ ಶ್ರೀದೇವಿಯ ಗುಣಕೀರ್ತನವನ್ನು ನೀನು ಕೇಳಬೇಕೆಂದು ಬಯಸುವೆ. ॥೮॥

ಆ ಭುವನೇಶ್ವರಿಯ ಗುಣಗಳನ್ನು ಆದಿಶೇಷನು ಸಾವಿರ ಮುಖಗಳಿಂದಲೂ ಹೇಳಲಾರನು. ಮೃತ್ಯುವನ್ನು ಜಯಿಸಿದ ಶಿವನು ತನ್ನ ಐದು ಮುಖಗಳಿಂದಲೂ ಹೇಳಲಾರನು. ಜಗತ್ತನ್ನು ಸೃಷ್ಟಿಸಿ ನಾಲ್ಕು ವೇದಗಳನ್ನೂ ಹೇಳಿದ ಬ್ರಹ್ಮನೂ ತನ್ನ

ಕಾರ್ತಿಕೇಯಃ ಷಣ್ಮುಖೇನ ನಾಽಪಿ ವಕ್ತುಮಲಂ ಧ್ರುವಂ ।
ನ ಗಣೇಶಃ ಸಮರ್ಥಶ್ಚ ಯೋಗೀಂದ್ರಾಣಾಂ ಗುರೋರ್ಗುರುಃ ॥೧೧॥

ಸಾರಭೂತಾಶ್ಚ ಶಾಸ್ತ್ರಾಣಾಂ ವೇದಾಶ್ಚತ್ವಾರ ಏವ ಚ ।
ಕಲಾಮಾತ್ರಂ ಯದ್ಗುಣಾನಾಂ ನ ವಿದಂತಿ ಬುಧಾಶ್ಚ ಯೇ ॥೧೨॥

ಸರಸ್ವತೀ ಜಡೀಭೂತಾ ನಾಽಲಂ ತದ್ಗುಣವರ್ಣನೇ ।
ಸನತ್ಕುಮಾರೋ ಧರ್ಮಶ್ಚ ಸನಂದಶ್ಚ ಸನಾತನಃ ॥೧೩॥

ಸನಕಃ ಕಪಿಲಃ ಸೂರ್ಯೋ ಯೇಽನ್ಯೇ ಚ ಬ್ರಹ್ಮಣಃ ಸುತಾಃ ।
ವಿಚಕ್ಷಣಾ ನ ಯದ್ವಕ್ತುಂ ಕಿಂಚಾನ್ಯೇ ಜಡಬುದ್ಧಯಃ ॥೧೪॥

ನ ಯದ್ವಕ್ತುಂ ಕ್ಷಮಾಃ ಸಿದ್ಧಾ ಮುನೀಂದ್ರಾ ಯೋಗಿನಸ್ತಥಾ ।
ತೇ ಚಾನ್ಯೇ ಚ ವಯಂ ಕೇ ವಾ ಶ್ರೀದೇವ್ಯಾ ಗುಣಕೀರ್ತನೇ ॥೧೫॥

---

ನಾಲ್ಕು ಮುಖಗಳಿಂದಲೂ ಹೇಳಲಾರನು. ಅಲ್ಲದೆ ಸರ್ವಜ್ಞನಾದ ವಿಷ್ಣುವೂ ಕೂಡ ದೇವಿಯ ಗುಣಕೀರ್ತನೆಯನ್ನು ಸಂಪೂರ್ಣವಾಗಿ ಮಾಡಲಾರನು. ||೯-೧೦||

ಆರು ಮುಖಗಳುಳ್ಳ ಕುಮಾರಸ್ವಾಮಿಯೂ ದೇವಿಯಗುಣಗಳನ್ನು ಹೇಳಲಾರನು. ಯೋಗಿಗಳ ಗುರುಗಳಿಗೂ ಕೂಡ ಗುರುವಾದ ಗಣೇಶನೂ ದೇವಿಯ ಗುಣಕೀರ್ತನೆಯನ್ನು ಸಂಪೂರ್ಣವಾಗಿ ಮಾಡಲು ಶಕ್ತನಾಗನು. ||೧೧||

ಸಮಸ್ತಶಾಸ್ತ್ರಗಳಿಗೂ ಸಾರಭೂತವಾದ ನಾಲ್ಕು ವೇದಗಳೂ, ವಿದ್ವಾಂಸರೂ ಕೂಡ ಆ ದೇವಿಯ ಗುಣಗಳಲ್ಲಿ ಹದಿನಾರನೆಯ ಒಂದು ಪಾಲನ್ನೂ ತಿಳಿದಿಲ್ಲ. ||೧೨||

ಸರಸ್ವತಿಯು ದೇವಿಯ ಗುಣಕೀರ್ತನ ವಿಷಯದಲ್ಲಿ ಶಕ್ತಳಾಗದೆ ಜಡಳಾದಳು. ಸನತ್ಕುಮಾರ, ಧರ್ಮನಂದನ, ಸನಾತನ, ಸನಕ, ಕಪಿಲ, ಸೂರ್ಯ, ಮಿಕ್ಕ ಬ್ರಹ್ಮ ಮಾನಸಪುತ್ರರು ಇವರೊಬ್ಬರೂ ದೇವಿಯ ಗುಣಕೀರ್ತನ ವಿಷಯದಲ್ಲಿ ಶಕ್ತರಾಗಲಿಲ್ಲ. ಇನ್ನು ಜಡಬುದ್ಧಿಗಳ ವಿಷಯವನ್ನು ಹೇಳಬೇಕಾದುವೇನು ? ||೧೩-೧೪||

ಶ್ರೀದೇವಿಯ ಗುಣಕೀರ್ತನೆಯನ್ನು ಮಾಡಿ ಮುಗಿಸಲು ಸಿದ್ಧರೂ, ಮುನಿಗಳೂ, ಯೋಗಿಗಳೂ ಸಮರ್ಥರಲ್ಲ. ಇನ್ನು ಮಿಕ್ಕವರ ವಿಷಯವನ್ನು ಹೇಳುವುದೇನು? ಈ ವಿಷಯದಲ್ಲಿ ನಾವು ಎಷ್ಟರವರು? ||೧೫||

ಧ್ಯಾಯಂತೇ ಯತ್ಪದಾಂಭೋಜಂ ಬ್ರಹ್ಮವಿಷ್ಣುಶಿವಾದಯಃ ।
ಅತಿಸಾಧ್ಯಂ ಸ್ವಭಕ್ತಾನಾಂ ತದನ್ಯೇಷಾಂ ಸುದುರ್ಲಭಂ ॥೧೬॥

ಕಶ್ಚಿತ್ಕಿಂಚಿದ್ವಿಜಾನಾತಿ ತದ್ಗುಣೋತ್ಕೀರ್ತನಂ ಶುಭಂ ।
ಅತಿರಿಕ್ತಂ ವಿಜಾನಾತಿ ಬ್ರಹ್ಮಾ ಬ್ರಹ್ಮವಿಶಾರದಃ ॥೧೭॥

ತತೋಽತಿರಿಕ್ತಂ ಜಾನಾತಿ ಗಣೇಶೋ ಜ್ಞಾನಿನಾಂ ಗುರುಃ ।
ಸರ್ವಾತಿರಿಕ್ತಂ ಜಾನಾತಿ ಸರ್ವಜ್ಞಃ ಶಂಭುರೇವ ಸಃ ॥೧೮॥

ತಸ್ಮೈ ದತ್ತಂ ಪುರಾ ಜ್ಞಾನಂ ಕೃಷ್ಣೇನ ಪರಮಾತ್ಮನಾ ।
ಅತೀವ ನಿರ್ಜನೇಽರಣ್ಯೇ ಗೋಲೋಕೇ ರಾಸಮಂಡಲೇ ॥೧೯॥

ತತ್ರೈವ ಕಥಿತಂ ಕಿಂಚಿತ್ತದ್ಗುಣೋತ್ಕೀರ್ತನಂ ಶುಭಂ ।
ಧರ್ಮಂ ಚ ಕಥಯಾಮಾಸ ಶಿವಲೋಕೇ ಶಿವಃ ಸ್ವಯಂ ॥೨೦॥

ಧರ್ಮಸ್ತು ಕಥಯಾಮಾಸ ಭಾಸ್ವತೇ ಪೃಚ್ಛತೇ ತಥಾ ।
ಯಾಮಾರಾಧ್ಯ ಮತ್ಪಿತಾಽಪಿ ಸಂಪ್ರಾಪ ತಪಸಾ ಸತಿ ॥೨೧॥

---

ಬ್ರಹ್ಮಾ, ವಿಷ್ಣು, ಶಿವಾದಿಗಳು ಯಾವ ದೇವಿಯ ಪಾದಕಮಲವನ್ನು ಧ್ಯಾನ ಮಾಡುವರೋ ಅಂತಹವರು ಆ ದೇವಿಯ ಭಕ್ತರಾದುದರಿಂದ ಅವರಿಗೆ ಗುಣವರ್ಣನೆ ಮಾಡಲು ಸಾಧ್ಯವು. ಇತರರಿಗೆ ಸಾಧ್ಯವಿಲ್ಲ. ॥೧೬॥

ಮಂಗಳಕರವಾದ ದೇವಿಯ ಗುಣಕೀರ್ತನೆಯನ್ನು ಯಾವನೋ ಒಬ್ಬನು ಸ್ವಲ್ಪ ತಿಳಿದಿರುವನು. ಎಂದಿಟ್ಟುಕೊಂಡರೆ, ಬ್ರಹ್ಮಸ್ವರೂಪವನ್ನು ಬಲ್ಲ ಬ್ರಹ್ಮನು ಆವನಿಗಿಂತ ಹೆಚ್ಚು ತಿಳಿದಿರುವನು. ಆವನಿಗಿಂತಲೂ ಗಣೇಶನು ಅಧಿಕವಾಗಿ ತಿಳಿದಿರುವನು. ಸರ್ವಜ್ಞನಾದ ಶಿವನು ಎಲ್ಲರಿಗಿಂತಲೂ ಹೆಚ್ಚಾಗಿ ತಿಳಿದಿರುವನು. ॥೧೭-೧೮॥

ಪತಿವ್ರತೆಯಾದ ಸಾವಿತ್ರಿಯೇ, ಪೂರ್ವದಲ್ಲಿ ಗೋಲೋಕದಲ್ಲಿ ರಾಸಮಂಡಲದಲ್ಲಿ ನಿರ್ಜನವಾದ ಅರಣ್ಯಪ್ರದೇಶದಲ್ಲಿ ಕೃಷ್ಣನು ಶಿವನಿಗೆ ದೇವಿಯಗುಣಕೀರ್ತನೆಯನ್ನುಪದೇಶಿಸಿದನು. ಶಿವಲೋಕದಲ್ಲಿ ಶಿವನು ಧರ್ಮದೇವನಿಗೆ ಅದನ್ನುಪದೇಶಿಸಿದನು. ಧರ್ಮದೇವನು ಸೂರ್ಯನಿಗೆ ಹೇಳಿದನು. ನನ್ನ ತಂದೆಯಾದ ಸೂರ್ಯನು

ಪೂರ್ವಂ ಸ್ವಂ ವಿಷಯಂ ಚಾಽಪಂ ನ ಗೃಹ್ಣಾಮಿ ಪ್ರಯತ್ನತಃ ।
ವೈರಾಗ್ಯಯುಕ್ತಸ್ತಪಸೇ ಗಂತುಮಿಚ್ಛಾಮಿ ಸುವ್ರತೇ ॥೨೨॥

ತದಾ ಮಾಂ ಕಥಯಾಮಾಸ ಪಿತಾ ತದ್ಗುಣಕೀರ್ತನಂ ।
ಯಥಾಽಗಮಂ ತದ್ವದಾಮಿ ನಿಬೋಧಾಽತೀವದುರ್ಗಮಂ ॥೨೩॥

ತದ್ಗುಣಂ ಸಾ ನ ಜಾನಾತಿ ತದನ್ಯಸ್ಯ ಚ ಕಾ ಕಥಾ ।
ಯಥಾಽಽಕಾಶೋ ನ ಜಾನಾತಿ ಸ್ವಾಂತಮೇವ ವರಾನನೇ ॥೨೪॥

ಸರ್ವಾತ್ಮಾ ಸರ್ವಭಗವಾನ್ಸರ್ವಕಾರಣಕಾರಣಃ ।
ಸರ್ವೇಶ್ವರಶ್ಚ ಸರ್ವಾದ್ಯಃ ಸರ್ವವಿತ್ಪರಿಪಾಲಕಃ ॥೨೫॥

---

ಆ ದೇವಿಯನ್ನು ಪೂಜಿಸಿ ತಪಸ್ಸಿನಿಂದ ದೇವೀಸ್ವರೂಪವನ್ನು ಪಡೆದನು. ॥೧೯-೨೦-೨೧॥

ಉತ್ತಮವಾದ ವ್ರತವನ್ನು ಮಾಡಿದ ಸಾವಿತ್ರಿಯೇ, ಪೂರ್ವದಲ್ಲಿ ದೇವತೆಗಳು ನನಗೆ ಕೊಟ್ಟ ಯಮಲೋಕಾಧಿಪತ್ಯವನ್ನು ನಾನೊಪ್ಪಲಿಲ್ಲ. ನಾನು ವೈರಾಗ್ಯವುಳ್ಳವನಾದುದರಿಂದ ಪ್ರಾಣಿಪೀಡೆಯನ್ನುಂಟುಮಾಡುವ ಅಧಿಕಾರವನ್ನೊಪ್ಪದೆ ತಪಸ್ಸು ಮಾಡುವುದಕ್ಕೆ ಹೋಗಬೇಕೆಂದು ಅಪೇಕ್ಷಿಸಿದೆನು. ॥೨೨॥

ಆಗ ನನ್ನ ತಂದೆಯಾದ ಸೂರ್ಯನು ದೇವಿಯಸ್ವರೂಪಾನುಭವರೂಪವಾದ ಗುಣಕೀರ್ತನೆಯನ್ನು ನನಗೆ ಹೇಳಿದನು. ತರುವಾಯ ನಾನು ಭಗವತಿಯ ಸ್ವರೂಪ ಜ್ಞಾನದಿಂದ ನಿರ್ಭಯನಾಗಿ ಯಮಲೋಕದ ಅಧಿಕಾರವನ್ನೊಪ್ಪಿಕೊಂಡೆನು. ತಿಳಿಯುವುದಕ್ಕೆ ಕಷ್ಟವಾದ, ನನ್ನ ತಂದೆಯು ಹೇಳಿದ, ದೇವಿಯ ಸ್ವರೂಪವನ್ನೇ ಶಾಸ್ತ್ರಾನುಸಾರವಾಗಿ ನಿನಗೆ ಹೇಳುವೆನು. ॥೨೩॥

ಸುಂದರಮುಖಿಯಾದ ಸಾವಿತ್ರಿಯೇ, ಆ ದೇವಿಯು ತನ್ನ ವಾಸ್ತವಗುಣವನ್ನು ತಾನೇ ತಿಳಿಯಲಾರಳು. ಇನ್ನು ಮಿಕ್ಕವರ ಪಾಡೇನು? ಆಕಾಶವು ತನ್ನ ತುದಿಯನ್ನು ತಾನು ತಿಳಿಯುವುದೇ? ಹಾಗಾದರೂ ನನಗೆ ತಿಳಿದಷ್ಟನ್ನು ಹೇಳುವೆನು. ॥೨೪॥

ಸಮಸ್ತಕ್ಕೂ ಆತ್ಮಸ್ವರೂಪನಾದ ಮಹಾಮಹಿಮನಾದ ಸಮಸ್ತ ಕಾರಣ ವಸ್ತುಗಳಿಗೂ ಕಾರಣನಾದ ಎಲ್ಲಕ್ಕೂ ಒಡೆಯನಾದ ಅನಾದಿಯಾದ ಎಲ್ಲವನ್ನೂ ತಿಳಿದಿರುವ ಸಮಸ್ತರನ್ನೂ ಕಾಪಾಡುವ ಶಾಶ್ವತವಾದ ರೂಪ ಮತ್ತು ಶರೀರಗಳುಳ್ಳ

ನಿತ್ಯರೂಪೋ ನಿತ್ಯದೇಹೋ ನಿತ್ಯಾನಂದೋ ನಿರಾಕೃತಿಃ ।
ನಿರಂಕುಶೋ ನಿರಾ(ತಂ)ಶಂಕೋ ನಿರ್ಗುಣಶ್ಚ ನಿರಾಮಯಃ ॥೨೬॥

ನಿರ್ಲಿಪ್ತಃ ಸರ್ವಸಾಕ್ಷೀ ಚ ಸರ್ವಾಧಾರಃ ಪರಾತ್ಪರಃ ।
ಮಾಯಾವಿಶಿಷ್ಟಃ ಪ್ರಕೃತಿಸ್ತದ್ವಿಕಾರಾಶ್ಚ ಪ್ರಾಕೃತಾಃ ॥೨೭॥

ಸ್ವಯಂ ಪುಮಾಂಶ್ಚ ಪ್ರಕೃತಿಸ್ತಾವಭಿನ್ನೌ ಪರಸ್ಪರಂ ।
ಯಥಾ ವಹ್ನೇಸ್ತಸ್ಯ ಶಕ್ತಿರ್ನ ಭಿನ್ನಾಽಸ್ತ್ಯೇವ ಕುತ್ರಚಿತ್ ॥೨೮॥

ಸೇಯಂ ಶಕ್ತಿರ್ಮಹಾಮಾಯಾ ಸಚ್ಚಿದಾನಂದರೂಪಿಣೀ ।
ರೂಪಂ ಬಿಭರ್ತ್ಯರೂಪಾ ಚ ಭಕ್ತಾನುಗ್ರಹಹೇತವೇ ॥೨೯॥

ಗೋಪಾಲಸುಂದರೀರೂಪಂ ಪ್ರಥಮಂ ಸಾ ಸಸರ್ಜ ಹ ।
ಅತೀವಕಮನೀಯಂ ಚ ಸುಂದರಂ ಸುಮನೋಹರಂ ॥೩೦॥

---

ಆನಂದಸ್ವರೂಪನೂ ನಿರಾಕಾರನೂ ಆದ, ಯಾವ ತಡೆಯೂ, ಸಂದೇಹವೂ, ಗುಣವೂ, ದೋಷವೂ ಇಲ್ಲದ, ಯಾವ ವಿಧವಾದ ಸಂಬಂಧವೂ ಇಲ್ಲದ, ಎಲ್ಲಕ್ಕೂ ಆಧಾರನಾಗಿಯೂ, ಅತ್ಯಂತ ಶ್ರೇಷ್ಠನಾಗಿಯೂ ಇರುವ ಪರಬ್ರಹ್ಮನುಂಟು. ॥೨೫-೨೬॥

ಆ ಪರಬ್ರಹ್ಮನೇ ಮಾಯಾವಿಶಿಷ್ಟನಾಗಿ ಮೂಲಪ್ರಕೃತಿಯಾದ ದೇವೀ ಸ್ವರೂಪವಾದನು. ಆನೆಯ ಶರೀರದಲ್ಲಿ ಪ್ರವೇಶಿಸಿದ ಚೈತನ್ಯಕ್ಕೆ ಆನೆಯೆಂದು ಹೇಗೆ ಹೆಸರು ಬರುವುದೋ ಹಾಗೇ ಮಾಯಾಶರೀರದಲ್ಲಿ ಪ್ರವೇಶಿಸಿದ ಚೈತನ್ಯಕ್ಕೆ ಪ್ರಕೃತಿ ಎಂದು ಹೆಸರು ಬಂದಿರುವುದು. ಆ ಪ್ರಕೃತಿಯ ವಿಕಾರವನ್ನೆ ಪ್ರಾಕೃತವೆನ್ನುವರು. ॥೨೭॥

ಪುರುಷನಾದ ಆತ್ಮನೇ ಪ್ರಕೃತಿಸಂಬಂಧದಿಂದ ಪ್ರಕೃತಿ ಎಂಬ ಹೆಸರನ್ನು ಪಡೆದನು. ಆದುದರಿಂದ ಹೇಗೆ ಅಗ್ನಿಗೂ ಅದರ ಸುಡುವ ಶಕ್ತಿಗೂ ಭೇದವಿಲ್ಲವೋ ಹಾಗೆ ಪ್ರಕೃತಿಗೂ ಪುರುಷನಿಗೂ ಭೇದವಿಲ್ಲ. ॥೨೮॥

ಸದ್ರೂಪವೂ, ಜ್ಞಾನರೂಪವೂ, ಆನಂದರೂಪವೂ ಸ್ವರೂಪವಾಗುಳ್ಳ ಯಾವ ಆಕಾರವೂ ಇಲ್ಲದ ಮಹಾಮಾಯಾಸ್ವರೂಪಳಾದ ಆ ಶಕ್ತಿದೇವಿಯೇ ಭಕ್ತರ ಅನುಗ್ರಹಕ್ಕಾಗಿ ಆಕಾರವನ್ನು ಪಡೆಯುವಳು. ॥೨೯॥

ಸಮಸ್ತಕ್ಕೂ ಕಾರಣಳಾದ ಮೂಲಪ್ರಕೃತಿಯು ಸೃಷ್ಟಿಸಮಯದಲ್ಲಿ ಭೂತೋತ್ಪತ್ತಿಕ್ರಮದಿಂದ ಬ್ರಹ್ಮಾಂಡವನ್ನು ಸೃಷ್ಟಿಸಿ ಭಕ್ತಾನುಗ್ರಹಕ್ಕಾಗಿ ಅನೇಕ ರೂಪವನ್ನು

**ನವೀನನೀರದಶ್ಯಾಮಂ ಕಿಶೋರಂ ಗೋಪವೇಷಕಂ ।**
**ಕಂದರ್ಪಕೋಟಿಲಾವಣ್ಯಂ ಲೀಲಾಧಾಮಮನೋಹರಂ ॥೩೧॥**

**ಶರನ್ಮಧ್ಯಾಹ್ನಪದ್ಮಾನಾಂ ಶೋಭಾಮೋಚನಲೋಚನಂ ।**
**ಶರತ್ಪಾರ್ವಣಕೋಟೀಂದುಶೋಭಾಪ್ರಚ್ಛಾದನಾನನಂ ॥೩೨॥**

**ಅಮೂಲ್ಯರತ್ನನಿರ್ಮಾಣ ನಾನಾಭೂಷಣಭೂಷಿತಂ ।**
**ಸಸ್ಮಿತಂ ಶೋಭಿತಂ ಶಶ್ವದಮೂಲ್ಯಪೀತವಾಸಸಾ ॥೩೩॥**

**ಪರಬ್ರಹ್ಮಸ್ವರೂಪಂ ಚ ಜ್ವಲಂತಂ ಬ್ರಹ್ಮತೇಜಸಾ ।**
**ಸುಖದೃಶ್ಯಂ ಚ ಶಾಂತಂ ಚ ರಾಧಾಕಾಂತಮನಂತಕಂ ॥೩೪॥**

---

ಧರಿಸುವಳು. ಯಾವುದೋ ಒಂದು ಕಲ್ಪದಲ್ಲಿ ಗೋಪಾಲಸುಂದರೀರೂಪವನ್ನು ಮೊದಲು ಧರಿಸಿದಳು. ತಂತ್ರಸಾರವೆಂಬ ಗ್ರಂಥದಲ್ಲಿ "ಕದಾಚಿದಾದ್ಯಾ ಲಲಿತಾ ಪುಂರೂಪಾ ಕೃಷ್ಣವಿಗ್ರಹಾ" ಎಂದೂ, ಕೂರ್ಮಪುರಾಣದಲ್ಲಿ "ಪ್ರಕೃತ್ಯಾಃ ಪ್ರಥಮೋ ಭಾಗ ಉಮಾದೇವೀ ಯಶಸ್ವಿನೀ । ವ್ಯಕ್ತಃ ಸರ್ವಮಯೋ ವಿಷ್ಣುಃ ಸ್ತ್ರೀಸಂಜ್ಞೋ ಲೋಕಭಾವನಃ ।" ಎಂದು ಹೇಳಿರುವುದು. ಗೋಪಾಲಸುಂದರೀ ಎಂದರೆ ಸಖೀ ವೇಷಧಾರಿಯಾದ ಶ್ರೀಕೃಷ್ಣನು ಕೋಮಲನಾಗಿ, ಸುಂದರನೂ, ಮನೋಹರನೂ ಆಗಿದ್ದನು. ಆಗತಾನೇ ಹುಟ್ಟಿದ ಮೋಡದ ಬಣ್ಣದಂತಿರುವ ಮೈಬಣ್ಣದಿಂದ ಕೂಡಿದ್ದನು. ಗೊಲ್ಲರ ಹುಡುಗನ ವೇಷದಿಂದ ಕೋಟಿ ಮನ್ಮಥರಿಗೆ ಸಮಾನವಾದ ಸೌಂದರ್ಯವುಳ್ಳವನಾಗಿ ಮನೋಹರವಾದ ಕ್ರೀಡೆಗೆ ಮನೆಯಾಗಿದ್ದನು.॥೩೦-೩೧॥

ಶರತ್ಕಾಲದ ಮಧ್ಯಾಹ್ನದಲ್ಲಿರುವ ಕಮಲದ ಕಾಂತಿಯನ್ನು ತಿರಸ್ಕರಿಸುವ ಕಣ್ಣಿನ ಕಾಂತಿಯುಳ್ಳವನಾಗಿ ಶರದೃತುವಿನ ಪೂರ್ಣಚಂದ್ರರ ಕಾಂತಿಯನ್ನು ಮುಚ್ಚುವ ಮುಖಕಾಂತಿಯುಳ್ಳವನಾಗಿದ್ದನು. ಬಹಳ ಬೆಲೆಯಾದ ಬಗೆಬಗೆಯ ರತ್ನಾಭರಣಗಳನ್ನು ಧರಿಸಿದ್ದನು. ಬಹಳ ಬೆಲೆಬಾಳುವ ಪೀತಾಂಬರವನ್ನು ಉಟ್ಟು ಮುಗುಳುನಗೆಯನ್ನು ಬೀರುತ್ತಿದ್ದನು. ॥೩೨-೩೩॥

ಪರಬ್ರಹ್ಮಸ್ವರೂಪನಾದುದರಿಂದ ಬ್ರಹ್ಮತೇಜಸ್ಸಿನಿಂದ ಪ್ರಕಾಶಿಸುತ್ತಿದ್ದನು. ರಾಧಾಪತಿಯಾದ ನಾಶರಹಿತನಾದ ಮತ್ತು ಶಾಂತನಾದ ಕೃಷ್ಣನು ನೋಡುವವರಿಗೆ ಸುಖಕರನಾಗಿ ಕಾಣಿಸಿಕೊಳ್ಳತಕ್ಕವನಾಗಿದ್ದನು. ॥೩೪॥

ಗೋಪೀಭಿರ್ವೀಕ್ಷ್ಯಮಾಣಂ ಚ ಸಸ್ಮಿತಾಭಿಶ್ಚ ಸಂತತಂ ।
ರಾಸಮಂಡಲಮಧ್ಯಸ್ಥಂ ರತ್ನಸಿಂಹಾಸನಸ್ಥಿತಂ ॥೩೫॥

ವಂಶೀಂ ಕ್ವಣಂತಂ ದ್ವಿಭುಜಂ ವನಮಾಲಾವಿಭೂಷಿತಂ ।
ಕೌಸ್ತುಭೇಂದ್ರಮಣೀಂದ್ರೇಣ ಶಶ್ವದ್ವಕ್ಷಸ್ಸ್ಥಲೋಜ್ಜ್ವಲಂ ॥೩೬॥

ಕುಂಕುಮಾಗರುಕಸ್ತೂರಿಚಂದನಾರ್ಚಿತವಿಗ್ರಹಂ ।
ಚಾರುಚಂಪಕಮಾಲಾಕ್ತಂ ಮಾಲತೀಮಾಲ್ಯಮಂಡಿತಂ ॥೩೭॥

ಚಾರುಚಂದ್ರಕಶೋಭಾಢ್ಯಂ ಚೂಡಾವಂಙ್ಕ್ರಿಮರಾಜಿತಂ ।
ಏವಂ ಭೂತಂ ಚ ಧ್ಯಾಯಂತೇ ಭಕ್ತಾ ಭಕ್ತಿಪರಿಪ್ಲುತಾಃ ॥೩೮॥

ಯದ್ಭಯಾಜ್ಜಗತಾಂ ಧಾತಾ ವಿಧತ್ತೇ ಸೃಷ್ಟಿಮೇವ ಚ ।
ಕರ್ಮಾನುಸಾರಾಲ್ಲಿಖಿತಂ ಕರೋತಿ ಸರ್ವಕರ್ಮಣಾಂ ॥೩೯॥

ತಪಸಾಂ ಫಲದಾತಾ ಚ ಕರ್ಮಣಾಂ ಚ ಯದಾಜ್ಞಯಾ ।
ವಿಷ್ಣುಃ ಪಾತಾ ಚ ಸರ್ವೇಷಾಂ ಯದ್ಭಯಾತ್ಪಾತಿ ಸಂತತಂ ॥೪೦॥
ಕಾಲಾಗ್ನಿರುದ್ರಃ ಸಂಹರ್ತಾ ಸರ್ವವಿಶ್ವೇಷು ಯದ್ಭಯಾತ್ ।

---

ರಾಸಮಂಡಲದ ಮಧ್ಯದಲ್ಲಿ ರತ್ನಖಚಿತವಾದ ಸಿಂಹಾಸನದಲ್ಲಿ ಕುಳಿತಿದ್ದ ಕೃಷ್ಣನನ್ನು ಕಂಡು ಗೋಪಿಯರು ನಗುತ್ತಾ ಸಂತೋಷದಿಂದ ನೋಡುತ್ತಿದ್ದರು.॥೩೫॥

ಆ ದ್ವಿಭುಜನಾದ ಕೃಷ್ಣನು ಪಾದದವರೆಗೂ ತುಲಸಿಮಾಲೆಯನ್ನು ಧರಿಸಿ ಕೊಳಲನ್ನು ಊದುತ್ತಿದ್ದನು. ಅವನ ಎದೆಯಲ್ಲಿ ಕೌಸ್ತುಭವೆಂಬ ರತ್ನವು ಪ್ರಕಾಶಿಸುತ್ತಿತ್ತು. ॥೩೬॥

ಕುಂಕುಮಕೇಸರಿ, ಅಗರು, ಕಸ್ತೂರಿ, ಶ್ರೀಗಂಧ ಇವುಗಳ ಗಂಧದಿಂದ ಪೂಜಿಸಿದ ಶರೀರವುಳ್ಳವನಾಗಿ ಮನೋಹರವಾದ ಸಂಪಿಗೆಯ ಮಾಲೆಯನ್ನೂ ಇರುವಂತಿಗೆಯ ಸರವನ್ನೂ ಅಲಂಕರಿಸಿಕೊಂಡು ಸುರುಳಿಗೊಂಡ ತಲೆಯ ಕೂದಲುಗಳಲ್ಲಿ ಮನೋಹರವಾದ ನವಿಲುಗರಿಯನ್ನಲಂಕರಿಸಿಕೊಂಡ ಕೃಷ್ಣನನ್ನು ಭಕ್ತರು ಭಕ್ತಿಯಿಂದ ತುಂಬಿದ ಹೃದಯವುಳ್ಳವರಾಗಿ ಧ್ಯಾನಿಸುವರು. ॥೩೭-೩೮॥

ಆ ಕೃಷ್ಣನ ಭಯದಿಂದಲೇ ಬ್ರಹ್ಮನು ಪ್ರಪಂಚವನ್ನು ಸೃಷ್ಟಿಮಾಡುವನು. ಮತ್ತು ಪ್ರಾಣಿಗಳ ಕರ್ಮಾನುಸಾರವಾಗಿ ಅವರ ಕರ್ಮಕ್ಕೂ ತಪಸ್ಸಿಗೂ ಫಲವನ್ನು

ಶಿವೋ ಮೃತ್ಯುಂಜಯಶ್ಚೈವ ಜ್ಞಾನಿನಾಂ ಚ ಗುರೋರ್ಗುರುಃ॥೪೧॥

ಯಜ್ಜ್ಞಾನಾಜ್ಜ್ಞಾನವಾನಸ್ತಿ ಯೋಗೀಶೋ ಜ್ಞಾನವಿತ್ಪ್ರಭುಃ ।
ಪರಮಾನಂದಯುಕ್ತಶ್ಚ ಭಕ್ತಿವೈರಾಗ್ಯಸಂಯುತಃ ॥೪೨॥

ಯದ್ಭಯಾದ್ವಾತಿ ಪವನಃ ಪ್ರವರಃ ಶೀಘ್ರಗಾಮಿನಾಂ ।
ತಪನಶ್ಚ ಪ್ರತಪತಿ ಯದ್ಭಯಾತ್ಸಂತತಂ ಸತಿ ॥೪೩॥

ಯದಾಜ್ಞಯಾ ವರ್ಷತೀಂದ್ರೋ ಮೃತ್ಯುಶ್ಚರತಿ ಜಂತುಷು ।
ದಿಶೋ ರಕ್ಷಂತಿ ದಿಕ್ಪಾಲಾ ಮಹಾಭೀತಾ ಯದಾಜ್ಞಯಾ ॥೪೪॥

ಭ್ರಮಂತಿ ರಾಶಿಚಕ್ರಾಣಿ ಗ್ರಹಾಶ್ಚ ಯದ್ಭಯೇನ ಚ ॥೪೫॥

ಭಯಾತ್ಫಲಂತಿ ವೃಕ್ಷಾಶ್ಚ ಪುಷ್ಯಂತ್ಯಪಿ ಚ ಯದ್ಭಯಾತ್ ।
ಯದಾಜ್ಞಾಂ ತು ಪುರಸ್ಕೃತ್ಯ ಕಾಲಃ ಕಾಲೇ ಹರೇದ್ಭಯಾತ್ ॥೪೬॥

---

ಕೊಡುವನು. ಆವನ ಆಜ್ಞೆಯಿಂದಲೇ ವಿಷ್ಣುವು ಸಮಸ್ತ ಪ್ರಪಂಚವನ್ನೂ ಯಾವಾಗಲೂ ರಕ್ಷಿಸುತ್ತಿರುವನು. ಕಾಲಾಗ್ನಿರುದ್ರನು ಸಮಸ್ತ ಪ್ರಪಂಚವನ್ನೂ ಸಂಹಾರ ಮಾಡುವನು. ॥೩೯-೪೦॥

ಮೃತ್ಯುವನ್ನು ಜಯಿಸಿದವನಾದ ಶಿವನು ಯಾವ ಕೃಷ್ಣಪರಮಾತ್ಮನ ಸಂಬಂಧವಾದ ಜ್ಞಾನದಿಂದ ಯೋಗಿಗಳಲ್ಲಿ ಶ್ರೇಷ್ಠನೂ ಜ್ಞಾನಿಗಳಿಗೆ ಗುರುವೂ ಆಗಿ ಭಕ್ತಿವೈರಾಗ್ಯಗಳಿಂದ ಕೂಡಿ ಪರಮಾನಂದದಿಂದಿರುವನು. ॥೪೧-೪೨॥

ಆ ಪರಮಾತ್ಮನ ಆಜ್ಞೆಯಿಂದಲೇ ಗಾಳಿಯು ಬೀಸುವುದು. ಸೂರ್ಯನು ಸಂತಾಪಪಡಿಸುವನು. ದೇವೇಂದ್ರನು ಮಳೆಯನ್ನು ಸುರಿಸುವನು. ಮೃತ್ಯುವು ಪ್ರಾಣಿಗಳಿಗೆ ಮರಣವನ್ನು ಕೊಡುವುದು. ಅಗ್ನಿಯು ಸುಡುವುದು. ನೀರು ತಣ್ಣಗಿರುವುದು. " ಭೀಷಾಸ್ಮಾದ್ವಾತಃ ಪವತೇ ಭೀಷೋದೇತಿ ಸೂರ್ಯಃ । ಭೀಷಾಽಸ್ಮಾದಗ್ನಿಶ್ಚೇಂದ್ರಶ್ಚ ಮೃತ್ಯುರ್ಧಾವತಿ ಪಂಚಮಃ ॥ ತೈತ್ತಿ. ಉ. ೨. ೭. " ಇತ್ಯಾದಿ ವೇದ ಪ್ರಮಾಣವು. ॥೪೩॥

ಆ ಪರಮಾತ್ಮನ ಭಯದಿಂದಲೇ ದಿಕ್ಪಾಲಕರು ತಂತಮ್ಮ ದಿಕ್ಕುಗಳನ್ನು ಕಾಪಾಡುವರು. ರಾಶಿಚಕ್ರದಲ್ಲಿ ಗ್ರಹಗಳು ತಮ್ಮ ದಾರಿಯಲ್ಲಿಯೇ ತಿರುಗುತ್ತಿರುವುವು. ವೃಕ್ಷಗಳು ಫಲ ಬಿಡುವುವು. ಆ ಫಲಗಳು ಪ್ರಾಣಿಗಳನ್ನು ಪೋಷಿಸುವುವು. ಯಮನು

**ತಥಾ ಜಲಸ್ಥಲಸ್ಥಾಶ್ಚ ನ ಜೀವಂತಿ ಯದಾಜ್ಞಯಾ ।**
**ಅಕಾಲೇನ ಹರೇದ್ವಿದ್ಧಂ ರಣೇಷು ವಿಷಮೇಷು ಚ ॥೪೭॥**

**ಧತ್ತೇ ವಾಯುಸ್ತೋಯರಾಶಿಂ ತೋಯಂ ಕೂರ್ಮಂ ತದಾಜ್ಞಯಾ ।**
**ಕೂರ್ಮೋಽನಂತಂ ಸ ಚ ಕ್ಷೋಣೀಂ ಸಮುದ್ರಾನ್ಸಾ ಚ ಪರ್ವತಾನ್॥೪೮॥**

**ಸರ್ವಾಂಶ್ಚೈವ ಕ್ಷಮಾರೂಪಾ ನಾನಾರತ್ನಂ ಬಿಭರ್ತಿ ಯಾ ।**
**ಯತಃ ಸರ್ವಾಣಿ ಭೂತಾನಿ ಸ್ಥೀಯಂತೇ ಹಂತಿ ತತ್ರ ಹಿ ॥೪೯॥**

**ಇಂದ್ರಾಯುಶ್ಚೈವ ದಿವ್ಯಾನಾಂ ಯುಗಾನಾಮೇಕಸಪ್ತತಿಃ ।**
**ಅಷ್ಟಾವಿಂಶೇ ಶಕ್ರಪಾತೇ ಬ್ರಹ್ಮಣಶ್ಚ ದಿವಾನಿಶಂ ॥೫೦॥**

**ಏವಂ ತ್ರಿಂಶದ್ದಿನೈರ್ಮಾಸೋ ದ್ವಾಭ್ಯಾಮಾಭ್ಯಾಮೃತುಃ ಸ್ಮೃತಃ ।**
**ಋತುಭಿಃ ಷಡ್ಭಿರೇವಾಬ್ದಂ ಬ್ರಹ್ಮಣೋ ವೈ ವಯಃ ಸ್ಮೃತಃ ॥೫೧॥**

---

ಪ್ರಳಯಕಾಲದಲ್ಲಿ ಸಮಸ್ತವನ್ನೂ ನಾಶಮಾಡುವವನು. ಈ ಎಲ್ಲ ಕೆಲಸಗಳೂ ಪರಮಾತ್ಮನ ಆಜ್ಞೆಯ ಮಹಿಮೆಯಿಂದಲೇ ನಡೆವುವು. ||೪೪-೪೫-೪೬||

ಆ ಪರಮಾತ್ಮನ ಆಜ್ಞೆಯಿಂದಲೇ ನೀರಿನಲ್ಲಿಯೂ ಭೂಮಿಯಲ್ಲಿಯೂ ಇರುವ ಪ್ರಾಣಿಗಳು ಕ್ರೂರವಾದ ಯುದ್ಧಗಳಲ್ಲಿ ವಿಷಮವಾದ ಕಾಲದಿಂದ ಹೊಡೆಯಲ್ಪಟ್ಟು ಪ್ರಾಣವನ್ನು ಬಿಡುವುವು. ||೪೭||

ಆ ಪರಮಾತ್ಮನ ಆಜ್ಞೆಯಿಂದಲೇ ವಾಯುವು ನೀರನ್ನೂ, ನೀರು ಮಹಾ ಕೂರ್ಮವನ್ನೂ, ಆ ಕೂರ್ಮನು ಆದಿಶೇಷನನ್ನೂ, ಆ ಅನಂತನು ಭೂಮಿಯನ್ನೂ, ಆ ಭೂಮಿಯು ಸಮುದ್ರ ಮತ್ತು ಪರ್ವತಗಳನ್ನೂ ಅನೇಕ ರತ್ನಗಳನ್ನೂ ಧರಿಸಿರುವುವು. ಆ ಭೂಮಿಯ ಮೇಲೆಯೇ ಸಮಸ್ತ ಪ್ರಾಣಿಗಳೂ ಹುಟ್ಟಿ ಬದುಕುವುವು. ಮತ್ತು ಸಾಯುವುವು. ||೪೮-೪೯||

ದೇವಮಾನದಿಂದ ಎಪ್ಪತ್ತೊಂದು ಚತುರ್ಯುಗವಾದರೆ ದೇವೇಂದ್ರನಿಗೆ ನೂರು ವರ್ಷವಾಗುವುದು. ಹೀಗೆ ಇಪ್ಪತ್ತೆಂಟು ದೇವೇಂದ್ರರು ಮುಗಿದರೆ ಬ್ರಹ್ಮನಿಗೆ ಒಂದು ದಿನ. ಇಂತಹ ದಿನಗಳ ಲೆಕ್ಕದಿಂದ ಮೂವತ್ತು ದಿನಕ್ಕೆ ಒಂದು ತಿಂಗಳು. ಎರಡು ತಿಂಗಳುಗಳಿಗೊಂದು ಋತು. ಆರು ಋತುಗಳಿಗೊಂದು ವರ್ಷ. ಇಂತಹ ನೂರು ವರ್ಷಗಳು ಬ್ರಹ್ಮನ ಆಯಸ್ಸು. ||೫೦-೫೧||

ಬ್ರಹ್ಮಣಶ್ಚ ನಿಪಾತೇ ಚ ಚಕ್ಷುರುನ್ಮೀಲನಂ ಹರೇಃ ।
ಚಕ್ಷುರುನ್ಮಿಲನೇ ತಸ್ಯ ಲಯಂ ಪ್ರಾಕೃತಿಕಂ ವಿದುಃ ॥೫೨॥

ಪ್ರಲಯೇ ಪ್ರಾಕೃತೇ ಸರ್ವೇ ದೇವಾದ್ಯಾಶ್ಚ ಚರಾಚರಾಃ ।
ಲೀನಾ ಧಾತಾ ವಿಧಾತಾ ಚ ಶ್ರೀಕೃಷ್ಣನಾಭಿಪಂಕಜೇ ॥೫೩॥

ವಿಷ್ಣುಃ ಕ್ಷೀರೋದಶಾಯೀ ಚ ವೈಕುಂಠೇ ಯಶ್ಚತುರ್ಭುಜಃ ।
ವಿಲೀನೋ ವಾಮಪಾರ್ಶ್ವೇ ಚ ಕೃಷ್ಣಸ್ಯ ಪರಮಾತ್ಮನಃ ॥೫೪॥

ಯಸ್ಯ ಜ್ಞಾನೇ ಶಿವೋ ಲೀನೋ ಜ್ಞಾನಾಧೀಶಃ ಸನಾತನಃ ।
ದುರ್ಗಾಯಾಂ ವಿಷ್ಣುಮಾಯಾಯಾಂ ವಿಲೀನಾಃ ಸರ್ವಶಕ್ತಯಃ ॥೫೫॥

ಸಾ ಚ ಕೃಷ್ಣಸ್ಯ ಬುದ್ಧೌ ಚ ಬುದ್ಧ್ಯಧಿಷ್ಠಾತೃದೇವತಾ ।
ನಾರಾಯಣಾಂಶಃ ಸ್ಕಂದಶ್ಚ ಲೀನೋ ವಕ್ಷಸಿ ತಸ್ಯ ಚ ॥೫೬॥

---

ಬ್ರಹ್ಮನ ನೂರುವರ್ಷ ಆಯುಸ್ಸು ವಿಷ್ಣುವಿಗೆ ಕಣ್ಣುಮುಚ್ಚಿ ಬಿಡುವಷ್ಟು ಕಾಲವು. ಎಂದರೆ ಒಂದು ನಿಮಿಷಕಾಲವಾಗುವುದು. ಆ ವಿಷ್ಣುವು ಕಣ್ಣುರೆಪ್ಪೆ ಮುಚ್ಚಲು ಪ್ರಾಕೃತಪ್ರಲಯವಾಗುವುದು. ಆ ಪ್ರಾಕೃತಪ್ರಳಯದಲ್ಲಿ ದೇವತೆಗಳೇ ಮೊದಲಾದ ಸಮಸ್ತ ಚರಾಚರ ಪ್ರಾಣಿಗಳೂ ಸೃಷ್ಟಿಕರ್ತನಾದ ಬ್ರಹ್ಮನೊಡನೆ ಶ್ರೀಕೃಷ್ಣನ ನಾಭಿಕಮಲದಲ್ಲಿ ಲೀನವಾಗುವುವು. ॥೫೨-೫೩॥

ವೈಕುಂಠಲೋಕದಲ್ಲಿ ಕ್ಷೀರಸಮುದ್ರದಲ್ಲಿ ಮಲಗಿರುವ ಚತುರ್ಭುಜನಾದ ವಿಷ್ಣುವು ಆ ಕೃಷ್ಣಪರಮಾತ್ಮನ ಎಡಭಾಗದಲ್ಲಿ ಲೀನವಾಗುವನು. ॥೫೪॥

ಅನಾದಿಯಾದ ಜ್ಞಾನಕ್ಕೆ ಒಡೆಯನಾದ ಶಿವನು ಆ ಕೃಷ್ಣನ ಜ್ಞಾನದಲ್ಲಿ ಲೀನನಾಗುವನು. ವಿಷ್ಣು ಮಾಯಾರೂಪಳಾದ ದುರ್ಗಾದೇವಿಯಲ್ಲಿ ಸಮಸ್ತ ಶಕ್ತಿ ದೇವಿಯರೂ ಲೀನವಾಗುವರು. ॥೫೫॥

ಆ ದುರ್ಗಾದೇವಿಯು ಕೃಷ್ಣನ ಬುದ್ಧಿಯಲ್ಲಿ ಆ ಬುದ್ಧಿಗೆ ಆಶ್ರಯದೇವತೆಯಾಗಿರುವಳು. ನಾರಾಯಣನ ಅಂಶನಾದ ಕುಮಾರಸ್ವಾಮಿಯು ಕೃಷ್ಣನ ಹೃದಯದಲ್ಲಿ ಲೀನನಾಗುವನು. ॥೫೬॥

ಶ್ರೀಕೃಷ್ಣಾಂಶಶ್ಚ ತದ್ಬಾಹೌ ದೇವಾಧೀಶೋ ಗಣೇಶ್ವರಃ ।
ಪದ್ಮಾಂಶಾಶ್ಚೈವ ಪದ್ಮಾಯಾಂ ಸಾ ರಾಧಾಯಾಂ ಚ ಸುವ್ರತೇ ॥೫೭॥

ಗೋಪ್ಯಶ್ಚಾಪಿ ಚ ತಸ್ಯಾಂ ಚ ಸರ್ವಾಶ್ಚ ದೇವಯೋಷಿತಃ ।
ಕೃಷ್ಣಪ್ರಾಣಾಧಿದೇವೀ ಸಾ ತಸ್ಯ ಪ್ರಾಣೇಷು ಸಂಸ್ಥಿತಾ ॥೫೮॥

ಸಾವಿತ್ರೀ ಚ ಸರಸ್ವತ್ಯಾಂ ವೇದಾಃ ಶಾಸ್ತ್ರಾಣಿ ಯಾನಿ ಚ ।
ಸ್ಥಿತಾ ವಾಣೀ ಚ ಜಿಹ್ವಾಯಾಂ ತಸ್ಯೈವ ಪರಮಾತ್ಮನಃ ॥೫೯॥

ಗೋಲೋಕಸ್ಯ ಚ ಗೋಪಾಶ್ಚ ವಿಲೀನಾಸ್ತಸ್ಯ ಲೋಮಸು ।
ತತ್ಪ್ರಾಣೇಷು ಚ ಸರ್ವೇಷಾಂ ಪ್ರಾಣವಾತಾ ಹುತಾಶನಃ ॥೬೦॥

ಜಠರಾಗ್ನೌ ವಿಲೀನಾಶ್ಚ ಜಲಂ ತದ್ರಸನಾಗ್ರತಃ ।
ವೈಷ್ಣವಾಶ್ಚರಣಾಂಭೋಜೇ ಪರಮಾನಂದಸಂಯುತಾಃ ॥೬೧॥

---

ಶ್ರೀಕೃಷ್ಣನ ಅಂಶನಾದ ಗಣೇಶನು ಅವನ ಬಾಹುವಿನಲ್ಲಿ ಲೀನನಾಗುವನು. ಲಕ್ಷ್ಮಿಯ ಅಂಶದ ಸಮಸ್ತ ಶಕ್ತಿದೇವಿಯರೂ ಲಕ್ಷ್ಮಿಯಲ್ಲಿಯೂ ಆ ಲಕ್ಷ್ಮಿಯು ರಾಧೆಯಲ್ಲಿಯೂ ಲೀನವಾಗುವರು. ॥೫೭॥

ಗೋಲೋಕದಲ್ಲಿರುವ ಗೋಪಿಯರೂ ಸಮಸ್ತ ದೇವಸ್ತ್ರೀಯರೂ ಆ ರಾಧೆಯಲ್ಲಿಯೇ ಲೀನವಾಗುವರು. ಆ ರಾಧೆಯು ಕೃಷ್ಣನ ಪ್ರಾಣಕ್ಕೆ ಆಶ್ರಯವಾದ ದೇವತೆಯಾಗಿ ಅವನ ಪ್ರಾಣದಲ್ಲೇ ಇರುವಳು. ಸಾವಿತ್ರೀದೇವಿಯೂ, ಸಮಸ್ತ ವೇದಶಾಸ್ತ್ರಗಳೂ, ಸರಸ್ವತಿಯಲ್ಲಿ ಲೀನವಾಗಿ ಆ ಸರಸ್ವತಿಯು ಪರಮಾತ್ಮನ ನಾಲಿಗೆಯಲ್ಲಿ ಲೀನವಾಗಿರುವಳು. ॥೫೮-೫೯॥

ಗೋಲೋಕದ ಗೋಪಾಲರು ಅವನ ಲೋಮ (ಕೂದಲು) ಗಳಲ್ಲಿ ವಿಲೀನರಾಗುವರು. ಅವರ ಪ್ರಾಣವಾಯುಗಳು ಪರಮಾತ್ಮನ ಪ್ರಾಣದಲ್ಲಿಯೇ ಸೇರುವುವು. ಅಗ್ನಿ ಅವನ ಜಠರಾಗ್ನಿಯಲ್ಲೂ ನೀರು ಅವನ ನಾಲಿಗೆಯ ತುದಿಯಲ್ಲೂ ಲೀನವಾಗುವುದು. ವಿಷ್ಣುಭಕ್ತರು ಅವನ ಪಾದಕಮಲದಲ್ಲಿ ಆನಂದದಿಂದ ಲೀನವಾಗುವರು ॥೬೦-೬೧॥

ಸಾರಾತ್ಸಾರತರಾ ಭಕ್ತಿರಸಪೀಯೂಷಪಾಯಿನಃ ।
ನಿರಾಡಂಶಾಶ್ಚ ಮಹತಿ ಲೀನಾಃ ಕೃಷ್ಣೇ ಮಹಾವಿರಾಟ್ ॥೬೨॥

ಯಸ್ಯೈವ ಲೋಮಕೂಪೇಷು ವಿಶ್ವಾನಿ ನಿಖಿಲಾನಿ ಚ ।
ಯಸ್ಯ ಚಕ್ಷುಷ ಉನ್ಮೇಷೇ ಪ್ರಾಕೃತಪ್ರಲಯೋ ಭವೇತ್ ॥೬೩॥

ಚಕ್ಷುರುನ್ಮೀಲನೇ ಸೃಷ್ಟಿಃ ಯಸ್ಯೈವ ಪುನರೇವ ಸಃ ।
ಯಾವತ್ಕಾಲೋ ನಿಮೇಷೇಣ ತಾವದುನ್ಮೀಲನೇನ ಚ ॥೬೪॥

ಬ್ರಹ್ಮಣಶ್ಚ ಶತಾಬ್ದೇ ಚ ಸೃಷ್ಟೇಃ ಸೂತ್ರಲಯಂ ಪುನಃ ।
ಬ್ರಹ್ಮಸೃಷ್ಟಿಲಯಾನಾಂ ಚ ಸಂಖ್ಯಾ ನಾಸ್ತ್ಯೇವ ಸುವ್ರತೇ ॥೬೫॥

ಯಥಾ ಭೂರಜಸಾಂ ಚೈವ ಸಂಖ್ಯಾನಂ ನೈವ ವಿದ್ಯತೇ ।
ಚಕ್ಷುರ್ನಿಮೇಷಪ್ರಲಯೋ ಯಸ್ಯ ಸರ್ವಾಂತರಾತ್ಮನಃ ॥೬೬॥
ಉನ್ಮೀಲನೇ ಪುನಃ ಸೃಷ್ಟಿಃ ಭವೇದೇವೇಶ್ವರೇಚ್ಛಯಾ ।

---

ಆ ಭಕ್ತರು ಶ್ರೇಷ್ಠವಾದ ಭಕ್ತಿರಸವೆಂಬ ಅಮೃತವನ್ನು ಅಲ್ಲಿ ಪಾನಮಾಡುತ್ತಿರುವರು. ಕ್ಷುದ್ರವಿರಾಡ್ರೂಪಗಳು, ಲೋಮಕೂಪದಲ್ಲಿ ಸಮಸ್ತಪ್ರಪಂಚಗಳನ್ನೂ ಹೊಂದಿರುವ ಮಹಾವಿರಾಟ್ಪುರುಷನಲ್ಲಿ ಲೀನವಾಗಲು, ಆ ಮಹಾವಿರಾಟ್ಪುರುಷನು ಕೃಷ್ಣಪರಮಾತ್ಮನಲ್ಲಿ ಲೀನವಾಗುವನು. ॥೬೨॥

ಯಾವ ಕೃಷ್ಣನ ಕಣ್ಣುರೆಪ್ಪೆಯನ್ನು ಮುಚ್ಚುವ ಕಾಲಕ್ಕೆ ಪ್ರಾಕೃತಪ್ರಳಯವಾಗುವುದೋ ಅದೇ ಕೃಷ್ಣನ ಕಣ್ಣುರೆಪ್ಪೆಯನ್ನು ತೆಗೆಯುವ ಸಮಯಕ್ಕೆ ಮತ್ತೆ ಸೃಷ್ಟಿಯು ಪ್ರಾರಂಭವಾಗುವುದು. ರೆಪ್ಪೆ ಮುಚ್ಚುವುದಕ್ಕೆಷ್ಟುಕಾಲವಾಗುವುದೋ ತೆರೆಯುವುದಕ್ಕೂ ಅಷ್ಟೇಕಾಲವಾಗುವುದು. ॥೬೩-೬೪॥

ಒಳ್ಳೆಯ ವ್ರತಫಲವುಳ್ಳ ಸಾವಿತ್ರಿಯೇ, ಬ್ರಹ್ಮನ ನೂರುವರ್ಷ ಕಳೆದರೆ ಮತ್ತೆ ಅವನ ಸೃಷ್ಟಿಯ ಸೂತ್ರಲಯವು ಆಗುವುದು. ಹೀಗೆ ಬ್ರಹ್ಮನ ಸೃಷ್ಟಿಲಯಗಳು ಲೆಕ್ಕವಿಲ್ಲದಷ್ಟು ನಡೆಯುತ್ತಿರುವುವು. ॥೬೫॥

ಭೂಮಿಯಲ್ಲಿರುವ ಧೂಳಿನ ಸಂಖ್ಯೆಯನ್ನು ಹೇಗೆ ಎಣಿಸಲಾಗುವುದಿಲ್ಲವೋ ಹಾಗೆ ಕೃಷ್ಣನ ರೆಪ್ಪೆಮುಚ್ಚುವ ಸಮಯದಲ್ಲಿ ಪ್ರಲಯವೂ ತೆರೆಯುವ ಸಮಯದಲ್ಲಿ ಸರ್ವಾಂತರಾತ್ಮನಾದ ಈಶ್ವರನ ಇಚ್ಛೆಯಿಂದ ಸೃಷ್ಟಿಯು ನಡೆಯುವಿಕೆಯೂ ಆಗುತ್ತದೆ. ಇವನ್ನು ಎಣಿಸಲಾಗುವುದಿಲ್ಲ. (ಲೆಕ್ಕವಿಲ್ಲದಷ್ಟು ನಡೆಯುತ್ತಿರುವುವು.) ॥೬೬॥

ಸ ಕೃಷ್ಣಃ ಪ್ರಲಯೇ ತಸ್ಯಾಂ ಪ್ರಕೃತೌ ಲೀನ ಏವ ಹಿ ॥೧೭॥

ಏಕೈವ ಚ ಪರಾಶಕ್ತಿರ್ನಿರ್ಗುಣಃ ಪರಮಃ ಪುಮಾನ್ ।
ಸ ದೇವೇದಮಗ್ರ ಆಸೀದಿತಿ ವೇದವಿದೋ ವಿದುಃ ॥೧೮॥

ಮೂಲಪ್ರಕೃತಿರವ್ಯಕ್ತಾಽಪ್ಯವ್ಯಾಕೃತಪದಾಭಿದಾ ।
ಚಿದಭಿನ್ನತ್ವಮಾಪನ್ನಾ ಪ್ರಲಯೇ ಸೈವ ತಿಷ್ಠತಿ ॥೧೯॥

ತದ್ಗುಣೋತ್ಕೀರ್ತನಂ ವಕ್ತುಂ ಬ್ರಹ್ಮಾಂಡೇಷು ಚ ಕಃ ಕ್ಷಮಃ ।
ಮುಕ್ತಯಶ್ಚ ಚತುರ್ವೇದೈರ್ನಿರುಕ್ತಾಶ್ಚ ಚತುರ್ವಿಧಾಃ ॥೨೦॥

ತತ್ಪ್ರಧಾನಾ ದೇವಭಕ್ತಿರ್ಮುಕ್ತೇರಪಿ ಗರೀಯಸೀ ।
ಸಾಲೋಕ್ಯದಾ ಭವೇದೇಕಾ ತಥಾ ಸಾರೂಪ್ಯದಾ ಪರಾ ॥೨೧॥

---

ಇಂತಹ ಮಹಾವೈಭವವುಳ್ಳ ಕೃಷ್ಣನನ್ನು ಸೃಷ್ಟಿಸಮಯದಲ್ಲಿ ಮೂಲಪ್ರಕೃತಿಯು ಮೊದಲು ಹುಟ್ಟಿಸಿದಳು. ಆದುದರಿಂದ ಪ್ರಳಯದಲ್ಲಿಯೂ ಅವನೂ ಮೂಲಪ್ರಕೃತಿಯಲ್ಲೇ ಲೀನವಾಗುವನು. ಪಾರಮಾರ್ಥಿಕವಾಗಿ ಪರಾಶಕ್ತಿಯೊಬ್ಬಳೇ ನಿರ್ಗುಣಸ್ವರೂಪಳಾಗಿ ಪರಮಪುರುಷನಾಗಿರುವಳು. ಹೀಗೆ ಮೂಲಪ್ರಕೃತಿಗೂ ಪರಬ್ರಹ್ಮನಿಗೂ ಭೇದವಿಲ್ಲವು. ||೧೭||

ಇದನ್ನೇ ವೇದದಲ್ಲಿ " ಸ ದೇವಸೌಮ್ಯೇದಮಗ್ರ ಆಸೀತ್ ಏಕಮೇವಾದ್ವಿತೀಯಂ " ಛಾಂ.ಉ. ೬.೨.೧. ಮೊದಲು ಈ ಸಮಸ್ತವೂ ಸತ್ಪದಾರ್ಥಮಾತ್ರವಾಗಿದ್ದಿತು. ಎಂದು ಹೇಳಿರುವುದು. ಮೂಲಪ್ರಕೃತಿಯು ಅವ್ಯಕ್ತವೂ ಅವ್ಯಾಕೃತವೂ ಆಗಿರುತ್ತಾ ಅಧಿಷ್ಠಾನಕ್ಕಿಂತ ಬೇರೆಯಾಗಿ ತೋರದೆ ಇರುವ ಕಾರಣ ಪ್ರಲಯದಲ್ಲಿ ಇದು ಇರುವುದಿಲ್ಲ. ಸತ್ಯಜ್ಞಾನಾನಂದರೂಪನಾದ ಪರಮಾತ್ಮನೊಬ್ಬನೇ ಇರುವನು. ||೧೮-೧೯||

ಹೀಗಿರುವುದರಿಂದ ಮೂಲಪ್ರಕೃತಿಯ ಗುಣಕೀರ್ತನವನ್ನು ಪೂರ್ಣಮಾಡಲು ಬ್ರಹ್ಮಾಂಡದಲ್ಲಿ ಯಾರಿಗೆತಾನೇ ಶಕ್ತಿಯಿರುವುದು ? ಮುಕ್ತಿಯು ನಾಲ್ಕು ವಿಧವಾಗಿರುವುದು. ಎಂದು ನಾಲ್ಕು ವೇದಗಳಲ್ಲಿಯೂ ಹೇಳಿರುವುದು. ||೨೦||

ಮುಕ್ತಿಗೆ ಭಕ್ತಿಯೇ ಕಾರಣವಾಗಿರುವುದರಿಂದ ಮುಕ್ತಿಗಿಂತಲೂ ಭಕ್ತಿಯೇ ದೊಡ್ಡದು. ಸಾಲೋಕ್ಯ, ಸಾರೂಪ್ಯ, ಸಾಮೀಪ್ಯ, ಸಾಯುಜ್ಯ ಎಂದು ನಾಲ್ಕು

ಸಾಮೀಪ್ಯದಾಃಥ ನಿರ್ವಾಣಪ್ರದಾ ಮುಕ್ತಿಶ್ಚತುರ್ವಿಧಾ ।
ಭಕ್ತಾಸ್ತಾನ್ನಹಿ ವಾಂಛಂತಿ ವಿನಾ ತತ್ಸೇವನಂ ವಿಭೋಃ ॥೭೨॥

ಶಿವತ್ವಮಮರತ್ವಂ ಚ ಬ್ರಹ್ಮತ್ವಂ ಚಾವಹೇಲಯಾ ।
ಜನ್ಮಮೃತ್ಯುಜರಾವ್ಯಾಧಿ ಭಯಶೋಕಾದಿಕಂ ಧನಂ ॥೭೩॥

ದಿವ್ಯರೂಪಧಾರಣಂ ಚ ನಿರ್ವಾಣಂ ಮೋಕ್ಷಣಂ ವಿದುಃ ।
ಮುಕ್ತಿಶ್ಚ ಸೇವಾರಹಿತಾ ಭಕ್ತಿಃ ಸೇವಾವಿವರ್ಧಿನೀ ॥೭೪॥

ಭಕ್ತಿಮುಕ್ತ್ಯೋರಯಂ ಭೇದೋ ನಿಷೇಕಖಂಡನಂ ಶೃಣು ।
ವಿದುರ್ಬುಧಾ ನಿಷೇಕಂ ಚ ಭೋಗಂ ಚ ಕೃತಕರ್ಮಣಾಂ ॥೭೫॥

ತತ್ಖಂಡನಂ ಚ ಶುಭದಂ ಶ್ರೀವಿಭೋಃ ಸೇವನಂ ಪರಂ ।
ತತ್ವಜ್ಞಾನಮಿದಂ ಸಾಧ್ವಿ ಸ್ಥಿರಂ ಚ ಲೋಕವೇದಯೋಃ ॥೭೬॥

---

ಬಗೆಗಳು ಮುಕ್ತಿಯಲ್ಲಿ ಉಂಟು. ಭಕ್ತರು ಮೂಲಪ್ರಕೃತಿಯ ಸೇವೆಯನ್ನು ಹೊರ ತಾಗಿ ಮುಕ್ತಿಯನ್ನೂ ಅಪೇಕ್ಷಿಸುವುದಿಲ್ಲ. ॥೭೧-೭೨॥

ಭಕ್ತರು ಶಿವತ್ವವನ್ನೂ, ದೇವತ್ವವನ್ನೂ, ಬ್ರಹ್ಮತ್ವವನ್ನೂ, ಹುಟ್ಟು, ಸಾವು, ಮುಪ್ಪು, ರೋಗ, ಭಯ, ಶೋಕ, ಧನ, ದಿವ್ಯರೂಪ, ನಿರ್ವಾಣ, ಮೋಕ್ಷ, ಇವುಗಳನ್ನೆಲ್ಲವನ್ನೂ ಭಕ್ತಿಗಿಂತಲೂ ನಿಕೃಷ್ಟವಾದುದೆಂದು ತಿಳಿಯುವರು. ॥೭೩॥

ಮುಕ್ತಿಯಲ್ಲಿ ದೇವೀಸೇವೆಯ ಆನಂದವು ಇಲ್ಲ. ಭಕ್ತಿಯಲ್ಲಿ ದೇವಿಯ ಸೇವೆಯೇ ಮುಖ್ಯವು. ಭಕ್ತಿಗೂ ಮುಕ್ತಿಗೂ ಇಷ್ಟೇ ವ್ಯತ್ಯಾಸವು. ಇನ್ನು ನಿಷೇಕ ಖಂಡನ ವಿಷಯವನ್ನು ಹೇಳುವೆನು ಕೇಳು. ॥೭೪॥

ಮಾಡಿದ ಕರ್ಮಗಳ ಫಲಾನುಭವವನ್ನು ನಿಷೇಕವೆಂದು ವಿದ್ವಾಂಸರು ಹೇಳುವರು. ಅದರ ಖಂಡನವೆಂದರೆ ನಾಶವು, ಮೂಲಪ್ರಕೃತಿಯ ಸೇವೆಯಿಂದ ಉಂಟಾಗುವುದು. ಆದುದರಿಂದ ಸರ್ವರೂ ಮೂಲಪ್ರಕೃತಿಯನ್ನು ಭಕ್ತಿಯಿಂದ ಸೇವೆಮಾಡಬೇಕೆಂಬುದು ಮುಖ್ಯಾಭಿಪ್ರಾಯವು. ॥೭೫॥

ಪತಿವ್ರತೆಯಾದ ಸಾವಿತ್ರಿಯೇ, ಇದೇ ವೇದದಲ್ಲಿಯೂ ಲೋಕಾನುಭವ ದಲ್ಲಿಯೂ ತತ್ವಜ್ಞಾನವೆಂದು ಪ್ರಸಿದ್ಧವಾಗಿರುವುದು. ಮಂಗಳಕರವಾದ ಈ ಜ್ಞಾನ ವನ್ನು ನಿರ್ವಿಘ್ನವಾಗಿ ನಿನಗೆ ಉಪದೇಶಮಾಡಿದೆನು. ನೀನಿನ್ನು ಸುಖವಾಗಿ

ನಿರ್ವಿಘ್ನಂ ಶುಭದಂ ಚೋಕ್ತಂ ಗಚ್ಛ ವತ್ಸೇ ಯಥಾಸುಖಂ ।
ಇತ್ಯುಕ್ತ್ವಾ ಸೂರ್ಯಪುತ್ರಶ್ಚ ಜೀವಯಿತ್ವಾ ಚ ತತ್ಪತಿಂ ॥೭೭॥

ತಸ್ಯೈ ಶುಭಾಶಿಷಂ ದತ್ವಾ ಗಮನಂ ಕರ್ತುಮುದ್ಯತಃ ।
ದೃಷ್ಟ್ವಾ ಯಮಂ ಚ ಗಚ್ಛಂತಂ ಸಾ ಸಾವಿತ್ರೀ ಪ್ರಣಮ್ಯ ಚ ॥೭೮॥

ರುರೋದ ಚರಣೌ ಧೃತ್ವಾ ಸಾಧುಚ್ಛೇದೇನ ದುಃಖಿತಾ ।
ಸಾವಿತ್ರೀರೋದನಂ ಶ್ರುತ್ವಾ ಯಮಶ್ಚೈವ ಕೃಪಾನಿಧಿಃ ॥೭೯॥

ತಾಮಿತ್ಯುವಾಚ ಸಂತುಷ್ಟಃ ಸ್ವಯಂ ಚೈವ ರುರೋದ ಹ ।
ಲಕ್ಷವರ್ಷಂ ಸುಖಂ ಭುಕ್ತ್ವಾ ಪುಣ್ಯಕ್ಷೇತ್ರೇ ಚ ಭಾರತೇ ॥೮೦॥

ಅಂತೇ ಯಾಸ್ಯಸಿ ತಲ್ಲೋಕಂ ಯತ್ರ ದೇವೀ ವಿರಾಜತೇ ।
ಗತ್ವಾ ಚ ಸ್ವಗೃಹಂ ಭದ್ರೇ ಸಾವಿತ್ರ್ಯಾಶ್ಚ ವ್ರತಂ ಕುರು ॥೮೧॥

---

ಪ್ರಯಾಣಮಾಡು. ಹೀಗೆಂದು ಹೇಳಿ ಸೂರ್ಯಪುತ್ರನಾದ ಧರ್ಮರಾಜನು ಸಾವಿತ್ರಿಯ ಗಂಡನನ್ನು ಬದುಕಿಸಿ ಅವಳಿಗೆ ಮಂಗಲಕರವಾದ ಆಶೀರ್ವಾದವನ್ನು ಮಾಡಿ ಹೊರಡಲನುವಾದನು. ||೭೬-೭೭||

ಯಮನು ಹೊರಡುತ್ತಿರುವುದನ್ನು ಕಂಡು ಸಾವಿತ್ರಿಯು ಅವನ ಕಾಲುಗಳನ್ನು ಹಿಡಿದು ನಮಸ್ಕರಿಸಿ ಸಜ್ಜನರ ಅಗಲುವಿಕೆಯಿಂದುಂಟಾದ ದುಃಖದಿಂದ ಅತ್ತಳು. ||೭೮||

ದಯಾಶಾಲಿಯಾದ ಯಮನೂ ಸಾವಿತ್ರಿಯು ಅತ್ತುದನ್ನು ಕೇಳಿ ಇಂತಹ ಒಳ್ಳೆಯ ನಡತೆಯುಳ್ಳ ಸಾಧ್ವಿಯನ್ನು ನಾನು ಇನ್ನು ಯಾವಾಗ ನೋಡಿಯೇನು ? ಎಂದು ಅವಳ ನಡತೆಗೆ ಸಂತುಷ್ಟನಾಗಿ ಮುಂದೆ ಹೇಳುವಂತೆ ಹೇಳಿದನು. ||೭೯||

ಮಂಗಳಕರಳಾದ ಎಲೌ ಸಾವಿತ್ರಿಯೇ, ನೀನು ಪುಣ್ಯಕ್ಷೇತ್ರವಾದ ಭರತ ಖಂಡದಲ್ಲಿ ಒಂದು ಲಕ್ಷವರ್ಷ ಸುಖವನ್ನನುಭವಿಸಿ ಕೊನೆಗೆ ಯಾವ ಲೋಕದಲ್ಲಿ ಆ ದೇವಿಯು ಪ್ರಕಾಶಿಸುತ್ತಿರುವಳೋ, ಆ ಮಣಿದ್ವೀಪಕ್ಕೆ ನೀನು ಹೋಗುವೆ. ನೀನು ಈಗ ಮನೆಗೆ ಹೋಗಿ ಸಾವಿತ್ರೀದೇವಿಯ ವ್ರತವನ್ನು ಮಾಡು. ||೮೦-೮೧||

ದ್ವಿಸಪ್ತವರ್ಷಪರ್ಯಂತಂ ನಾರೀಣಾಂ ಮೋಕ್ಷಕಾರಣಂ ।
ಜ್ಯೇಷ್ಠಶುಕ್ಲಚತುರ್ದಶ್ಯಾಂ ಸಾವಿತ್ರ್ಯಾಶ್ಚ ವ್ರತಂ ಶುಭಂ ॥೮೨॥

ಶುಕ್ಲಾಷ್ಟಮ್ಯಾಂ ಭಾದ್ರಪದೇ ಮಹಾಲಕ್ಷ್ಮ್ಯಾ ಯಥಾವ್ರತಂ ।
ದ್ವ್ಯಷ್ಟವರ್ಷಂ ವ್ರತಂ ಚೈವ ಪ್ರತ್ಯಾದೇಯಂ ಶುಚಿಸ್ಮಿತೇ ॥೮೩॥

ಕರೋತಿ ಭಕ್ತ್ಯಾ ಯಾ ನಾರೀ ಸಾ ಯಾತಿ ಚ ವಿಭೋಃ ಪದಂ ।
ಪ್ರತಿಮಂಗಲವಾರೇ ಚ ದೇವೀಂ ಮಂಗಲದಾಯಿನೀಂ ॥೮೪॥

ಪ್ರತಿಮಾಸಂ ಶುಕ್ಲಷಷ್ಠ್ಯಾಂ ಷಷ್ಠೀಂ ಮಂಗಲದಾಯಿನೀಂ ।
ತಥಾ ಚಾಽಽಷಾಢಸಂಕ್ರಾಂತ್ಯಾಂ ಮಾನಸಾಂ ಸರ್ವಸಿದ್ಧಿದಾಂ ॥೮೫॥

ರಾಧಾಂ ರಾಸೇ ಚ ಕಾರ್ತಿಕ್ಯಾಂ ಕೃಷ್ಣಪ್ರಾಣಾಧಿಕಪ್ರಿಯಾಂ ।
ಉಪೋಷ್ಯ ಶುಕ್ಲಾಷ್ಟಮ್ಯಾಂ ಚ ಪ್ರತಿಮಾಸಂ ವರಪ್ರದಂ ॥೮೬॥

---

ಜ್ಯೇಷ್ಠ ಶುದ್ಧ ಚತುರ್ದಶಿಯ ದಿನ ಸ್ತ್ರೀಯರಿಗೆ ಮೋಕ್ಷವನ್ನು ಕೊಡತಕ್ಕ ಸಾವಿತ್ರಿಯ ವ್ರತವನ್ನು ಹದಿನಾಲ್ಕು ವರ್ಷಗಳ ವರೆಗೆ ಮಾಡು. ॥೮೨॥

ಭಾದ್ರಪದ ಶುಕ್ಲ ಅಷ್ಟಮಿಯ ದಿನ ಮಹಾಲಕ್ಷ್ಮಿಯ ವ್ರತವನ್ನು ಹದಿನಾರು ವರ್ಷ ಯಾವ ಸ್ತ್ರೀಯು ಮಾಡುವಳೋ ಅವಳು ಮೂಲಪ್ರಕೃತಿಯ ಸ್ಥಾನಕ್ಕೆ ಹೋಗುವಳು. ॥೮೩॥

ಪ್ರತಿ ಮಂಗಳವಾರದಲ್ಲಿಯೂ ಮಂಗಲ ಚಂಡಿಕಾದೇವಿಯನ್ನು ಪ್ರತಿ ತಿಂಗಳಲ್ಲಿಯೂ ಶುಕ್ಲಪಕ್ಷದ ಷಷ್ಠಿಯ ದಿನ ದೇವಸೇನಾ ಎಂಬ ಹೆಸರಿನ ಷಷ್ಠೀ ದೇವಿಯನ್ನೂ ಆಷಾಢ ಮಾಸದಲ್ಲಿ ಸಂಕ್ರಮಣದ ದಿನ ಸರ್ವಸಿದ್ಧಿಯನ್ನೂ ಕೊಡುವ ಮಾನಸಾದೇವಿಯನ್ನೂ ಪೂಜಿಸು. ॥೮೪-೮೫॥

ಕಾರ್ತಿಕ ಶುಕ್ಲ ಪೂರ್ಣಿಮೆಯ ದಿನ ಕೃಷ್ಣನ ಪ್ರಾಣಪ್ರಿಯಳಾದ ರಾಧಾ ದೇವಿಯನ್ನೂ ಪ್ರತಿ ತಿಂಗಳಲ್ಲೂ ಶುಕ್ಲಪಕ್ಷದ ಅಷ್ಟಮಿಯ ದಿನ ಉಪವಾಸಮಾಡಿ ಆರಾಧಿಸು. ॥೮೬॥

ವಿಷ್ಣುಮಾಯಾಂ ಭಗವತೀಂ ದುರ್ಗಾಂ ದುರ್ಗಾರ್ತಿನಾಶಿನೀಂ ।
ಪ್ರಕೃತಿಂ ಜಗದಂಬಾಂ ಚ ಪತಿಪುತ್ರವತೀಷು ಚ ॥೮೭॥

ಪತಿವ್ರತಾಸು ಶುದ್ಧಾಸು ಯಂತ್ರೇಷು ಪ್ರತಿಮಾಸು ಚ ।
ಯಾ ನಾರೀ ಪೂಜಯೇದ್ಭಕ್ತ್ಯಾ ಧನಸಂತಾನಹೇತವೇ ॥೮೮॥

ಇಹಲೋಕೇ ಸುಖಂ ಭುಕ್ತ್ವಾ ಯಾತ್ಯಂತೇ ಶ್ರೀವಿಭೋಃ ಪದಂ ।
ಏವಂ ದೇವ್ಯಾ ವಿಭೂತೀಶ್ಚ ಪೂಜಯೇತ್ಸಾಧಕೋಽನಿಶಂ ॥೮೯॥

ಸರ್ವಕಾಲಂ ಸರ್ವರೂಪಾ ಸಂಸೇವ್ಯಾ ಪರಮೇಶ್ವರೀ ।
ನಾತಃ ಪರತರಂ ಕಿಂಚಿತ್ಕೃತಕೃತ್ಯ ತ್ವದಾಯಕಂ ॥೯೦॥

ಇತ್ಯುಕ್ತ್ವಾ ತಾಂ ಧರ್ಮರಾಜೋ ಜಗಾಮ ನಿಜಮಂದಿರಂ ।
ಗೃಹೀತ್ವಾ ಸ್ವಾಮಿನಂ ಸಾ ಚ ಸಾವಿತ್ರೀ ಚ ನಿಜಾಲಯಂ ॥೯೧॥

---

ವಿಷ್ಣುಮಾಯಾಸ್ವರೂಪಳಾದ, ಕಷ್ಟಗಳನ್ನು ನಾಶಮಾಡುವ ದುರ್ಗಾದೇವಿಯನ್ನೂ ಪೂಜಿಸಬೇಕು. ಜಗದಂಬಾ ಸ್ವರೂಪರಾದ ಈ ದೇವತೆಗಳನ್ನು ಮೇಲೆ ಹೇಳಿದ ದಿವಸಗಳಲ್ಲಿ ಗಂಡನೂ, ಮಕ್ಕಳೂ ಉಳ್ಳ ಸುಮಂಗಲಿಯರಲ್ಲೂ ಪರಿಶುದ್ಧರಾದಪತಿವ್ರತೆಯರಲ್ಲೂ, ಯಂತ್ರ ಅಥವಾ ಪ್ರತಿಮೆಗಳಲ್ಲಿಯೂ ಯಾವ ಸ್ತ್ರೀಯು ಧನ ಮತ್ತು ಸಂತಾನಪ್ರಾಪ್ತಿಗಾಗಿ ಭಕ್ತಿಯಿಂದ ಪೂಜಿಸುವಳೋ ಅವಳು ಇಹಲೋಕದಲ್ಲಿ ಸುಖವನ್ನನುಭವಿಸಿ ಪರಲೋಕದಲ್ಲಿ ಮೂಲಪ್ರಕೃತಿಯ ಸ್ಥಾನವನ್ನು ಪಡೆವಳು. ಹಾಗೆಯೇ ಉಪವಾಸಕನೂ ಅಂತಹ ಸದ್ಗತಿಯನ್ನು ಪಡೆವನು. ||೮೭-೮೮||

ಸಾಧಕನು ಮೇಲೆ ಹೇಳಿದ ದೇವಿಯ ವಿಭೂತಿಗಳಾದ ಸುಮಂಗಲಿ ಪತಿವ್ರತೆ, ಯಂತ್ರ, ಮೂರ್ತಿಗಳನ್ನು ಯಾವಾಗಲೂ ಪೂಜಿಸಬೇಕು. ಭುವನೇಶ್ವರೀ ದೇವಿಯನ್ನು ಎಲ್ಲ ಕಾಲಗಳಲ್ಲೂ ಎಲ್ಲ ರೂಪಗಳಲ್ಲೂ ಪೂಜಿಸಬಹುದು. ದೇವಿಯ ಸೇವೆಗಿಂತಲೂ ಕೃತಾರ್ಥತೆಯನ್ನುಂಟುಮಾಡುವ ಮತ್ತೊಂದು ವ್ರತವಿಲ್ಲ. ಆದುದರಿಂದ ಮಗಳೇ, ನೀನು ದೇವೀವ್ರತಗಳನ್ನು ಮಾಡಿ ಶಾಂತಳಾಗಿರು. ಗುರುವಾದ ನಾನು ನಿನ್ನ ಮನಸ್ಸಿನಲ್ಲಿ ಚೈತನ್ಯರೂಪದಿಂದ ಇರುವೆನು. ನನ್ನ ವಿಯೋಗದಿಂದ ನೀನು ದುಃಖಿಸಬೇಡ. ||೮೯-೯೦||

ಹೀಗೆಂದು ಹೇಳಿ ಧರ್ಮರಾಜನು ತನ್ನ ಮನೆಗೆ ಹೋದನು. ಸಾವಿತ್ರಿಯೂ

ಸಾವಿತ್ರೀ ಸತ್ಯವಾಂಶ್ಚೈವ ಪ್ರಯಯೌ ಚ ಯಥಾಗಮಂ ।
ಅನ್ಯಾಂಶ್ಚ ಕಥಯಾಮಾಸ ಸ್ವವೃತ್ತಾಂತಂ ಹಿ ನಾರದ ॥೯೨॥

ಸಾವಿತ್ರೀಜನಕಃ ಪುತ್ರಾನ್ಸಂಪ್ರಾಪ್ತಃ ಪ್ರಕ್ರಮೇಣ ಚ ।
ಶ್ವಶುರಶ್ಚಕ್ಷುಷೀ ರಾಜ್ಯಂ ಸಾ ಚ ಪುತ್ರಾನ್ವರೇಣ ಚ ॥೯೩॥

ಲಕ್ಷವರ್ಷಂ ಸುಖಂ ಭುಕ್ತ್ವಾ ಪುಣ್ಯಕ್ಷೇತ್ರೇ ಚ ಭಾರತೇ ।
ಜಗಾಮ ಸ್ವಾಮಿನಾ ಸಾರ್ಧಂ ದೇವೀಲೋಕಂ ಪತಿವ್ರತಾ ॥೯೪॥

ಸವಿತುಶ್ಚಾಧಿದೇವೀ ಯಾ ಮಂತ್ರಾಧಿಷ್ಠಾತೃದೇವತಾ ।
ಸಾವಿತ್ರೀ ಹ್ಯಪಿ ವೇದಾನಾಂ ಸಾವಿತ್ರೀ ತೇನ ಕೀರ್ತಿತಾ ॥೯೫॥

---

ಧರ್ಮರಾಜನ ಉಪದೇಶಾನುಗ್ರಹಗಳಿಂದ ತನ್ನ ಪತಿಯನ್ನು ಕರೆದುಕೊಂಡು ಮನೆಗೆ ಹೋದಳು. ॥೯೧॥

ನಾರದನೇ, ಕೇಳು. ಸಾವಿತ್ರೀ ಸತ್ಯವಾನರಿಬ್ಬರೂ ತಾವು ಬಂದಂತೆಯೇ ಮನೆಗೆ ಹೋದರು. ತಮ್ಮ ವೃತ್ತಾಂತವನ್ನು ತಮ್ಮ ಬಂಧುಗಳಿಗೆಲ್ಲರಿಗೂ ಹೇಳಿದರು. ॥೯೨॥

ಸಾವಿತ್ರಿಯ ತಂದೆಯು ಕ್ರಮವಾಗಿ ಮಕ್ಕಳನ್ನು ಪಡೆದನು. ಮಾವನು ಕಣ್ಣುಗಳನ್ನೂ ರಾಜ್ಯವನ್ನೂ ಪಡೆದನು. ಅವಳೂ ಕೂಡ ವರದಿಂದ ಮಕ್ಕಳನ್ನು ಪಡೆದಳು. ॥೯೩॥

ಪತಿವ್ರತೆಯಾದ ಸಾವಿತ್ರಿಯು ಪುಣ್ಯಕ್ಷೇತ್ರವಾದ ಭರತಖಂಡದಲ್ಲಿ ಒಂದು ಲಕ್ಷ ವರ್ಷ ಸುಖವನ್ನನುಭವಿಸಿ ಕೊನೆಗೆ ತನ್ನ ಪತಿಯೊಡನೆ ದೇವಿಯ ಲೋಕವಾದ ಮಣಿದ್ವೀಪಕ್ಕೆ ಹೋದಳು. ॥೯೪॥

ಸೂರ್ಯಮಂಡಲಾಂತರ್ಯಾಮಿಯಾದ ಬ್ರಹ್ಮಸ್ವರೂಪಳೂ, ಆ ಸೂರ್ಯನ ಅಂತರ್ಗತವಾದ ಬ್ರಹ್ಮಸ್ವರೂಪವನ್ನು ಪ್ರತಿಪಾದಿಸುವ (ತಿಳಿಸುವ) ಗಾಯತ್ರೀ ಮಂತ್ರಕ್ಕೆ ಆಶ್ರಯಸ್ವರೂಪಳೂ, ವೇದಗಳನ್ನು ಪ್ರಸವಿಸಿದವಳೂ ಆದುದರಿಂದ ಭಗವತೀ ದೇವಿಗೆ ಸಾವಿತ್ರೀ ಎಂದು ಹೆಸರು ಬಂದಿರುವುದು. ॥೯೫॥

ಇತ್ಯೇವಂ ಕಥಿತಂ ವತ್ಸ ಸಾವಿತ್ರ್ಯಾಖ್ಯಾನಮುತ್ತಮಂ ।
ಜೀವಕರ್ಮವಿಪಾಕಂ ಚ ಕಿಂ ಪುನಃ ಶ್ರೋತುಮಿಚ್ಛಸಿ ॥೯೬॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ನವಮಸ್ಕಂಧೇ
ಅಷ್ಟತ್ರಿಂಶೋಽಧ್ಯಾಯಃ

---

ಎಲೌ ನಾರದನೇ, ಶ್ರೇಷ್ಠವಾದ ಸಾವಿತ್ರಿಯ ಚರಿತ್ರೆಯನ್ನೂ, ಪ್ರಾಣಿಗಳ ಕರ್ಮಫಲಗಳನ್ನೂ ಹೇಳಿದೆನು. ಮತ್ತೇನನ್ನು ಕೇಳಬೇಕೆಂದಿರುವೆ? ಎಂದು ನಾರಾಯಣಮುನಿಯು ಹೇಳಿದನು. ॥೯೬॥

ಇಲ್ಲಿಗೆ ದೇವೀಭಾಗವತಮಹಾಪುರಾಣದ ಒಂಬತ್ತನೆಯ ಸ್ಕಂಧದಲ್ಲಿ
ಮೂವತ್ತೆಂಟನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ನವಮಸ್ಕಂಧೇ

|| ಏಕೋನ ಚತ್ವಾರಿಂಶೋಽಧ್ಯಾಯಃ ||

**ಮೂವತ್ತೊಂಬತ್ತನೆಯ ಅಧ್ಯಾಯವು**

|| ನಾರದ ಉವಾಚ ||

**ಶ್ರೀಮೂಲಪ್ರಕೃತಿರ್ದೇವ್ಯಾ ಗಾಯತ್ರ್ಯಾಸ್ತು ನಿರಾಕೃತೇಃ ।**
**ಸಾವಿತ್ರೀ ಯಮಸಂವಾದೇ ಶ್ರುತಂ ವೈ ನಿರ್ಮಲಂ ಯಶಃ ॥೧॥**

**ತದ್ಗುಣೋತ್ಕೀರ್ತನಂ ಸತ್ಯಂ ಮಂಗಲಾನಾಂ ಚ ಮಂಗಲಂ ।**
**ಅಧುನಾ ಶ್ರೋತುಮಿಚ್ಛಾಮಿ ಲಕ್ಷ್ಮ್ಯುಪಾಖ್ಯಾನಮೀಶ್ವರ ॥೨॥**

**ಕೇನಾದೌ ಪೂಜಿತಾ ಸಾಽಪಿ ಕಿಂ ಭೂತಾ ಕೇನ ವಾ ಪುರಾ ।**
**ತದ್ಗುಣೋತ್ಕೀರ್ತನಂ ಮಹ್ಯಂ ವದ ವೇದವಿದಾಂ ವರ ॥೩॥**

---

ಶ್ರೇಷ್ಠನಾದ ನಾರಾಯಣಮುನಿಯೇ, ಸಾವಿತ್ರಿಯ ಸಂವಾದದಲ್ಲಿ ನಿರಾಕಾರಳಾದ ಮೂಲಪ್ರಕೃತಿಸ್ವರೂಪಳಾದ ಗಾಯತ್ರಿಯ ನಿರ್ಮಲವಾದ ಯಶಸ್ಸನ್ನು ಕೇಳಿದೆನು. ಆ ಗಾಯತ್ರೀದೇವಿಯ ಗುಣಕೀರ್ತನೆಯು ಅತ್ಯಂತಮಂಗಲಕರವಾದುದೆಂಬುದು ನಿಜವಾದ ಮಾತು. ಈಗ ಲಕ್ಷ್ಮೀದೇವಿಯ ಉಪಾಖ್ಯಾನವನ್ನು ಕೇಳ ಬಯಸುವೆನು. ||೧-೨||

ವೇದವನ್ನು ಬಲ್ಲವರಲ್ಲಿ ಶ್ರೇಷ್ಠನೇ, ಆ ಲಕ್ಷ್ಮೀದೇವಿಯನ್ನು ಮೊದಲು ಯಾರು ಪೂಜಿಸಿದರು? ಆ ದೇವಿಯಸ್ವರೂಪವೇನು? ಯಾವ ಮಂತ್ರ ಮತ್ತು ಸ್ತೋತ್ರಗಳಿಂದ ಆಕೆಯನ್ನು ಪೂಜಿಸಿದರು? ಆ ದೇವಿಯ ಗುಣಕೀರ್ತನೆಯನ್ನು ನನಗೆ ಹೇಳು. ||೩||

|| ನಾರಾಯಣ ಉವಾಚ ||

ಸೃಷ್ಟೇರಾದೌ ಪುರಾ ಬ್ರಹ್ಮನ್ ಕೃಷ್ಣಸ್ಯ ಪರಮಾತ್ಮನಃ ।
ದೇವೀ ವಾಮಾಂಸ ಸಂಭೂತಾ ಬಭೂವ ರಾಸಮಂಡಲೇ ||೪||

ಅತೀವ ಸುಂದರೀ ಶ್ಯಾಮಾ ನ್ಯಗ್ರೋಧಪರಿಮಂಡಿತಾ ।
ಯಥಾ ದ್ವಾದಶವರ್ಷೀಯಾ ಶಶ್ವತ್ಸುಸ್ಥಿರಯೌವನಾ ||೫||

ಶ್ವೇತಚಂಪಕವರ್ಣಾಭಾ ಸುಖದೃಶ್ಯಾ ಮನೋಹರಾ ।
ಶರತ್ಪಾರ್ವಣಕೋಟೀಂದುಪ್ರಭಾಪ್ರಚ್ಛಾದನಾನನಾ ||೬||

ಶರನ್ಮಧ್ಯಾಹ್ನಪದ್ಮಾನಾಂ ಶೋಭಾಮೋಚನಲೋಚನಾ ।
ಸಾ ದೇವೀ ದ್ವಿವಿಧಾ ಭೂತಾ ಸಹಸ್ಯೈವೇಶ್ವರೇಚ್ಛಯಾ ||೭||

ಸ್ತ್ರೀಯರೂಪೇಣ ವರ್ಣೇನ ತೇಜಸಾ ವಯಸಾ ತ್ವಿಷಾ ।
ಯಶಸಾ ವಾಸಸಾ ಕೃತ್ಯಾ ಭೂಷಣೇನ ಗುಣೇನ ಚ ||೮||

---

ನಾರಾಯಣನು ಹೇಳಿದನು — ನಾರದನೇ, ಕೇಳು. ಆದಿಸೃಷ್ಟಿಯಲ್ಲಿ ರಾಸಮಂಡಲದಲ್ಲಿ ಪರಮಾತ್ಮನಾದ ಶ್ರೀಕೃಷ್ಣನ ಎಡಭುಜದಲ್ಲಿ ಲಕ್ಷ್ಮೀದೇವಿಯು ಹುಟ್ಟಿದಳು. ಆ ದೇವಿಯು ಮಹಾಸುಂದರಿಯಾಗಿ ಮೇಘದಂತೆ ಕಪ್ಪುಬಣ್ಣವಾಗಿರುವ ಕೂದಲಿನಿಂದ ಕೂಡಿ ಹನ್ನೆರಡು ವಯಸ್ಸಿನ ಕನ್ಯೆಯಂತೆ ಇದ್ದರೂ ಶಾಶ್ವತವಾದ ಪ್ರಾಯದವಳಾಗಿದ್ದಳು. ||೪-೫||

ಬಿಳಿಯ ಸಂಪಿಗೆಯಂತೆ ಇರುವ ಅವಳ ಶರೀರಕಾಂತಿಯು ನೋಡುವುದಕ್ಕೆ ಸುಖಕರವಾಗಿಯೂ ಮನೋಹರವಾಗಿಯೂ ಇದ್ದಿತು. ಶರದೃತುವಿನ ಪೂರ್ಣಿಮೆಯ ಅನೇಕ ಚಂದ್ರರ ಕಾಂತಿಯನ್ನು ಮುಚ್ಚುವ ಮುಖಕಾಂತಿಯುಳ್ಳವಳಾಗಿದ್ದಳು. ||೬||

ಶರತ್ಕಾಲದ ಮಧ್ಯಾಹ್ನದ ಕಮಲದ ಕಾಂತಿಯನ್ನು ತಿರಸ್ಕರಿಸುವ ಕಣ್ಣಿನ ಕಾಂತಿಯುಳ್ಳ ಆ ಲಕ್ಷ್ಮೀದೇವಿಯು ಈಶ್ವರನ ಇಚ್ಛೆಯಿಂದ ಒಡನೆಯೇ ಎರಡು (ರಾಧೆಯು ವಾಮಾಂಸವೆಂದೂ, ಕೃಷ್ಣನ ವಾಮಾಂಸವೆಂದೂ ಪಾಠಭೇದವಿದೆ.) ಬಗೆಯಾದಳು. ||೭||

ರೂಪ, ಬಣ್ಣ, ತೇಜಸ್ಸು, ವಯಸ್ಸು, ಕಾಂತಿ, ಯಶಸ್ಸು, ಕೆಲಸ, ವಸ್ತ್ರ, ಆಭರಣ, ಗುಣ, ನಗು, ನೋಟ, ಪ್ರೀತಿ, ನೀತಿ ಇವುಗಳಲ್ಲಿ ಸಮಾನವಾಗಿ

ಸ್ಮಿತೇನ ವೀಕ್ಷಣೇನೈವ ಪ್ರೇಮ್ಣಾ ವಾಽನುನಯೇನ ಚ ।
ತದ್ವಾಮಾಂಸಾನ್ಮಹಾಲಕ್ಷ್ಮೀರ್ದಕ್ಷಿಣಾಂಸಾಚ್ಚ ರಾಧಿಕಾ ॥೯॥

ರಾಧಾಽಽದೌ ವರಯಾಮಾಸ ದ್ವಿಭುಜಂ ಚ ಪರಾತ್ಪರಂ ।
ಮಹಾಲಕ್ಷ್ಮೀಶ್ಚ ತತ್ಪಶ್ಚಾಚ್ಚಕಮೇ ಕಮನೀಯಕಂ ॥೧೦॥

ಕೃಷ್ಣಸ್ತದ್ಗೌರವೇಣೈವ ದ್ವಿಧಾರೂಪೋ ಬಭೂವ ಹ ।
ದಕ್ಷಿಣಾಂಸಶ್ಚ ದ್ವಿಭುಜೋ ವಾಮಾಂಸಶ್ಚ ಚತುರ್ಭುಜಃ ॥೧೧॥

ಚತುರ್ಭುಜಾಯ ದ್ವಿಭುಜೋ ಮಹಾಲಕ್ಷ್ಮೀಂ ದದೌ ಪುರಾ ।
ಲಕ್ಷ್ಯತೇ ದೃಶ್ಯತೇ ವಿಶ್ವಂ ಸ್ನಿಗ್ಧದೃಷ್ಟ್ಯಾ ಯಥಾಽನಿಶಂ ॥೧೨॥

ದೇವೀಭೂತಾ ಚ ಮಹತೀ ಮಹಾಲಕ್ಷ್ಮೀಶ್ಚ ಸಾ ಸ್ಮೃತಾ ।
ರಾಧಾಕಾಂತಶ್ಚ ದ್ವಿಭುಜೋ ಲಕ್ಷ್ಮೀಕಾಂತಶ್ಚತುರ್ಭುಜಃ ॥೧೩॥

ಶುದ್ಧಸತ್ತ್ವಸ್ವರೂಪಾ ಚ ಗೋಪೈರ್ಗೋಪೀಭಿರಾವೃತಾ ।
ಚತುರ್ಭುಜಶ್ಚ ವೈಕುಂಠಂ ಪ್ರಯಯೌ ಪದ್ಮಯಾ ಸಹ ॥೧೪॥

---

ಆ ಕೃಷ್ಣನ ಎಡಭುಜದಿಂದ ಲಕ್ಷ್ಮಿಯಾಗಿಯೂ ಬಲಭುಜದಿಂದ ರಾಧೆಯಾಗಿಯೂ ಹುಟ್ಟಿದಳು. ||೮-೯||

ರಾಧೆಯು ಮೊದಲು ಪರಬ್ರಹ್ಮಸ್ವರೂಪನಾದ ದ್ವಿಭುಜಕೃಷ್ಣನನ್ನು ವರಿಸಿದಳು. ಆಮೇಲೆ ಮಹಾಲಕ್ಷ್ಮಿಯೂ ಅವನನ್ನೇ ಕಾಮಿಸಿದಳು. ಕೃಷ್ಣನು ಮಹಾಲಕ್ಷ್ಮಿಯಲ್ಲಿ ಗೌರವ ಬುದ್ಧಿಯಿಂದ ತಾನೇ ಬಲಭಾಗದ ಭುಜದಲ್ಲಿ ದ್ವಿಭುಜನಾಗಿಯೂ ಎಡಭಾಗದಲ್ಲಿ ಚತುರ್ಭುಜನಾಗಿಯೂ ಎರಡು ರೂಪವಾದನು. ||೧೦-೧೧||

ದ್ವಿಭುಜಕೃಷ್ಣನು ಚತುರ್ಭುಜಕೃಷ್ಣನಿಗೆ ಪೂರ್ವದಲ್ಲಿ ಮಹಾಲಕ್ಷ್ಮಿಯನ್ನು ಕೊಟ್ಟನು. ಪ್ರಪಂಚವನ್ನು ಪ್ರೀತಿಪೂರ್ವಕವಾದ ನೋಟದಿಂದ ನೋಡುವುದರಿಂದಲೂ, ದೇವಿಯರಲ್ಲಿ ದೊಡ್ಡವಳಾದುದರಿಂದ ಮಹಾಲಕ್ಷ್ಮೀ ಎಂದು ಆ ದೇವಿಗೆ ಹೆಸರಾಯ್ತು. ರಾಧಾಪತಿಯು ದ್ವಿಭುಜನು. ಲಕ್ಷ್ಮೀಪತಿಯು ಚತುರ್ಭುಜನು. ||೧೨-೧೩||

ರಾಧೆಯು ಶುದ್ಧಸತ್ವಸ್ವರೂಪಳು. ಗೋಪರಿಂದಲೂ ಗೋಪಿಯರಿಂದಲೂ ಕೂಡಿದವಳು. ಚತುರ್ಭುಜ ಕೃಷ್ಣನು ಲಕ್ಷ್ಮಿಯೊಡನೆ ವೈಕುಂಠಕ್ಕೆ ಹೋದನು. ||೧೪||

ಸರ್ವಾಂಶೇನ ಸಮೌ ತೌ ದ್ವೌ ಕೃಷ್ಣನಾರಾಯಣೌ ಪರೌ ।
ಮಹಾಲಕ್ಷ್ಮೀಶ್ಚ ಯೋಗೇನ ನಾನಾರೂಪಾ ಬಭೂವ ಸಾ ॥೧೫॥

ವೈಕುಂಠೇ ಚ ಮಹಾಲಕ್ಷ್ಮೀಃ ಪರಿಪೂರ್ಣತಮಾ ರಮಾ ।
ಶುದ್ಧಸತ್ತ್ವಸ್ವರೂಪಾ ಚ ಸರ್ವಸೌಭಾಗ್ಯಸಂಯುತಾ ॥೧೬॥

ಪ್ರೇಮ್ಣಾ ಸಾ ಚ ಪ್ರಧಾನಾ ಚ ಸರ್ವಾಸು ರಮಣೀಷು ಚ ।
ಸ್ವರ್ಗೇಷು ಸ್ವರ್ಗಲಕ್ಷ್ಮೀಶ್ಚ ಶಕ್ರಸಂಪತ್ಸ್ವರೂಪಿಣೀ ॥೧೭॥

ಪಾತಾಲೇ ನಾಗಲಕ್ಷ್ಮೀಶ್ಚ ರಾಜಲಕ್ಷ್ಮೀಶ್ಚ ರಾಜಸು ।
ಗೃಹಲಕ್ಷ್ಮೀರ್ಗೃಹೇಷ್ವೇವ ಗೃಹಿಣಾಂ ಚ ಕಲಾಂಶತಃ ॥೧೮॥

ಸಂಪತ್ಸ್ವರೂಪಾ ಗೃಹಿಣಾಂ ಸರ್ವಮಂಗಲಮಂಗಲಾ ।
ಗವಾಂ ಪ್ರಸೂತಿಃ ಸುರಭಿರ್ದಕ್ಷಿಣಾ ಯಜ್ಞಕಾಮಿನೀ ॥೧೯॥

ಕ್ಷೀರೋದಸಿಂಧುಕನ್ಯಾ ಸಾ ಶ್ರೀರೂಪಾ ಪದ್ಮಿನೀಷು ಚ ।
ಶೋಭಾಸ್ವರೂಪಾ ಚಂದ್ರೇ ಚ ಸೂರ್ಯಮಂಡಲಮಂಡಿತಾ ॥೨೦॥

---

ಶ್ರೇಷ್ಠರಾದ ಕೃಷ್ಣನಾರಾಯಣರು ಸರ್ವವಿಧದಲ್ಲಿಯೂ ಸಮಾನರು. ಮಹಾಶಕ್ತಿಯು ತನ್ನ ಯೋಗಶಕ್ತಿಯಿಂದ ಬಗೆಬಗೆಯ ರೂಪವನ್ನು ಪಡೆದಳು. ॥೧೫॥

ವೈಕುಂಠದಲ್ಲಿ ಮಹಾಲಕ್ಷ್ಮಿಯು ತನ್ನ ಪೂರ್ಣಾಂಶದಿಂದ ಶುದ್ಧ ಸತ್ವಸ್ವರೂಪಳಾಗಿ ಸಮಸ್ತ ಸೌಭಾಗ್ಯಗಳಿಂದ ಕೂಡಿರುವಳು. ಸಮಸ್ತ ಸ್ತ್ರೀಯರಿಗಿಂತಲೂ ಪ್ರಾಣಿಗಳಲ್ಲಿ ಹೆಚ್ಚು ದಯೆಯುಳ್ಳವಳು. ॥೧೬॥

ಕಲಾಂಶದಿಂದ ಸ್ವರ್ಗದಲ್ಲಿ ಇಂದ್ರನ ಸಂಪತ್ತಿನರೂಪಳಾಗಿ ಸ್ವರ್ಗಲಕ್ಷ್ಮಿಯಾಗಿರುವಳು. ಪಾತಾಲದಲ್ಲಿ ನಾಗಲಕ್ಷ್ಮಿಯೂ ರಾಜರಲ್ಲಿ ರಾಜ್ಯಲಕ್ಷ್ಮಿಯಾಗಿಯೂ ಗೃಹಸ್ಥರ ಮನೆಯಲ್ಲಿ ಗೃಹಲಕ್ಷ್ಮಿಯಾಗಿಯೂ ಸಂಪತ್ತಿನ ಸ್ವರೂಪಳಾಗಿಯೂ, ಮಂಗಲಸ್ವರೂಪಳಾಗಿಯೂ ಇರುವಳು. ॥೧೭-೧೮॥

ಗೋವುಗಳ ತಾಯಿಯಾದ ಕಾಮಧೇನುವಾಗಿಯೂ ಯಜ್ಞನ ಪತ್ನಿಯಾದ ದಕ್ಷಿಣೆಯಾಗಿಯೂ, ಕಮಲಗಳಲ್ಲಿ ಕಾಂತಿರೂಪಳಾಗಿಯೂ ಚಂದ್ರನಲ್ಲಿ ಶೋಭಾರೂಪಳಾಗಿಯೂ, ಸೂರ್ಯನಲ್ಲಿ ಪ್ರಕಾಶರೂಪಳಾಗಿಯೂ, ಆ ಲಕ್ಷ್ಮಿಯೇ ಇರುವಳು. ॥೧೯-೨೦॥

ವಿಭೂಷಣೇಷು ರತ್ನೇಷು ಫಲೇಷು ಚ ಜಲೇಷು ಚ ।
ನೃಪೇಷು ನೃಪಪತ್ನೀಷು ದಿವ್ಯಸ್ತ್ರೀಷು ಗೃಹೇಷು ಚ ॥೨೧॥

ಸರ್ವಸಸ್ಯೇಷು ವಸ್ತ್ರೇಷು ಸ್ಥಾನೇಷು ಸಂಸ್ಕೃತೇಷು ಚ ।
ಪ್ರತಿಮಾಸು ಚ ದೇವಾನಾಂ ಮಂಗಲೇಷು ಘಟೇಷು ಚ ॥೨೨॥

ಮಾಣಿಕ್ಯೇಷು ಚ ಮುಕ್ತಾಸು ಮಾಲ್ಯೇಷು ಚ ಮನೋಹರಾ ।
ಮಣೀಂದ್ರೇಷು ಚ ಹೀರೇಷು ಕ್ಷೀರೇಷು ಚಂದನೇಷು ಚ ॥೨೩॥

ವೃಕ್ಷಶಾಖಾಸು ರಮ್ಯಾಸು ನವಮೇಘೇಷು ವಸ್ತುಷು ।
ವೈಕುಂಠೇ ಪೂಜಿತಾ ಸಾಽಽದೌ ದೇವೀ ನಾರಾಯಣೇನ ಚ ॥೨೪॥

ದ್ವಿತೀಯೇ ಬ್ರಹ್ಮಣಾ ಭಕ್ತ್ಯಾ ತೃತೀಯೇ ಶಂಕರೇಣ ಚ ।
ವಿಷ್ಣುನಾ ಪೂಜಿತಾ ಸಾ ಚ ಕ್ಷೀರೋದೇ ಭಾರತೇ ಮುನೇ ॥೨೫॥

ಸ್ವಾಯಂಭುವೇನ ಮನುನಾ ಮಾನವೇಂದ್ರೈಶ್ಚ ಸರ್ವತಃ ।
ಋಷೀಂದ್ರೈಶ್ಚ ಮುನೀಂದ್ರೈಶ್ಚ ಸದ್ಭಿಶ್ಚ ಗೃಹಿಭಿರ್ಭವೇ ॥೨೬॥
ಗಂಧರ್ವೈಶ್ಚೈವ ನಾಗಾದ್ಯೈಃ ಪಾತಾಲೇಷು ಚ ಪೂಜಿತಾ ।

---

ಆಭರಣ, ರತ್ನ, ಹಣ್ಣು, ನೀರು, ರಾಜ, ರಾಜಪತ್ನಿ, ದಿವ್ಯಸ್ತ್ರೀಯರು, ಮನೆ, ಸಕಲ ಸಸ್ಯಗಳು, ವಸ್ತ್ರ, ಅಲಂಕರಿಸಿದ ಸ್ಥಳಗಳು, ದೇವರ ಪ್ರತಿಮೆ, ಮಂಗಲಕಲಶ ಗಳು ಇವುಗಳಲ್ಲೆಲ್ಲಾ ಲಕ್ಷ್ಮಿಯು ಅಂಶದಿಂದಿರುವಳು. ॥೨೧-೨೨॥

ಕೆಂಪುರತ್ನ, ಮುತ್ತು, ಹೂವಿನ ಸರ, ವಜ್ರ, ಗೋಮೇಧಿಕ, ಹಾಲು, ಶ್ರೀಗಂಧ, ಸುಂದರವಾದ ಮರದ ಕೊಂಬೆ, ಹೊಸದಾಗಿ ಹುಟ್ಟಿದ ಮೋಡ, ಹೊಸ ವಸ್ತುಗಳು, ಇವುಗಳಲ್ಲಿಯೂ ಲಕ್ಷ್ಮಿಯು ಅಂಶದಿಂದಿರುವಳು. ॥೨೩॥

ಆ ಲಕ್ಷ್ಮಿಯನ್ನು ಮೊದಲು ವೈಕುಂಠಲೋಕದಲ್ಲಿ ನಾರಾಯಣನು ಪೂಜಿಸಿದನು. ಆ ಮೇಲೆ ಬ್ರಹ್ಮನೂ, ಶಂಕರನೂ, ಕ್ಷೀರಸಮುದ್ರದಲ್ಲಿ ವಿಷ್ಣುವೂ, ಸ್ವಾಯಂಭುವಮನುವೂ, ಬಳಿಕ ಸಮಸ್ತರಾಜರೂ, ಋಷಿಗಳೂ, ಮನುಗಳೂ, ಸಜ್ಜನರಾದ ಗೃಹಸ್ಥರೂ, ಗಂಧರ್ವರೂ, ಪಾತಾಲಲೋಕದ ನಾಗಗಳೂ, ಮಹಾಲಕ್ಷ್ಮಿಯನ್ನು ಪೂಜಿಸಿದರು. ॥೨೪-೨೫-೨೬॥

**ಶುಕ್ಲಾಷ್ಟಮ್ಯಾಂ ಭಾದ್ರಪದೇ ಕೃತಾ ಪೂಜಾ ಚ ಬ್ರಹ್ಮಣಾ ॥೨೭॥**

**ಭಕ್ತ್ಯಾ ಚ ಪಕ್ಷಪರ್ಯಂತಂ ತ್ರಿಷು ಲೋಕೇಷು ನಾರದ ।**
**ಚೈತ್ರೇ ಪೌಷೇ ಚ ಭಾದ್ರೇ ಚ ಪುಣ್ಯೇ ಮಂಗಲವಾಸರೇ ॥೨೮॥**

**ವಿಷ್ಣುನಾ ಪೂಜಿತಾ ಸಾ ಚ ತ್ರಿಷುಲೋಕೇಷು ಭಕ್ತಿತಃ ।**
**ವರ್ಷಾಂತೇ ಪೌಷಸಂಕ್ರಾಂತ್ಯಾಂ ಮಾಘ್ಯಾಮಾವಾಹ್ಯ ಮಂಗಲೇ ॥೨೯॥**

**ಮನುಃಸ್ತಾಂ ಪೂಜಯಾಮಾಸ ಸಾ ಭೂತಾ ಭುವನತ್ರಯೇ ।**
**ಪೂಜಿತಾ ಸಾ ಮಹೇಂದ್ರೇಣ ಮಂಗಲೇನೈವ ಮಂಗಲೇ(ಲಾ) ॥೩೦॥**

**ಕೇದಾರೇಣೈವ ನೀಲೇನ ಸುಬಲೇನ ನಲೇನ ಚ ।**
**ಧ್ರುವೇಣೋತ್ತಾನಪಾದೇನ ಶಕ್ರೇಣ ಬಲಿನಾ ತಥಾ ॥೩೧॥**

**ಕಶ್ಯಪೇನ ಚ ದಕ್ಷೇಣ ಕರ್ದಮೇನ ವಿವಸ್ವತಾ ।**
**ಪ್ರಿಯವ್ರತೇನ ಚಂದ್ರೇಣ ಕುಬೇರೇಣೈವ ವಾಯುನಾ ॥೩೨॥**
**ಯಮೇನ ವಹ್ನಿನಾ ಚೈವ ವರುಣೇನೈವ ಪೂಜಿತಾ ।**

---

ಭಾದ್ರಪದಮಾಸದ ಶುಕ್ಲಾಷ್ಟಮಿಯ ದಿನದಿಂದ ಹದಿನೈದು ದಿನಗಳವರೆಗೆ ಬ್ರಹ್ಮನು ಭಕ್ತಿಯಿಂದ ಮಹಾಲಕ್ಷ್ಮಿಯನ್ನು ಪೂಜಿಸಿದನು. ಬಳಿಕ ಅದು ಮೂರು ಲೋಕದಲ್ಲಿಯೂ ಹರಡಿತು. ॥೨೭॥

ಚೈತ್ರ, ಪುಷ್ಯ, ಭಾದ್ರಪದಮಾಸಗಳಲ್ಲಿ ಮಂಗಲವಾರದಲ್ಲಿ ವಿಷ್ಣುವು ಲಕ್ಷ್ಮಿಯನ್ನು ಪೂಜಿಸಿದನು. ಅದು ಮೂರು ಲೋಕದಲ್ಲಿಯೂ ವಿಸ್ತರಿಸಿತು. ॥೨೮॥

ವರ್ಷದ ಕೊನೆಯಲ್ಲಿಯೂ ಪುಷ್ಯಮಾಸದಲ್ಲಿ ಸಂಕ್ರಮಣದಿನದಲ್ಲಿಯೂ, ಮಾಘಮಾಸದಲ್ಲಿಯೂ, ಮನುವು ಮಹಾಲಕ್ಷ್ಮಿಯನ್ನು ಪೂಜಿಸಿದನು. ಅದು ಮೂರುಲೋಕಕ್ಕೂ ಹರಡಿತು. ॥೨೯॥

ಆ ಮಹಾಲಕ್ಷ್ಮಿಯನ್ನು ದೇವೇಂದ್ರನೂ, ಮಂಗಲನೆಂಬ ರಾಜನೂ, ಕೇದಾರ, ನೀಲ, ಸುಬಲ, ನಲ, ಧ್ರುವ, ಉತ್ತಾನಪಾದ, ಶಕ್ರ, ಬಲಿ, ಕಶ್ಯಪ, ದಕ್ಷ, ಕರ್ದಮ, ಸೂರ್ಯ, ಪ್ರಿಯವ್ರತ, ಚಂದ್ರ, ಕುಬೇರ, ವಾಯು, ಯಮ, ಅಗ್ನಿ, ವರುಣ ಇವರುಗಳೂ ಪೂಜಿಸಿದರು. ॥೩೦-೩೧-೩೨॥

ಏವಂ ಸರ್ವತ್ರ ಸರ್ವೇಷು ಪೂಜಿತಾ ವಂದಿತಾ ಸದಾ ॥೩೩॥
ಸರ್ವೈಶ್ವರ್ಯಾಧಿದೇವೀ ಸಾ ಸರ್ವಸಂಪತ್ಸ್ವರೂಪಿಣೀ ।

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ನವಮಸ್ಕಂಧೇ
ಏಕೋನ ಚತ್ವಾರಿಂಶೋಽಧ್ಯಾಯಃ

---

ಈ ರೀತಿಯಾಗಿ ಎಲ್ಲೆಡೆಯಲ್ಲಿಯೂ ಎಲ್ಲ ಕಾಲಗಳಲ್ಲೂ ಎಲ್ಲರೂ ಸರ್ವಸಂಪತ್ತಿನ ಸ್ವರೂಪಳೂ, ಸರ್ವ ಐಶ್ವರ್ಯಕ್ಕೂ ಅಧಿದೇವತೆಯೂ ಆದ ಮಹಾಲಕ್ಷ್ಮಿಯನ್ನು ಪೂಜಿಸಿ ನಮಸ್ಕರಿಸುತ್ತಿರುವರು. ॥೩೩॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಒಂಬತ್ತನೆಯ ಸ್ಕಂಧದಲ್ಲಿ
ಮೂವತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ನವಮಸ್ಕಂಧೇ

### ॥ ಚತ್ವಾರಿಂಶೋಽಧ್ಯಾಯಃ ॥

### ನಲವತ್ತನೆಯ ಅಧ್ಯಾಯವು

॥ ನಾರದ ಉವಾಚ ॥

**ನಾರಾಯಣಪ್ರಿಯಾ ಸಾ ಚ ವರಾ ವೈಕುಂಠವಾಸಿನೀ ।**
**ವೈಕುಂಠಾಧಿಷ್ಠಾತೃದೇವೀ ಮಹಾಲಕ್ಷ್ಮೀಃ ಸನಾತನೀ ॥೧॥**

**ಕಥಂ ಬಭೂವ ಸಾ ದೇವೀ ಪೃಥಿವ್ಯಾಂ ಸಿಂಧುಕನ್ಯಕಾ ।**
**ಪುರಾ ಕೇನ ಸ್ತುತಾಽಽದೌ ಸಾ ತನ್ಮೇ ವ್ಯಾಖ್ಯಾತುಮರ್ಹಸಿ ॥೨॥**

॥ ಶ್ರೀನಾರಾಯಣ ಉವಾಚ ॥

**ಪುರಾ ದುರ್ವಾಸಸಃ ಶಾಪಾದ್ಭ್ರಷ್ಟಶ್ರೀಶ್ಚ ಪುರಂದರಃ ।**
**ಬಭೂವ ದೇವಸಂಘಶ್ಚ ಮರ್ತ್ಯಲೋಕೇ ಚ ನಾರದ ॥೩॥**

---

ವೈಕುಂಠಲೋಕದಲ್ಲಿ ವಾಸಿಸುವ ನಾರಾಯಣನ ಪ್ರಿಯಪತ್ನಿಯೂ ಆ ನಾರಾಯಣನಿಗೆ ಆಶ್ರಯಭೂತಳೂ, ಅನಾದಿಯಾದವಳೂ ಆದ ಮಹಾಲಕ್ಷ್ಮೀ ದೇವಿಯು ಭೂಮಿಯಲ್ಲಿ ಸಮುದ್ರರಾಜನ ಮಗಳಾಗಿ ಹೇಗೆ ಹುಟ್ಟಿದಳು? ಪೂರ್ವದಲ್ಲಿ ಯಾರ ಸ್ತೋತ್ರದಿಂದ ಭೂಮಿಯಲ್ಲಿ ಹುಟ್ಟಿದಳು? ಎಂಬುದನ್ನು ನನಗೆ ವಿಸ್ತರಿಸಿ ಹೇಳಬೇಕು. ಎಂದು ನಾರದನು ಕೇಳಿದನು. ॥೧-೨॥

ನಾರಾಯಣನು ಹೇಳಿದನು—ನಾರದನೇ, ಕೇಳು. ಪೂರ್ವದಲ್ಲಿ ದುರ್ವಾಸ ಋಷಿಯು ಶಾಪದಿಂದ ದೇವೇಂದ್ರನ ಸಂಪತ್ತು ನಾಶವಾಗಲು ದೇವತೆಗಳು ಭೂಲೋ

**ಲಕ್ಷ್ಮೀಃ ಸ್ವರ್ಗಾದಿಕಂ ತ್ಯಕ್ತ್ವಾ ರುಷ್ಟಾ ಪರಮದುಃಖಿತಾ ।**
**ಗತ್ವಾ ಲೀನಾ ಚ ವೈಕುಂಠೇ ಮಹಾಲಕ್ಷ್ಮೀಶ್ಚ ನಾರದ ॥೪॥**

**ತದಾ ಶೋಕಾದ್ಯಯುಃ ಸರ್ವೇ ದುಃಖಿತಾ ಬ್ರಹ್ಮಣಃ ಸಭಾಂ ।**
**ಬ್ರಹ್ಮಾಣಂ ಚ ಪುರಸ್ಕೃತ್ಯ ಯಯುರ್ವೈಕುಂಠಮೇವ ಚ ॥೫॥**

**ವೈಕುಂಠೇ ಶರಣಾಪನ್ನಾ ದೇವಾ ನಾರಾಯಣೇ ಪರೇ ।**
**ಅತೀವ ದೈನ್ಯಯುಕ್ತಾಶ್ಚ ಶುಷ್ಕಕಂಠೋಷ್ಠತಾಲುಕಾಃ ॥೬॥**

**ತದಾ ಲಕ್ಷ್ಮೀಶ್ಚ ಕಲಯಾ ಪುರಾಣಪುರುಷಾಜ್ಞಯಾ ।**
**ಬಭೂವ ಸಿಂಧುಕನ್ಯಾ ಸಾ ಸರ್ವಸಂಪತ್ಸ್ವರೂಪಿಣೀ ॥೭॥**

**ತದಾ ಮಥಿತ್ವಾ ಕ್ಷೀರೋದಂ ದೇವಾ ದೈತ್ಯಗಣೈಃ ಸಹ ।**
**ಸಂಪ್ರಾಪ್ತಾಶ್ಚ ಮಹಾಲಕ್ಷ್ಮೀಂ ವಿಷ್ಣುಸ್ತಾಂ ಚ ದದರ್ಶ ಹ ॥೮॥**

**ಸುರಾದಿಭ್ಯೋ ವರಂ ದತ್ವಾ ವನಮಾಲಾಂ ಚ ವಿಷ್ಣವೇ ।**
**ದದೌ ಪ್ರಸನ್ನವದನಾ ತುಷ್ಟಾ ಕ್ಷೀರೋದಶಾಯಿನೇ ॥೯॥**

---

ಕಕ್ಕೆ ಬಂದರು. ಸ್ವರ್ಗಲಕ್ಷ್ಮಿಯು ಸ್ವರ್ಗವನ್ನು ಬಿಟ್ಟು ಕೋಪದಿಂದ ವಿಶೇಷ ದುಃಖವನ್ನು ಹೊಂದಿ ವೈಕುಂಠಕ್ಕೆ ಹೋಗಿ ಮಹಾಲಕ್ಷ್ಮಿಯಲ್ಲಿ ಲೀನವಾದಳು. ॥೩-೪॥

ಆಗ ದೇವತೆಗಳೆಲ್ಲರೂ ದುಃಖದಿಂದ ಬ್ರಹ್ಮನ ಸಭೆಗೆ ಹೋದರು. ಬ್ರಹ್ಮನನ್ನು ಮುಂದುಮಾಡಿಕೊಂಡು ವೈಕುಂಠಲೋಕಕ್ಕೆ ಹೋಗಿ ಅಲ್ಲಿ ನಾರಾಯಣನಲ್ಲಿ ಅತ್ಯಂತ ದೈನ್ಯದಿಂದ ಗಂಟಲು, ತುಟಿ, ದವಡೆಗಳು ಒಣಗಿದವರಾಗಿ ಆ ಪರಮಾತ್ಮನನ್ನು ಶರಣುಹೊಂದಿದರು. ॥೫-೬॥

ಆಗ ಲಕ್ಷ್ಮಿಯು ಪುರಾಣಪುರುಷನಾದ ಆ ನಾರಾಯಣನ ಅಪ್ಪಣೆಯಿಂದ ಸಮುದ್ರರಾಜನಿಗೆ ತನ್ನಂಶದಿಂದ ಮಗಳಾದಳು. ದೇವತೆಗಳು ದೈತ್ಯರೊಡನೆ ಕ್ಷೀರ ಸಮುದ್ರವನ್ನು ಕಡೆದರು. ಅಲ್ಲಿ ಸರ್ವಸಂಪತ್ತಿನ ಸ್ವರೂಪಳಾದ ಲಕ್ಷ್ಮಿಯು ಹುಟ್ಟಿದಳು. ವಿಷ್ಣುವೂ ಆಕೆಯನ್ನು ನೋಡಿದನು. ॥೭-೮॥

ಸಂತೋಷದಿಂದ ಕೂಡಿದ ಮುಖವುಳ್ಳವಳಾದ ಲಕ್ಷ್ಮಿಯು ದೇವತೆಗಳಿಗೆ ವರವನ್ನು ಕೊಟ್ಟು ಕ್ಷೀರಸಮುದ್ರದಲ್ಲಿ ಮಲಗಿದ್ದ ವಿಷ್ಣುವಿಗೆ ವನಮಾಲೆಯನ್ನು ಕೊಟ್ಟಳು. ॥೯॥

ದೇವಾಶ್ಚಾಽಪ್ಯಸುರಗ್ರಸ್ತಂ ರಾಜ್ಯಂ ಪ್ರಾಪುಶ್ಚ ನಾರದ ।
ತಾಂ ಸಂಪೂಜ್ಯ ಚ ಸಂಭೂಯ ಸರ್ವತ್ರ ಚ ನಿರಾಪದಃ ॥೧೦॥

॥ ನಾರದ ಉವಾಚ ॥

ಕಥಂ ಶಶಾಪ ದುರ್ವಾಸಾ ಮುನಿಶ್ರೇಷ್ಠಃ ಕದಾಚನ ।
ಕೇನ ದೋಷೇಣ ವಾ ಬ್ರಹ್ಮನ್ ಬ್ರಹ್ಮಿಷ್ಠಸ್ತತ್ತ್ವವಿತ್ಪುರಾ ॥೧೧॥

ಮಮಂಥುಃ ಕೇನ ರೂಪೇಣ ಜಲಧಿಂ ತೇ ಸುರಾದಯಃ ।
ಕೇನ ಸ್ತೋತ್ರೇಣ ವಾ ದೇವೀ ಶಕ್ರಂ ಸಾಕ್ಷಾದ್ಬಭೂವ ಸಾ ॥೧೨॥

ಕೋ ವಾ ತಯೋಶ್ಚ ಸಂವಾದೋ ಬಭೂವ ತದ್ವದ ಪ್ರಭೋ ।

॥ ನಾರಾಯಣ ಉವಾಚ ॥

ಮಧುಪಾನಪ್ರಮತ್ತಶ್ಚ ತ್ರೈಲೋಕ್ಯಾಧಿಪತಿಃ ಪುರಾ ॥೧೩॥

ಕ್ರೀಡಾಂ ಚಕಾರ ರಹಸಿ ರಂಭಯಾ ಸಹ ಕಾಮುಕಃ ।
ಕೃತ್ವಾ ಕ್ರೀಡಾಂ ತಯಾ ಸಾರ್ಧಂ ಕಾಮುಕ್ಯಾ ಹೃತಮಾನಸಃ ॥೧೪॥

---

ನಾರದನೇ, ದೇವತೆಗಳು ಆ ಮಹಾಲಕ್ಷ್ಮಿಯನ್ನು ಪೂಜೆಮಾಡಿ ಅಸುರರು ಕಿತ್ತುಕೊಂಡಿದ್ದ ರಾಜ್ಯವನ್ನು ಪಡೆದು ಯಾವ ದುಃಖವೂ ಇಲ್ಲದವರಾಗಿ ಸುಖವಾಗಿದ್ದರು. ॥೧೦॥

ನಾರದನು ಹೇಳಿದನು--ಪರಬ್ರಹ್ಮಸ್ವರೂಪನಾದ ನಾರಾಯಣಮುನಿಯೇ, ಬ್ರಹ್ಮತತ್ತ್ವವನ್ನು ತಿಳಿದ ದುರ್ವಾಸಮುನಿಯು ಯಾವ ದೋಷದಿಂದ ಹೇಗೆ ದೇವೇಂದ್ರನಿಗೆ ಶಾಪವನ್ನು ಕೊಟ್ಟನು. ದೇವತೆಗಳೇ ಮೊದಲಾದವರು ಕ್ಷೀರಸಮುದ್ರವನ್ನು ಯಾವ ರೀತಿಯಲ್ಲಿ ಕಡೆದರು? ಯಾವ ಸ್ತೋತ್ರದಿಂದ ಲಕ್ಷ್ಮೀದೇವಿಯು ದೇವೇಂದ್ರನಿಗೆ ಪ್ರಸನ್ನಳಾದಳು? ದೇವೇಂದ್ರನಿಗೂ ದುರ್ವಾಸಋಷಿಗೂ ಯಾವಾಗ ಸಂವಾದ ಉಂಟಾಯಿತು? ಇವುಗಳನ್ನೆಲ್ಲವನ್ನೂ ಹೇಳಬೇಕು. ॥೧೧-೧೨॥

ನಾರಾಯಣನು ಹೇಳಿದನು—ಪೂರ್ವದಲ್ಲಿ ತ್ರಿಲೋಕಾಧಿಪತಿಯಾದ ದೇವೇಂದ್ರನು ಒಂದಾನೊಂದು ದಿನ ಮಧುಪಾನದಿಂದ ಮದಿಸಿ ರಂಭೆಯೊಡನೆ ಕ್ರೀಡಿಸಲು ಕಾಮುಕವಾದ ಮನಸ್ಸಿನಿಂದ ಕೂಡಿ ಆ ಅರಣ್ಯದಲ್ಲಿ ರಂಭೆಯೊಡನೆ ಕೂಡಿಕೊಂಡಿದ್ದನು. ಆ ಸಮಯದಲ್ಲಿ— ॥೧೩-೧೪॥

ತಸ್ಥೌ ತತ್ರ ಮಹಾರಣ್ಯೇ ಕಾಮೋನ್ಮಥಿತಮಾನಸಃ ।
ಕೈಲಾಸಶಿಖರೇ ಯಾಂತಂ ವೈಕುಂಠಾದೃಷಿಸತ್ತಮಂ ॥೧೫॥

ದುರ್ವಾಸಸಂ ದದರ್ಶೇಂದ್ರೋ ಜ್ವಲಂತಂ ಬ್ರಹ್ಮತೇಜಸಾ ।
ಗ್ರೀಷ್ಮಮಧ್ಯಾಹ್ನಮಾರ್ತಂಡ ಸಹಸ್ರಪ್ರಭವಿಾಶ್ವರಂ ॥೧೬॥

ಪ್ರತಪ್ತಕಾಂಚನಾಕಾರಂ ಜಟಾಭಾರಮಹೋಜ್ವಲಂ ।
ಶುಕ್ಲಯಜ್ಞೋಪವೀತಂ ಚ ಚೀರದಂಡೌ ಕಮಂಡಲುಂ ॥೧೭॥

ಮಹೋಜ್ವಲಂ ಚ ತಿಲಕಂ ಬಿಭ್ರತಂ ಚೇಂದುಸನ್ನಿಭಂ ।
ಸಮನ್ವಿತಂ ಶಿಷ್ಯಲಕ್ಷೈರ್ವೇದವೇದಾಂಗಪಾರಗೈಃ ॥೧೮॥

ದೃಷ್ಟ್ವಾ ನನಾಮ ಶಿರಸಾ ಸಂಪ್ರಮತ್ತಃ ಪುರಂದರಃ ।
ಶಿಷ್ಯವರ್ಗಃ ತದಾ ಭಕ್ತ್ಯಾ ತುಷ್ಟಾವ ಚ ಮುದಾಽನ್ವಿತಂ ॥೧೯॥

ಮುನಿನಾ ಚ ಸಶಿಷ್ಯೇಣ ದತ್ತಾಸ್ತಸ್ಮೈ ಶುಭಾಶಿಷಃ ।
ವಿಷ್ಣುದತ್ತಂ ಪಾರಿಜಾತಪುಷ್ಪಂ ಚ ಸುಮನೋಹರಂ ॥೨೦॥
ತಜ್ಜರಾರೋಗಮೃತ್ಯುಘ್ನಂ ಶೋಕಘ್ನಂ ಮೋಕ್ಷಕಾರಕಂ ।

---

ವೈಕುಂಠದಿಂದ ಕೈಲಾಸಕ್ಕೆ ಹೋಗುತ್ತಿರುವ, ಗ್ರೀಷ್ಮಋತುವಿನ ಮಧ್ಯಾಹ್ನ ಕಾಲದ ಸಾವಿರ ಸೂರ್ಯರಿಗೆ ಸಮಾನವಾದ ಕಾಂತಿಯಿಂದ ಕೂಡಿ ಬ್ರಹ್ಮತೇಜಸ್ಸಿನಿಂದ ಪ್ರಕಾಶಿಸುತ್ತಿರುವ ದುರ್ವಾಸ ಋಷಿಯನ್ನು ದೇವೇಂದ್ರನು ನೋಡಿದನು. ॥೧೫-೧೬॥

ಆ ದುರ್ವಾಸಋಷಿಯು ಪುಟವಿಟ್ಟ ಚಿನ್ನದಂತೆ ಮೈಬಣ್ಣವುಳ್ಳವನಾಗಿ ಜಟೆಯನ್ನು ಧರಿಸಿ ಬಿಳುಪಾದ ಯಜ್ಞೋಪವೀತವನ್ನೂ ನಾರುಮಡಿಯನ್ನೂ ಕಮಂಡಲುವನ್ನೂ, ಧರಿಸಿ ಪ್ರಕಾಶಮಾನವಾದ ತಿಲಕವನ್ನಿಟ್ಟು ವೇದವೇದಾಂಗ ಗಳನ್ನು ಬಲ್ಲ ಲಕ್ಷಶಿಷ್ಯರುಗಳಿಂದ ಕೂಡಿ ಬರುತ್ತಿದ್ದನು. ॥೧೭-೧೮॥

ಆ ಮುನಿಯನ್ನು ನೋಡಿ, ಮದಿಸಿದ್ದ ದೇವೇಂದ್ರನು ನಮಸ್ಕಾರಮಾಡಿದನು. ಆ ಮುನಿಯ ಶಿಷ್ಯರು ದೇವೇಂದ್ರನಲ್ಲಿ ಭಕ್ತಿಯಿಂದ ಕೂಡಿ ಸಂತೋಷದಿಂದಿರುವ ಅವನನ್ನು ಸ್ತೋತ್ರಮಾಡಿದರು. ॥೧೯॥

ಶಿಷ್ಯರೊಡನೆ ಕೂಡಿದ ದುರ್ವಾಸಋಷಿಯು ಆ ದೇವೇಂದ್ರನಿಗೆ ಮಂಗಲ ಕರವಾದ ಆಶೀರ್ವಾದವನ್ನುಮಾಡಿ ವಿಷ್ಣುವು ಕೊಟ್ಟಿದ್ದ ಮನೋಹರವಾದ ಪಾರಿಜಾತ

**ಶಕ್ರಃ ಪುಷ್ಪಂ ಗೃಹೀತ್ವಾ ಚ ಪ್ರಮತ್ತೋ ರಾಜ್ಯಸಂಪದಾ ॥೨೦॥**

**ಪುಷ್ಪಂ ಸನ್ನ್ಯಸ್ತಯಾಮಾಸ ತದ್ವೈವ ಕರಿಮಸ್ತಕೇ ।**
**ಹಸ್ತೀ ತತ್ಸ್ಪರ್ಶಮಾತ್ರೇಣ ರೂಪೇಣ ಚ ಗುಣೇನ ಚ ॥೨೨॥**

**ತೇಜಸಾ ವಯಸಾಽಕಸ್ಮಾದ್ವಿಷ್ಣುತುಲ್ಯೋ ಬಭೂವ ಹ ।**
**ತ್ಯಕ್ತ್ವಾ ಶಕ್ರಂ ಗಜೇಂದ್ರಶ್ಚ ಜಗಾಮ ಘೋರಕಾನನಂ ॥೨೩॥**

**ನ ಶಶಾಕ ಮಹೇಂದ್ರಸ್ತಂ ರಕ್ಷಿತುಂ ತೇಜಸಾ ಮುನೇ ।**
**ತತ್ಪುಷ್ಪಂ ತ್ಯಕ್ತವಂತಂ ಚ ದೃಷ್ಟ್ವಾ ಶಕ್ರಂ ಮುನೀಶ್ವರಃ ॥೨೪॥**

**ತಮುವಾಚ ಮಹಾರುಷ್ಟೋ ಶಶಾಪ ಚ ರುಷಾನ್ವಿತಃ ।**

॥ ಮುನಿರುವಾಚ ॥

**ಅರೇ ಶ್ರಿಯಾ ಪ್ರಮತ್ತಸ್ತ್ವಂ ಕಥಂ ಮಾಂ ಅವಮನ್ಯಸೇ ॥೨೫॥**

---

ಪುಷ್ಪವನ್ನು ಕೊಟ್ಟನು. ಆ ಪುಷ್ಪವು ಮುಪ್ಪು, ರೋಗ, ಮೃತ್ಯು, ದುಃಖ ಇವುಗಳನ್ನು ನಾಶಮಾಡಿ ಮೋಕ್ಷವನ್ನು ಕೊಡತಕ್ಕುದು. ॥೨೦॥

ನಾರದಮುನಿಯೇ, ಕೇಳು. ದೇವೇಂದ್ರನು ರಾಜ್ಯಸಂಪತ್ತಿನಿಂದ ಮದಿಸಿ ಮುನಿಯು ಕೊಟ್ಟ ವಿಷ್ಣುಪ್ರಸಾದವನ್ನು ಆನೆಯ ತಲೆಯ ಮೇಲೆ ಇರಿಸಿದನು. ಅದು ತಗುಲಿದ ಮಾತ್ರದಿಂದಲೇ ರೂಪ, ಗುಣ, ತೇಜಸ್ಸು, ವಯಸ್ಸು, ಇವುಗಳಿಂದ ಕೂಡಿ ಅಕಸ್ಮಾತ್ತಾಗಿ ಆನೆಯು ವಿಷ್ಣುವಿಗೆ ಸಮನಾಯಿತು. ಆಮೇಲೆ ದೇವೇಂದ್ರನನ್ನು ಬಿಟ್ಟು ಭಯಂಕರವಾದ ಕಾಡಿಗೆ ಹೋಯಿತು. ದೇವೇಂದ್ರನು ತನ್ನ ಪರಾಕ್ರಮದಿಂದ ಆನೆಯನ್ನು ತನ್ನಧೀನದಲ್ಲಿಟ್ಟುಕೊಂಡು ಕಾಪಾಡಲಾರದವನಾದನು. ॥೨೨-೨೩॥

ದುರ್ವಾಸಮುನಿಯು ಪ್ರಸಾದಪುಷ್ಪವನ್ನು ಆನೆಯ ತಲೆಯಮೇಲೆ ಹಾಕಿದ ದೇವೇಂದ್ರನನ್ನು ಕಂಡು ಮಹಾಕೋಪದಿಂದ ಅವನಿಗೆ ಶಾಪವನ್ನು ಕೊಟ್ಟನು. ॥೨೪॥

ಮುನಿಯು ಹೇಳಿದನು—ಎಲೋ ದೇವೇಂದ್ರನೇ, ನೀನು ಸಂಪತ್ತಿನಿಂದ ಮದಿಸಿ ನನಗೆ ಅಪಮಾನವನ್ನು ಮಾಡಿದೆ. ನಾನು ಕೊಟ್ಟ ಹೂವನ್ನು ಆನೆಯು

ಮದ್ದತ್ತಪುಷ್ಪಂ ದತ್ತಂ ಚ ಗರ್ವೇಣ ಕರಿಮಸ್ತಕೇ ।
ವಿಷ್ಣೋರ್ನಿವೇದಿತಂ ಚೈವ ನೈವೇದ್ಯಂ ವಾ ಫಲಂ ಜಲಂ ॥೨೬॥

ಪ್ರಾಪ್ತಿಮಾತ್ರೇಣ ಭೋಕ್ತವ್ಯಂ ತ್ಯಾಗೇನ ಬ್ರಹ್ಮಹಾ ಭವೇತ್ ।
ಭ್ರಷ್ಟಶ್ರೀರ್ಭ್ರಷ್ಟಬುದ್ಧಿಶ್ಚ ಪರಭ್ರಷ್ಟೋ ಭವೇತ್ತು ಸಃ ॥೨೭॥

ಯಸ್ತ್ಯಜೇದ್ವಿಷ್ಣುನೈವೇದ್ಯಂ ಭಾಗ್ಯೇನೋಪಸ್ಥಿತಂ ಶುಭಂ ।
ಪ್ರಾಪ್ತಿಮಾತ್ರೇಣ ಯೋ ಭುಙ್ಕ್ತೇ ಭಕ್ತ್ಯೋ ವಿಷ್ಣುನಿವೇದಿತಂ॥ ೨೮॥

ಪುಂಸಾಂ ಶತಂ ಸಮುದ್ಧೃತ್ಯ ಜೀವನ್ಮುಕ್ತಃ ಸ್ವಯಂ ಭವೇತ್ ।
ನೈವೇದ್ಯಭೋಜನಂ ಕೃತ್ವಾ ನಿತ್ಯಂ ಯಃ ಪ್ರಣಮೇದ್ಧರಿಂ ॥೨೯॥

ಪೂಜಯೇತ್ಸ್ತೌತಿ ವಾ ಭಕ್ತ್ಯಾ ಸ ವಿಷ್ಣುಸದೃಶೋ ಭವೇತ್ ।
ತತ್ಸ್ಪರ್ಶವಾಯುನಾ ಸದ್ಯಸ್ತೀರ್ಥೌಘಶ್ಚ ವಿಶುಧ್ಯತಿ ॥೩೦॥

ತತ್ಪಾದರಜಸಾ ಮೂಢ ಸದ್ಯಃ ಪೂತಾ ವಸುಂಧರಾ ।
ಪುಂಶ್ಚಲ್ಯನ್ನಮವೀರಾನ್ನಂ ಶೂದ್ರಶ್ರಾದ್ಧಾನ್ನಮೇವ ಚ ॥೩೧॥

---

ತಲೆಯ ಮೇಲೆ ಹಾಕಿದೆ. ವಿಷ್ಣುವಿಗೆ ನಿವೇದನ ಮಾಡಿದ ನೈವೇದ್ಯವನ್ನೂ, ಹಣ್ಣನ್ನೂ ನೀರನ್ನೂ ತನಗೆ ದೊರಕಿದೊಡನೆಯೇ ತಾನೇ ಅದನ್ನುಪಯೋಗಿಸ ಬೇಕು. ಅದನ್ನು ತ್ಯಾಗಮಾಡಿದರೆ ಬಹ್ಮಹತ್ಯಾ ದೋಷವು ಬರುವುದು. ಹಾಗೆ ತ್ಯಾಗಮಾಡಿದವನ ಸಂಪತ್ತೂ ಬುದ್ಧಿಯೂ ಪಟ್ಟಣವೂ ನಾಶವಾಗುವುದು. ॥೨೫-೨೬-೨೭॥

ಪೂರ್ವಪುಣ್ಯದಿಂದ ಪ್ರಾಪ್ತವಾದ ವಿಷ್ಣುನೈವೇದ್ಯವನ್ನು ತ್ಯಾಗಮಾಡಿದವನಿಗೆ ಹಿಂದೆ ಹೇಳಿದ ಕಷ್ಟಗಳು ಪ್ರಾಪ್ತವಾಗುವುವು. ಭಕ್ತನಾದವನು ವಿಷ್ಣುನೈವೇದ್ಯವು ದೊರೆತಕೂಡಲೇ ಭೋಜನಮಾಡಿದರೆ ತನ್ನ ವಂಶದಲ್ಲಿ ನೂರು ತಲೆಯುವರನ್ನು ಉದ್ಧಾರಮಾಡಿ ತಾನೂ ಜೀವನ್ಮುಕ್ತನಾಗುವನು. ॥೨೮॥

ಪ್ರತಿದಿನವೂ ವಿಷ್ಣುವಿಗೆ ನಮಸ್ಕಾರಮಾಡಿ ನೈವೇದ್ಯಮಾಡಿ ಭಕ್ತಿಯಿಂದ ಪೂಜಿಸಿ ಸ್ತೋತ್ರಮಾಡುವವನು ವಿಷ್ಣುವಿಗೆ ಸಮಾನನಾಗುವನು. ॥೨೯॥

ಆ ಭಕ್ತನನ್ನು ಮುಟ್ಟಿದ ಗಾಳಿಯು ತಗುಲಿದರೆ ಸಮಸ್ತತೀರ್ಥಗಳೂ ಪರಿ ಶುದ್ಧವಾಗುವುವು. ಅವನ ಪಾದಧೂಳಿಯಿಂದ ಭೂಮಿಯು ಪರಿಶುದ್ಧವಾಗುವುದು.

ಯದ್ಧರೇರನಿವೇದ್ಯಂ ಚ ವೃಥಾ ಮಾಂಸಸ್ಯ ಭಕ್ಷಣಂ ।
ಶಿವಲಿಂಗಪ್ರದಾನಂ ಚ ಯದ್ದತ್ತಂ ಶೂದ್ರಯಾಜಿನಾ ॥೩೨॥

ಚಿಕಿತ್ಸಕದ್ವಿಜಾನ್ನಂ ಚ ದೇವಲಾನ್ನಂ ತಥೈವ ಚ ।
ಕನ್ಯಾವಿಕ್ರಯಿಣಾಮನ್ನಂ ಯದನ್ನಂ ಯೋನಿಜೀವಿನಾಂ ॥೩೩॥

ಉಚ್ಛಿಷ್ಟಾನ್ನಂ ಪರ್ಯುಷಿತಂ ಸರ್ವಭಕ್ತಾವಶೇಷಿತಂ ।
ಶೂದ್ರಾಪತಿದ್ವಿಜಾನ್ನಂ ಚ ವೃಷವಾಹದ್ವಿಜಾನ್ನಕಂ ॥೩೪॥

ಅದೀಕ್ಷಿತದ್ವಿಜಾನಾಂ ಚ ಯದನ್ನಂ ಶವದಾಹಿನಾಂ ।
ಅಗಮ್ಯಾಗಾಮಿನಾಂ ಚೈವ ದ್ವಿಜಾನಾಮನ್ನಮೇವ ಚ ॥೩೫॥

ಮಿತ್ರದ್ರುಹಾಂ ಕೃತಘ್ನಾನಾಮನ್ನಂ ವಿಶ್ವಾಸಘಾತಿನಾಂ ।
ಮಿಥ್ಯಾಸಾಕ್ಷ್ಯಪ್ರದಾನ್ನಂ ಚ ಬ್ರಾಹ್ಮಣಾನ್ನಂ ತಥೈವ ಚ ॥೩೬॥

---

ಎಲೈ ಮೂಢನೇ, ಜಾರೆಯ ಅನ್ನವೂ ಗಂಡನೂ ಮಕ್ಕಳೂ ಇಲ್ಲದವಳ ಅನ್ನವೂ ಶೂದ್ರನ ಅನ್ನವೂ ವಿಷ್ಣುವಿನ ನೈವೇದ್ಯಸೇವನೆಯಿಂದ ಶುದ್ಧವಾಗುವುದು. ||೩೦-೩೧||

ಹರಿಗೆ ನಿವೇದನಮಾಡದಿರುವ, ಯಜ್ಞವಿಲ್ಲದೆ ವೃಥಾ ಮಾಂಸಭಕ್ಷಣೆಯನ್ನು ಮಾಡುವವನ, ಶಿವಲಿಂಗವನ್ನು ದಾನಮಾಡಿದವನ, ಶೂದ್ರನಿಗೆ ಯಜ್ಞಮಾಡಿಸಿದವನ, ವೈದ್ಯನಾದ ಬ್ರಾಹ್ಮಣನ, ಜೀವನಾರ್ಥವಾಗಿ ದೇವರ ಪೂಜೆಯನ್ನು ಮಾಡುವವನ, ಕನ್ಯೆಯನ್ನು ಮಾರಿದವನ, ಸ್ತ್ರೀಯರನ್ನು ಕೆಟ್ಟನಡತೆಗಿಟ್ಟು ಅದರಿಂದ ಜೀವನ ಮಾಡುವವನ, ಶೂದ್ರಸ್ತ್ರೀಗಂಡನಾದ ಬ್ರಾಹ್ಮಣನ, ಎತ್ತನ್ನು ಕೆಲಸಕ್ಕೆ ಉಪಯೋಗಿಸುವ ಬ್ರಾಹ್ಮಣನ ಅನ್ನವೂ, ಎಂಜಲನ್ನವೂ ಎಲ್ಲರೂ ಊಟಮಾಡಿ ಮಿಕ್ಕ ಅನ್ನವೂ ಇವುಗಳೆಲ್ಲವೂ ಹರಿನೈವೇದ್ಯ ಭಕ್ಷಣೆಯಿಂದ ಶುದ್ಧವಾಗುವುದು. ||೩೨-೩೪||

ಮಂತ್ರದೀಕ್ಷೆಯಿಲ್ಲದ ಬ್ರಾಹ್ಮಣನ, ಶವದಾಹಿಬ್ರಾಹ್ಮಣನ, ಅಗಮ್ಯಾಗಮನ ಮಾಡುವ ಬ್ರಾಹ್ಮಣನ, ಮಿತ್ರರಿಗೆ ಮೋಸಮಾಡುವವನ, ಉಪಕಾರಸ್ಮರಣೆ ಇಲ್ಲದವನ, ನಂಬಿಕೆಗೆ ದ್ರೋಹಮಾಡುವವನ, ಸುಳ್ಳುಸಾಕ್ಷಿ ನುಡಿಯುವವನ, ತೀರ್ಥಕ್ಷೇತ್ರಗಳಲ್ಲಿ ದಾನವನ್ನು ತೆಗೆದುಕೊಳ್ಳುವ ಬ್ರಾಹ್ಮಣನ ಅನ್ನವು ವಿಷ್ಣುವಿನ ನೈವೇದ್ಯ ಭಕ್ಷಣೆಯಿಂದ ಶುದ್ಧವಾಗುವುದು. ||೩೫-೩೬||

ಏತೇ ಸರ್ವೇ ವಿಶುಧ್ಯಂತಿ ವಿಷ್ಣೋರ್ನೈವೇದ್ಯ-ಭಕ್ಷಣಾತ್ ।
ಶ್ವಪಚಶ್ಚೇದ್ವಿಷ್ಣು ಸೇವೀ ವಂಶಾನಾಂ ಕೋಟಿಮುದ್ಧರೇತ್ ॥೩೭॥

ಹರೇರಭಕ್ತೋ ಮನುಜಃ ಸ್ವಂ ಚ ರಕ್ಷಿತುಮಕ್ಷಮಃ ।
ಅಜ್ಞಾನಾದ್ಯದಿ ಗೃಹ್ಣಾತಿ ವಿಷ್ಣೋರ್ನಿರ್ಮಾಲ್ಯಮೇವ ಚ ॥೩೮॥

ಸಪ್ತಜನ್ಮಾರ್ಜಿತಾತ್ಪಾಪಾನ್ಮುಚ್ಯತೇ ನಾತ್ರ ಸಂಶಯಃ ।
ಜ್ಞಾತ್ವಾ ಭಕ್ತ್ಯಾ ಚ ಗೃಹ್ಣಾತಿ ವಿಷ್ಣೋರ್ನೈವೇದ್ಯಮೇವ ಚ ॥೩೦॥

ಕೋಟಿಜನ್ಮಾರ್ಜಿತಾತ್ಪಾಪಾನ್ಮುಚ್ಯತೇ ನಿಶ್ಚಿತಂ ಹರೇ ।
ಯಸ್ಮಾತ್ತ್ವಂಸ್ಥಾಪಿತಂ ಪುಷ್ಪಂ ಗರ್ವೇಣ ಕರಿಮಸ್ತಕೇ ॥೪೦॥

ತಸ್ಮಾದ್ಯುಷ್ಮಾನ್ಪರಿತ್ಯಜ್ಯ ಯಾತು ಲಕ್ಷ್ಮೀರ್ಹರೇಃ ಪದಂ ।
ನಾರಾಯಣಸ್ಯ ಭಕ್ತೋಽಹಂ ನ ಬಿಭೇಮಿ ಸುರಾಧ್ವಿಧೇಃ ॥೪೦॥

ಕಾಲಾನ್ಮೃತ್ಯೋರ್ಜರಾತಶ್ಚ ಕಾನನ್ಯಾನ್ ಗಣಯಾಮಿ ಚ ।
ಕಿಂ ಕರಿಷ್ಯತಿ ತೇ ತಾತಃ ಕಶ್ಯಪಶ್ಚ ಪ್ರಜಾಪತಿಃ ॥೪೨॥

ಬೃಹಸ್ಪತಿರ್ಗುರುಶ್ಚೈವ ನಿಶ್ಯಂಕಸ್ಯ ಚ ಮೇ ಹರೇ ।
ಇದಂ ಪುಷ್ಪಂ ಯಸ್ಯ ಮೂರ್ಧ್ನಿ ತಸ್ಯೈವ ಪೂಜನಂ ಪರಂ ॥೪೩॥

---

ವಿಷ್ಣುಭಕ್ತನು ಚಂಡಾಲನಾದರೂ ತನ್ನ ವಂಶದ ಕೋಟಿ ಜನರನ್ನು ಉದ್ಧಾರಮಾಡುವನು. ಹರಿಭಕ್ತನಲ್ಲದ ಮನುಜನು ತನ್ನನ್ನು ತಾನೇ ಕಾಪಾಡಿಕೊಳ್ಳಲಾರನು. ಹರಿಯ ಪ್ರಸಾದವನ್ನು ಅಜ್ಞಾನದಿಂದ ತೆಗೆದುಕೊಂಡರೂ, ಏಳು ಜನ್ಮಗಳಲ್ಲಿ ಸಂಪಾದಿಸಿದ ಪಾಪಗಳೂ ಬಿಟ್ಟುಹೋಗುವುವು. ಹೀಗೆ ತಿಳಿದು ಭಕ್ತಿಯಿಂದ ವಿಷ್ಣುನೈವೇದ್ಯವನ್ನು ಸೇವಿಸಿದರೆ ಕೋಟಿಜನ್ಮಗಳಲ್ಲಿ ಸಂಪಾದಿಸಿದ ಪಾಪಗಳೂ ನಾಶವಾಗುವುವು. ದೇವೇಂದ್ರನೇ, ಇದು ನಿಶ್ಚಯವೆಂದು ತಿಳಿ. ॥೩೭-೩೮-೩೯॥

ನಾನು ಕೊಟ್ಟ ವಿಷ್ಣುವಿನ ಪ್ರಸಾದಪುಷ್ಪವನ್ನು ನೀನು ಆನೆಯ ತಲೆಯ ಮೇಲೆ ಹಾಕಿದುದರಿಂದ ಸಂಪತ್ತು ನಿನ್ನನ್ನು ಬಿಟ್ಟು ವೈಕುಂಠಕ್ಕೆ ಹೋಗಲಿ. ॥೪೦॥

ಎಲೈ ದೇವೇಂದ್ರನೇ, ನಾನು ನಾರಾಯಣನ ಭಕ್ತನು. ದೇವತೆಗಳಿಂದಲೂ ಬ್ರಹ್ಮನಿಂದಲೂ ನನಗೆ ಭಯವಿಲ್ಲ. ಯಮ, ಮೃತ್ಯು, ಮುಪ್ಪು, ಇವುಗಳ ಭಯವೂ ಇಲ್ಲ. ಇನ್ನಾರನ್ನು ಲಕ್ಷಿಸುವೆನು ? ಯಾವ ಯೋಚನೆಯೂ ಇಲ್ಲದ ನನ್ನನ್ನು

**ಇತಿ ಶ್ರುತ್ವಾ ಮಹೇಂದ್ರಶ್ಚ ಧೃತ್ವಾ ಸ ಚರಣಂ ಮುನೇಃ ।**
**ಉಚ್ಚೈ ರುರೋದ ಶೋಕಾರ್ತಸ್ತಮುವಾಚ ಭಯಾಕುಲಃ ॥೪೪॥**

॥ ಮಹೇಂದ್ರ ಉವಾಚ ॥

**ದತ್ತಂ ಸಮುಚಿತಃ ಶಾಪೋ ಮಹ್ಯಂ ಮಾಯಾಽಪಹಃ ಪ್ರಭೋ ।**
**ಹೃತಾಂ ನ ಯಾಚೇ ಸಂಪತ್ತಿಂ ಕಿಂಚಿತ್ ಜ್ಞಾನಂ ಚ ದೇಹಿ ಮೇ ॥೪೫॥**

**ಐಶ್ವರ್ಯಂ ವಿಪದಾಂ ಬೀಜಂ ಜ್ಞಾನಪ್ರಚ್ಛನ್ನಕಾರಣಂ ।**
**ಮುಕ್ತಿಮಾರ್ಗಕುಠಾರಶ್ಚ ಭಕ್ತೇಶ್ಚ ವ್ಯವಧಾಯಕಂ ॥೪೬॥**

॥ ಮುನಿರುವಾಚ ॥

**ಜನ್ಮಮೃತ್ಯುಜರಾಶೋಕರೋಗಬೀಜಾಂಕುರಂ ಪರಂ ।**
**ಸಂಪತ್ತಿತಿಮಿರಾಂಧಶ್ಚ ಮುಕ್ತಿಮಾರ್ಗಂ ನ ಪಶ್ಯತಿ ॥೪೭॥**

---

ನಿನ್ನ ಗುರುವಾದ ಬೃಹಸ್ಪತಿಯು ತಾನೇ ಏನನ್ನು ಮಾಡುವನು ? ಈ ಪುಷ್ಪವು ಯಾವನ ತಲೆಯಲ್ಲಿರುವುದೋ ಅವನೇ ಪೂಜ್ಯನು. ॥೪೦-೪೧-೪೨-೪೩॥

ದೇವೇಂದ್ರನು ಈ ಮಾತನ್ನು ಕೇಳಿ ಆ ಮುನಿಯ ಪಾದಗಳನ್ನು ಹಿಡಿದು ಕೊಂಡು ಘಟ್ಟಿಯಾಗಿ ಅತ್ತನು. ದುಃಖದಿಂದಲೂ ಭಯದಿಂದಲೂ ಆ ಮುನಿಯನ್ನು ಕುರಿತು ಈ ರೀತಿ ಹೇಳಿದನು. ॥೪೪॥

ಅಜ್ಞಾನವನ್ನು ನಾಶಮಾಡುವ ಗುರುವೇ, ನನಗೆ ಯೋಗ್ಯವಾದ ಶಾಪವನ್ನು ಕೊಟ್ಟೆ, ಹೊರಟುಹೋದ ಸಂಪತ್ತನ್ನು ನಾನು ಬೇಡುವುದಿಲ್ಲ. ನನಗೆ ಸ್ವಲ್ಪ ಜ್ಞಾನವನ್ನು ಕರುಣಿಸು. ॥೪೫॥

ಸಂಪತ್ತು ವಿಪತ್ತಿಗೆ ಕಾರಣವು. ಅದು ಜ್ಞಾನವನ್ನು ಮರೆಮಾಡುವುದು ಮತ್ತು ಮೋಕ್ಷಮಾರ್ಗವನ್ನು ಕತ್ತರಿಸಿ ಭಕ್ತಿಯನ್ನು ಬಿಡಿಸುವುದು. ॥೪೬॥

ಮುನಿಯು ಹೇಳಿದನು–ಎಲೈ ದೇವೇಂದ್ರನೇ, ಸಂಪತ್ತೆಂಬುವುದು ಹುಟ್ಟು, ಸಾವು, ಮುಪ್ಪು, ದುಃಖ, ರೋಗ ಇವುಗಳಿಗೆ ಮುಖ್ಯಕಾರಣವಾಗುವುದು. ಸಂಪತ್ತೆಂಬ ಕತ್ತಲೆಯಿಂದ ಕುರುಡಾದವನು ಮೋಕ್ಷಮಾರ್ಗವನ್ನು ಕಾಣಲಾರನು.

ಸಂಪನ್ಮತ್ತೋ ವಿಮೂಢಶ್ಚ ಸುರಾಮತ್ತಃ ಸ ಏವ ಚ ।
ಬಾಂಧವೈರ್ವೇಷ್ಟಿತಃ ಸೋಽಪಿ ಬಂಧುತ್ವೇನೈವ ಹೇ ಹರೇ ॥೪೮॥

ಸಂಪತ್ತಿಮದಮತ್ತಶ್ಚ ವಿಷಯಾಂಧಶ್ಚ ವಿಹ್ವಲಃ ।
ಮಹಾಕಾಮೀ ರಾಜಸಿಕಃ ಸತ್ವಮಾರ್ಗಂ ನ ಪಶ್ಯತಿ ॥೪೯॥

ದ್ವಿವಿಧೋ ವಿಷಯಾಂಧಶ್ಚ ರಾಜಸಸ್ತಾಮಸಃ ಸ್ಮೃತಃ ।
ಅಶಾಸ್ತ್ರಜ್ಞಸ್ತಾಮಸಶ್ಚ ಶಾಸ್ತ್ರಜ್ಞೋ ರಾಜಸಃ ಸ್ಮೃತಃ ॥೫೦॥

ಶಾಸ್ತ್ರಂ ಚ ದ್ವಿವಿಧಂ ಮಾರ್ಗಂ ದರ್ಶಯೇತ್ಸುರಪುಂಗವ ।
ಪ್ರವೃತ್ತಿಬೀಜಮೇಕಂ ಚ ನಿವೃತ್ತೇಃ ಕಾರಣಂ ಪರಂ ॥೫೧॥

ಚರಂತಿ ಜೀವಿನಶ್ಚಾದೌ ಪ್ರವೃತ್ತೇಃ ದುಃಖವರ್ತ್ಮನಿ ।
ಸ್ವಚ್ಛಂದಂ ಚ ಪ್ರಸನ್ನಂ ಚ ನಿರ್ವಿರೋಧಂ ಚ ಸಂತತಂ ॥೫೨॥

---

ಸಂಪತ್ತಿನಿಂದ ಮದಿಸಿದ ಮೂಢನು ಮದ್ಯದಿಂದ ಮದಿಸಿದವನಂತೆಯೇ ಇರುವನು. ಅವನು ಬಂಧುಗಳಿಂದ ಕೂಡಿದ್ದರೆ ಅದು ಅವನಿಗೆ ಸೆರೆಯೇ ಆಗಿರುವುದು. ॥೪೭-೪೮॥

ಸಂಪತ್ತಿನ ಮದದಿಂದ ಮದಿಸಿದವನು ಇಂದ್ರಿಯಭೋಗಾಪೇಕ್ಷೆಯಿಂದ ಮುಂದುಗಾಣದ ಬುದ್ಧಿಯುಳ್ಳವನಾಗಿ ಮಹಾಕಾಮಿಯಾಗಿ ರಜೋಗುಣವುಳ್ಳವನಾಗಿ ಸಾತ್ವಿಕಮಾರ್ಗವನ್ನು ಕಾಣುವುದೇ ಇಲ್ಲ. ॥೪೯॥

ಇಂದ್ರಿಯ ಭೋಗಾಪೇಕ್ಷೆಯುಳ್ಳವರು ರಾಜಸರೆಂದೂ, ತಾಮಸರೆಂದೂ ಎರಡು ವಿಧವಾಗಿರುವರು. ಶಾಸ್ತ್ರಜ್ಞಾನವಿಲ್ಲದವರು ತಾಮಸರು. ಶಾಸ್ತ್ರಜ್ಞಾನವುಳ್ಳವರು ರಾಜಸರು. ॥೫೦॥

ಎಲೈ ದೇವಶ್ರೇಷ್ಠನೇ, ಶಾಸ್ತ್ರವು ಎರಡು ವಿಧವಾದ ಮಾರ್ಗವನ್ನು ತೋರಿಸುವುದು. ಒಂದು ಪ್ರವೃತ್ತಿ ಎಂದರೆ ಪ್ರಪಂಚಕ್ಕೆ ಸೇರಿದ ವ್ಯವಹಾರಕ್ಕೆ ಕಾರಣವಾದ ಮಾರ್ಗವು. ಮತ್ತೊಂದು ನಿವೃತ್ತಿ ಎಂದರೆ ಮೋಕ್ಷಕ್ಕೆ ಕಾರಣವಾದ ಮಾರ್ಗವು. ॥೫೧॥

ಮೊದಲು ಪ್ರಾಣಿಗಳು ಪ್ರವೃತ್ತಿರೂಪವಾದ ದುಃಖಕರವಾದ ಮಾರ್ಗದಲ್ಲಿ ಮನಬಂದಂತೆ ಸಂತೋಷದಿಂದ ಯಾವ ತಡೆಯೂ ಇಲ್ಲದೆ ಯಾವಾಗಲೂ ನಾನು ನನ್ನದು ಎಂಬ ಅಭಿಮಾನದಿಂದ ವ್ಯವಹರಿಸುತ್ತಿರುವರು. ॥೫೨॥

ಆಯಾತಿ ಮಧುನೋ ಲೋಭಾತ್ಕ್ಲೇಶೇನ ಸುಖಮಾನಿತಃ ।
ಪರಿಣಾಮೇ ನಾಶಬೀಜೇ ಜನ್ಮಮೃತ್ಯುಜರಾಕರೇ ॥೫೩॥

ಅನೇಕಜನ್ಮಪರ್ಯಂತಂ ಕೃತ್ವಾ ಚ ಭ್ರಮಣಂ ಮುದಾ ।
ಸ್ವಕರ್ಮವಿಹಿತಾಯಾಂ ಚ ನಾನಾಯೋನ್ಯಾಂ ಕ್ರಮೇಣ ಚ ॥೫೪॥

ತತಶ್ಚೇಶಾನುಗ್ರಹಾಚ್ಚ ಸತ್ಸಂಗಂ ಲಭತೇ ಚ ಸಃ ।
ಸಹಸ್ರೇಷು ಶತೇಷ್ವೇಕೋ ಭವಾಬ್ಧಿಪಾರಕಾರಣಂ ॥೫೫॥

ಸಾಧುಸ್ತತ್ತ್ವಪ್ರದೀಪೇನ ಮುಕ್ತಿಮಾರ್ಗಂ ಪ್ರದರ್ಶಯೇತ್ ।
ತದಾ ಕರೋತಿ ಯತ್ನಂ ಚ ಜೀವೋ ಬಂಧನಖಂಡನೇ ॥೫೬॥

ಅನೇಕಜನ್ಮಯೋಗೇನ ತಪಸಾಽನಶನೇನ ಚ ।
ತದಾ ಲಭೇನ್ಮುಕ್ತಿಮಾರ್ಗಂ ನಿರ್ವಿಘ್ನಂ ಸುಖದಂ ಪರಂ ॥೫೭॥

---

ಮಕರಂದದ ಆಸೆಯಿಂದ ತುಂಬಿಯು ಕಮಲದ ಹೂಗೆ ಬಂದು ಕುಳಿತು ಆ ಹೂ ಪುನಃ ಮುಚ್ಚಿಕೊಂಡರೆ ತಾನು ಸಿಕ್ಕಿಕೊಳ್ಳುವೆನೆಂದು ಹೇಗೆ ತಿಳಿಯುವುದಿಲ್ಲವೋ ಹಾಗೆ ಈ ಜೀವನು ಕ್ಲೇಶದುಃಖರೂಪವಾದ ಈ ಸಂಸಾರದಲ್ಲಿ ಸುಖಬುದ್ಧಿಯಿಂದ ಬಂದು, ಸಂಸಾರವು ನಾಶಕ್ಕೆ ಕಾರಣವೆಂದೂ, ಹುಟ್ಟು, ಸಾವು, ಮುಪ್ಪುಗಳಿಗೆ ವಾಸಸ್ಥಾನವೆಂದೂ ತಿಳಿಯುವುದಿಲ್ಲ. ॥೫೪॥

ಅನೇಕ ಜನ್ಮಗಳವರೆಗೆ ತನ್ನ ಕರ್ಮದಿಂದ ತನಗೆ ಬಂದ ಬಗೆಬಗೆಯ ಜನ್ಮಗಳಲ್ಲಿ ಕ್ರಮವಾಗಿ ಸಂತೋಷಿಸಿ ಅಲೆಯುತ್ತಿದ್ದು, ॥೫೫॥

ಆಮೇಲೆ ಈಶ್ವರಾನುಗ್ರಹದಿಂದ ಸಜ್ಜನರ ಸಹವಾಸವನ್ನು ಪಡೆವನು. ಹೀಗೆ ನೂರು ಸಾವಿರಕ್ಕೊಬ್ಬನು ಸಂಸಾರಸಮುದ್ರವನ್ನು ದಾಟಿಸಲು ಕಾರಣನಾಗುವನು. ॥೫೫॥

ಸಜ್ಜನನು ತತ್ತ್ವೋಪದೇಶವೆಂಬ ದೀಪದಿಂದ ಮೋಕ್ಷದ ಹಾದಿಯನ್ನು ತೋರಿಸುವನು. ಆಗ ಜೀವನು ಸಂಸಾರಬಂಧವನ್ನು ನಾಶಮಾಡಿಕೊಳ್ಳುವುದಕ್ಕೆ ಪ್ರಯತ್ನಮಾಡುವನು. ॥೫೬॥

ಅನೇಕ ಜನ್ಮಗಳಲ್ಲಿ ಮಾಡಿದ ಉಪವಾಸವ್ರತವೇ ಮುಂತಾದ ತಪಸ್ಸಿನಿಂದ ತಡೆಯಿಲ್ಲದೆ ಸುಖವನ್ನು ಕೊಡತಕ್ಕ ಶ್ರೇಷ್ಠವಾದ ಮುಕ್ತಿಮಾರ್ಗವನ್ನು ಪಡೆಯುವನು. ॥೫೭॥

ಇದಂ ಶ್ರುತಂ ಗುರೋರ್ವಕ್ತ್ರಾದ್ಯತ್ಪೃಚ್ಛಸಿ ಪುರಂದರ ।
ಮುನೇಸ್ತದ್ವಚನಂ ಶ್ರುತ್ವಾ ವೀತರಾಗೋ ಬಭೂವ ಸಃ ॥೫೮॥

ವೈರಾಗ್ಯಂ ವರ್ಧಯಾಮಾಸ ತಸ್ಯ ಬ್ರಹ್ಮನ್ ದಿನೇ ದಿನೇ ।
ಮುನೇಃ ಸ್ಥಾನಾದ್ಗೃಹಂ ಗತ್ವಾ ಸ ದದರ್ಶಾಮರಾವತೀಂ ॥೫೯॥

ದೈತ್ಯೈರಸುರಸಂಘೈಶ್ಚ ಸಮಾಕೀರ್ಣಾಂ ಭಯಾಕುಲಾಂ ।
ವಿಷಮೋಪಪ್ಲವಾಂ ಕುತ್ರ ಬಂಧುಹೀನಾಂ ಚ ಕುತ್ರಚಿತ್ ॥೬೦॥

ಪಿತೃಮಾತೃಕಳತ್ರಾದಿವಿಹೀನಾನುತಿಚಂಚಲಾಂ ।
ಶತ್ರುಗ್ರಸ್ತಾಂ ಚ ತಾಂ ದೃಷ್ಟ್ವಾ ಜಗಾಮ ವಾಕ್ಪತಿಂ ಪ್ರತಿ ॥೬೧॥

ಶಕ್ರೋ ಮಂದಾಕಿನೀತೀರೇ ದದರ್ಶ ಗುರುಮೀಶ್ವರಂ ।
ಧ್ಯಾಯಮಾನಂ ಪರಂ ಬ್ರಹ್ಮ ಗಂಗಾತೋಯೇ ಸ್ಥಿತಂ ಪರಂ ॥೬೨॥

---

ಎಲೈ ದೇವೇಂದ್ರನೇ, ನೀನು ಕೇಳಿದ ಪ್ರಶ್ನೆಗೆ ಉತ್ತರವಾಗಿ ಗುರುವಿನ ಬಾಯಿಂದ ಹೇಳಿದ ಈ ಮಾತನ್ನು ಕೇಳಿದೆಯಾ? ಎಂದ ಮೇಲೆ ಆ ದೇವೇಂದ್ರನು ದುರ್ವಾಸಮುನಿಯ ಆ ಮಾತನ್ನು ಕೇಳಿ ವೈರಾಗ್ಯ ಉಳ್ಳವನಾದನು. ॥೫೮॥

ನಾರದನೇ, ಕೇಳು. ಆ ದೇವೇಂದ್ರನಿಗೆ ದಿನದಿನಕ್ಕೆ ವೈರಾಗ್ಯವು ಹೆಚ್ಚುತ್ತಾ ಬಂದಿತು. ಅವನು ದುರ್ವಾಸಮುನಿಯು ತನಗೆ ಉಪದೇಶಮಾಡಿದ ಸ್ಥಳದಿಂದ ತನ್ನ ಅಮರಾವತೀ ಪಟ್ಟಣಕ್ಕೆ ಹೋಗಿ ನೋಡಿದನು. ಅದು ದೈತ್ಯರಿಂದಲೂ ಅಸುರರ ಸಮೂಹದಿಂದಲೂ ತುಂಬಿದ್ದಿತು. ಬಂಧುಗಳಾರೂ ಇರಲಿಲ್ಲ. ಕೆಲವೆಡೆಗಳಲ್ಲಿ ದೇವತೆಗಳು ತೊಂದರೆಗಳನ್ನನುಭವಿಸುತ್ತಿದ್ದರು. ಪಟ್ಟಣವು ಭಯಂಕರವಾಗಿ ಕಾಣಿಸುತ್ತಿತ್ತು. ॥೫೯-೬೦॥

ತಂದೆ, ತಾಯಿ, ಹೆಂಡಿತಿ ಇವರಿಲ್ಲದ ಬಹಳ ಚಂಚಲವಾದ ಶತ್ರುಗಳು ಆಕ್ರಮಿಸಿರುವ ಆ ತನ್ನ ರಾಜಧಾನಿಯನ್ನು ನೋಡಿ ದೇವೇಂದ್ರನು ತನ್ನ ಗುರುವಾದ ಬೃಹಸ್ಪತಿಯು ಇದ್ದೆಡೆಗೆ ಹೋದನು. ॥೬೧॥

ದೇವೇಂದ್ರನು ಗಂಗಾನದಿಯ ತೀರದಲ್ಲಿ ಬೃಹಸ್ಪತಿಯನ್ನು ಕಂಡನು. ಆ ಗುರುವು ನದಿಯ ನೀರಿನಲ್ಲಿ ನಿಂತು ಪರಬ್ರಹ್ಮನನ್ನು ಧ್ಯಾನಿಸುತ್ತಿದ್ದನು. ॥೬೨॥

ಸೂರ್ಯಾಭಿಸಂಮುಖಂ ಪೂರ್ವಮುಖಂ ಚ ವಿಶ್ವತೋಮುಖಂ ।
ಸಾಶ್ರುನೇತ್ರಂ ಪುಲಕಿನಂ ಪರಮಾನಂದ ಸಂಯುತಂ ॥೬೩॥

ವರಿಷ್ಠಂ ಚ ಗರಿಷ್ಠಂ ಚ ಧರ್ಮಿಷ್ಠಂ ಶ್ರೇಷ್ಠಸೇವಿತಂ ।
ಶ್ರೇಷ್ಠಂ ಚ ಬಂಧುವರ್ಗಾಣಾಮತಿಶ್ರೇಷ್ಠಂ ಚ ಜ್ಞಾನಿನಾಂ ॥೬೪॥

ಜ್ಯೇಷ್ಠಂ ಚ ಭ್ರಾತೃವರ್ಗಾಣಾಮನಿಷ್ಟಂ ಸುರವೈರಿಣಾಂ ।
ದೃಷ್ಟ್ವಾ ಗುರುಂ ಜಪಂತಂ ಚ ತತ್ರ ತಸ್ಥೌ ಸುರೇಶ್ವರಃ ॥೬೫॥

ಪ್ರಹರಾಂತೇ ಗುರುಂ ದೃಷ್ಟ್ವಾ ಚೋತ್ಥಿತಂ ಪ್ರಣನಾಮ ಸಃ ।
ಪ್ರಣಮ್ಯ ಚರಣಾಂಭೋಜೇ ರುರೋದೋಚ್ಚೈರ್ಮುಹುರ್ಮುಹುಃ ॥೬೬॥

ವೃತ್ತಾಂತಂ ಕಥಯಾಮಾಸ ಬ್ರಹ್ಮಶಾಪಾದಿಕಂ ತಥಾ ।
ಪುನರ್ವರೋಪಲಬ್ಧಿಂ ಚ ಜ್ಞಾನಪ್ರಾಪ್ತಿಂ ಸುದುರ್ಲಭಾಂ ॥೬೭॥

---

ಆ ಗುರುವು ಸೂರ್ಯನೆದುರಾಗಿ ಮುಖವನ್ನು ಮಾಡಿಕೊಂಡು ಪೂರ್ವ ದಿಕ್ಕಿಗೆ ತಿರುಗಿಕೊಂಡು ವಿಶ್ವತೋಮುಖನಾದ ಪರಮಾತ್ಮಸ್ವರೂಪನಾಗಿದ್ದನು. ಕಣ್ಣಿನಲ್ಲಿ ನೀರನ್ನು ಸುರಿಸುತ್ತಾ ಮೈಯೆಲ್ಲವೂ ರೋಮಾಂಚವಾಗಿರಲು ಪರಮಾನಂದದಿಂದ ಕೂಡಿದ್ದನು. ಆ ಗುರುವು ಸರ್ವರಲ್ಲಿಯೂ ಶ್ರೇಷ್ಠನು. ದೊಡ್ಡವನು. ಧರ್ಮಾಚರಣೆಯಲ್ಲಾಸಕ್ತನು. ಉತ್ತಮರಾದವರಿಗೆ ಪೂಜ್ಯನು. ಬಂಧುಗಳಿಗೆ ಅತ್ಯಂತ ಪ್ರೀತಿಪಾತ್ರನು. ಜ್ಞಾನಿಗಳಲ್ಲಿ ಶ್ರೇಷ್ಠನು. ಸಹೋದರರಲ್ಲಿ ದೊಡ್ಡವನು. ಅಸುರರಿಗೆ ಅನಿಷ್ಟಸ್ವರೂಪನೂ ಆಗಿದ್ದನು. ॥೬೩-೬೪॥

ಗುರುವು ಜಪಮಾಡುತ್ತಿರುವುದನ್ನು ನೋಡಿ ದೇವೇಂದ್ರನು ಅಲ್ಲಿಯೇ ಇದ್ದನು. ಒಂದು ಗಳಿಗೆಯ ಮೇಲೆ ಬಹಿರ್ಮುಖನಾದ ಗುರುವನ್ನು ನೋಡಿ ಅವನ ಪಾದಪದ್ಮಗಳಿಗೆ ನಮಸ್ಕರಿಸಿ ಇಂದ್ರನು ಪುನಃ ಪುನಃ ಗಟ್ಟಿಯಾಗಿ ಅತ್ತನು. ॥೬೫-೬೬॥

ದೇವೇಂದ್ರನು ತನಗೆ ದುರ್ವಾಸಮುನಿಯಿಂದ ಶಾಪಬಂದ ವೃತ್ತಾಂತವನ್ನೂ ಬಳಿಕ ಆ ವರಪ್ರಾಪ್ತಿಯನ್ನೂ, ದುರ್ಲಭವಾದ ಜ್ಞಾನಪ್ರಾಪ್ತಿಯ ವಿಚಾರವನ್ನೂ, ತನ್ನ ಪಟ್ಟಣವನ್ನು ಶತ್ರುಗಳು ಆಕ್ರಮಿಸಿದ್ದ ವಿಚಾರವನ್ನೂ ಗುರುವಿಗೆ ಹೇಳಿದನು. ॥೬೭॥

ವೈರಿಗ್ರಸ್ತಾಂ ಚ ಸ್ವಪುರೀಂ ಕ್ರಮೋಣ್ಯೈವ ಸುರೇಶ್ವರಃ ।
ಶಿಷ್ಯಸ್ಯ ವಚನಂ ಶ್ರುತ್ವಾ ಸುಬುದ್ಧಿರ್ವದತಾಂ ವರಃ ॥೬೮॥

॥ ಗುರುರುವಾಚ ॥

ಬೃಹಸ್ಪತಿರುವಾಚೇದಂ ಕೋಪಸಂರಕ್ತಲೋಚನಃ ।
ಶ್ರುತಂ ಸರ್ವಂ ಸುರಶ್ರೇಷ್ಠ ಮಾರೋದೀರ್ವಚನಂ ಶೃಣು ॥೬೯॥

ನ ಕಾತರೋ ಹಿ ನೀತಿಜ್ಞೋ ವಿಪತ್ತೌ ಚ ಕದಾಚನ ।
ಸಂಪತ್ತಿರ್ವಾ ವಿಪತ್ತಿರ್ವಾ ನಶ್ವರಾ ಶ್ರಮರೂಪಿಣೀ ॥೭೦॥

ಪೂರ್ವಸ್ವಕರ್ಮಾಯತ್ತಾ ಚ ಸ್ವಯಂ ಕರ್ತಾ ತಯೋರಪಿ ।
ಸರ್ವೇಷಾಂ ಚ ಭವತ್ಯೇವ ಶಶ್ವಜ್ಜನ್ಮನಿ ಜನ್ಮನಿ ॥೭೧॥

ಚಕ್ರನೇಮಿಕ್ರಮೋಣ್ಯೈವ ತತ್ರ ಕಾ ಪರಿದೇವನಾ ।
ಉಕ್ತಂ ಹಿ ಸ್ವಕೃತಂ ಕರ್ಮ ಭುಜ್ಯತೇಽಖಿಲಭಾರತೇ ॥೭೨॥

---

ಶಿಷ್ಯನ ಮಾತನ್ನು ಕೇಳಿ ಚಮತ್ಕಾರವಾಗಿ ಮಾತನಾಡುವ ಬುದ್ಧಿವಂತನಾದ ಬೃಹಸ್ಪತಿಯು ಕೋಪದಿಂದ ತನ್ನ ಕಣ್ಣನ್ನು ಕೆಂಪಗೆ ಮಾಡಿಕೊಂಡು ಮುಂದೆ ಹೇಳುವ ಮಾತನ್ನು ಆಡಿದನು. ॥೬೮॥

ಗುರುವು ಹೇಳಿದನು—ದೇವಶ್ರೇಷ್ಠನಾದ ದೇವೇಂದ್ರನೇ, ಎಲ್ಲವನ್ನೂ ಕೇಳಿದೆನು. ಅಳಬೇಡ. ನನ್ನ ಮಾತನ್ನು ಕೇಳು. ನೀತಿಯನ್ನು ಬಲ್ಲವನು ವಿಪತ್ತು ಬಂದಾಗ ಗಾಬರಿಪಡಬಾರದು. ॥೬೯॥

ಸಂಪತ್ತಾಗಲೀ ವಿಪತ್ತಾಗಲೀ ಶಾಶ್ವತವಾಗಿರತಕ್ಕುದಲ್ಲ. ನಾಶವಾಗುತಕ್ಕುದು. ಪೂರ್ವಕರ್ಮಾನುಸಾರವಾದುದು. ಇವೆರಡಕ್ಕೂ ಜೀವನೇ ಕರ್ತೃವು ಸಮಸ್ತರಿಗೂ ಪ್ರತಿಯೊಂದು ಜನ್ಮದಲ್ಲಿಯೂ ಸಂಪತ್ತೂ, ವಿಪತ್ತೂ ಬಂದೇಬರುವುದು. ಇದು ಜೀವನು ತಾನೇ ಮಾಡಿದ ಕರ್ಮಫಲವಾದುದರಿಂದ ಬರಿಯ ಮನಸ್ಸಿನ ಉದ್ವೇಗದಿಂದ ಯಾವ ಪ್ರಯೋಜನವೂ ಆಗಲಾರದು. ॥೭೦-೭೧॥

ಈ ಭರತಖಂಡದಲ್ಲಿ ತಾನು ಮಾಡಿದ ಕರ್ಮವನ್ನು ತಾನೇ ಅನುಭವಿಸುವನು. ಎಂದು ಜನರು ಹೇಳುವರು. ಮನುಷ್ಯನು ತಾನು ಮಾಡಿದ ಶುಭಾಶುಭ ಕರ್ಮಗಳ ಫಲವನ್ನು ಚಕ್ರವು ತಿರುಗುವಂತೆ ಒಂದಾಗುತ್ತಲೊಂದರಂತೆ ಅನುಭವಿಸಲೇಬೇಕು. ಈ ವಿಷಯದಲ್ಲಿ ಅಳುವುದರಿಂದೇನು ಪ್ರಯೋಜನ? ॥೭೨॥

ಶುಭಾಶುಭಂ ಚ ಯತ್ಕಿಂಚಿತ್ಸ್ವಕರ್ಮಫಲಭುಕ್ಪುಮಾನ್ ।
ನಾಽಭುಕ್ತಂ ಕ್ಷೀಯತೇ ಕರ್ಮ ಕಲ್ಪಕೋಟಿಶತೈರಪಿ ॥೭೩॥

ಅವಶ್ಯಮೇವ ಭೋಕ್ತವ್ಯಂ ಕೃತಂ ಕರ್ಮ ಶುಭಾಶುಭಂ ।
ಇತ್ಯೇವಮುಕ್ತಂ ವೇದೇ ಚ ಕೃಷ್ಣೇನ ಪರಮಾತ್ಮನಾ ॥೭೪॥

ಸಾಮವೇದೋಕ್ತಶಾಖಾಯಾಂ ಸಂಬೋಧ್ಯ ಕಮಲೋದ್ಭವಂ ।
ಜನ್ಮಭೋಗಾವಶೇಷೇ ಚ ಸರ್ವೇಷಾಂ ಕೃತಕರ್ಮಣಾಂ ॥೭೫॥

ಅನುರೂಪಂ ಹಿ ತೇಷಾಂ ಚ ಭಾರತೇಽನ್ಯತ್ರ ಚೈವ ಹಿ ।
ಕರ್ಮಣಾ ಬ್ರಹ್ಮಶಾಪಂ ಚ ಕರ್ಮಣಾ ಚ ಶುಭಾಶಿಷಂ ॥೭೬॥

ಕರ್ಮಣಾ ಚ ಮಹಾಲಕ್ಷ್ಮೀಂ ಲಭೇದ್ದೈನ್ಯಂ ಚ ಕರ್ಮಣಾ ।
ಕೋಟಿಜನ್ಮಾರ್ಜಿತಂ ಕರ್ಮ ಜೀವಿನಾಮನುಗಚ್ಛತಿ ॥೭೭॥

---

ನೂರುಕೋಟಿ ಕಲ್ಪಗಳಾದರೂ ಮನುಷ್ಯನು ಮಾಡಿದ ಶುಭಾಶುಭಕರ್ಮಗಳ ಫಲಗಳು ಅನುಭವಿಸದೆ ಮುಗಿಯುವುದಿಲ್ಲ. ಆದುದರಿಂದ ಮಾಡಿದ ಕರ್ಮಗಳ ಸುಖದುಃಖರೂಪವಾದ ಫಲಗಳನ್ನು ಅನುಭವಿಸಿಯೇ ತೀರಬೇಕು. ಹೀಗೆಂದು ಪರಮಾತ್ಮನಾದ ಕೃಷ್ಣನು ಸಾಮವೇದದಲ್ಲಿ ಬ್ರಹ್ಮನನ್ನು ಕುರಿತು ಹೇಳಿರುವನು. ॥೭೩-೭೪॥

ಸಮಸ್ತರಿಗೂ ಅವರು ಮಾಡಿದ ಕರ್ಮಫಲವನ್ನು ಅನುಭವಿಸಿ ಇನ್ನೂ ಸ್ವಲ್ಪ ಮಿಕ್ಕಿದ್ದರೆ ಅದಕ್ಕೆ ಅನುರೂಪವಾದ ಜನ್ಮವು ಭರತಖಂಡದಲ್ಲಾಗಲೀ ಬೇರೆ ಖಂಡ ಗಳಲ್ಲಾಗಲಿ ಉಂಟಾಗುವುದು. ॥೭೫॥

ಜೀವನ ಕರ್ಮದಿಂದಲೇ ಬ್ರಹ್ಮನ ಶಾಪವೂ ಶುಭವಾದ ಆಶೀರ್ವಾದವೂ, ಸಂಪತ್ತೂ, ದಾರಿದ್ರ್ಯವೂ ಉಂಟಾಗುವುದು. ॥೭೬॥

ದೇವೇಂದ್ರನೇ, ಒಂದುಕೋಟಿ ಜನ್ಮಗಳಿಂದ ಸಂಪಾದಿಸಿದ ಕರ್ಮಫಲ ವಾದರೂ ಮನುಷ್ಯನನ್ನನುಸರಿಸುವ ಅವನ ನೆರಳಿನಂತೆ ಜೀವನನ್ನು ಬಿಡದೆ ಅನು ಸರಿಸಿಯೇ ಇರುವುದು. ಫಲವನ್ನನುಭವಿಸುವವರೆಗೂ ಬಿಡುವುದಿಲ್ಲ. ॥೭೭॥

ನಹಿ ತ್ಯಜೇದ್ವಿನಾ ಭೋಗಂ ತಚ್ಛಾಯೇವ ಪುರಂದರಂ ।
ಕಾಲಭೇದೇ ದೇಶಭೇದೇ ಪಾತ್ರಭೇದೇ ಚ ಕರ್ಮಣಾಂ ॥೭೮॥

ನ್ಯೂನತಾಽಧಿಕಭಾವೋಽಪಿ ಭವೇದೇವ ಹಿ ಕರ್ಮಣಾ ।
ವಸ್ತುದಾನೇನ ವಸ್ತೂನಾಂ ಸಮಂ ಪುಣ್ಯಂ ದಿನೇ ದಿನೇ ॥೭೯॥

ದಿನಭೇದೇ ಕೋಟಿಗುಣಮಸಂಖ್ಯಂ ವಾ ತತೋಽಧಿಕಂ ।
ಸಮದೇಶೇ ಚ ವಸ್ತೂನಾಂ ದಾನೇ ಪುಣ್ಯಂ ಸಮಂ ಸುರ ॥೮೦॥

ದೇಶಭೇದೇ ಕೋಟಿಗುಣಮಸಂಖ್ಯಂ ವಾ ತತೋಽಧಿಕಂ ।
ಸಮೇ ಪಾತ್ರೇ ಸಮಂ ಪುಣ್ಯಂ ವಸ್ತುನಾಂ ಕರ್ತುರೇವ ಚ ॥೮೧॥

ಪಾತ್ರಭೇದೇ ಶತಗುಣಮಸಂಖ್ಯಂ ವಾ ತತೋಽಧಿಕಂ ।
ಯಥಾ ಫಲಂತಿ ಸಸ್ಯಾನಿ ನ್ಯೂನಾನ್ಯಪ್ಯಧಿಕಾನಿ ಚ ॥೮೨॥

---

ದೇಶ, ಕಾಲ, ಪಾತ್ರ ಇವುಗಳ ಭೇದದಿಂದಲೂ ಕರ್ಮ ಮಾಡುವ ರೀತಿಯಿಂದಲೂ ಫಲದಲ್ಲಿ ಹೆಚ್ಚು ಕಡಿಮೆಗಳು ಆಗುವುವು. ॥೭೮॥

ಪ್ರತಿದಿನವೂ ಮಾಡತಕ್ಕ ವಸ್ತುದಾನಕ್ಕೆ ದಾನ ಮಾಡಿದ ವಸ್ತುವಿಗೆ ತಕ್ಕ ಫಲವು ಬರುವುದು. ಸಂಕ್ರಮಣ ಪುಣ್ಯಕಾಲ, ಮುಂತಾದ ವಿಶೇಷ ದಿನಗಳಲ್ಲಿ ಸಾಮಾನ್ಯದಿನದ ಫಲದ ಕೋಟಿಯಷ್ಟೋ ಲೆಕ್ಕವಿಲ್ಲದಷ್ಟೋ ಹೆಚ್ಚು ಫಲವು ಬರುವುದು. ಸಾಮಾನ್ಯದೇಶದಲ್ಲಿ ದಾನಮಾಡಿದರೆ ಪುಣ್ಯವೂ ಸಾಮಾನ್ಯವು. ॥೭೯-೮೦॥

ಹರಿಕ್ಷೇತ್ರಾದಿಗಳಲ್ಲಿ ದಾನಮಾಡಿದರೆ ಕೋಟಿಪಾಲೋ ಲೆಕ್ಕವಿಲ್ಲದಷ್ಟೋ ಹೆಚ್ಚು ಫಲವುಂಟಾಗುವುದು. ಸಾಮಾನ್ಯವಾದ ಪಾತ್ರದಲ್ಲಿ ದಾನಮಾಡಿದುದು ಸಾಮಾನ್ಯಫಲವನ್ನು ಕೊಡುವುದು. ಪಾತ್ರಭೇದವಾದರೆ ನೂರರಷ್ಟೋ ಅದಕ್ಕಿಂತ ಹೆಚ್ಚೋ ಲೆಕ್ಕವಿಲ್ಲದಷ್ಟೋ ಫಲವು ಬರುವುದು. ॥೮೧॥

ವ್ಯವಸಾಯ ಮಾಡುವವನಿಗೆ ಹೊಲ ಗದ್ದೆಗಳ ಭೂಮಿಯ ವ್ಯತ್ಯಾಸದಿಂದ ಫಲವು (ಬೆಳೆಯು) ಹೆಚ್ಚು ಕಡಿಮೆಯಾಗುವಂತೆ ಪಾತ್ರಭೇದದಿಂದ ದಾನದ ಫಲವು ಹೆಚ್ಚು ಕಡಿಮೆಯಾಗುವುದು. ॥೮೨॥

ಕರ್ಷಕಾಣಾಂ ಕ್ಷೇತ್ರಭೇದೇ ಪಾತ್ರಭೇದೇ ಫಲಂ ತಥಾ ।
ಸಾಮಾನ್ಯದಿವಸೇ ವಿಪ್ರ ದಾನಂ ಸಮಫಲಂ ಭವೇತ್ ॥೮೩॥

ಅಮಾಯಾಂ ರವಿಸಂಕ್ರಾಂತ್ಯಾಂ ಫಲಂ ಶತಗುಣಂ ಭವೇತ್ ।
ಚಾತುರ್ಮಾಸ್ಯಾಂ ಪೌರ್ಣಮಾಸ್ಯಾಮನಂತಂ ಫಲಮೇವ ಚ ॥೮೪॥

ಗ್ರಹಣೇ ಶಶಿನಃ ಕೋಟಿಗುಣಂ ಚ ಫಲಮೇವ ಚ ।
ಸೂರ್ಯಸ್ಯ ಗ್ರಹಣೇ ವಾಽಪಿ ತತೋ ದಶಗುಣಂ ಭವೇತ್ ॥೮೫॥

ಅಕ್ಷಯಾಯಾಮಕ್ಷಯಂ ತದಸಂಖ್ಯಫಲಮುಚ್ಯತೇ ।
ಏವಮನ್ಯತ್ರ ಪುಣ್ಯಾಹೇ ಫಲಾಧಿಕ್ಯಂ ಭವೇದಿತಿ ॥೮೬॥

ಯಥಾ ದಾನೇ ತಥಾ ಸ್ನಾನೇ ಜಪೇಽನ್ಯಪುಣ್ಯಕರ್ಮಸು ।
ಏವಂ ಸರ್ವತ್ರ ಬೋದ್ಧವ್ಯಂ ನರಾಣಾಂ ಕರ್ಮಣಾಂ ಫಲಂ ॥೮೭॥

ಯಥಾ ದಂಡೇನ ಚಕ್ರೇಣ ಶರಾವೇಣ ಭ್ರಮೇಣ ಚ ।
ಕುಂಭಂ ನಿರ್ಮಾತಿ ನಿರ್ಮಾತಾ ಕುಂಭಕಾರೋ ಮೃದಾ ಭುವಿ ॥೮೮॥
ತಥೈವ ಕರ್ಮಸೂತ್ರೇಣ ಫಲಂ ಧಾತಾ ದದಾತಿ ಚ ।

---

ಸಾಮಾನ್ಯ ದಿವಸದಲ್ಲಿ ಬ್ರಾಹ್ಮಣನಿಗೆ ದಾನಮಾಡಿದರೆ ಸಾಮಾನ್ಯ ಫಲವು. ಅಮಾವಾಸ್ಯೆ, ಸೂರ್ಯಸಂಕ್ರಮಣಗಳಲ್ಲಿ ದಾನಮಾಡಿದರೆ ನೂರರಷ್ಟು ಹೆಚ್ಚು ಫಲವೂ, ಚಾತುರ್ಮಾಸ್ಯದಲ್ಲಿಯೂ ಪೂರ್ಣಿಮೆಯ ದಿನವೂ ದಾನಮಾಡಿದರೆ ಅನಂತಫಲವೂ ॥೮೩-೮೪॥

ಚಂದ್ರಗ್ರಹಣದಲ್ಲಿ ದಾನಮಾಡಿದರೆ ಕೋಟಿಪಾಲು ಫಲವು, ಸೂರ್ಯ ಗ್ರಹಣದಲ್ಲಿ ಇದರ ಹತ್ತರಷ್ಟು ಫಲವು, ಅಕ್ಷಯನವಮಿಯ ದಿನ ದಾನಮಾಡಿದರೆ ನಾಶವಾಗದಷ್ಟು ಫಲವು ಬರುವುದು. ಹೀಗೆಯೇ ಬೇರೆ ಪುಣ್ಯ ದಿನಗಳಲ್ಲಿ ದಾನ ಮಾಡಿದರೆ ಅಧಿಕಫಲವು ಬರುವುದು. ॥೮೫-೮೬॥

ದಾನದಲ್ಲಿ ಹೇಗೋ ಹಾಗೇ ಸ್ನಾನ, ಜಪ, ಬೇರೆ ಪುಣ್ಯಕರವಾದ ಕರ್ಮ ಇವುಗಳಲ್ಲಿಯೂ ಜನರಿಗೆ ಕರ್ಮಫಲಗಳಲ್ಲಿ ಕಾಲದೇಶಗಳಿಗನುಸಾರವಾಗಿ ಹೆಚ್ಚು ಕಡಿಮೆಗಳಾಗುವುವು. ॥೮೭॥

ಕುಂಭಕಾರನು ದಂಡ, ಚಕ್ರ, ಕಪಾಲ, ತಿರುಗಿಸುವಿಕೆ ಇವುಗಳಿಂದ ಮಣ್ಣಿ

ಯಸ್ಯಾಜ್ಞಯಾ ಸೃಷ್ಟಮಿದಂ ತಂ ಚ ನಾರಾಯಣಂ ಭಜ ॥೮೯॥

ಸ ವಿಧಾತಾ ವಿಧಾತುಶ್ಚ ಪಾತುಃ ಪಾತಾ ಜಗತ್ರಯೇ ।
ಸ್ರಷ್ಟುಃ ಸ್ರಷ್ಟಾ ಚ ಸಂಹರ್ತುಃ ಸಂಹರ್ತಾ ಕಾಲಕಾಲಕಃ ॥೯೦॥

ಮಹಾವಿಪತ್ತೌ ಸಂಸಾರೇ ಯಃ ಸ್ಮರೇನ್ಮಧುಸೂಧನಂ ।
ವಿಪತ್ತೌ ತಸ್ಯ ಸಂಪತ್ತಿರ್ಭವೇದಿತ್ಯಾಹ ಶಂಕರಃ ॥೯೧॥

ಇತ್ಯೇವಮುಕ್ತ್ವಾ ತತ್ವಜ್ಞಃ ಸಮಾಲಿಂಗ್ಯ ಸುರೇಶ್ವರಂ ।
ದತ್ವಾ ಶುಭಾಶಿಷಂ ಚೇಷ್ಟಂ ಬೋಧಯಾಮಾಸ ನಾರದ ॥೯೨॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ನವಮಸ್ಕಂಧೇ
ಚತ್ವಾರಿಂಶೋಽಧ್ಯಾಯಃ

---

ನಲ್ಲಿ ಗಡಿಗೆಯನ್ನು ಮಾಡುವಂತೆ ಕರ್ಮಗಳ ನಿಯಮವನ್ನು ಅನುಸರಿಸಿ ಅವುಗಳ ಫಲವನ್ನು ಬ್ರಹ್ಮನು ಜೀವರುಗಳಿಗೆ ಕೊಡುವನು. ॥೮೮॥

ಆದುದರಿಂದ ಯಾವನ ಆಜ್ಞೆಯಿಂದ ಈ ಪ್ರಪಂಚವು ಸೃಷ್ಟಿಯಾಯಿತೋ ಆ ನಾರಾಯಣನನ್ನು ಧ್ಯಾನಿಸು. ಅವನು ಬ್ರಹ್ಮನನ್ನು ಸೃಷ್ಟಿಮಾಡಿದವನು. ಮೂರು ಲೋಕದಲ್ಲಿಯೂ ಯಾರು ರಕ್ಷಕರೋ ಅವರನ್ನು ರಕ್ಷಿಸತಕ್ಕವನು. ಸೃಷ್ಟಿ ಮಾಡಿದವರನ್ನು ಸೃಷ್ಟಿಸತಕ್ಕವನು. ಸಂಹಾರಮಾಡುವವರನ್ನು ಸಂಹರಿಸತಕ್ಕವನು. ಯಮನಿಗೆ ಯಮನಾಗಿರುವನು., ಮತ್ತು ಕಾಲಕ್ಕೂ ನಿಯಾಮಕನಾಗಿರುವನು. ॥೮೯-೯೦॥

ಈ ಜನನ ಮರಣರೂಪವಾದ ಸಂಸಾರದಲ್ಲಿ ಮಹಾವಿಪತ್ತು ಬಂದಾಗ ಯಾರು ಆ ಮಹಾವಿಷ್ಣುವನ್ನು ಸ್ಮರಿಸುತ್ತಾರೋ ಅವರಿಗೆ ಆ ವಿಪತ್ತಿನಲ್ಲಿಯೇ ಸಂಪತ್ತು ಬರುವುದು. ಎಂದು ಶಂಕರನು ಹೇಳಿದನು. ॥೯೧॥

ನಾರದನೇ, ತತ್ವವನ್ನು ತಿಳಿದ ಬೃಹಸ್ಪತಿಯು ದೇವೇಂದ್ರನಿಗೆ ಹೀಗೆ ಹೇಳಿ ಅವನನ್ನು ಆಲಂಗಿಸಿಕೊಂಡು ಅವನಿಗಿಷ್ಟವಾದ, ಮಂಗಲಕರವಾದ, ಆಶೀರ್ವಾದವನ್ನು ಮಾಡಿ ತಿಳಿವಳಿಕೆಯನ್ನುಂಟುಮಾಡಿದನು. ॥೯೨॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಒಂಬತ್ತನೆಯ ಸ್ಕಂಧದಲ್ಲಿ
ನಲವತ್ತನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ನವಮಸ್ಕಂಧೇ

### || ಏಕಚತ್ವಾರಿಂಶೋಽಧ್ಯಾಯಃ ||

### ನಲವತ್ತೊಂದನೆಯ ಅಧ್ಯಾಯವು

|| ನಾರಾಯಣ ಉವಾಚ ||

**ಹರಿಂ ಧ್ಯಾತ್ವಾ ಹರಿರ್ಬ್ರಹ್ಮನ್ ಜಗಾಮ ಬ್ರಹ್ಮಣಃ ಸಭಾಂ ।**
**ಬೃಹಸ್ಪತಿಂ ಪುರಸ್ಕೃತ್ಯ ಸರ್ವೈಃ ಸುರಗಣೈಃ ಸಹ ॥೧॥**

**ಶೀಘ್ರಂ ಗತ್ವಾ ಬ್ರಹ್ಮಲೋಕಂ ದೃಷ್ಟ್ವಾ ಚ ಕಮಲೋದ್ಭವಂ ।**
**ಪ್ರಣೇಮುರ್ದೇವತಾಃ ಸರ್ವಾಃ ಸಹೇಂದ್ರಾ ಗುರುಣಾ ಸಹ ॥೨॥**

**ವೃತ್ತಾಂತಂ ಕಥಯಾಮಾಸ ಸುರಾಚಾರ್ಯೋ ವಿಧಿಂ ಪ್ರತಿ ।**
**ಪ್ರಹಸ್ಯೋವಾಚ ತಚ್ಛ್ರುತ್ವಾ ಮಹೇಂದ್ರಂ ಕಮಲಾಸನಃ ॥೩॥**

---

ನಾರಾಯಣನು ಹೇಳಿದನು—ನಾರದನೇ ಕೇಳು, ದೇವೇಂದ್ರನು ವಿಷ್ಣುವನ್ನು ಧ್ಯಾನಮಾಡಿ ಬೃಹಸ್ಪತಿಯನ್ನು ಮುಂದುಮಾಡಿಕೊಂಡು ಸಮಸ್ತ ದೇವತೆಗಳೊಡನೆ ಬ್ರಹ್ಮನ ಸಭೆಗೆ ಹೋದನು. ||೧||

ಅವರೆಲ್ಲರೂ ಬೇಗನೆ ಬ್ರಹ್ಮಲೋಕಕ್ಕೆ ಹೋಗಿ ಬ್ರಹ್ಮನನ್ನು ಕಂಡು ಸಮಸ್ತ ದೇವತೆಗಳೂ ದೇವೇಂದ್ರ ಮತ್ತು ಬೃಹಸ್ಪತಿ ಸಹಿತರಾಗಿ ಬ್ರಹ್ಮನಿಗೆ ನಮಸ್ಕರಿಸಿದರು. ||೨||

ದೇವತೆಗಳ ಗುರುವು ಬ್ರಹ್ಮನಿಗೆ ಸಕಲ ವೃತ್ತಾಂತವನ್ನೂ ಹೇಳಿದನು. ಅದನ್ನು ಕೇಳಿ ಬ್ರಹ್ಮನು ನಕ್ಕು ದೇವೇಂದ್ರನನ್ನು ಕುರಿತು ಹೇಳಿದನು. ||೩||

॥ ಬ್ರಹ್ಮೋವಾಚ ॥

ವತ್ಸ ಮದ್ವಂಶಜಾತೋಽಸಿ ಪ್ರಪೌತ್ರೋ ಮೇ ವಿಚಕ್ಷಣಃ ।
ಬೃಹಸ್ಪತೇಶ್ಚ ಶಿಷ್ಯಸ್ತ್ವಂ ಸುರಾಣಾಮಧಿಪಃ ಸ್ವಯಂ ॥೪॥

ಮಾತಾಮಹಶ್ಚ ದಕ್ಷಸ್ತೇ ವಿಷ್ಣುಭಕ್ತಃ ಪ್ರತಾಪವಾನ್ ।
ಕುಲತ್ರಯಂ ಯಸ್ಯ ಶುದ್ಧಂ ಕಥಂ ಸೋಽಹಂಕೃತೋ ಭವೇತ್ ॥೫॥

ಮಾತಾ ಪತಿವ್ರತಾ ಯಸ್ಯ ಪಿತಾ ಶುದ್ಧೋ ಜಿತೇಂದ್ರಿಯಃ ।
ಮಾತಾಮಹೋ ಮಾತುಲಶ್ಚ ಕಥಂ ಸೋಽಹಂಕೃತೋ ಭವೇತ್ ॥೬॥

ಜನಃ ಪೈತೃಕದೋಷೇಣ ದೋಷಾನ್ಮಾತಾಮಹಸ್ಯ ಚ ।
ಗುರುದೋಷಾತ್ತ್ರಿಭಿರ್ದೋಷೈರ್ಹರಿದೋಷೀ ಭವೇದ್ಧ್ರುವಂ ॥೭॥

ಸರ್ವಾಂತರಾತ್ಮಾ ಭಗವಾನ್ ಸರ್ವದೇಹೇಷ್ವವಸ್ಥಿತಃ ।
ಯಸ್ಯ ದೇಹಾತ್ಸಪ್ರಯಾತಿ ಸ ಶವಸ್ತತ್ಕ್ಷಣೇ ಭವೇತ್ ॥೮॥

---

ಬ್ರಹ್ಮನು ಹೇಳಿದನು—ಮಗನೇ, ನೀನು ನನ್ನ ವಂಶದಲ್ಲಿ ಹುಟ್ಟಿದವನು, ವಿವೇಕಿಯಾದವನು, ನನ್ನ ಮರಿಮಗನಾಗಿರುವೆ. ಬೃಹಸ್ಪತಿಯ ಶಿಷ್ಯನಾಗಿರುವೆ. ದೇವತೆಗಳಿಗೆಲ್ಲರಿಗೂ ರಾಜನಾಗಿರುವೆ. ನಿನ್ನ ತಾಯಿಯ ತಂದೆಯು ಶೂರನಾದ ವಿಷ್ಣು ಭಕ್ತನಾದ ದಕ್ಷನು. ತಂದೆ, ತಾಯಿ, ಗುರು, ಈ ಮೂರು ವಂಶಗಳೂ ಶುದ್ಧವಾಗಿರುವಲ್ಲಿ ಆ ವಂಶದಲ್ಲಿ ಹುಟ್ಟಿದವನು ಅಹಂಕಾರಕ್ಕೆ ಹೇಗೆ ತಾನೇ ವಶನಾಗುವನು. ॥೪-೫॥

ಯಾವನ ತಾಯಿಯು ಪತಿವ್ರತೆಯೋ, ತಂದೆಯು ಪರಿಶುದ್ಧನೂ, ಜಿತೇಂದ್ರಿಯನೂ ಆಗಿರುವನೋ, ತಾಯಿಯ ತಂದೆಯೂ, ಸೋದರಮಾವನೂ ಕೂಡ ಪರಿಶುದ್ಧರಾಗಿ ಜಿತೇಂದ್ರಿಯರಾಗಿರುವರೋ ಇಂತಹ ಸಂಬಂಧವುಳ್ಳವನು ಅಹಂಕಾರಕ್ಕೆ ಹೇಗೆತಾನೇ ವಶನಾದಾನು ? ॥೬॥

ಮನುಷ್ಯನು ತನ್ನ ತಂದೆ, ತಾಯಿಯ ತಂದೆ, ಗುರು ಈ ಮೂರುಜನರ ದೋಷಗಳಿಂದ ದೇವತೆಗಳಿಗೆ ಅಪರಾಧ ಮಾಡುವವನಾಗುತ್ತಾನೆಂಬುದು ಖಂಡಿತವಾದುದು. ॥೭॥

ಆ ಭಗವಂತನು ಸಮಸ್ತರಿಗೂ ಅಂತರಾತ್ಮನಾಗಿ ಸಮಸ್ತ ದೇಹಗಳಲ್ಲಿಯೂ ಇರುವನು. ಯಾವ ಜೀವನ ದೇಹದಿಂದ ಆ ಭಗವಂತನು ಬಿಟ್ಟು ಹೋಗುವನೋ ಅವನು ಆ ಕ್ಷಣದಲ್ಲಿಯೇ ಶವದಂತಾಗುವನು. ॥೮॥

ಮನೋಽಹಮಿಂದ್ರಿಯೇಶಂ ಚ ಜ್ಞಾನರೂಪೋ ಹಿ ಶಂಕರಃ ।
ವಿಷ್ಣುಃ ಪ್ರಾಣಾ ಚ ಪ್ರಕೃತಿರ್ಬುದ್ಧಿರ್ಭಗವತೀ ಸತೀ ॥೯॥

ನಿದ್ರಾದಯಃ ಶಕ್ತಯಶ್ಚ ತಾಃ ಸರ್ವಾಃ ಪ್ರಕೃತೇಃ ಕಲಾಃ ।
ಆತ್ಮನಃ ಪ್ರತಿಬಿಂಬಶ್ಚ ಜೀವೋ ಭೋಗಶರೀರಭೃತ್ ॥೧೦॥

ಆತ್ಮನೀಶೇ ಗತೇ ದೇಹಾತ್ಸರ್ವೇ ಯಾಂತಿ ಸಸಂಭ್ರಮಾಃ ।
ಯಥಾ ವರ್ತ್ಮನಿ ಗಚ್ಛಂತಂ ನರದೇವಮಿವಾನುಗಾಃ ॥೧೧॥

ಅಹಂ ಶಿವಶ್ಚ ಶೇಷಶ್ಚ ವಿಷ್ಣುರ್ಧರ್ಮೋ ಮಹಾವಿರಾಟ್ ।
ಯೂಯಂ ಯದಂಶಾ ಭಕ್ತಾಶ್ಚ ತತ್ಪುಷ್ಪಂ ನ್ಯಕ್ಕೃತಂ ತ್ವಯಾ ॥೧೨॥

ಶಿವೇನ ಪೂಜಿತಂ ಪಾದಪದ್ಮಂ ಪುಷ್ಪೇಣ ಯೇನ ಚ ।
ತಚ್ಚ ದುರ್ವಾಸಸಾ ದತ್ತಂ ದೈವೇನ ನ್ಯಕ್ಕೃತಂ ತ್ವಯಾ ॥೧೩॥

---

ದೇಹವೆಂಬ ನಗರದಲ್ಲಿರುವ ಆತ್ಮನೆಂಬ ರಾಜನ ಸೇವಕರನ್ನು ಹೇಳುವೆನು. ಬ್ರಹ್ಮನಾದ ನಾನು ಇಂದ್ರಿಯಗಳಿಗೆ ಅಧಿಪತಿಯಾದ ಮನಸ್ಸಾಗಿರುವೆನು. ಶಂಕರನು ಜ್ಞಾನಸ್ವರೂಪನಾಗಿರುವನು. ವಿಷ್ಣುವಿಗೆ ಪ್ರಾಣಸ್ವರೂಪಳಾದ ರಾಧೆಯು ಸತ್ವಾದಿ ತ್ರಿಗುಣಸ್ವರೂಪಳಾದ ಪ್ರಕೃತಿಯು. ಸತೀಭಗವತೀ ಎಂದರೆ ದುರ್ಗಾದೇವಿಯು ಬುದ್ಧಿಸ್ವರೂಪಳಾಗಿರುವಳು. ಬುದ್ಧಿಯಲ್ಲಿ ಆತ್ಮನ ಪ್ರತಿಬಿಂಬವೇ ಜೀವನು. ಇವನೇ ಭೋಗಶರೀರವನ್ನು ಧರಿಸಿರುವವನು. ॥೯-೧೦॥

ಒಡೆಯನಾದ ಆತ್ಮನು ದೇಹವನ್ನು ಬಿಟ್ಟು ಹೊರಟರೆ ಅವನ ಸಮಸ್ತ ಸೇವಕರೂ, ರಾಜನು ದಾರಿಯಲ್ಲಿ ಹೊರಟರೆ ಅವನ ಪರಿವಾರದವರು ಆ ರಾಜನನ್ನನುಸರಿಸುವಂತೆ, ಸಂಭ್ರಮದಿಂದ ಹೊರಡುವರು. ॥೧೧॥

ನಾನೂ ಶಿವನೂ ಆದಿಶೇಷನೂ, ವಿಷ್ಣುವೂ, ಧರ್ಮನೂ, ಮಹಾವಿರಾಟ್ಪುರುಷನೂ, ನೀನೂ, ಭಕ್ತರೂ, ಯಾವ ಪರಮಾತ್ಮನ ಅಂಶರಾದವರೋ ಅಂತಹ ಗೋಪಾಲಸುಂದರೀರೂಪನಾದ ಶ್ರೀಕೃಷ್ಣನ ನಿರ್ಮಾಲ್ಯವಾದ ಹೂವನ್ನು ನೀನು ದುರ್ದೈವದಿಂದ ತಿರಸ್ಕರಿಸಿದೆ. ಅದೇ ನಿನ್ನ ಮಹಾಪರಾಧವು. ॥೧೨॥

ಶಿವನು ಯಾವ ಪುಷ್ಪದಿಂದ ಶ್ರೀಕೃಷ್ಣನ ಪಾದಪದ್ಮವನ್ನು ಪೂಜಿಸಿದನೋ ಆ ಹೂವನ್ನು ದುರ್ವಾಸಮುನಿಯು ನಿನಗೆ ಕೊಟ್ಟನು. ದುರದೃಷ್ಟದಿಂದ ನೀನು ಅದನ್ನು ತಿರಸ್ಕರಿಸಿದೆ. ॥೧೩॥

ತತ್ಪುಷ್ಪಂ ಮಸ್ತಕೇ ಯಸ್ಯ ಕೃಷ್ಣಪಾದಾಬ್ಜಪ್ರಚ್ಯುತಂ ।
ಸರ್ವೇಷಾಂ ಚ ಸುರಾಣಾಂ ಚ ತತ್ಪೂಜಾ ಪುರತೋ ಭವೇತ್॥೧೪॥

ದೈವೇನ ವಂಚಿತಸ್ತ್ವಂ ಹಿ ದೈವಂ ಚ ಬಲವತ್ತರಂ ।
ಭಾಗ್ಯಹೀನಂ ಜನಂ ಮೂಢಂ ಕೋ ವಾ ರಕ್ಷಿತುಮೀಶ್ವರಃ ॥೧೫॥

ಸಾ ಶ್ರೀರ್ಗತಾಽಧುನಾ ಕೋಪಾತ್ಕೃಷ್ಣನಿರ್ಮಾಲ್ಯವರ್ಜನಾತ್ ।
ಅಧುನಾ ಗಚ್ಛ ವೈಕುಂಠಂ ಮಯಾ ಚ ಗುರುಣಾ ಸಹ ॥೧೬॥

ನಿಷೇವ್ಯ ತತ್ರ ಶ್ರೀನಾಥಂ ಶ್ರಿಯಂ ಪ್ರಾಪ್ಸ್ಯಸಿ ಮದ್ವರಾತ್ ।
ಏವಮುಕ್ತ್ವಾ ಚ ಸ ಬ್ರಹ್ಮಾ ಸರ್ವೈಃ ಸುರಗಣೈಃ ಸಹ ॥೧೭॥

ತತ್ರ ಗತ್ವಾ ಪರಂ ಬ್ರಹ್ಮ ಭಗವಂತಂ ಸನಾತನಂ ।
ದೃಷ್ಟ್ವಾ ತೇಜಸ್ಸ್ವರೂಪಂ ತಂ ಪ್ರಜ್ವಲಂತಂ ಸ್ವತೇಜಸಾ ॥೧೮॥

---

ಕೃಷ್ಣನ ಪಾದಕಮಲದಿಂದ ಜಾರಿಬಿದ್ದ ಆ ಹೂವು ಯಾರ ತಲೆಯ ಮೇಲಿರುವುದೋ ಅವರನ್ನು ಸಮಸ್ತ ದೇವತೆಗಳ ಮಧ್ಯದಲ್ಲಿ ಮೊದಲು ಎಲ್ಲರೂ ಪೂಜಿಸುವರು.॥೧೪॥

ಅದೃಷ್ಟದಿಂದ ನೀನು ಮೋಸಹೋದೆ. ಅದೃಷ್ಟವೇ ಬಲವಾದುದು. ಭಾಗ್ಯಹೀನನಾದ ಅಜ್ಞಾನಿಯನ್ನು ಬೇರೆ ಯಾರುತಾನೇ ಕಾಪಾಡುವರು? ॥೧೫॥

ಕೃಷ್ಣನ ಪ್ರಸಾದವನ್ನು ತಿರಸ್ಕರಿಸಿದುದರಿಂದ ಆ ನಿನ್ನ ಸಂಪತ್ತು ಕೋಪದಿಂದ ಹೊರಟು ಹೋಯಿತು. ನಿನ್ನ ರಾಜ್ಯ ಸಂಪತ್ತೂ ಲಕ್ಷ್ಮಿಯ ಅಂಶವಾದುದರಿಂದ ಈಗ ನೀನು ನನ್ನೊಡನೆಯೂ ಬೃಹಸ್ಪತಿಯೊಡನೆಯೂ ವೈಕುಂಠಕ್ಕೆ ಬಾ. ಅಲ್ಲಿ ಲಕ್ಷ್ಮೀಪತಿಯನ್ನು ಸೇವಿಸಿ ನನ್ನ ವರದಿಂದ ಮತ್ತೆ ಸಂಪತ್ತನ್ನು ಹೊಂದುವೆ. ॥೧೬॥

ಹೀಗೆಂದು ಹೇಳಿ ಬ್ರಹ್ಮನು ಸಮಸ್ತದೇವತೆಗಳೊಂದಿಗೆ ವೈಕುಂಠಕ್ಕೆ ಹೋಗಿ ಪ್ರಕಾಶಸ್ವರೂಪನೂ, ಸ್ವಪ್ರಕಾಶದಿಂದ ಎಲ್ಲವನ್ನೂ ಬೆಳಗುತ್ತಿರುವವನೂ ಅನಾದಿಯಾದವನೂ ಆದ ಭಗವಂತನಾದ ಪರಬ್ರಹ್ಮನನ್ನು ನೋಡಿದನು. ॥೧೭-೧೮॥

ಗ್ರೀಷ್ಮಮಧ್ಯಾಹ್ನಮಾರ್ತಂಡಶತಕೋಟಿಸಮಪ್ರಭಂ ।
ಶಾಂತಮನಾದಿಮಧ್ಯಾಂತಂ ಲಕ್ಷ್ಮೀಕಾಂತಮನಂತಕಂ ॥೧೯॥

ಚತುರ್ಭುಜೈಃ ಪಾರ್ಷದೈಶ್ಚ ಸರಸ್ವತ್ಯಾ ಯುತಂ ಪ್ರಭುಂ ।
ಭಕ್ತ್ಯಾ ಚ ಚತುರ್ಭಿರ್ವೇದೈಶ್ಚ ಗಂಗಯಾ ಪರಿವೇಷ್ಟಿತಂ ॥೨೦॥

ತಂ ಪ್ರಣೇಮುಃ ಸುರಾಃ ಸರ್ವೇ ಮೂರ್ಧ್ನಾ ಬ್ರಹ್ಮಪುರೋಗಮಾಃ ।
ಭಕ್ತಿನಮ್ರಾ ಸ್ಸಾಶ್ರುನೇತ್ರಾಸ್ತುಷ್ಟುವುಃ ಪರಮೇಶ್ವರಂ ॥೨೧॥

ವೃತ್ತಾಂತಂ ಕಥಯಾಮಾಸ ಸ್ವಯಂ ಬ್ರಹ್ಮಾ ಕೃತಾಂಜಲಿಃ ।
ರುರುದುರ್ದೇವತಾಃ ಸರ್ವಾಃ ಸ್ವಾಧಿಕಾರಾಚ್ಚ್ಯುತಾಶ್ಚ ತಾಃ ॥೨೨॥

ಸ ದದರ್ಶ ಸುರಗಣಂ ವಿಪದ್ಗ್ರಸ್ತಂ ಭಯಾಕುಲಂ ।
ರತ್ನಭೂಷಣಶೂನ್ಯಂ ಚ ವಾಹನಾದಿ ವಿವರ್ಜಿತಂ ॥೨೩॥

ಶೋಭಾಶೂನ್ಯಂ ಹತಶ್ರೀಕಂ ನಿಷ್ಪ್ರಭಂ ಸಭಯಂ ಪರಂ ।
ಉವಾಚ ಕಾತರಂ ದೃಷ್ಟ್ವಾ ಭಯಭೀತಿವಿಭಂಜನಃ ॥೨೪॥

---

ಗ್ರೀಷ್ಮಋತುವಿನ ಮಧ್ಯಾಹ್ನಕಾಲದ ನೂರುಕೋಟಿ ಸೂರ್ಯರಿಗೆ ಸಮನಾದ ಕಾಂತಿಯಿಂದ ಕೂಡಿ ಶಾಂತನಾಗಿ ಆದಿಯೂ, ಮಧ್ಯವೂ, ಅಂತ್ಯವೂ ಇಲ್ಲದವನಾಗಿ ಲಕ್ಷ್ಮಿ, ಸರಸ್ವತಿ, ಗಂಗೆ, ಇವರುಗಳಿಂದ ಕೂಡಿ ನಾಲ್ಕು ವೇದಗಳೂ ಭಕ್ತಿಯಿಂದ ಸ್ತೋತ್ರಮಾಡುತ್ತಿರಲಾಗಿ ನಾಲ್ಕು ತೋಳುಗಳುಳ್ಳ ಸೇವಕರು ಸೇವಿಸುತ್ತಿರಲು ಎಲ್ಲರೂ ಆ ಸ್ವಾಮಿಯನ್ನು ನೋಡಿದರು. ॥೧೯-೨೦॥

ಬ್ರಹ್ಮನೇ ಮೊದಲಾದ ಸಮಸ್ತ ದೇವತೆಗಳೂ ಆ ದೇವನಿಗೆ ನಮಸ್ಕರಿಸಿ ಭಕ್ತಿಯಿಂದ ತಲೆಯನ್ನು ಬಗ್ಗಿಸಿಕೊಂಡು ಕಣ್ಣಿನಲ್ಲಿ ನೀರನ್ನು ಸುರಿಸುತ್ತಾ ಪರಮೇಶ್ವರನನ್ನು ಸ್ತೋತ್ರಮಾಡಿದರು. ॥೨೧॥

ಬ್ರಹ್ಮನು ಕೈಜೋಡಿಸಿಕೊಂಡು ಸಮಸ್ತವೃತ್ತಾಂತವನ್ನೂ ಹೇಳಿದನು. ತಮ್ಮ ಅಧಿಕಾರಗಳನ್ನು ಕಳೆದುಕೊಂಡ ಸಮಸ್ತ ದೇವತೆಗಳೂ ಅತ್ತರು. ॥೨೨॥

ಆ ದೇವನು ವಿಪತ್ತಿನಿಂದ ಕೂಡಿ ಭಯದಿಂದ ದುಃಖಪಡುತ್ತಾ ರತ್ನಾಭರಣಗಳೂ ವಾಹನಗಳೂ ಇಲ್ಲದೆ ಕಾಂತಿಹೀನರಾಗಿ ಸಂಪತ್ತನ್ನು ಕಳೆದುಕೊಂಡು ವಿಶೇಷವಾಗಿ ಹೆದರಿರುವ ಆ ದೇವತೆಗಳನ್ನು ನೋಡಿ ಭಯ ಭೀತಿಗಳನ್ನು ನಾಶಮಾಡುವ ಆ ವಿಷ್ಣುವು ಮಾತನಾಡಿದನು. ॥೨೩-೨೪॥

॥ ಶ್ರೀಭಗವಾನುವಾಚ

ಮಾ ಭೈರ್ಬ್ರಹ್ಮನ್ ಹೇ ಸುರಾಶ್ಚ ಭಯಂ ಕಿಂ ವೋ ಮಯಿ ಸ್ಥಿತೇ ।
ದಾಸ್ಯಾಮಿ ಲಕ್ಷ್ಮೀಮಚಲಾಂ ಪರಮೈಶ್ವರ್ಯವರ್ಧಿನೀಂ ॥೨೫॥

ಕಿಂ ಚ ಮದ್ವಚನಂ ಕಿಂಚಿಚ್ಛ್ರೂಯತಾಂ ಸಮಯೋಚಿತಂ ।
ಹಿತಂ ಸತ್ಯಂ ಸಾರಭೂತಂ ಪರಿಣಾಮ ಸುಖಾವಹಂ ॥೨೬॥

ಜನಾಶ್ಚಾಸಂಖ್ಯವಿಶ್ವಸ್ಥಾ ಮದಧೀನಾಶ್ಚ ಸಂತತಂ ।
ಯಥಾ ತಥಾಽಹಂ ಮದ್ಭಕ್ತಪರಾಧೀನೋಽಸ್ವತಂತ್ರಕಃ ॥೨೭॥

ಯಂ ಯಂ ರುಷ್ಟೋ ಹಿ ಮದ್ಭಕ್ತೋ ಮತ್ಪರೋ ಹಿ ನಿರಂಕುಶಃ ।
ತದ್ಗೃಹೇಽಹಂ ನತಿಷ್ಠಾಮಿ ಪದ್ಮಯಾ ಸಹ ನಿಶ್ಚಿತಂ ॥೨೮॥

ದುರ್ವಾಸಾ ಶಂಕರಾಂಶಶ್ಚ ವೈಷ್ಣವೋ ಮತ್ಪರಾಯಣಃ ।
ತಚ್ಛಾಪಾದಾಗತೋಽಹಂ ಚ ಸಲಕ್ಷ್ಮೀಕೋ ಹಿ ವೋ ಗೃಹಾತ್ ॥೨೯॥

---

ಭಗವಂತನು ಹೇಳಿದನು--ಎಲೈ ಬ್ರಹ್ಮನೇ, ದೇವತೆಗಳೇ, ಹೆದರಬೇಡಿರಿ. ನಾನಿರುವಾಗ ನಿಮಗೆ ಭಯವೆಲ್ಲಿಯದು ? ವಿಶೇಷವಾಗಿ ಐಶ್ವರ್ಯವನ್ನು ಹೆಚ್ಚಿಸುವ, ನಾಶವಾಗದ ಸಂಪತ್ತನ್ನು ನಿಮಗೆ ಕೊಡುವೆನು. ಆದರೆ ಸಮಯೋಚಿತವಾದ ನನ್ನ ಮಾತನ್ನು ಸ್ವಲ್ಪ ಕೇಳಿ. ಆ ಮಾತು ಸತ್ಯವಾಗಿಯೂ ನಿಮಗೆ ಹಿತವಾಗಿಯೂ, ಸಾರವಾದುದಾಗಿಯೂ ಕೊನೆಯಲ್ಲಿ ಸುಖಕರವಾದುದಾಗಿಯೂ ಇರುವುದು. ॥೨೫-೨೬॥

ಲೆಕ್ಕವಿಲ್ಲದಷ್ಟು ಪ್ರಪಂಚದಲ್ಲಿರುವ ಜನರೆಲ್ಲರೂ ಯಾವಾಗಲೂ ನನ್ನ ಅಧೀನದಲ್ಲಿರುವರು. ಹಾಗೆಯೇ ನಾನು ನನ್ನ ಭಕ್ತರ ಅಧೀನದಲ್ಲಿರುವೆನು. ಆದುದರಿಂದ ನಾನು ಸ್ವತಂತ್ರನಲ್ಲ. ॥೨೭॥

ನನ್ನ ಭಕ್ತನು ಯಾವ ತಡೆಯೂ ಇಲ್ಲದವನು. ಅವನು ಯಾರ ಯಾರ ಮೇಲೆ ಕೋಪಿಸಿಕೊಳ್ಳುವನೋ ಅವರ ಮನೆಯಲ್ಲಿ ನಾನು ಲಕ್ಷ್ಮೀಸಮೇತನಾಗಿರುವುದಿಲ್ಲ. ಇದು ನಿಶ್ಚಯವಾದುದು. ॥೨೮॥

ದುರ್ವಾಸಮುನಿಯು ಶಂಕರನ ಅಂಶದವನು. ವಿಷ್ಣುಭಕ್ತನು. ನನ್ನನ್ನೇ ಯಾವಾಗಲೂ ಧ್ಯಾನಮಾಡುವವನು. ಅವನ ಶಾಪದಿಂದ ನಾನು ಲಕ್ಷ್ಮೀಸಹಿತನಾಗಿ ನಿನ್ನ ಮನೆಯನ್ನು ಬಿಟ್ಟು ಬಂದೆನು. ॥೨೯॥

ಯತ್ರ ಶಂಖಧ್ವನಿರ್ನಾಸ್ತಿ ತುಲಸೀ ನ ಶಿವಾರ್ಚನಂ ।
ನ ಭೋಜನಂ ಚ ವಿಪ್ರಾಣಾಂ ನ ಪದ್ಮಾ ತತ್ರ ತಿಷ್ಠತಿ ॥೩೦॥

ಮದ್ಭಕ್ತಾನಾಂ ಚ ಮೇ ನಿಂದಾ ಯತ್ರ ಬ್ರಹ್ಮನ್ ಭವೇತ್ಸುರಾಃ ।
ಮಹಾರುಷ್ಟಾ ಮಹಾಲಕ್ಷ್ಮೀ ಸ್ತತೋ ಯಾತಿ ಪರಾಭವಂ ॥೩೧॥

ಮದ್ಭಕ್ತಿಹೀನೋ ಯೋ ಮೂಢೋ ಭುಂಕ್ತೇ ಯೋ ಹರಿವಾಸರೇ ।
ಮಮ ಜನ್ಮದಿನೇ ವಾಽಪಿ ಯಾತಿ ಶ್ರೀಸ್ತದ್ಗೃಹಾದಪಿ ॥೩೨॥

ಮನ್ನಾಮವಿಕ್ರಯೀ ಯಶ್ಚ ವಿಕ್ರೀಣಾತಿ ಸ್ವಕನ್ಯಕಾಂ ।
ಯತ್ರಾಽತಿಥಿರ್ನಭುಂಕ್ತೇ ಚ ಮತ್ಪ್ರಿಯಾ ಯಾತಿ ತದ್ಗೃಹಾತ್ ॥೩೩॥

ಯೋ ವಿಪ್ರಃ ಪುಂಶ್ಚಲೀಪುತ್ರೋ ಮಹಾಪಾಪೀ ಚ ತತ್ಪತಿಃ ।
ಪಾಪಿನೋ ಯೋ ಗೃಹಂ ಯಾತಿ ಶೂದ್ರಶ್ರಾದ್ಧಾನ್ನಭೋಜಕಃ ॥೩೪॥
ಮಹಾರುಷ್ಟಾ ತತೋ ಯಾತಿ ಮಂದಿರಾತ್ಕಮಲಾಲಯಾ ।

---

ಎಲ್ಲಿ ಶಂಖಧ್ವನಿಯು ಇರುವುದಿಲ್ಲವೋ, ಶಿವನಿಗೂ ಶಿವೆಗೂ ಎಲ್ಲಿ ತುಲಸಿಯಿಂದ ಪೂಜಿಸುವುದಿಲ್ಲವೋ ಆ ಪ್ರದೇಶದಲ್ಲಿ ಲಕ್ಷ್ಮಿಯು ಇರುವುದಿಲ್ಲ. ॥೩೦॥

ಎಲೈ ಬ್ರಹ್ಮನೇ, ದೇವತೆಗಳೇ, ನನ್ನ ಭಕ್ತರ ಮತ್ತು ನನ್ನ ನಿಂದೆಯು ಎಲ್ಲಿ ಆಗುತ್ತಿರುವುದೋ ಅಲ್ಲಿ ಮಹಾಲಕ್ಷ್ಮಿಯು ಕೋಪಿಸಿಕೊಂಡು ಆ ಪ್ರದೇಶದಿಂದ ಹೊರಟುಹೋಗುವಳು. ॥೩೧॥

ಯಾವ ಮೂಢನು ನನ್ನಲ್ಲಿ ಭಕ್ತಿಯಿಲ್ಲದೆ ಏಕಾದಶಿಯ ದಿನ ಭೋಜನ ಮಾಡುವನೋ ಮತ್ತು ನನ್ನ ಜನ್ಮದಿನವಾದ ಕೃಷ್ಣಾಷ್ಟಮಿ ಮುಂತಾದ ದಿನಗಳಲ್ಲಿ ಭೋಜನಮಾಡುವನೋ ಅವನ ಮನೆಯಿಂದಲೂ ಲಕ್ಷ್ಮಿಯು ಹೊರಟುಹೋಗುವಳು. ॥೩೨॥

ನನ್ನ ನಾಮವನ್ನು ಕ್ರಯಕ್ಕೆ ಮಾರುವವನು, (ಎಲ್ಲಿ ಅತಿಥಿಯು ಭೋಜನ ಮಾಡುವುದಿಲ್ಲವೋ) ಅತಿಥಿಗಳಿಗೆ ಅನ್ನವನ್ನಿಕ್ಕದವನು, ಇವರ ಮನೆಗಳಿಂದ ನನ್ನ ಪ್ರೀತಿಪಾತ್ರಳಾದ ಲಕ್ಷ್ಮಿಯು ಹೊರಟುಹೋಗುವಳು. ॥೩೩॥

ಜಾರೆಯ ಮಗನಾದ ಬ್ರಾಹ್ಮಣ, ಮಹಾಪಾಪಿಯಾದ ಜಾರೆಯ ಪತಿ, ಪಾಪಿಗಳ ಮನೆಗೆ ಹೋಗುವ ಬ್ರಾಹ್ಮಣ, ಶೂದ್ರಾನ್ನವನ್ನು ಊಟಮಾಡುವ

ಶೂದ್ರಾಣಾಂ ಶವದಾಹೀ ಚ ಭಾಗ್ಯಹೀನೋ ದ್ವಿಜಾಧಮಃ ॥೩೫॥

ಯಾತಿ ರುಷ್ಟಾ ತದ್ಗೃಹಾಚ್ಚ ದೇವಾಃ ಕಮಲವಾಸಿನೀ ।
ಶೂದ್ರಾಣಾಂ ಸೂಪಕಾರೀ ಯೋ ಬ್ರಾಹ್ಮಣೋ ವೃಷವಾಹಕಃ ॥೩೬॥

ತತ್ತ್ರೋಯಪಾನಭೀತಾ ಚ ಕಮಲಾ ಯಾತಿ ತದ್ಗೃಹಾತ್ ।
ಅಶುದ್ಧಹೃದಯಃ ಕ್ರೂರೋ ಹಿಂಸಕೋ ನಿಂದಕೋ ದ್ವಿಜಃ ॥೩೭॥

ಬ್ರಾಹ್ಮಣಃ ಶೂದ್ರಯಾಜೀ ಚ ಯಾತಿ ದೇವೀ ಚ ತದ್ಗೃಹಾತ್ ।
ಅವೀರಾನ್ನಂ ಚ ಯೋ ಭುಂಕ್ತೇ ತಸ್ಮಾದ್ಯಾತಿ ಜಗತ್ಪ್ರಸೂಃ ॥೩೮॥

ತೃಣಂ ಭಿನತ್ತಿ ನಖೈಸ್ತೈರ್ವಾ ಯೋ ವಿಲಿಖೇನ್ಮಹೀಂ ।
ನಿರಾಶೋ ಬ್ರಾಹ್ಮಣೋ ಯತ್ರತದ್ಗೃಹಾದ್ಯಾತಿ ಮತ್ಪ್ರಿಯಾ ॥೩೯॥

---

ಬ್ರಾಹ್ಮಣ, ಇವರುಗಳ ಮನೆಯಿಂದ ಮಹಾಕೋಪವನ್ನು ಕೂಡಿಕೊಂಡು ಲಕ್ಷ್ಮಿಯು ಹೊರಟುಹೋಗುವಳು. ॥೩೪॥

ಎಲೈ ದೇವತೆಗಳೇ, ಶೂದ್ರರ ಶವವನ್ನು ದಹನಮಾಡುವ ನೀಚಬ್ರಾಹ್ಮಣನ ಮನೆಯಿಂದ ಲಕ್ಷ್ಮಿಯು ಕೋಪಿಸಿಕೊಂಡು ಹೊರಟುಹೋಗುವಳು. ॥೩೫॥

ಶೂದ್ರರಿಗೆ ಅಡಿಗೆಯನ್ನು ಮಾಡುವ ಬ್ರಾಹ್ಮಣನೂ ಎತ್ತನ್ನು ಕೆಲಸಗಳಿಗೆ ಉಪಯೋಗಿಸುವ ಬ್ರಾಹ್ಮಣನೂ ಇರುವ ಮನೆಯಲ್ಲಿ ನೀರನ್ನು ಕುಡಿಯುವುದಕ್ಕೂ ಹೆದರಿಕೊಂಡು ಲಕ್ಷ್ಮಿಯು ಆ ಮನೆಯನ್ನು ಬಿಟ್ಟು ಹೋಗುವಳು. ॥೩೬॥

ಕೆಟ್ಟಮನಸ್ಸಿನವನೂ, ಕ್ರೂರಿಯೂ, ಹಿಂಸಕನೂ, ದೂಷಿಸುವವನೂ, ಶೂದ್ರರಿಗೆ ಯಜ್ಞಾದಿಗಳನ್ನು ಮಾಡಿಸತಕ್ಕವನೂ ಆದ ಬ್ರಾಹ್ಮಣನ ಮನೆಯಿಂದಲೂ ಪತಿಪುತ್ರರಿಲ್ಲದ ಹೆಂಗುಸಿನ ಅನ್ನವನ್ನು ಊಟಮಾಡುವ ಬ್ರಾಹ್ಮಣನ ಮನೆಯಿಂದಲೂ ಲಕ್ಷ್ಮಿಯು ಹೊರಟುಹೋಗುವಳು. ॥೩೭-೩೮॥

ಉಗುರಿನಿಂದ ದರ್ಭೆಯ ಹುಲ್ಲನ್ನು ಕತ್ತರಿಸುವ, ಆ ಉಗುರಿನಿಂದ ನೆಲವನ್ನು ಕೆರೆಯುವ, ಬ್ರಾಹ್ಮಣನು ಇಷ್ಟಾರ್ಥವನ್ನು ಹೊಂದದೆ ನಿರಾಶೆಯಿಂದ ಹೋಗುವ, ಅಂತಹ ಮನುಷ್ಯನ ಮನೆಯಿಂದ ನನ್ನ ಪ್ರಿಯಳಾದ ಲಕ್ಷ್ಮಿಯು ಹೊರಟು ಹೋಗುವಳು. ॥೩೯॥

ಸೂರ್ಯೋದಯೇ ದ್ವಿಜೋ ಭುಂಜ್ತೇ ದಿವಾ ಸ್ವಾಪೀ ಚ ಬ್ರಾಹ್ಮಣಃ ।
ದಿವಾ ಮೈಥುನಕಾರೀ ಚ ಯಸ್ತಸ್ಮಾದ್ಯಾತಿ ಮತ್ಪ್ರಿಯಾ ॥೪೦॥

ಆಚಾರಹೀನೋ ವಿಪ್ರೋ ಯೋ ಯಶ್ಚ ಶೂದ್ರಪ್ರತಿಗ್ರಹೀ ।
ಅದೀಕ್ಷಿತೋ ಹಿ ಯೋ ಮೂಢಸ್ತಸ್ಮಾದ್ವೈ ಯಾತಿ ಮತ್ಪ್ರಿಯಾ ॥೪೧॥

ಸ್ನಿಗ್ಧಪಾದಶ್ಚ ನಗ್ನೋ ಹಿ ಯಃ ಶೇತೇ ಜ್ಞಾನದುರ್ಬಲಃ ।
ಶಶ್ವದ್ಧಸತಿ ವಾಚಾಲೋ ಯಾತಿ ಸಾ ತದ್ಗೃಹಾತ್ಸತೀ ॥೪೨॥

ಶಿರಃ ಸ್ನಾತಸ್ತು ತೈಲೇನ ಯೋಽನ್ಯಾಂಗಂ ಸಮುಸ್ಪೃಶೇತ್ ।
ಸ್ವಾಂಗೇ ಚ ವಾದಯೇದ್ವಾದ್ಯಂ ರುಷ್ಟಾ ಸಾ ಯಾತಿ ತದ್ಗೃಹಾತ್ ॥೪೩॥

ವ್ರತೋಪವಾಸಹೀನೋ ಯಃ ಸಂಧ್ಯಾಹೀನೋಽಶುಚಿರ್ದ್ವಿಜಃ ।
ವಿಷ್ಣುಭಕ್ತಿವಿಹೀನಸ್ತು ತಸ್ಮಾದ್ಯಾತಿ ಚ ಮತ್ಪ್ರಿಯಾ ॥೪೪॥

---

ಸೂರ್ಯೋದಯ ಕಾಲದಲ್ಲಿ ಊಟಮಾಡುವ, ಹಗಲು ನಿದ್ದೆಮಾಡುವ ಮತ್ತು ಹಗಲುಹೊತ್ತಿನಲ್ಲಿ ಸ್ತ್ರೀಸಂಗವನ್ನು ಮಾಡುವ ಬ್ರಾಹ್ಮಣನ ಮನೆಯಿಂದ ಲಕ್ಷ್ಮಿಯು ಹೊರಟುಹೋಗುವಳು. ॥೪೦॥

ಆಚಾರವನ್ನು ಬಿಟ್ಟಿರುವ, ಶೂದ್ರರಿಂದ ದಾನವನ್ನು ತೆಗೆದುಕೊಳ್ಳುವ ಮಂತ್ರದೀಕ್ಷೆಯಿಲ್ಲದ ಮೂಢನಾದ ಬ್ರಾಹ್ಮಣನ ಮನೆಯಿಂದ ಲಕ್ಷ್ಮಿಯು ಹೊರಟು ಹೋಗುವಳು. ॥೪೧॥

ತಿಳುವಳಿಕೆಯಿಲ್ಲದೆ ಯಾವನು ಕಾಲಿಗೆ ಎಣ್ಣೆಯನ್ನು ಬಳಿದುಕೊಂಡೂ, ಬೆತ್ತಲೆಯಾಗಿಯೂ ಮಲಗುವನೋ, ಮತ್ತೆ ಮತ್ತೆ ನಗುತ್ತಾ ಅನುಪಯುಕ್ತವಾದ ಮಾತುಗಳನ್ನು ಆಡುವನೋ ಅವನ ಮನೆಯಿಂದ ಲಕ್ಷ್ಮಿಯು ಹೊರಟುಹೋಗುವಳು. ॥೪೨॥

ತಲೆಗೆ ಎಣ್ಣೆಯನ್ನೊತ್ತಿಕೊಂಡು ಮತ್ತೊಬ್ಬರ ಅವಯವಗಳನ್ನು ಮುಟ್ಟಿದರೂ, ತನ್ನ ಅವಯುವದಲ್ಲಿಯೇ ವಾದ್ಯವನ್ನು ಬಾರಿಸಿದರೂ, ಲಕ್ಷ್ಮಿಯು ಕೋಪಿಸಿಕೊಂಡು ಅವರ ಮನೆಯನ್ನು ಬಿಟ್ಟು ಹೊರಟುಹೋಗುವಳು. ॥೪೩॥

ಉಪವಾಸವ್ರತಗಳನ್ನೂ, ಸಂಧ್ಯಾವಂದನೆಯನ್ನೂ ಮಾಡದ ವಿಷ್ಣುಭಕ್ತಿಯಿಲ್ಲದ ಅಶುದ್ಧವಾದ ಬ್ರಾಹ್ಮಣನ ಮನೆಯಿಂದ ಲಕ್ಷ್ಮಿಯು ಹೊರಟುಹೋಗುವಳು. ॥೪೪॥

ಬ್ರಾಹ್ಮಣಂ ನಿಂದಯೇದ್ಯೋ ಹಿ ತಂ ಚ ಯೋ ದ್ವೇಷ್ಟಿ ಸಂತತಂ ।
ಜೀವಹಿಂಸೋ ದಯಾಹೀನೋ ಯಾತಿ ಸರ್ವಪ್ರಸೂಸ್ತತಃ ॥೪೫॥

ಯತ್ರ ಯತ್ರ ಹರೇರರ್ಚಾ ಹರೇರುತ್ಕೀರ್ತನಂ ತಥಾ ।
ತತ್ರ ತಿಷ್ಠತಿ ಸಾ ದೇವೀ ಸರ್ವಮಂಗಲಮಂಗಲಾ ॥೪೬॥

ಯತ್ರ ಪ್ರಶಂಸಾ ಕೃಷ್ಣಸ್ಯ ತದ್ಭಕ್ತಸ್ಯ ಪಿತಾಮಹ ।
ಸಾ ಚ ಕೃಷ್ಣಪ್ರಿಯಾ ದೇವೀ ತತ್ರ ತಿಷ್ಠತಿ ಸಂತತಂ ॥೪೭॥

ಯತ್ರ ಶಂಖಧ್ವನಿಃ ಶಂಖಃ ಶಿಲಾ ಚ ತುಲಸೀದಲಂ ।
ತತ್ಸೇವಾವಂದನಂ ಧ್ಯಾನಂ ತತ್ರ ಸಾ ಪರಿತಿಷ್ಠತಿ ॥೪೮॥

ಶಿವಲಿಂಗಾರ್ಚನಂ ಯತ್ರ ತಸ್ಯ ಚೋತ್ಕೀರ್ತನಂ ಶುಭಂ ।
ದುರ್ಗಾರ್ಚನಂ ತದ್ಗುಣಾಶ್ಚ ತತ್ರ ಪದ್ಮಾ ನಿವಾಸಿನೀ ॥೪೯॥

---

ಬ್ರಾಹ್ಮಣನನ್ನು ನಿಂದಿಸುವ ಮತ್ತು ಅವನನ್ನು ದ್ವೇಷಿಸುವ, ಪ್ರಾಣಿಹಿಂಸೆ ಮಾಡುವ, ದಯಾಹೀನನಾದ ಮನುಷ್ಯನನ್ನು ಲಕ್ಷ್ಮಿಯು ಬಿಟ್ಟುಬಿಡುವಳು. ॥೪೫॥

ಎಲ್ಲೆಲ್ಲಿ ವಿಷ್ಣುವಿನ ಪೂಜೆಯು ನಡೆಯುವುದೋ, ಹರಿಕೀರ್ತನೆಯಾಗುವುದೋ ಅಲ್ಲೆಲ್ಲಾ ಸಮಸ್ತ ಮಂಗಲಗಳಿಗೂ ಮಂಗಲಸ್ವರೂಪಳಾದ ಆ ಲಕ್ಷ್ಮಿಯು ನೆಲಸಿರುವಳು. ॥೪೬॥

ಎಲ್ಲಿ ಕೃಷ್ಣನನ್ನೂ ಅವನ ಭಕ್ತರನ್ನೂ ಹೊಗಳುತ್ತಿರುವರೋ ಶಂಖಧ್ವನಿ ಶಂಖ, ಸಾಲಗ್ರಾಮಶಿಲೆ, ತುಲಸೀದಲ, ವಿಷ್ಣುವಿನ ಪೂಜೆ, ನಮಸ್ಕಾರ, ಧ್ಯಾನಾದಿಗಳು ಎಲ್ಲಿ ಆಚರಿಸಲ್ಪಡುತ್ತಿರುವುವೋ ಅಲ್ಲಿ ಲಕ್ಷ್ಮೀದೇವಿಯು ಯಾವಾಗಲೂ ವಾಸವಾಗಿರುವಳು. ॥೪೭-೪೮॥

ಶಿವಲಿಂಗಪೂಜೆಯೂ, ಶಿವಗುಣಕೀರ್ತನೆಯೂ, ದುರ್ಗಾದೇವಿಯ ಪೂಜೆಯೂ, ಆ ದೇವಿಯ ಗುಣಕೀರ್ತನೆಯೂ ಎಲ್ಲಿ ನಡೆಯುತ್ತಿರುವುದೋ ಅಲ್ಲಿ ಕಮಲ ಮುಖಿಯಾದ ಲಕ್ಷ್ಮೀದೇವಿಯು ವಾಸವಾಗಿರುವಳು. ॥೪೯॥

ವಿಪ್ರಾಣಾಂ ಸೇವನಂ ಯತ್ರ ತೇಷಾಂ ಚ ಭೋಜನಂ ಶುಭಂ ।
ಅರ್ಚನಂ ಸರ್ವದೇವಾನಾಂ ತತ್ರ ಪದ್ಮಮುಖೀ ಸತೀ ॥೭೦॥

ಇತ್ಯುಕ್ತ್ವಾ ಚ ಸುರಾನ್ಸರ್ವಾನ್ ರಮಾಮಾಹ ರಮಾಪತಿಃ ।
ಕ್ಷೀರೋದ ಸಾಗರೇ ಜನ್ಮ ಕಲಯಾ ಕಲಯೇತಿ ಚ ॥೫೧॥

ಇತ್ಯುಕ್ತ್ವಾ ತಾಂ ಜಗನ್ನಾಥೋ ಬ್ರಹ್ಮಾಣಂ ಪುನರಾಹ ಚ ।
ಮಥಿತ್ವಾ ಸಾಗರಾ ಲ್ಲಕ್ಷ್ಮೀಂ ದೇವೇಭ್ಯೋ ದೇಹಿ ಪದ್ಮಜ ॥೫೨॥

ಇತ್ಯುಕ್ತ್ವಾ ಕಮಲಾಕಾಂತೋ ಜಗಾಮಾಂತಃಪುರಂ ಮುನೇ ।
ದೇವಾಶ್ಚಿರೇಣ ಕಾಲೇನ ಯಯುಃ ಕ್ಷೀರೋದಸಾಗರಂ ॥೫೩॥

ಮಂಥಾನಂ ಮಂದರಂ ಕೃತ್ವಾ ಕೂರ್ಮಂ ಕೃತ್ವಾ ಚ ಭಾಜನಂ ।
ಕೃತ್ವಾ ಶೇಷಂ ಮಂಥಪಾಶಂ ಮಮಂಥುರಸುರಾಃ ಸುರಾಃ ॥೫೪॥

---

ಎಲ್ಲಿ ಬ್ರಾಹ್ಮಣರಿಗೆ ಉಪಚಾರವೂ, ಅವರಿಗೆ ಭೋಜನವೂ, ಸಮಸ್ತದೇವತೆಗಳ ಪೂಜೆಯೂ, ಮಂಗಲಕರವಾಗಿ ನಡೆಯುತ್ತಿರುವುದೋ ಅಲ್ಲಿ ಕಮಲಮುಖಿಯಾದ ಲಕ್ಷ್ಮೀದೇವಿಯು ವಾಸವಾಗಿರುವಳು. ॥೫೦॥

ಲಕ್ಷ್ಮೀಪತಿಯಾದ ನಾರಾಯಣನು ದೇವತೆಗಳಿಗೆ ಹೀಗೆಂದು ಹೇಳಿ, ಲಕ್ಷ್ಮಿಯನ್ನು ಕುರಿತು, ನಿನ್ನ ಅಂಶದಿಂದ ಕ್ಷೀರಸಮುದ್ರದಲ್ಲಿ ಜನ್ಮವನ್ನು ಸ್ವೀಕರಿಸು. ಎಂದು ಹೇಳಿದನು. ॥೫೧॥

ಸಮಸ್ತ ಪ್ರಪಂಚಕ್ಕೂ ಒಡೆಯನಾದ ನಾರಾಯಣನು ಲಕ್ಷ್ಮಿಗೆ ಹೀಗೆ ಹೇಳಿ ಬ್ರಹ್ಮನನ್ನು ಕುರಿತು ಕಮಲದಲ್ಲಿ ಹುಟ್ಟಿದ ಎಲೈ ಬ್ರಹ್ಮನೇ, ಕ್ಷೀರಸಮುದ್ರವನ್ನು ಪರ್ವತದಿಂದ ಕಡೆದು ಅದರಲ್ಲಿ ಹುಟ್ಟಿದ ಲಕ್ಷ್ಮಿಯನ್ನು ದೇವತೆಗಳಿಗೆ ಕೊಡು ಎಂದು ಹೇಳಿದನು. ॥೫೨॥

ಹೀಗೆಂದು ಹೇಳಿ ಲಕ್ಷ್ಮೀಪತಿಯಾದ ನಾರಾಯಣನು ಅಂತಃಪುರಕ್ಕೆ ಹೋದನು. ದೇವತೆಗಳು ಬಹಳಕಾಲದ ಮೇಲೆ ಕ್ಷೀರಸಮುದ್ರಕ್ಕೆ ಹೋದರು. ॥೫೩॥

ಮಂದರಪರ್ವತವನ್ನು ಕಡೆಗೋಲನ್ನು ಮಾಡಿಕೊಂಡು ಆದಿಕೂರ್ಮನನ್ನು ಆಧಾರಪಾತ್ರೆಯಾಗಿಯೂ, ಆದಿಶೇಷನನ್ನು ಹಗ್ಗವಾಗಿಯೂ, ಮಾಡಿಕೊಂಡು ಅಸುರರೂ ದೇವತೆಗಳೂ ಕೂಡಿ ಕ್ಷೀರಸಮುದ್ರವನ್ನು ಕಡೆದರು. ॥೫೪॥

ಧನ್ವಂತರಿಂ ಚ ಪೀಯೂಷಮುಚ್ಚೈಃಶ್ರವಸಮಿಾಪ್ಸಿತಂ ।
ನಾನಾರತ್ನಂ ಹಸ್ತಿರತ್ನಂ ಪ್ರಾಪುರ್ಲಕ್ಷ್ಮೀಂ ಸುದರ್ಶನಂ ॥೫೫॥

ವನಮಾಲಾಂ ದದೌ ಸಾ ಚ ಕ್ಷೀರೋದಶಾಯಿನೇ ಮುನೇ ।
ಸರ್ವೇಶ್ವರಾಯ ರಮ್ಯಾಯ ವಿಷ್ಣವೇ ವೈಷ್ಣವೀ ಸತೀ ॥೫೬॥

ದೇವೈಃ ಸ್ತುತ್ವಾ ಪೂಜಿತಾ ಚ ಬ್ರಹ್ಮಣಾ ಶಂಕರೇಣ ಚ ।
ದದೌ ದೃಷ್ಟಿಂ ಸುರಗೃಹೇ ಬ್ರಹ್ಮಶಾಪವಿಮೋಚನಾತ್ ॥೫೭॥

ಪ್ರಾಪುರ್ದೇವಾಃ ಸ್ವವಿಷಯಂ ದೈತ್ಯಗ್ರಸ್ತಂ ಭಯಂಕರಂ ।
ಮಹಾಲಕ್ಷ್ಮೀಪ್ರಸಾದೇನ ವರದಾನೇನ ನಾರದ ॥೫೮॥

---

ಆ ಸಮುದ್ರದಲ್ಲಿ ಧನ್ವಂತರಿಯನ್ನೂ ಅಮೃತವನ್ನೂ ಉಚ್ಚೈಃಶ್ರವಸ್ಸೆಂಬ ಕುದುರೆಯನ್ನೂ ಬೇಕಾದ ಬಗೆಬಗೆಯ ರತ್ನವನ್ನೂ ಐರಾವತವೆಂಬ ಆನೆಯನ್ನೂ ಲಕ್ಷ್ಮಿಯನ್ನೂ ಸುದರ್ಶನವೆಂಬ ಚಕ್ರಾಯುಧವನ್ನೂ ಪಡೆದರು. ॥೫೫॥

ನಾರದಮುನಿಯೇ ಕೇಳು, ಆ ಲಕ್ಷ್ಮೀದೇವಿಯು ಕ್ಷೀರಸಮುದ್ರದಲ್ಲಿ ಮಲಗಿದ್ದ ಸರ್ವೇಶ್ವರನೂ ಸುಂದರನೂ ಆದ ವಿಷ್ಣುವಿಗೆ ವನಮಾಲೆ ಎಂಬ ತುಲಸಿಯ ಸರವನ್ನು ಕೊಟ್ಟಳು. ॥೫೬॥

ಆ ಲಕ್ಷ್ಮೀದೇವಿಯನ್ನು ದೇವತೆಗಳು ಸ್ತೋತ್ರಮಾಡಿದರು. ಬ್ರಹ್ಮನೂ ಶಂಕರನೂ ಪೂಜಿಸಿದರು. ಬ್ರಾಹ್ಮಣನ ಶಾಪವು ಕಳೆದುಹೋದುದರಿಂದ ಆ ದೇವಿಯು ತನ್ನ ದಯಾಪೂರಿತ ದೃಷ್ಟಿಯನ್ನು ದೇವತೆಗಳ ಮನೆಯ ಮೇಲಿಟ್ಟಳು. ಇಲ್ಲಿ ಸ್ವಾಮಿಯಾದ ವಿಷ್ಣುವಿಗೆ ಮರ್ಯಾದೆ ಮಾಡದಿದ್ದುದೇ ಬ್ರಾಹ್ಮಣನಾದ ದುರ್ವಾಸನ ಶಾಪವು ಬರಲು ಕಾರಣವಾಯಿತು. ಯಾವಾಗ ವಿಷ್ಣುವಿಗೆ ಮರ್ಯಾದೆಯುಂಟಾಯಿತೋ ಆಗಲೇ ಆ ಶಾಪವು ನಾಶವಾಯಿತು ಎಂದು ಭಾವವು. ॥೫೭॥

ನಾರದನೇ, ಕೇಳು. ದೈತ್ಯರು ತಮ್ಮ ವಶಮಾಡಿಕೊಂಡಿದ್ದುದರಿಂದ ಭಯಂಕರವಾಗಿದ್ದ ತಂತಮ್ಮ ಸ್ಥಾನಗಳನ್ನು ದೇವತೆಗಳು ಮಹಾಲಕ್ಷ್ಮಿಯ ಅನುಗ್ರಹದಿಂದಲೂ ಬ್ರಹ್ಮನ ವರದಿಂದಲೂ ಪುನಃ ಪಡೆದುಕೊಂಡರು. ॥೫೮॥

ಇತ್ಯೇವಂ ಕಥಿತಂ ಸರ್ವಂ ಲಕ್ಷ್ಮ್ಯುಪಾಖ್ಯಾನಮುತ್ತಮಂ ।
ಸುಖದಂ ಸಾರಭೂತಂ ಚ ಕಿಂ ಭೂಯಃ ಶ್ರೋತುಮಿಚ್ಛಸಿ ॥೫೯॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ನವಮಸ್ಕಂಧೇ
ಏಕಚತ್ವಾರಿಂಶೋऽಧ್ಯಾಯಃ

---

ಈ ರೀತಿಯಾಗಿ ಶ್ರೇಷ್ಠವಾದ ಲಕ್ಷ್ಮೀದೇವಿಯ ಉಪಾಖ್ಯಾನವನ್ನೆಲ್ಲವನ್ನೂ ಹೇಳಿದೆನು. ಇದು ಸಾರವಾದುದು. ಸಮಸ್ತರಿಗೂ ಸುಖವನ್ನು ಕೊಡತಕ್ಕುದು. ಮತ್ತೇನನ್ನು ಕೇಳಬೇಕೆಂದಿರುವೆ ? ಎಂದು ನಾರದಮುನಿಯನ್ನು ಕುರಿತು ನಾರಾಯಣಮುನಿಯು ಹೇಳಿದನು. ॥೫೯॥

ಇಲ್ಲಿಗೆ ದೇವೀಭಾಗವತಮಹಾಪುರಾಣದ ಒಂಬತ್ತನೆಯ ಸ್ಕಂಧದಲ್ಲಿ
ನಲವತ್ತೊಂದನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ನವಮಸ್ಕಂಧೇ

### || ದ್ವಿಚತ್ವಾರಿಂಶೋಽಧ್ಯಾಯಃ ||

### ನಲವತ್ತೆರಡನೆಯ ಅಧ್ಯಾಯವು

|| ನಾರದ ಉವಾಚ ||

**ಹರೇರುತ್ಕೀರ್ತನಂ ಭದ್ರಂ ಶ್ರುತಂ ತಜ್ಜ್ಞಾನಮುತ್ತಮಂ ।**
**ಈಪ್ಸಿತಂ ಲಕ್ಷ್ಮ್ಯುಪಾಖ್ಯಾನಂ ಧ್ಯಾನಂ ಸ್ತೋತ್ರಂ ವದ ಪ್ರಭೋ ॥೧॥**

|| ನಾರಾಯಣ ಉವಾಚ ||

**ಸ್ನಾತ್ವಾ ತೀರ್ಥೇ ಪುರಾ ಶಕ್ರೋ ಧೃತ್ವಾ ಧೌತೇ ಚ ವಾಸಸೀ ।**
**ಘಟಂ ಸಂಸ್ಥಾಪ್ಯ ಕ್ಷೀರೋದೇ ಷಡ್ದೇವಾನ್ಪರ್ಯಪೂಜಯತ್ ॥೨॥**

**ಗಣೇಶಂ ಚ ದಿನೇಶಂ ಚ ವಹ್ನಿಂ ವಿಷ್ಣುಂ ಶಿವಂ ಶಿವಾಂ ।**
**ಏತಾನ್ಭಕ್ತ್ಯಾ ಸಮಭ್ಯರ್ಚ್ಯ ಪುಷ್ಪಗಂಧಾದಿಭಿಸ್ತದಾ ॥೩॥**

---

ನಾರದನು ಹೇಳಿದನು—ಗುರುವಾದ ನಾರಾಯಣ ಮುನಿಯೇ, ಮಂಗಲಕರವಾದ ಹರಿಯ ಗುಣವರ್ಣನೆಯನ್ನೂ ಆ ಪರಮಾತ್ಮನ ಸಂಬಂಧವಾದ ಜ್ಞಾನವನ್ನೂ ಕೇಳಬೇಕಾಗಿದ್ದುದನ್ನು ಕೇಳಿದೆನು. ಇನ್ನು ಲಕ್ಷ್ಮೀದೇವಿಯ ಧ್ಯಾನವನ್ನೂ ಸ್ತೋತ್ರವನ್ನೂ ಹೇಳಬೇಕು. ||೧||

ಪೂರ್ವದಲ್ಲಿ ದೇವೇಂದ್ರನು ಪುಣ್ಯತೀರ್ಥದಲ್ಲಿ ಸ್ನಾನಮಾಡಿ ಒಗೆದ ಮಡಿಬಟ್ಟೆಗಳನ್ನು ಧರಿಸಿ ಕ್ಷೀರಸಮುದ್ರ ತೀರದಲ್ಲಿ ಕಲಶವನ್ನು ಸ್ಥಾಪಿಸಿ ಮೊದಲು ಆರು ದೇವತೆಗಳನ್ನು ಪೂಜಿಸಿದನು. ಈ ಪೂಜೆಗಳನ್ನು ಮಾಡದಿದ್ದರೆ ಯಾವ ಕರ್ಮಗಳಿಗೂ ಅಧಿಕಾರವಿರುವುದಿಲ್ಲ. ||೨||

ಗಣೇಶ, ಸೂರ್ಯ, ಅಗ್ನಿ, ವಿಷ್ಣು, ಶಿವ, ದೇವೀ ಇವರೇ ಆರು ದೇವತೆಗಳು ಈ ದೇವತೆಗಳನ್ನು ಇಂದ್ರನು ಹೂಗಂಧಾದಿಗಳಿಂದ ಭಕ್ತಿಯಿಂದ ಪೂಜಿಸಿದನು. ||೩||

ಆವಾಹ್ಯ ಚ ಮಹಾಲಕ್ಷ್ಮೀಂ ಪರಮೈಶ್ವರ್ಯರೂಪಿಣೀಂ ।
ಪೂಜಾಂ ಚಕಾರ ದೇವೇಶೋ ಬ್ರಹ್ಮಣಾ ಚ ಪುರೋಧಸಾ ॥೪॥

ಪುರಃ ಸ್ಥಿತೇಷು ಮುನಿಷು ಬ್ರಾಹ್ಮಣೇಷು ಗುರೌ ಹರೌ ।
ದೇವಾದಿಷು ಸುದೇಶೇ ಚ ಜ್ಞಾನಾನಂದೇ ಶಿವೇ ಮುನೇ ॥೫॥

ಪಾರಿಜಾತಸ್ಯ ಪುಷ್ಪಂ ಚ ಗೃಹೀತ್ವಾ ಚಂದನೋಕ್ಷಿತಂ ।
ಧ್ಯಾತ್ವಾ ದೇವೀಂ ಮಹಾಲಕ್ಷ್ಮೀಂ ಪೂಜಯಾಮಾಸ ನಾರದ ॥೬॥

ಧ್ಯಾನಂ ಚ ಸಾಮವೇದೋಕ್ತಂ ಯದ್ದತ್ತಂ ಬ್ರಹ್ಮಣೇ ಪುರಾ ।
ಹರಿಣಾ ತೇನ ಧ್ಯಾನೇನ ತನ್ನಿಬೋಧ ವದಾಮಿ ತೇ ॥೭॥

ಸಹಸ್ರದಲಪದ್ಮಸ್ಥಕರ್ಣಿಕಾವಾಸಿನೀಂ ಪರಾಂ ।
ಶರತ್ಪಾರ್ವಣಕೋಟೀಂದುಪ್ರಭಾಮುಷ್ಟಿಕರಾಂ ಪರಾಂ ॥೮॥

---

ಶ್ರೇಷ್ಠವಾದ ಸಂಪತ್ತಿನಸ್ವರೂಪಳಾದ ಮಹಾಲಕ್ಷ್ಮೀದೇವಿಯನ್ನು ಆ ಕಲಶದಲ್ಲಿ ಆವಾಹನಮಾಡಿ ಆ ದೇವೇಂದ್ರನು ಬ್ರಹ್ಮನು ತನಗೆ ಬೋಧಿಸಿದ ಮಾರ್ಗದಿಂದ ಪೂಜೆಯನ್ನು ಮಾಡಿದನು. ॥೪॥

ನಾರದಮುನಿಯೇ, ಮುನಿಗಳೂ ಬ್ರಾಹ್ಮಣರೂ, ಬೃಹಸ್ಪತಿಯೂ, ಹರಿಯೂ, ದೇವತೆಗಳೂ, ಜ್ಞಾನಾನಂದ ಉಳ್ಳ ಶಿವನೂ ಎದುರಿಗಿದ್ದು ನೋಡುತ್ತಿರಲು ದೇವೇಂದ್ರನು ಉತ್ತಮವಾದ ಪ್ರದೇಶದಲ್ಲಿ ಮಹಾಲಕ್ಷ್ಮಿಯನ್ನು ಧ್ಯಾನಮಾಡಿ ಗಂಧದ ನೀರನ್ನು ಚುಮುಕಿಸಿದ ಪಾರಿಜಾತ ಪುಷ್ಪಗಳನ್ನು ತೆಗೆದುಕೊಂಡು ಪೂಜಿಸಿದನು. ॥೫-೬॥

ಪೂರ್ವದಲ್ಲಿ ಹರಿಯು ಬ್ರಹ್ಮನಿಗೆ ಸಾಮವೇದೋಕ್ತವಾದ ಲಕ್ಷ್ಮೀದೇವಿಯ ಧ್ಯಾನವನ್ನು ಹೇಳಿಕೊಟ್ಟನು. ದೇವೇಂದ್ರನು ಆ ಧ್ಯಾನದಿಂದಲೇ ದೇವಿಯನ್ನು ಧ್ಯಾನಮಾಡಿದನು. ಅದನ್ನೇ ನಿನಗೆ ಹೇಳುವೆನು ಕೇಳು. ॥೭॥

ಒಂದು ಸಾವಿರ ಎಸಳುಗಳುಳ್ಳ ಕಮಲದ ನಡುವೆ ಇರುವ ಕರ್ಣಿಕೆಯಲ್ಲಿ ವಾಸಮಾಡುವ, ಶರದೃತುವಿನ ಪೂರ್ಣಿಮೆಯ ಕೋಟಿಚಂದ್ರರ ಕಾಂತಿಯನ್ನು ಅಪಹರಿಸುವ ಶ್ರೇಷ್ಠವಾದ ಕಾಂತಿಯುಳ್ಳ ॥೮॥

ಸ್ವತೇಜಸಾ ಪ್ರಜ್ವಲಂತೀಂ ಸುಖದೃಶ್ಯಾಂ ಮನೋಹರಾಂ ।
ಪ್ರತಪ್ತಕಾಂಚನನಿಭಶೋಭಾಂ ಮೂರ್ತಿಮತೀಂ ಸತೀಂ ॥೯॥

ರತ್ನಭೂಷಣಭೂಷಾಢ್ಯಾಂ ಶೋಭಿತಾಂ ಪೀತವಾಸಸಾ ।
ಈಷದ್ಧಾಸ್ಯಪ್ರಸನ್ನಾಸ್ಯಾಂ ಶಶ್ವತ್ಸುಸ್ಥಿರಯೌವನಾಂ ॥೧೦॥

ಸರ್ವಸಂಪತ್ಪ್ರದಾತ್ರೀಂ ಚ ಮಹಾಲಕ್ಷ್ಮೀಂ ಭಜೇ ಶುಭಾಂ ।
ಧ್ಯಾನೇನಾನೇನ ತಾಂ ಧ್ಯಾತ್ವಾ ನಾನಾಗುಣಸಮನ್ವಿತಾಂ ॥೧೧॥

ಸಂಪೂಜ್ಯ ಬ್ರಹ್ಮವಾಕ್ಯೇನ ಚೋಪಚಾರಾಣಿ ಷೋಡಶ ।
ದದೌ ಭಕ್ತ್ಯಾ ವಿಧಾನೇನ ಪ್ರತ್ಯೇಕಂ ಮಂತ್ರಪೂರ್ವಕಂ ॥೧೨॥

ಪ್ರಶಸ್ತಾನಿ ಪ್ರಕೃಷ್ಟಾನಿ ವರಾಣಿ ವಿವಿಧಾನಿ ಚ ।
ಅಮೂಲ್ಯರತ್ನಸಾರಂ ಚ ನಿರ್ಮಿತಂ ವಿಶ್ವಕರ್ಮಣಾ ॥೧೩॥
ಆಸನಂ ಚ ವಿಚಿತ್ರಂ ಚ ಮಹಾಲಕ್ಷ್ಮಿ(ಃ) ಪ್ರಗೃಹ್ಯತಾಂ ।

---

ತನ್ನ ತೇಜಸ್ಸಿನಿಂದ ಪ್ರಕಾಶಿಸುತ್ತಾ, ದರ್ಶನಮಾಡುವವರಿಗೆ ಸುಖವನ್ನುಂಟು ಮಾಡುವ ಪುಟವಿಟ್ಟ ಚಿನ್ನಕ್ಕೆ ಸಮಾನವಾದ ದೇಹಕಾಂತಿಯುಳ್ಳ ಸುಂದರವಾದ ಆಕಾರವನ್ನು ಧರಿಸಿದ ॥೯॥.

ರತ್ನದ ಆಭರಣಗಳನ್ನು ಧರಿಸಿ, ಪೀತಾಂಬರವನ್ನುಟ್ಟು ನುಗುಮುಖದಿಂದ ಕೂಡಿ ಶಾಶ್ವತವಾದ ಯೌವನದಿಂದ ಕೂಡಿ, ಸಮಸ್ತ ಸಂಪತ್ತುಗಳನ್ನೂ ಕೊಡುವ ಮಂಗಲಕರಳಾದ ಮಹಾಲಕ್ಷ್ಮೀದೇವಿಯನ್ನು ಧ್ಯಾನಮಾಡುತ್ತೇನೆ. ॥೧೦॥

ಅನೇಕ ಸದ್ಗುಣಗಳಿಂದ ಕೂಡಿದ ಆ ದೇವಿಯನ್ನು ಈ ಧ್ಯಾನಮಂತ್ರದಿಂದ ಧ್ಯಾನಮಾಡಿ ಬ್ರಹ್ಮನ ಮಾತಿನಿಂದ ಬೇರೆ ಬೇರೆಯಾದ ಮಂತ್ರಪೂರ್ವಕವಾದ ವಿಧಿಯಿಂದ ಭಕ್ತಿಯಿಂದ ಕೂಡಿ ಹದಿನಾರು ಬಗೆಯ ಉಪಚಾರಗಳಿಂದ ಪೂಜಿಸಿ ಶ್ರೇಷ್ಠವಾದ ಅತ್ಯುತ್ತಮವಾದ ಬಗೆಬಗೆಯ ವಸ್ತುಗಳನ್ನು ಇಂದ್ರನು ಸಮರ್ಪಿಸಿದನು. ಹೇಗೆಂದರೆ ॥೧೧-೧೨॥

" ಬಹಳ ಬೆಲೆಯುಳ್ಳ ಶ್ರೇಷ್ಠವಾದ ರತ್ನಗಳಿಂದ ವಿಶ್ವಕರ್ಮನು ಮಾಡಿದ ವಿಚಿತ್ರವಾದ ಪೀಠವನ್ನು ಮಹಾಲಕ್ಷ್ಮೀದೇವಿಯೇ ನೀನು ಸ್ವೀಕರಿಸು." ಇದು ಆಸನಮಂತ್ರವು. ॥೧೩॥

**ಶುದ್ಧಂ ಗಂಗೋದಕಮಿದಂ ಸರ್ವವಂದಿತ ಮೀಾಪ್ಸಿತಂ ॥೧೪॥**

**ಪಾಪೇಧ್ಮವಹ್ನಿರೂಪಂ ಚ ಗೃಹ್ಯತಾಂ ಕಮಲಾಲಯೇ ।**
**ಪುಷ್ಪಚಂದನದೂರ್ವಾದಿ ಸಂಯುತಂ ಜಾಹ್ನವೀಜಲಂ ॥೧೫॥**

**ಶಂಖಗರ್ಭಸ್ಥಿತಂ ಸ್ವರ್ಘ್ಯಂ ಗೃಹ್ಯತಾಂ ಪದ್ಮವಾಸಿನಿ ।**
**ಸುಗಂಧಿಪುಷ್ಪತೈಲಂ ಚ ಸುಗಂಧಾಮಲಕೀಫಲಂ ॥೧೬॥**

**ದೇಹಸೌಂದರ್ಯಬೀಜಂ ಚ ಗೃಹ್ಯತಾಂ ಶ್ರೀಹರೇಃ ಪ್ರಿಯೇ ।**
**ಕಾರ್ಪಾಸಜಂ ಚ ಕೃಮಿಜಂ ವಸನಂ ದೇವಿ ಗೃಹ್ಯತಾಂ ॥೧೭॥**

**ರತ್ನಸ್ವರ್ಣವಿಕಾರಂ ಚ ದೇಹ(ಶೋಭಾ)ಭೂಷಾವಿವರ್ಧನಂ ।**
**ಶೋಭಾಯೈ ಶ್ರೀಕರಂ ರತ್ನಂ ಭೂಷಣಂ ದೇವಿ ಗೃಹ್ಯತಾಂ ॥೧೮॥**
**ಸರ್ವಸೌಂದರ್ಯಬೀಜಂ ಚ ಸದ್ಯಃ ಶೋಭಾಕರಂ ಪರಂ ।**

---

" ಇದು ಶುದ್ಧವಾದ ಗಂಗೆಯ ನೀರು. ಎಲ್ಲರಿಗೂ ಪೂಜ್ಯವಾದುದು. ಪಾಪ ವೆಂಬ ಕಟ್ಟಿಗೆಗೆ ಬೆಂಕಿಯಂತಿರುವುದು. ಕಮಲವೇಮನೆಯಾಗಿ ಉಳ್ಳ ಲಕ್ಷ್ಮೀ ದೇವಿಯೇ, ಇದನ್ನು ಸ್ವೀಕರಿಸು." ಇದು ಪಾದ್ಯಮಂತ್ರವು. ॥೧೪॥

" ಹೂ, ಗಂಧ, ಗರಿಕೆ ಮೊದಲಾದುವುಗಳಿಂದ ಕೂಡಿದ ಗಂಗೆಯ ನೀರು ಶಂಖದ ಮಧ್ಯದಲ್ಲಿರುವುದು. ಇದನ್ನು ಅರ್ಘ್ಯವಾಗಿ ಸ್ವೀಕರಿಸು." ಇದು ಅರ್ಘ್ಯ ಮಂತ್ರವು. ॥೧೫॥

" ಶರೀರಸೌಂದರ್ಯಕ್ಕೆ ಕಾರಣವಾದ ಸುವಾಸನೆಯಾದ ಹೂವಿನ ತೈಲವನ್ನೂ ಸುವಾಸನೆಯಾದ ನೆಲ್ಲಿಯ ಕಾಯಚೂರ್ಣವನ್ನೂ ಸ್ವೀಕರಿಸು." ಇದು ಸ್ನಾನಿಯ ಮಂತ್ರವು. ॥೧೬॥

" ಹತ್ತಿಯಿಂದಲೂ, ರೇಷ್ಮೆಯಿಂದಲೂ ಮಾಡಿದ ರತ್ನಗಳನ್ನೂ ಚಿನ್ನವನ್ನು ಸೇರಿಸಿದ ಶರೀರದ ಅಲಂಕಾರವನ್ನು ಹೆಚ್ಚಿಸುವ ವಸ್ತ್ರವನ್ನು ಸ್ವೀಕರಿಸು." ಇದು ವಸ್ತ್ರದ ಸಮರ್ಪಣೆಯ ಮಂತ್ರವು. ॥೧೭॥

" ಸಕಲಸೌಂದರ್ಯಕ್ಕೂ ಕಾರಣವಾದ, ಧರಿಸಿದೊಡನೆಯೇ ಕಾಂತಿಯನ್ನುಂಟು ಮಾಡುವ, ಸಂಪತ್ತಿಗೆ ಕಾರಣವಾದ ರತ್ನಾಭರಣವನ್ನು ಸ್ವೀಕರಿಸು." ಇದು ಆಭರಣ ಸಮರ್ಪಣೆಯ ಮಂತ್ರವು. ॥೧೮॥

**ವೃಕ್ಷನಿರ್ಯಾಸರೂಪಂ ಚ ಗಂಧದ್ರವ್ಯಾತಿಶೋಭಿತಂ ॥೧೯॥**

**ಶ್ರೀಕೃಷ್ಣಕಾಂತೇ ಧೂಪಂ ಚ ಪವಿತ್ರಂ ಪ್ರತಿಗೃಹ್ಯತಾಂ ।**
**ಸುಗಂಧಿಯುಕ್ತಂ ಸುಖದಂ ಚಂದನಂ ದೇವಿ ಗೃಹ್ಯತಾಂ ॥೨೦॥**

**ಜಗಚ್ಚಕ್ಷುಸ್ಸ್ವರೂಪಂ ಚ ಪವಿತ್ರಂ ತಿಮಿರಾಪಹಂ ।**
**ಪ್ರದೀಪಂ ಸುಖರೂಪಂ ಚ ಗೃಹ್ಯತಾಂ ಚ ಸುರೇಶ್ವರಿ ॥೨೧॥**

**ನಾನೋಪಹಾರರೂಪಂ ಚ ನಾನಾರಸಸಮನ್ವಿತಂ ।**
**ಅತಿಸ್ವಾದುಕರಂ ಚೈವ ನೈವೇದ್ಯಂ ಪ್ರತಿಗೃಹ್ಯತಾಂ ॥೨೨॥**

**ಅನ್ನಂ ಬ್ರಹ್ಮಸ್ವರೂಪಂ ಚ ಪ್ರಾಣರಕ್ಷಣಕಾರಣಂ ।**
**ತುಷ್ಟಿದಂ ಪುಷ್ಟಿದಂ ಚೈವ ದೇವ್ಯನ್ನಂ ಪ್ರತಿಗೃಹ್ಯತಾಂ ॥೨೩॥**

---

" ಮರದ ರಸದಲ್ಲಿ ಸುಗಂಧದ್ರವ್ಯವನ್ನು ಸೇರಿಸಿ ಮಾಡಿದ ಪರಿಶುದ್ಧವಾದ ಧೂಪವನ್ನು ಶ್ರೀಕೃಷ್ಣನ ಪ್ರೀತಿಪಾತ್ರಳಾದ ನೀನು ಸ್ವೀಕರಿಸು." ಇದು ಧೂಪ ಸಮರ್ಪಣೆಯ ಮಂತ್ರವು. ॥೧೯॥

" ಲಕ್ಷ್ಮೀದೇವಿಯೇ, ಸುಂಗಂಧದಿಂದ ಕೂಡಿದ ಸುಖಕರವಾದ ಶ್ರೀಗಂಧ ವನ್ನು ಸ್ವೀಕರಿಸು." ಇದು ಗಂಧಸಮರ್ಪಣೆಯ ಮಂತ್ರವು. ॥೨೦॥

ಸೂರ್ಯಸ್ವರೂಪವಾದ ಪರಿಶುದ್ಧವಾದ ಕತ್ತಲೆಯನ್ನು ನಾಶಮಾಡುವ ಸುಖಕರವಾದ ದೀಪವನ್ನು ಸ್ವೀಕರಿಸು. ಇದು ದೀಪಸಮರ್ಪಣೆಯ ಮಂತ್ರವು.॥೨೧॥

" ನಾನಾವಿಧವಾದ ಭಕ್ಷ್ಯರೂಪವಾದ ಬಗೆಬಗೆಯ ಉತ್ತಮ ರಸಗಳಿಂದ ಕೂಡಿದ ವಿಶೇಷ ರುಚಿಯಾದ ನೈವೇದ್ಯವನ್ನು ಸ್ವೀಕರಿಸು."ಇದು ನಿವೇದನಮಂತ್ರವು.

ದೇವಿಗೆ ಇಷ್ಟವಾದ ಬಗೆಬಗೆಯ ನಿವೇದನಗಳನ್ನು ಮುಂದಿನ ಶ್ಲೋಕಗಳಲ್ಲಿ ವಿವರಿಸಿದೆ. ಅವೂ ಕೂಡ ನೈವೇದ್ಯ ಸಮರ್ಪಣೆಯ ಕಾಲದಲ್ಲಿ ಉಪಯೋಗಿಸುವ ಮಂತ್ರಗಳೇ. ॥೨೨॥

ಪ್ರಾಣರಕ್ಷಣೆಗೆ ಕಾರಣವಾದ ತೃಪ್ತಿಯನ್ನೂ ಬಲವನ್ನೂ ಕೊಡುವ ಬ್ರಹ್ಮ ಸ್ವರೂಪವಾದ ಅನ್ನವನ್ನೂ, ಅಕ್ಕಿಯ ಅನ್ನ, ಸಕ್ಕರೆ, ತುಪ್ಪ ಇವುಗಳಿಂದ ಮಾಡಿದ ಪರಮಾನ್ನವನ್ನೂ ಸಕ್ಕರೆ ತುಪ್ಪ ಇವುಗಳಿಂದ ಮಾಡಿದ ಪಕ್ವಾನ್ನವನ್ನೂ (ಸ್ವಸ್ತಿಕ)

ಶಾಲ್ಯನ್ನಜಂ ಸುಪಕ್ವಂ ಚ ಶರ್ಕರಾಗವ್ಯಸಂಯುತಂ ।
ಸ್ವಾದುಯುಕ್ತಂ ಮಹಾಲಕ್ಷ್ಮಿ(೬೬) ಪರಮಾನ್ನಂ ಪ್ರಗೃಹ್ಯತಾಂ॥೨೪॥

ಶರ್ಕರಾಗವ್ಯಪಕ್ವಂ ಚ ಸುಸ್ವಾದು ಸುಮನೋಹರಂ ।
ಮಯಾ ನಿವೇದಿತಂ ಭಕ್ತ್ಯಾ ಸ್ವಸ್ತಿಕಂ ಪ್ರತಿಗೃಹ್ಯತಾಂ ॥೨೫॥

ನಾನಾವಿಧಾನಿ ರಮ್ಯಾಣಿ ಪಕ್ವಾನ್ನಾನಿ ಫಲಾನಿ ಚ ।
ಸುರಭಿಸ್ತನಸಂತ್ಯಕ್ತಂ ಸುಸ್ವಾದು ಸುಮನೋಹರಂ ॥೨೬॥

ಮರ್ತ್ಯಾಮೃತಂ ಸುಗವ್ಯಂ ಚ ಗೃಹ್ಯತಾಮುಚ್ಯುತಪ್ರಿಯೇ ।
ಸುಸ್ವಾದುರಸಸಂಯುಕ್ತಂ ಇಕ್ಷುವೃಕ್ಷಸಮುದ್ಭವಂ ॥೨೭॥

ಅಗ್ನಿಪಕ್ವಮತಿಸ್ವಾದು ಗುಡಂ ಚ ಪ್ರತಿಗೃಹ್ಯತಾಂ ।
ಯವಗೋಧೂಮಸಸ್ಯಾನಾಂ ಚೂರ್ಣರೇಣುಸಮುದ್ಭವಂ ॥೨೮॥

ಸುಪಕ್ವಂ ಗುಡಗವ್ಯಾಕ್ತಂ ಮಿಷ್ಟಾನ್ನಂ ದೇವಿ ಗೃಹ್ಯತಾಂ ।
ಸಸ್ಯಚೂರ್ಣೋದ್ಭವಂ ಪಕ್ವಂ ಸ್ವಸ್ತಿಕಾದಿಸಮನ್ವಿತಂ ॥೨೯॥

ಮಯಾ ನಿವೇದಿತಂ ಭಕ್ತ್ಯಾ ನೈವೇದ್ಯಂ ಪ್ರತಿಗೃಹ್ಯತಾಂ ।
ಶೀತವಾಯುಪ್ರದಂ ಚೈವ ದಾಹೇ ಚ ಸುಖದಂ ಪರಂ ॥೩೦॥
ಕಮಲೇ ಗೃಹ್ಯತಾಂ ಚೇದಂ ವ್ಯಜನಂ ಶ್ವೇತಚಾಮರಂ ।

---

ಬಗೆಬಗೆಯ ಪಕ್ವಾನ್ನ ಹಣ್ಣುಗಳು, ಹಾಲು, ಇವುಗಳಿಂದ ಕೂಡಿದ ರುಚಿಕರವಾದ ಅಮೃತದಂತಿರುವ ಅನ್ನವನ್ನೂ, ಕಬ್ಬಿನ ರಸದಿಂದ ಮಾಡಿದ ರುಚಿಯಾದ ಬೆಲ್ಲವನ್ನೂ, ಅಕ್ಕಿ, ಗೋಧಿ ಮುಂತಾದುವುಗಳ ಹಿಟ್ಟಿನಿಂದಲೂ, ಬೆಲ್ಲ ಮತ್ತು ತುಪ್ಪದಿಂದಲೂ ಮಾಡಿದ (ಮಿಷ್ಟಾನ್ನ) ಲಡ್ಡುಕಗಳನ್ನೂ, ಹೆಸರು, ಗೋಧಿ ಮುಂತಾದ ಸಸ್ಯಗಳ ಹಿಟ್ಟಿನಿಂದ ಮಾಡಿದ ಬಗೆಬಗೆಯ ಪಕ್ವಾನ್ನಗಳಿಂದ ಕೂಡಿದ, ನಾನು ಭಕ್ತಿಯಿಂದ ಸಮರ್ಪಿಸುವ ನೈವೇದ್ಯವನ್ನು ಸ್ವೀಕರಿಸಬೇಕು. ಇವೆಲ್ಲವೂ ದೇವಿಗಿಷ್ಟವಾದ ನೈವೇದ್ಯಗಳನ್ನು ಸಮರ್ಪಿಸುವುದರಲ್ಲಿ ಉಪಯೋಗಿಸಬೇಕಾದ ಮಂತ್ರಗಳೆಂದು ತಾತ್ಪರ್ಯವುಳ್ಳವು. ||೨೩-೨೪-೨೫-೨೬-೨೭-೨೮-೨೯||

ತಂಗಾಳಿಯನ್ನು ಕೊಟ್ಟು ಸೆಕೆಯನ್ನು ಪರಿಹರಿಸಿ ದೇಹಕ್ಕೆ ಉತ್ತಮವಾದ ಸುಖವನ್ನುಂಟುಮಾಡುವ ಬೀಸಣಿಗೆಯನ್ನೂ, ಬಿಳಿಯ ಚಾಮರವನ್ನೂ ಮಹಾ

ತಾಂಬೂಲಂ ಚಾವರಂ ರಮ್ಯಂ ಕರ್ಪೂರಾದಿಸುವಾಸಿತಂ ॥೩೦॥

ಜಿಹ್ವಾಜಾಡ್ಯಚ್ಛೇದಕರಂ ಶಾಂಬೂಲಂ ಪ್ರತಿಗೃಹ್ಯತಾಂ ।
ಸುವಾಸಿತಂ ಸುಶೀತಂ ಚ ಪಿಪಾಸಾನಾಶಕಾರಣಂ ॥೩೨॥

ಜಗಜ್ಜೀವನರೂಪಂ ಚ ಜೀವನಂ ದೇವಿ ಗೃಹ್ಯತಾಂ ।
ದೇಹಸೌಂದರ್ಯಬೀಜಂ ಚ ಸದಾ ಶೋಭಾವಿವರ್ಧನಂ ॥೩೩॥

ಕಾರ್ಪಾಸಜಂ ಚ ಕೃಮಿಜಂ ವಸನಂ ದೇವಿ ಗೃಹ್ಯತಾಂ ।
ರತ್ನಸ್ವರ್ಣವಿಕಾರಂ ಚ ದೇಹಭೂಷಾವಿವರ್ಧನಂ ॥೩೪॥

ಶೋಭಾಧಾರಂ ಶ್ರೀಕರಂ ಚ ಭೂಷಣಂ ದೇವಿ ಗೃಹ್ಯತಾಂ ।
ನಾನಾಋತುಷು ನಿರ್ಮಾಣಂ ಬಹುಶೋಭಾಶ್ರಯಂ ಪರಂ ॥೩೫॥
ಸುರಭೂಪಪ್ರಿಯಂ ಶುದ್ಧಂ ಮಾಲ್ಯಂ ದೇವಿ ಪ್ರಗೃಹ್ಯತಾಂ ।

---

ಲಕ್ಷ್ಮೀಸ್ವರೂಪಳಾದ ದೇವಿಯೇ, ಸ್ವೀಕರಿಸು. ಇದು ಬೀಸಣಿಗೆ ಚಾಮರ ಇವುಗಳಿಂದ ಉಪಚಾರಸೇವೆಗಳನ್ನು ಸಮರ್ಪಿಸುವ ಮಂತ್ರವಾಗಿದೆ. ॥೩೦॥

ಓ ದೇವಿಯೇ, ಶ್ರೇಷ್ಠವಾದ ಮತ್ತೂ, ಮನೋಹರವಾದ, ಪಚ್ಚಕರ್ಪೂರ ಏಲಕ್ಕಿ ಮುಂತಾದ ಪರಿಮಳ ದ್ರವ್ಯಗಳಿಂದ ಕೂಡಿ ಸುಗಂಧಕರವಾದ, ನಾಲಿಗೆಯ ಜಾಡ್ಯವನ್ನು ನಾಶಮಾಡುವ, ತಾಂಬೂಲವನ್ನು ಸ್ವೀಕರಿಸು. ಇದು ತಾಂಬೂಲ ಸಮರ್ಪಣೆಯ ಮಂತ್ರವು. ॥೩೧॥

ಸುವಾಸನೆಯಾಗಿ, ತಣ್ಣಗೆ ಬಾಯಾರಿಕೆಯನ್ನು ನಾಶಮಾಡುವುದಕ್ಕೆ ಕಾರಣವಾದ ಪ್ರಪಂಚಕ್ಕೆ ಪ್ರಾಣರೂಪವಾದ ನೀರನ್ನು ದೇವಿಯೇ, ಸ್ವೀಕರಿಸು. ॥೩೨॥

ಶರೀರಸೌಂದರ್ಯಕ್ಕೆ ಕಾರಣವಾದ ಕಾಂತಿಯನ್ನು ಹೆಚ್ಚಿಸುವ ಹತ್ತಿಯಿಂದಲೂ ರೇಷ್ಮೆಯಿಂದಲೂ ಮಾಡಿದ ವಸ್ತ್ರವನ್ನು ಸ್ವೀಕರಿಸು. ॥೩೩॥

ದೇವಿಯೇ, ರತ್ನ ಮುತ್ತು, ಚಿನ್ನದಿಂದ ಮಾಡಿದ ಶರೀರಕಾಂತಿಯನ್ನು ಹೆಚ್ಚಿಸುವ ಮತ್ತು ಸಂಪತ್ತಿಗೆ ಕಾರಣವಾದ ಆಭರಣಗಳನ್ನು ಸ್ವೀಕರಿಸು. ॥೩೪॥

ಬಗೆಬಗೆಯ ಋತುಗಳಲ್ಲಿ ಹುಟ್ಟಿದ ವಿಶೇಷವಾಗಿ ಪ್ರಕಾಶವುಳ್ಳ ದೇವೇಂದ್ರನಿಗೂ ಇಷ್ಟವಾದ ಪರಿಶುದ್ಧವಾದ ಹೂವಿನ ಹಾರವನ್ನು ಸ್ವೀಕರಿಸು. ॥೩೫॥

ಶುದ್ಧಿದಂ ಶುದ್ಧರೂಪಂ ಚ ಸರ್ವಮಂಗಲಮಂಗಲಂ ॥೩೬॥

ಗಂಧವಸ್ತೂದ್ಭವಂ ರಮ್ಯಂ ಗಂಧಂ ದೇವಿ ಪ್ರಗೃಹ್ಯತಾಂ ।
ಪುಣ್ಯತೀರ್ಥೋದಕಂ ಚೈವ ವಿಶುದ್ಧಂ ಶುದ್ಧಿದಂ ಸದಾ ॥೩೭॥

ಗೃಹ್ಯತಾಂ ಕೃಷ್ಣಕಾಂತೇ ತ್ವಂ ರಮ್ಯಮಾಚಮನೀಯಕಂ ॥
ರತ್ನಸಾರಾದಿನಿರ್ಮಾಣಂ ಪುಷ್ಪಚಂದನಚರ್ಚಿತಂ ॥೩೮॥

ವಸ್ತ್ರಭೂಷಣಭೂಷಾಢ್ಯಂ ಸುತಲ್ಪಂ ದೇವಿ ಗೃಹ್ಯತಾಂ ।
ಯದ್ಯದ್ದ್ರವ್ಯಮಪೂರ್ವಂ ಚ ಪೃಥಿವ್ಯಾಮಪಿ ದುರ್ಲಭಂ ॥೩೯॥

ದೇವ ಭೂಷಾರ್ಹಭೋಗ್ಯಂ ಚ ತದ್ದ್ರವ್ಯಂ ದೇವಿ ಗೃಹ್ಯತಾಂ ।
ದ್ರವ್ಯಾಣ್ಯೇತಾನಿ ದತ್ವಾ ಚ ಮೂಲೇನ ದೇವಪುಂಗವಃ ॥೪೦॥

ಮೂಲಂ ಜಜಾಪ ಭಕ್ತ್ಯಾ ಚ ದಶಲಕ್ಷಂ ವಿಧಾನತಃ ।
ಜಪೇನ ದಶಲಕ್ಷೇಣ ಮಂತ್ರಸಿದ್ಧಿರ್ಬಭೂವ ಹ ॥೪೧॥

---

ಶುದ್ಧವಾದುದಾಗಿ ಇತರ ವಸ್ತುಗಳನ್ನೂ ಶುದ್ಧಿಮಾಡುವ ಸಮಸ್ತಮಂಗಳಗಳಿಗೂ, ಕಾರಣವಾದ, ಸುಗಂಧವಾದ ವಸ್ತುಗಳಿಂದ ಮನೋಹರವಾದ ಈ ಗಂಧವನ್ನು ದೇವಿಯೇ, ಸ್ವೀಕರಿಸು. ||೩೬||

ಕೃಷ್ಣನ ಪತ್ನಿಯಾದ ಮಹಾಲಕ್ಷ್ಮಿಯೇ, ಯಾವಾಗಲೂ ಪರಿಶುದ್ಧವಾಗಿ ಇತರ ವಸ್ತುಗಳನ್ನೂ ಶುದ್ಧಮಾಡುವ ಪುಣ್ಯಕರವಾದ ತೀರ್ಥದ ಈ ನೀರನ್ನು ಆಚಮನಕ್ಕಾಗಿ ಸ್ವೀಕರಿಸು. ||೩೭||

ದೇವಿಯೇ, ಶ್ರೇಷ್ಠವಾದ ರತ್ನಗಳಿಂದ ಅಲಂಕರಿಸಿದ ಹೂವು ಮತ್ತು ಗಂಧಗಳಿಂದ ಸುವಾಸನೆಯಾಗಿ ಮಾಡಿದ ವಸ್ತ್ರಾಭರಣಗಳ ಅಲಂಕಾರದಿಂದ ಕೂಡಿದ ಉತ್ತಮವಾದ ಹಾಸಿಗೆಯನ್ನು ಸ್ವೀಕರಿಸು. ||೩೮||

ಮಹಾಲಕ್ಷ್ಮೀದೇವಿಯೇ, ದೇವತೆಗಳು ಅಲಂಕರಿಸುವುದಕ್ಕೂ ಅನುಭವಿಸುವುದಕ್ಕೂ ಯಾವ ಯಾವ ಪದಾರ್ಥಗಳು ಭೂಮಿಯಲ್ಲಿ ದೊರೆಯುವುದು ಕಷ್ಟವೋ ಅಂತಹ ಈ ಪದಾರ್ಥಗಳನ್ನೆಲ್ಲ (ಮನಸ್ಸಿನಲ್ಲಿ ಕಲ್ಪಿಸಿದುವನ್ನೆಲ್ಲ) ವನ್ನೂ ನೀನು ಸ್ವೀಕರಿಸು. ||೩೯||

ದೇವಶ್ರೇಷ್ಠನಾದ ದೇವೇಂದ್ರನು ಮೇಲೆ ಹೇಳಿದ ಕಲ್ಪೋಕ್ತವಾದ ಮೂಲ ಮಂತ್ರಗಳಿಂದ ಪೂಜಾದ್ರವ್ಯಗಳನ್ನು ಸಮರ್ಪಿಸಿ ಭಕ್ತಿಯಿಂದ ಮಹಾಲಕ್ಷ್ಮಿಯ

ಮಂತ್ರಶ್ಚ ಬ್ರಹ್ಮಣಾ ದತ್ತಃ ಕಲ್ಪವೃಕ್ಷಶ್ಚ ಸರ್ವತಃ ।
ಲಕ್ಷ್ಮೀರ್ಮಾಯಾ ಕಾಮವಾಣೀ ಙೇಂತಾ ಕಮಲವಾಸಿನೀ ॥೪೨॥

ವೈದಿಕೋ ಮಂತ್ರರಾಜೋಽಯಂ ಪ್ರಸಿದ್ಧಃ ಸ್ವಾಹಯಾಽನ್ವಿತಃ ।
ಕುಬೇರೋಽನೇನ ಮಂತ್ರೇಣ ಪರಮೈಶ್ವರ್ಯಮಾಪ್ತವಾನ್ ॥೪೩॥

ರಾಜರಾಜೇಶ್ವರೋ ದಕ್ಷಃ ಸಾವರ್ಣಿರ್ಮನುರೇವ ಚ ।
ಮಂಗಲೋಽನೇನ ಮಂತ್ರೇಣ ಸಪ್ತದ್ವೀಪೇಽವನೀಪತಿಃ ॥೪೪॥

ಪ್ರಿಯವ್ರತೋತ್ತಾನಪಾದೌ ಕೇದಾರೋ ನೃಪ ಏವ ಚ ।
ಏತೇ ಸಿದ್ಧಾಶ್ಚ ರಾಜೇಂದ್ರಾ ಮಂತ್ರೇಣಾನೇನ ನಾರದ ॥೪೫॥

ಸಿದ್ಧೇ ಮಂತ್ರೇ ಮಹಾಲಕ್ಷ್ಮೀಃ ಶಕ್ರಾಯ ದರ್ಶನಂ ದದೌ ।
ರತ್ನೇಂದ್ರಸಾರನಿರ್ಮಾಣ ವಿಮಾನಸ್ಥಾ ವರಪ್ರದಾ ॥೪೬॥

---

ಮೂಲಮಂತ್ರವನ್ನು ಹತ್ತುಲಕ್ಷ ಜಪವನ್ನು ಮಾಡಿದನು. ಇದರಿಂದ ಅವನಿಗೆ ಮಂತ್ರಸಿದ್ಧಿಯುಂಟಾಯಿತು. ॥೪೦-೪೧॥

ಕಲ್ಪವೃಕ್ಷದಂತೆ ಇಷ್ಟಾರ್ಥಗಳನ್ನು ಕೊಡುವ ಲಕ್ಷ್ಮೀದೇವಿಯ ಮಂತ್ರವನ್ನು ಬ್ರಹ್ಮನು ದೇವೇಂದ್ರನಿಗೆ ಉಪದೇಶಿಸಿದನು. ಶ್ರೀಬೀಜ, ಭುವನೇಶ್ವರೀ ಬೀಜ, ಕಾಮಬೀಜ, ವಾಣೀಬೀಜಗಳಿಂದ ಕೂಡಿದ ಕಮಲವಾಸಿನೀಶಬ್ದದ ಚತುರ್ಥೀ ವಿಭಕ್ತ್ಯಂತವಾದ ಶಬ್ದದೊಡನೆ ಸ್ವಾಹಾ ಶಬ್ದವನ್ನು ಸೇರಿಸಿ ಹನ್ನೆರಡು ಅಕ್ಷರದ ಮಂತ್ರವು ವೇದೋಕ್ತವಾದ ಮಂತ್ರಶ್ರೇಷ್ಠವಾಗಿ ಪ್ರಸಿದ್ಧವಾಗಿರುವುದು. ॥೪೨॥

ಈ ಮಂತ್ರದಿಂದ ಕುಬೇರನು ಶ್ರೇಷ್ಠವಾದ ಸಂಪತ್ತನ್ನು ಪಡೆದನು. ಚಕ್ರವರ್ತಿಯಾದ ದಕ್ಷಸಾವರ್ಣಿ ಎಂಬ ಮನುವೂ, ಮಂಗಲನೆಂಬ ರಾಜನೂ ಸಪ್ತದ್ವೀಪಗಳಿಗೂ ರಾಜರಾದರು. ॥೪೩-೪೪॥

ನಾರದನೇ, ಪ್ರಿಯವ್ರತ, ಉತ್ತಾನಪಾದ, ಕೇದಾರ ಎಂಬ ರಾಜರು ಸಹ ಈ ಮಂತ್ರಸಿದ್ಧಿಯನ್ನು ಪಡೆದರು. ॥೪೫॥

ಮಂತ್ರಸಿದ್ಧಿಯಾಗಲು ಮಹಾಲಕ್ಷ್ಮೀದೇವಿಯು ಸಾರವಾದ ರತ್ನಗಳಿಂದ ಮಾಡಿದ ವಿಮಾನದಲ್ಲಿ ಕುಳಿತು ವರವನ್ನು ಕೊಡುವವಳಾಗಿ, ಸಪ್ತದ್ವೀಪಗಳಿಂದ ಕೂಡಿದ ಭೂಮಿಯನ್ನು ತನ್ನ ಕಾಂತಿಯಿಂದ ಮುಚ್ಚುತ್ತಾ ಬಿಳಿಯ ಸಂಪಿಗೆ ಹೂವಿ

ಸಪ್ತದ್ವೀಪವತೀಂ ಪೃಥ್ವೀಂ ಛಾದಯಂತೀ ತ್ವಿಷಾ ಚ ಸಾ ।
ಶ್ವೇತಚಂಪಕವರ್ಣಾಭಾ ರತ್ನಭೂಷಣಭೂಷಿತಾ ॥೪೭॥

ಈಷದ್ಧಾಸ್ಯಪ್ರಸನ್ನಾಭಾ ಭಕ್ತಾನುಗ್ರಹಕಾತರಾ ।
ಬಿಭ್ರತೀ ರತ್ನಮಾಲಾಂ ಚ ಕೋಟಿಚಂದ್ರಸಮಪ್ರಭಾ ॥೪೮॥

ದೃಷ್ಟ್ವಾ ಜಗತ್ಪ್ರಸೂಂ ಶಾಂತಾಂ ತುಷ್ಟಾವ ತಾಂ ಪುರಂದರಃ ।
ಪುಲಕಾಂಚಿತಸರ್ವಾಂಗಃ ಸಾಶ್ರುನೇತ್ರಃ ಕೃತಾಂಜಲಿಃ ॥೪೯॥

ಬ್ರಹ್ಮಣಾ ಚ ಪ್ರದತ್ತೇನ ಸ್ತೋತ್ರರಾಜೇನ ಸಂಯುತಃ ।
ಸರ್ವಾಭೀಷ್ಟಪ್ರದೇನೈವ ವೈದಿಕೇನೈವ ತತ್ರ ಚ ॥೫೦॥

ನಮಃ ಕಮಲವಾಸಿನ್ಯೈ ನಾರಾಯಣ್ಯೈ ನಮೋ ನಮಃ ।
ಕೃಷ್ಣಪ್ರಿಯಾಯೈ ಸತತಂ ಮಹಾಲಕ್ಷ್ಮ್ಯೈ ನಮೋ ನಮಃ ॥೫೧॥

ಪದ್ಮಪತ್ರೇಕ್ಷಣಾಯೈ ಚ ಪದ್ಮಾಸ್ಯಾಯೈ ನಮೋ ನಮಃ ।
ಪದ್ಮಾಸನಾಯೈ ಪದ್ಮಿನ್ಯೈ ವೈಷ್ಣವ್ಯೈ ಚ ನಮೋ ನಮಃ ॥೫೨॥

---

ನಂತೆ ಮೈಬಣ್ಣ ಉಳ್ಳವಳಾಗಿ, ರತ್ನಾಭರಣಗಳನ್ನಿಟ್ಟುಕೊಂಡು ಮುಗುಳುನಗೆಯಿಂದ ಪ್ರಸನ್ನವಾದ ಮುಖವುಳ್ಳವಳಾಗಿ, ಭಕ್ತನಿಗೆ ಅನುಗ್ರಹಮಾಡುವುದರಲ್ಲಿ ಆಸಕ್ತಳಾಗಿ, ಕೋಟಿಚಂದ್ರರಿಗೆ ಸಮಾನವಾದ ಕಾಂತಿಯಿಂದ ಕೂಡಿದ ರತ್ನದ ಹಾರವನ್ನು ಧರಿಸಿ ದೇವೇಂದ್ರನಿಗೆ ದರ್ಶನವನ್ನು ಕೊಟ್ಟಳು. ॥೪೬-೪೭-೪೮॥

ದೇವೇಂದ್ರನು ಲೋಕಕ್ಕೆ ತಾಯಿಯಾದ, ಶಾಂತಳಾದ, ಆ ದೇವಿಯನ್ನು ನೋಡಿ, ಮೈಯಲ್ಲಿ ರೋಮಾಂಚವಾಗಿ, ಕಣ್ಣಿನಲ್ಲಿ ನೀರು ತುಂಬಿರಲು, ಕೈಜೋಡಿಸಿಕೊಂಡು ಬ್ರಹ್ಮನು ತನಗೆ ಹೇಳಿಕೊಟ್ಟ ಸಮಸ್ತ ಇಷ್ಟಾರ್ಥಗಳನ್ನೂ ಕೊಡುವ ವೇದೋಕ್ತವಾದ ಶ್ರೇಷ್ಠವಾದ ಸ್ತೋತ್ರದಿಂದ ದೇವಿಯನ್ನು ಸ್ತೋತ್ರಮಾಡಿದನು ॥೪೯-೫೦॥

ಕಮಲದಲ್ಲಿ ವಾಸಮಾಡುವ, ನಾರಾಯಣನ ಪ್ರಿಯಪತ್ನಿಯಾದ, ಕೃಷ್ಣನಿಗೆ ಪ್ರೀತಿಪಾತ್ರಳಾದ ಮಹಾಲಕ್ಷ್ಮೀಗೆ ನಮಸ್ಕಾರಮಾಡುವೆನು. ॥೫೧॥

ಕಮಲದ ಎಸಳಿನಂತೆ ಕಣ್ಣುಳ್ಳ, ಕಮಲದಂತೆ ಸುಂದರವಾದ ಮುಖವುಳ್ಳ ಕಮಲವೇ ಪೀಠವಾಗುಳ್ಳ, ಪದ್ಮಿನಿ ಎಂಬ ಉತ್ತಮವಾದ ಸ್ತ್ರೀಜಾತಿಗೆ ಸೇರಿದ, ವಿಷ್ಣುಶಕ್ತಿಸ್ವರೂಪಳಾದ, ಮಹಾಲಕ್ಷ್ಮೀಗೆ ನಮಸ್ಕಾರಮಾಡುವೆನು. ॥೫೨॥

ಸರ್ವಸಂಪತ್ಸ್ವರೂಪಿಣ್ಯೈ ಸರ್ವಾರಾಧ್ಯೈ (ಧ್ಯಾಯೈ) ನಮೋ ನಮಃ ।
ಹರಿಭಕ್ತಿಪ್ರದಾತ್ರ್ಯೈ ಚ ಹರ್ಷದಾತ್ರ್ಯೈ ನಮೋ ನಮಃ ॥೫೩॥

ಕೃಷ್ಣವಕ್ಷಸ್ಸ್ಥಿತಾಯೈ ಚ ಕೃಷ್ಣೇಶಾಯೈ ನಮೋ ನಮಃ ।
ಚಂದ್ರಶೋಭಾಸ್ವರೂಪಾಯೈ ರತ್ನಪದ್ಮೇ ಚ ಶೋಭನೇ ॥೫೪॥

ಸಂಪತ್ತ್ಯಧಿಷ್ಠಾತೃದೇವ್ಯೈ ಮಹಾದೇವ್ಯೈ ನಮೋ ನಮಃ ।
ನಮೋ ವೃದ್ಧಿಸ್ವರೂಪಾಯೈ ವೃದ್ಧಿದಾಯೈ ನಮೋ ನಮಃ ॥೫೫॥

ವೈಕುಂಠೇ ಯಾ ಮಹಾಲಕ್ಷ್ಮೀರ್ಯಾಲಕ್ಷ್ಮೀಃ ಕ್ಷೀರಸಾಗರೇ ।
ಸ್ವರ್ಗಲಕ್ಷ್ಮೀರಿಂದ್ರಗೇಹೇ ರಾಜಲಕ್ಷ್ಮೀರ್ನೃಪಾಲಯೇ ॥೫೬॥

ಗೃಹಲಕ್ಷ್ಮೀಶ್ಚ ಗೃಹಿಣಾಂ ಗೇಹೇ ಚ ಗೃಹದೇವತಾ ।
ಸುರಭಿಃ ಸಾಗರೇ ಜಾತಾ ದಕ್ಷಿಣಾ ಯಜ್ಞಕಾಮಿನೀ ॥೫೭॥

---

ಸಮಸ್ತಸಂಪತ್ತಿನ ಸ್ವರೂಪಳೂ, ಸಮಸ್ತರಿಗೂ ಪೂಜ್ಯಳೂ, ಹರಿಭಕ್ತಿಯನ್ನು ಕೊಡತಕ್ಕವಳೂ, ಸಂತೋಷವನ್ನು ಕೊಡತಕ್ಕವಳೂ, ಆದ ಮಹಾಲಕ್ಷ್ಮಿಗೆ ನಮಸ್ಕಾರಮಾಡುವೆನು. ॥೫೩॥

ಕೃಷ್ಣನ ಎದೆಯಲ್ಲಿ ವಾಸವಾಗಿರುವ, ಕೃಷ್ಣನಿಗೂ ಅಧಿಪತಿಯಾದ, ಚಂದ್ರನ ಕಾಂತಿಸ್ವರೂಪಳಾದ, ರತ್ನದ ಕಮಲದಲ್ಲಿರುವ ಮಹಾಲಕ್ಷ್ಮಿಗೆ ನಮಸ್ಕಾರ ಮಾಡುವೆನು. ॥೫೪॥

ಸಂಪತ್ತಿಗೆ ಆಶ್ರಯಳೂ, ಅಭಿಮಾನಿದೇವತೆಯೂ, ಆದ, ಅಭಿವೃದ್ಧಿಸ್ವರೂಪಳೂ ಅಭಿವೃದ್ಧಿಯನ್ನುಂಟುಮಾಡತಕ್ಕವಳೂ, ಆದ, ಮಹಾಲಕ್ಷ್ಮೀದೇವಿಗೆ ನಮಸ್ಕಾರಮಾಡುವೆನು. ॥೫೫॥

ನೀನು ವೈಕುಂಠಲೋಕದಲ್ಲಿ ಮಹಾಲಕ್ಷ್ಮಿಯಾಗಿರುವೆ. ಕ್ಷೀರಸಮುದ್ರದಲ್ಲಿ ಲಕ್ಷ್ಮಿಯಾಗಿಯೂ, ಇಂದ್ರನ ಮನೆಯಲ್ಲಿ ಸ್ವರ್ಗಲಕ್ಷ್ಮಿಯಾಗಿಯೂ, ರಾಜನ ಮನೆಯಲ್ಲಿ ರಾಜಲಕ್ಷ್ಮಿಯಾಗಿಯೂ ಇರುವೆ. ॥೫೬॥

ಗೃಹಸ್ಥರಿಗೆ ಗೃಹಲಕ್ಷ್ಮಿಯಾಗಿಯೂ (ಆಶ್ರಮಧರ್ಮಸ್ವರೂಪಳು) ಮನೆಯಲ್ಲಿ ಗೃಹದೇವತೆಯಾಗಿಯೂ, ಕ್ಷೀರಸಮುದ್ರದಲ್ಲಿ ಹುಟ್ಟಿ ಕಾಮಧೇನುವಾಗಿಯೂ, ಯಜ್ಞಸ್ವರೂಪನಾದ ವಿಷ್ಣುವಿನ ಪತ್ನಿಯಾದ ದಕ್ಷಿಣಾರೂಪಳಾಗಿಯೂ ಇರುವೆ. ॥೫೭॥

ಅದಿತಿರ್ದೇವಮಾತಾ ತ್ವಂ ಕಮಲಾ ಕಮಲಾಲಯಾ ।
ಸ್ವಾಹಾ ತ್ವಂ ಚ ಹವಿರ್ದಾನೇ ಕವ್ಯದಾನೇ ಸ್ವಧಾ ಸ್ಮೃತಾ ॥೫೮॥

ತ್ವಂ ಹಿ ವಿಷ್ಣುಸ್ವರೂಪಾ ಚ ಸರ್ವಾಧಾರಾ ವಸುಂಧರಾ ।
ಶುದ್ಧಸತ್ತ್ವಸ್ವರೂಪಾ ತ್ವಂ ನಾರಾಯಣ ಪರಾಯಣಾ ॥೫೯॥

ಕ್ರೋಧಹಿಂಸಾವರ್ಜಿತಾ ಚ ವರದಾ ಶಾರದಾ ಶುಭಾ ।
ಪರಮಾರ್ಥಪ್ರದಾ ತ್ವಂ ಚ ಹರಿದಾಸ್ಯಪ್ರದಾ ಪರಾ ॥೬೦॥

ಯಯಾ ವಿನಾ ಜಗತ್ಸರ್ವಂ ಭಸ್ಮೀಭೂತಮಸಾರಕಂ ।
ಜೀವನ್ಮೃತಂ ಚ ವಿಶ್ವಂ ಚ ಶಶ್ವತ್ಸರ್ವಂ ಯಯಾ ವಿನಾ ॥೬೧॥

ಸರ್ವೇಷಾಂ ಚ ಪರಾ ಮಾತಾ ಸರ್ವಬಾಂಧವರೂಪಿಣೀ ।
ಧರ್ಮಾರ್ಥಕಾಮಮೋಕ್ಷಾಣಾಂ ತ್ವಂ ಚ ಕಾರಣರೂಪಿಣೀ ॥೬೨॥

---

ನೀನು ದೇವತೆಗಳ ತಾಯಿಯಾದ ಅದಿತಿಯಾಗಿಯೂ, ಕಮಲದಲ್ಲಿ ವಾಸ ಮಾಡಿ ಕಮಲಾ ಎಂಬ ಹೆಸರನ್ನು ಹೊಂದಿಯೂ, ದೇವತೆಗಳಿಗೆ ಹವಿಸ್ಸನ್ನು ಕೊಡುವ ಸಂದರ್ಭದಲ್ಲಿ ಸ್ವಾಹಾದೇವಿಯೆಂದೂ, ಪಿತೃಗಳಿಗೆ ಕವ್ಯವೆಂಬ ಅನ್ನ ಮುಂತಾದುವನ್ನು ಕೊಡುವ ಸಂದರ್ಭದಲ್ಲಿ ಸ್ವಧಾದೇವಿಯೆಂದೂ ಪ್ರಸಿದ್ಧಿ ಹೊಂದಿರುವೆ.॥೫೮॥

ನೀನೇ ವಿಷ್ಣುಸ್ವರೂಪಳು. ಸಮಸ್ತರಿಗೂ ಆಧಾರವಾದ ಭೂಮಿಯ ಸ್ವರೂಪಳೂ ನೀನೇ. ಶುದ್ಧವಾದ ಸತ್ವಗುಣಸ್ವರೂಪಳಾಗಿ ನಾರಾಯಣನಲ್ಲಿ ಆಸಕ್ತಳಾಗಿರುವವಳೂ ನೀನೇ. ॥೫೯॥

ನೀನು ಕೋಪ ಹಿಂಸೆ ಇವುಗಳಿಲ್ಲದವಳು. ವರವನ್ನು ಕೊಡತಕ್ಕವಳು. ಸರಸ್ವತಿಯ ಸ್ವರೂಪಳು. ಮಂಗಲರೂಪಳು. ಪರಮಪುರುಷಾರ್ಥವಾದ ಉತ್ತಮ ಫಲಗಳನ್ನು ಕೊಡತಕ್ಕವಳು. ಶ್ರೇಷ್ಠಳಾದವಳು. ಓ ಮಹಾಲಕ್ಷ್ಮಿಯೇ, ನೀನು ವಿಷ್ಣುಭಕ್ತಿಯನ್ನು ಕೊಡತಕ್ಕವಳು. ॥೬೦॥

ಲಕ್ಷ್ಮಿಯು ಇಲ್ಲದಿದ್ದರೆ ಸಮಸ್ತ ಜಗತ್ತೂ ಬೂದಿಯಂತೆ ಸಾರವಿಲ್ಲದ್ದಾಗುವುದು. ಪ್ರಪಂಚವು ಜೀವಿಸಿದ್ದರೂ ಶಕ್ತಿಕಾಂತಿಗಳಿಲ್ಲದೆ ಸತ್ತಂತಾಗುವುದು. ॥೬೧॥

ಓ ಲಕ್ಷ್ಮೀದೇವಿಯೇ, ನೀನು ಸಮಸ್ತರಿಗೂ, ತಾಯಿಯಾಗಿಯೂ, ಶ್ರೇಷ್ಠವಾದ ಬಂಧುವಾಗಿಯೂ ಇರುವೆ. ಧರ್ಮಾರ್ಥಕಾಮಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳಿಗೂ ನೀನೇ ಕಾರಣಳಾಗಿರುವೆ. ॥೬೨॥

ಯಥಾ ಮಾತಾ ಸ್ತನಾಂಧಾನಾಂ ಶಿಶೂನಾಂ ಶೈಶವೇ ಸದಾ ।
ತಥಾ ತ್ವಂ ಸರ್ವದಾ ಮಾತಾ ಸರ್ವೇಷಾಂ ಸರ್ವರೂಪತಃ ॥೬೩॥

ಮಾತೃಹೀನಸ್ಸ್ತನಾಂಧಸ್ತು ಸ ಚ ಜೀವತಿ ದೈವತಃ ।
ತ್ವಯಾ ಹೀನೋ ಜನಃ ಕೋಽಪಿ ನ ಜೀವತ್ಯೇವ ನಿಶ್ಚಿತಂ ॥೬೪॥

ಸುಪ್ರಸನ್ನಸ್ವರೂಪಾ ತ್ವಂ ಮಾಂ ಪ್ರಸನ್ನಾ ಭವಾಂಬಿಕೇ ।
ವೈರಿಗ್ರಸ್ತಂ ಚ ವಿಷಯಂ ದೇಹಿ ಮಹ್ಯಂ ಸನಾತನಿ ॥೬೫॥

ಅಹಂ ಯಾವತ್ತ್ವಯಾ ಹೀನೋ ಬಂಧುಹೀನಶ್ಚ ಭಿಕ್ಷುಕಃ ।
ಸರ್ವಸಂಪದ್ವಿಹೀನಶ್ಚ ತಾವದೇವ ಹರಿಪ್ರಿಯೇ ॥೬೬॥

ಜ್ಞಾನಂ ದೇಹಿ ಚ ಧರ್ಮಂ ಚ ಸರ್ವಸೌಭಾಗ್ಯಮೀಪ್ಸಿತಂ ।
ಪ್ರಭಾವಂ ಚ ಪ್ರತಾಪಂಚ ಸರ್ವಾಧಿಕಾರಮೇವ ಚ ॥೬೭॥
ಜಯಂ ಪರಾಕ್ರಮಂ ಯುದ್ಧೇ ಪರಮೈಶ್ವರ್ಯಮೇವ ಚ ।

---

ಹಾಲುಕುಡಿಯುವ ಮಕ್ಕಳಿಗೆ ಬಾಲ್ಯದಲ್ಲಿ ಹೇಗೆ ತಾಯಿಯೇ ರಕ್ಷಕಳೋ ಹಾಗೆ ನೀನು ಯಾವಾಗಲೂ, ಸಮಸ್ತರಿಗೂ, ಸಮಸ್ತ-ಸಂದರ್ಭದಲ್ಲಿಯೂ, ತಾಯಿಯಂತೆ ರಕ್ಷಕಳಾಗಿರುವೆ. ॥೬೩॥

ತಾಯಿಯಿಲ್ಲದ ಶಿಶುವೂ ದೈವಯೋಗದಿಂದ ಜೀವಿಸಬಹುದು. ನೀನಿಲ್ಲದಿದ್ದರೆ ಯಾವ ಮನುಷ್ಯನೂ ಜೀವಿಸಲಾರನೆಂಬ ವಿಷಯವು ನಿಜವಾದುದು. ॥೬೪॥

ಓ ತಾಯಿಯೇ, ಪ್ರಸನ್ನಸ್ವರೂಪಳಾದ ನೀನು ನನಗೂ ಪ್ರಸನ್ನಳಾಗು. ಅನಾದಿಯಾದ ಮೂಲಪ್ರಕೃತಿಸ್ವರೂಪಳೇ, ಶತ್ರುಗಳು ತೆಗೆದುಕೊಂಡಿರುವ ನನ್ನ ದೇಶವನ್ನು ನನಗೆ ಕೊಡು. ॥೬೫॥

ಮಹಾಲಕ್ಷ್ಮಿಯೇ, ಎಲ್ಲಿಯವರೆಗೆ ನೀನು ನನ್ನನ್ನು ಬಿಟ್ಟಿರುವೆಯೋ ಅಲ್ಲಿಯವರೆಗೂ ನಾನು ನಂಟರಿಲ್ಲದವನಾಗಿ ಭಿಕ್ಷುಕನಾಗಿ, ಸರ್ವಸಂಪತ್ತೂ ಇಲ್ಲದವನಾಗಿರುವೆನು. ॥೬೬॥

ನನಗೆ ಜ್ಞಾನವನ್ನೂ, ಧರ್ಮವನ್ನೂ, ಸಕಲಸಂಪತ್ತನ್ನೂ, ಮಹಿಮೆಯನ್ನೂ, ಆಜ್ಞಾಶಕ್ತಿಯನ್ನೂ, ಸಮಸ್ತ ಅಧಿಕಾರವನ್ನೂ, ಯುದ್ಧದಲ್ಲಿ ಜಯವನ್ನೂ ಪರಾಕ್ರಮವನ್ನೂ, ಶ್ರೇಷ್ಠವಾದ ಈಶ್ವರತ್ವವನ್ನೂ ಕೊಡು. ॥೬೭॥

ಇತ್ಯುಕ್ತ್ವಾ ಚ ಮಹೇಂದ್ರಶ್ಚ ಸರ್ವೈಃ ಸುರಗಣೈಃ ಸಹ ॥೬೮॥

ಪ್ರಣನಾಮ ಸಾಶ್ರುನೇತ್ರೋ ಮೂರ್ಧ್ನಾ ಚೈವ ಪುನಃ ಪುನಃ ।
ಬ್ರಹ್ಮಾ ಚ ಶಂಕರಶ್ಚೈವ ಶೇಷೋ ಧರ್ಮಶ್ಚ ಕೇಶವಃ ॥೬೯॥

ಸರ್ವೇ ಚಕ್ರುಃ ಪರೀಹಾರಂ ಸುರಾರ್ಥೇ ಚ ಪುನಃ ಪುನಃ ।
ದೇವೇಭ್ಯಶ್ಚ ವರಂ ದತ್ವಾ ಪುಷ್ಪಮಾಲಾಂ ಮನೋಹರಾಂ ॥೭೦॥

ಕೇಶವಾಯ ದದೌ ಲಕ್ಷ್ಮೀಃ ಸಂತುಷ್ಟಾ ಸುರಸಂಸದಿ ।
ಯಯುರ್ದೇವಾಶ್ಚ ಸಂತುಷ್ಟಾಃ ಸ್ವಂ ಸ್ವಂ ಸ್ಥಾನಂ ಚ ನಾರದ॥೭೧॥

ದೇವೀ ಯಯೌ ರಹಃಸ್ಥಾನಂ ಹೃಷ್ಟಾ ಕ್ಷೀರೋದಶಾಯಿನಃ ।
ಯಯತುಶ್ಚೈವ ಸ್ವಗೃಹಂ ಬ್ರಹ್ಮೇಶಾನೌ ಚ ನಾರದ ॥೭೨॥
ದತ್ವಾ ಶುಭಾಶಿಷಂ ತೌ ಚ ದೇವೇಭ್ಯಃ ಪ್ರೀತಿಪೂರ್ವಕಂ ।

---

ಹೀಗೆಂದು ಹೇಳಿ ದೇವೇಂದ್ರನು ಸಮಸ್ತದೇವತೆಗಳೊಡನೆ ಕಣ್ಣಿನಲ್ಲಿ ನೀರನ್ನು ಸುರಿಸುತ್ತ ಮತ್ತೆಮತ್ತೆ ಸಾಷ್ಟಾಂಗ ನಮಸ್ಕಾರಮಾಡಿದನು. ॥೬೮॥

ಬ್ರಹ್ಮನೂ, ಶಿವನೂ, ಆದಿಶೇಷನೂ, ಧರ್ಮದೇವನೂ, ವಿಷ್ಣುವೂ, ಸಮಸ್ತರೂ, ದೇವತೆಗಳಿಗೋಸ್ಕರವಾಗಿ ಮತ್ತೆ ಮತ್ತೆ ಲಕ್ಷ್ಮೀದೇವಿಯನ್ನು ಪ್ರಾರ್ಥನೆ ಮಾಡಿದರು. ॥೬೯॥

ಲಕ್ಷ್ಮೀದೇವಿಯು ದೇವತೆಗಳಿಗೆ ವರವನ್ನು ಕೊಟ್ಟು ಸಂತೋಷದಿಂದ ಆ ದೇವತೆಗಳ ಸಭೆಯಲ್ಲಿ ಮನೋಹರವಾದ ಮಾಲೆಯನ್ನು ವಿಷ್ಣುವಿಗೆ ಕೊಟ್ಟಳು. ॥೭೦॥

ನಾರದನೇ, ದೇವತೆಗಳು ಸಂತೋಷದಿಂದ ತಮ್ಮ ತಮ್ಮ ಸ್ಥಾನಗಳಿಗೆ ಹೋದರು. ದೇವಿಯೂ ಸಂತೋಷದಿಂದ ಕ್ಷೀರಸಮುದ್ರದಲ್ಲಿ ಮಲಗಿರುವ ವಿಷ್ಣುವಿನ ವಕ್ಷಸ್ಥಳಕ್ಕೆ ಹೋದಳು. ॥೭೧॥

ನಾರದನೇ, ಬ್ರಹ್ಮನೂ, ಶಿವನೂ, ದೇವತೆಗಳಿಗೆ ಪ್ರೀತಿಯಿಂದ ಶುಭವಾದ ಆಶೀರ್ವಾದವನ್ನು ಮಾಡಿ ತಮ್ಮ ಮನೆಯಾದ ಸತ್ಯಲೋಕಕ್ಕೂ ಕೈಲಾಸಕ್ಕೂ ಹೋದರು. ॥೭೨॥

ಇದಂ ಸ್ತೋತ್ರಂ ಮಹಾಪುಣ್ಯಂ ತ್ರಿಸಂಧ್ಯಂ ಯಃ ಪಠೇನ್ನರಃ ॥೭೩॥

ಕುಬೇರತುಲ್ಯಃ ಸ ಭವೇದ್ರಾಜರಾಜೇಶ್ವರೋ ಮಹಾನ್ ।
ಪಂಚಲಕ್ಷಜಪೇನೈವ ಸ್ತೋತ್ರಸಿದ್ಧಿರ್ಭವೇನ್ನೃಣಾಂ ॥೭೪॥

ಸಿದ್ಧಸ್ತೋತ್ರಂ ಯದಿ ಪಠೇನ್ಮಾಸಮೇಕಂ ತು ಸಂತತಂ ।
ಮಹಾಸುಖೀ ಚ ರಾಜೇಂದ್ರೋ ಭವಿಷ್ಯತಿ ನ ಸಂಶಯಃ ॥೭೫॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ನವಮಸ್ಕಂಧೇ
ದ್ವಿಚತ್ವಾರಿಂಶೋಽಧ್ಯಾಯಃ

---

ಪುಣ್ಯಕರವಾದ ಈ ಮಹಾಲಕ್ಷ್ಮೀಸ್ತೋತ್ರವನ್ನು ಮೂರು ಸಂಧ್ಯಾಕಾಲಗಳಲ್ಲಿಯೂ ಯಾರು ಹೇಳುವರೋ ಅವರು ಕುಬೇರನ ಸಮಾನರಾಗಿ, ರಾಜಾಧಿರಾಜರಾಗುವರು. ॥೭೩॥

ಈ ಸ್ತೋತ್ರವನ್ನು ಐದುಲಕ್ಷ ಜಪವನ್ನು ಮಾಡಿದರೆ ಸಿದ್ಧಿಯಾಗುವುದು. ಸಿದ್ಧಿಯಾದ ಸ್ತೋತ್ರವನ್ನು ಒಂದು ತಿಂಗಳವರೆಗೆ ಹೇಳಿದರೆ ಅವನು ಮಹಾಸುಖಿಯಾದ ರಾಜನಾಗುವನು. ಈ ವಿಷಯದಲ್ಲಿ ಸಂದೇಹವಿಲ್ಲವು. ॥೭೪-೭೫॥

ಇಲ್ಲಿಗೆ ದೇವೀಭಾಗವತಮಹಾಪುರಾಣದ ಒಂಬತ್ತನೆಯ ಸ್ಕಂಧದಲ್ಲಿ
ನಲವತ್ತೆರಡನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ನವಮಸ್ಕಂಧೇ

### ॥ ತ್ರಿಚತ್ವಾರಿಂಶೋಽಧ್ಯಾಯಃ ॥

### ನಲವತ್ತುಮೂರನೆಯ ಅಧ್ಯಾಯವು

॥ ನಾರದ ಉವಾಚ ॥

**ನಾರಾಯಣ ಮಹಾಭಾಗ ನಾರಾಯಣ ಸಮಪ್ರಭೋ ।**
**ರೂಪೇಣೈವ ಗುಣೈನೈವ ಯಶಸಾ ಚೇತಸಾ ತ್ವಿಷಾ ॥೧॥**

**ತ್ವಮೇವ ಜ್ಞಾನಿನಾಂ ಶ್ರೇಷ್ಠಃ ಸಿದ್ಧಾನಾಂ ಯೋಗಿನಾಂ ಮುನೇ ।**
**ತಪಸ್ವಿನಾಂ ಮುನೀನಾಂ ಚ ಪರೋ ವೇದವಿದಾಂ ವರ ॥೨॥**

**ಮಹಾಲಕ್ಷ್ಮ್ಯಾ ಉಪಾಖ್ಯಾನಂ ವಿಜ್ಞಾತಂ ಮಹದದ್ಭುತಂ ।**
**ಅನ್ಯತ್ಕಿಂಚಿದುಪಾಖ್ಯಾನಂ ನಿಗೂಢಂ ವದ ಸಾಂಪ್ರತಂ ॥೩॥**

**ಅತೀವ ಗೋಪನೀಯಂ ಯದುಪಯುಕ್ತಂ ಚ ಸರ್ವತಃ ।**
**ಅಪ್ರಕಾಶ್ಯಂ ಪುರಾಣೇಷು ವೇದೋಕ್ತಂ ಧರ್ಮಸಂಯುತಂ ॥೪॥**

---

ನಾರದನು ಹೇಳಿದನು—ನಾರಾಯಣನಿಗೆ ಸಮನಾದ, ಮಹಾಪುಣ್ಯವಂತನಾದ, ನಾರಾಯಣಗುರುವೇ, ರೂಪದಿಂದಲೂ, ಗುಣದಿಂದಲೂ, ಕೀರ್ತಿಯಿಂದಲೂ, ಮನಸ್ಸಿನಿಂದಲೂ, ಕಾಂತಿಯಿಂದಲೂ, ನೀನೇ ಜ್ಞಾನಿಗಳಲ್ಲಿ ಶ್ರೇಷ್ಠನಾಗಿರುವೆ. ಸಿದ್ಧರೂ, ಯೋಗಿಗಳೂ, ತಪಸ್ವಿಗಳೂ, ಮುನಿಗಳೂ, ಇವರಲ್ಲಿ ಶ್ರೇಷ್ಠನಾಗಿ ವೇದವನ್ನು ತಿಳಿದವರಲ್ಲಿ ಉತ್ತಮನಾಗಿರುವೆ. ॥೧-೨॥

ಆಶ್ಚರ್ಯಕರವಾದ ಮಹಾಲಕ್ಷ್ಮಿಯ ಉಪಾಖ್ಯಾನವನ್ನು ಕೇಳಿ ತಿಳಿದೆನು. ಅತಿಗೋಪ್ಯವಾದ ಸಮಸ್ತ ಸಂದರ್ಭಗಳಲ್ಲಿಯೂ, ಉಪಯುಕ್ತವಾದ ಪುರಾಣಗಳಲ್ಲಿ ಪ್ರಕಾಶಕ್ಕೆ ಬರದೇ ಇರುವ ವೇದೋಕ್ತವಾದ ಧರ್ಮಸಹಿತವಾದ ಯಾರಿಗೂ ತಿಳಿಯ

|| ನಾರಾಯಣ ಉವಾಚ ||

ನಾನಾಪ್ರಕಾರ ಮಾಖ್ಯಾನಮಪ್ರಕಾಶ್ಯಂ ಪುರಾಣತಃ ।
ಶ್ರುತಂ ಕತಿವಿಧಂ ಗೂಢಮಾಸ್ತೇ ಬ್ರಹ್ಮನ್ಸುದುರ್ಲಭಂ ॥೫॥

ತೇಷು ಯತ್ಸಾರಭೂತಂ ಚ ಶ್ರೋತುಂ ಕಿಂ ವಾ ತ್ವಮಿಚ್ಛಸಿ ।
ತನ್ಮೇ ಬ್ರೂಹಿ ಮಹಾಭಾಗ ಪಶ್ಚಾದ್ವಕ್ಷ್ಯಾಮಿ ತತ್ಪುನಃ ॥೬॥

|| ನಾರದ ಉವಾಚ ||

ಸ್ವಾಹಾದೇವೀ ಹವಿರ್ದಾನೇ ಪ್ರಶಸ್ತಾ ಸರ್ವಕರ್ಮಸು ।
ಪಿತೃದಾನೇ ಸ್ವಧಾ ಶಸ್ತಾ ದಕ್ಷಿಣಾ ಸರ್ವತೋ ವರಾ ॥೭॥

ಏತಾಸಾಂ ಚರಿತಂ ಜನ್ಮ ಫಲಂ ಪ್ರಾಧಾನ್ಯಮೇವ ಚ ।
ಶ್ರೋತುಮಿಚ್ಛಾಮಿ ತ್ವದ್ವಕ್ತ್ರಾದ್ವದ ವೇದವಿದಾಂ ವರ ॥೮॥

---

ದಿರುವ ಯಾವುದಾದರೂ ಉಪಾಖ್ಯಾನವಿದ್ದರೆ ಈಗ ಅದನ್ನು ಹೇಳು ಎಂದು ನಾರದನು ಹೇಳಿದನು. ||೩-೪||

ನಾರಾಯಣನು ಹೇಳಿದನು—ನಾರದನೇ, ಪುರಾಣಗಳಲ್ಲಿ ಪ್ರಕಾಶಕ್ಕೆ ಬರದೇ ಇರುವ ನಾನಾವಿಧವಾದ ಆಖ್ಯಾನಗಳಲ್ಲಿ ಎಷ್ಟು ಕಥೆಗಳು ಗುಟ್ಟಾಗಿ ಜನರಿಗೆ ದೊರೆಯದೆ ಇವೆ ಎಂದು ಕೇಳಿರುವೆ? ಅವುಗಳಲ್ಲಿ ಸಾರವಾದ ಯಾವ ಆಖ್ಯಾನವನ್ನು ಕೇಳಬೇಕೆಂದು ನೀನು ಬಯಸುವೆ? ಅದನ್ನು ಮಹಾಮಹಿಮಾಶಾಲಿಯಾದ ನೀನು ಹೇಳು. ಆಮೇಲೆ ನಾನು ಅದನ್ನು ವಿವರಿಸುವೆನು. ||೫-೬||

ನಾರದನು ಹೇಳಿದನು——ದೇವತೆಗಳಿಗೆ ಹವಿಸ್ಸನ್ನು ಕೊಡುವುದರಲ್ಲಿ ಸ್ವಾಹಾದೇವಿಯೂ, ಪಿತೃಗಳಿಗೆ ಪದಾರ್ಥಗಳನ್ನು ಅರ್ಪಿಸುವುದರಲ್ಲಿ ಸ್ವಧಾದೇವಿಯೂ, ಪ್ರಸಿದ್ಧಿಯನ್ನು ಹೊಂದಿರುವರು. ದಕ್ಷಿಣಾದೇವಿಯು ಎಲ್ಲರಿಗಿಂತಲೂ ಶ್ರೇಷ್ಠಳೆಂದು ಪ್ರಸಿದ್ಧಿಯಿರುವುದು. ಈ ದೇವಿಯರ ಚರಿತ್ರೆಯನ್ನೂ, ಇವರ ಉತ್ಪತ್ತಿ, ಮುಖ್ಯತೆ, ಫಲ ಇವುಗಳನ್ನೂ, ನಿನ್ನ ಮುಖದಿಂದ ಕೇಳಬೇಕೆಂದಿರುವೆನು. ವೇದಗಳನ್ನು ತಿಳಿದವರಲ್ಲಿ ಶ್ರೇಷ್ಠನಾದ ನೀನು ಅವುಗಳನ್ನು ವಿಸ್ತರಿಸಿ ಹೇಳು. ||೭-೮||

|| ಸೂತ ಉವಾಚ ||

**ನಾರದಸ್ಯ ವಚಃ ಶ್ರುತ್ವಾ ಪ್ರಹಸ್ಯ ಮುನಿಸತ್ತಮಃ ।**
**ಕಥಾಂ ಕಥಿತು ಮಾರೇಭೇ ಪುರಾಣೋಕ್ತಾಂ ಪುರಾತನೀಂ ॥೯॥**

|| ನಾರಾಯಣ ಉವಾಚ ||

**ಸೃಷ್ಟೇಃ ಪ್ರಥಮತೋ ದೇವಾಃ ಸ್ವಾಹಾರಾರ್ಥಂ ಯಯುಃ ಪುರಾ ।**
**ಬ್ರಹ್ಮಲೋಕಂ ಬ್ರಹ್ಮಸಭಾಮಾಜಗ್ಮುಃ ಸುಮನೋಹರಾಂ ॥೧೦॥**

**ಗತ್ವಾ ನಿವೇದನಂ ಚಕ್ರುರಾಹಾರಹೇತುಕಂ ಮುನೇ ।**
**ಬ್ರಹ್ಮಾ ಶ್ರುತ್ವಾ ಪ್ರತಿಜ್ಞಾಯ ನಿ(ಸಿ)ಷೇವೇ ಶ್ರೀಹರಿಂ ಪರಂ ॥೧೧॥**

|| ನಾರದ ಉವಾಚ ||

**ಯಜ್ಞರೂಪೋ ಹಿ ಭಗವಾಲ್ಕಲಯಾ ಚ ಬಭೂವ ಹ ।**
**ಯಜ್ಞೇ ಯದ್ಯದ್ಧವಿರ್ದಾನಂ ದತ್ತಂ ತೇಭ್ಯಶ್ಚ ಬ್ರಾಹ್ಮಣೈಃ ॥೧೨॥**

---

ಸೂತನು ಹೇಳಿದನು—ನಾರದನ ಮಾತನ್ನು ಕೇಳಿ ನಾರಾಯಣಮುನಿಯು ನಕ್ಕು, ಬಹು ಹಳೆಯದಾದ ಪುರಾಣೋಕ್ತವಾದ ಕಥೆಯನ್ನು ಹೇಳಲು ಪ್ರಾರಂಭಮಾಡಿದನು. ||೯||

ನಾರಾಯಣನು ಹೇಳಿದನು—ಪ್ರಪಂಚದ ಸೃಷ್ಟಿಯ ಪ್ರಾರಂಭದಲ್ಲಿ ದೇವತೆಗಳು ತಮ್ಮ ಆಹಾರಕ್ಕೋಸ್ಕರವಾಗಿ, ಮೊದಲು ಬ್ರಹ್ಮಲೋಕಕ್ಕೆ ಹೊರಟರು. ತರುವಾಯ ಮನೋಹರವಾದ ಬ್ರಹ್ಮನ ಸಭೆಗೆ ಬಂದರು. ||೧೦||

ನಾರದನೇ, ದೇವತೆಗಳು ಬ್ರಹ್ಮನ ಸಭೆಗೆ ಬಂದು ತಮಗೆ ಆಹಾರಕ್ಕೆ ಕಾರಣವಾದುದನ್ನು ತೋರಿಸಬೇಕೆಂದು ವಿಜ್ಞಾಪನೆಮಾಡಿಕೊಂಡರು. ಬ್ರಹ್ಮನು ಇವರ ಮಾತನ್ನು ಕೇಳಿ ಯಜ್ಞದಲ್ಲಿ ಬ್ರಾಹ್ಮಣರು ಕೊಡುವ ಹವಿಸ್ಸನ್ನು ನಿಮಗೆ ದೊರೆಯುವಂತೆ ಮಾಡಿ ನಿಮ್ಮ ಆಹಾರವ್ಯವಸ್ಥೆಯನ್ನು ಮಾಡುವೆನೆಂದು ಪ್ರತಿಜ್ಞೆ ಮಾಡಿ ದೇವತೆಗಳ ಅನುಕೂಲ್ಯಕ್ಕೋಸ್ಕರವಾಗಿ ಶ್ರೇಷ್ಠನಾದ ವಿಷ್ಣುವನ್ನು ಸ್ತೋತ್ರ ಮಾಡಿದನು. ||೧೧||

ನಾರದನು ಪ್ರಶ್ನೆಮಾಡಿದನು—ಪರಮಾತ್ಮನಾದ ವಿಷ್ಣುವು ಅಂಶದಿಂದ ಯಜ್ಞಸ್ವರೂಪನಲ್ಲವೇ ? 'ಯಜ್ಞೋ ವೈ ವಿಷ್ಣುಃ' ಎಂದು ವೇದದಲ್ಲಿದೆ. ಬ್ರಾಹ್ಮಣರು ದೇವತೆಗಳಿಗೆ ಅವರವರ ಹೆಸರಿನಿಂದ ಹವಿಸ್ಸನ್ನು ಕೊಡುವುದಿಲ್ಲವೇ ? ಆದರಿಂದ

॥ ನಾರಾಯಣ ಉವಾಚ ॥

ಹವಿರ್ದದತಿ ವಿಪ್ರಾಶ್ಚ ಭಕ್ತ್ಯಾ ಚ ಕ್ಷತ್ರಿಯಾದಯಃ ।
ಸುರಾ ನೈವ ಪ್ರಾಪ್ನುವಂತಿ ತದ್ದಾನಂ ಮುನಿಪುಂಗವ ॥೧೩॥

ದೇವಾ ವಿಷಣ್ಣಾಸ್ತೇ ಸರ್ವೇ ತತ್ಸಭಾಂ ಚ ಯಯುಃ ಪುನಃ ।
ಗತ್ವಾ ನಿವೇದನಂ ಚಕ್ರುರಾಹಾರಾಭಾವಹೇತುಕಂ ॥೧೪॥

ಬ್ರಹ್ಮಾ ಶ್ರುತ್ವಾ ತು ಧ್ಯಾನೇನ ಶ್ರೀಕೃಷ್ಣಂ ಶರಣಂ ಯಯೌ ।
ಪೂಜಾಂ ಚಕಾರ ಪ್ರಕೃತೇರ್ಧ್ಯಾನೇನೈವ ತದಾಜ್ಞಯಾ ॥೧೫॥

ಪ್ರಕೃತೇಃ ಕಲಯಾ ಚೈವ ಸರ್ವಶಕ್ತಿಸ್ವರೂಪಿಣೀ ।
ಅತೀವ ಸುಂದರೀ ಶ್ಯಾಮಾ ರಮಣೀಯಾ ಮನೋಹರಾ ॥೧೬॥

---

ಆ ದೇವತೆಗಳಿಗೆ ಅವರವರ ಹೆಸರಿನಿಂದ ಹವಿಸ್ಸನ್ನು ಕೊಡುವುದಿಲ್ಲವೇ, ಅದರಿಂದ ಆ ದೇವತೆಗಳಿಗೆ ತೃಪ್ತಿಯಾಗುವುದಿಲ್ಲವೇ? ॥೧೨॥

ನಾರಾಯಣನು ಉತ್ತರ ಹೇಳಿದನು—ಬ್ರಾಹ್ಮಣರೂ ಕ್ಷತ್ರಿಯರೇ ಮೊದಲಾದವರೂ ಭಕ್ತಿಯಿಂದ ದೇವತೆಗಳಿಗೆ ಹವಿಸ್ಸನ್ನು ಕೊಡುವರು. ಅವರು ಕೊಟ್ಟ ಹವಿಸ್ಸನ್ನು ದೇವತೆಗಳಿಗೆ ತೆಗೆದುಕೊಂಡುಹೋಗಿ ಕೊಡುವವರು ಯಾರೂ ಇಲ್ಲದ್ದರಿಂದ ದೇವತೆಗಳಿಗೆ ಆ ಹವಿಸ್ಸು ಸಿಗುವುದಿಲ್ಲ. ಆದುದರಿಂದ ದೇವತೆಗಳಿಗೆ ತೃಪ್ತಿಯುಂಟಾಗುವುದಿಲ್ಲ. ॥೧೩॥

ದೇವತೆಗಳು ಈ ದುಃಖನಿವಾರಣೆಗೆ ಉಪಾಯವನ್ನು ತಿಳಿಯದೆ ವಿಷಾದದಿಂದ ಎಲ್ಲರೂ ಬ್ರಹ್ಮನ ಸಭೆಗೆ ಹೋಗಿ, ತಮಗೆ ಆಹಾರಾಭಾವದ ಕಾರಣವನ್ನು ಹೇಳಿದರು. ॥೧೪॥

ಬ್ರಹ್ಮನು ದೇವತೆಗಳ ಮಾತನ್ನು ಕೇಳಿ, ಧ್ಯಾನ ಮತ್ತೂ ಸ್ತೋತ್ರಗಳಿಂದ ಶ್ರೀಕೃಷ್ಣನನ್ನು ಬೇಡಿಕೊಂಡನು. ಶ್ರೀಕೃಷ್ಣನ ಅಪ್ಪಣೆಯಿಂದ ಧ್ಯಾನಾದಿಗಳಿಂದ ಮೂಲಪ್ರಕೃತಿಯ ಪೂಜೆಯನ್ನು ಮಾಡಿದನು. ॥೧೫॥

ಮೂಲಪ್ರಕೃತಿಯ ಅಂಶದಿಂದಲೇ ಸಮಸ್ತ ಶಕ್ತಿಸ್ವರೂಪಳೂ, ಸುಂದರಿಯೂ ಮೇಘದಂತೆ ಬಣ್ಣವುಳ್ಳವಳೂ, ಮನೋಹರವಾದವಳೂ, ಅಲಂಕಾರಮಾಡಿಕೊಂಡು ಮುಗುಳುನಗೆಯಿಂದ ಕೂಡಿ ಪ್ರಸನ್ನವಾದ ಮುಖವುಳ್ಳವಳೂ, ಭಕ್ತರಿಗೆ ವರವನ್ನು

ಈಷದ್ಧಾಸ್ಯಪ್ರಸನ್ನಾಸ್ಯಾ ಭಕ್ತಾನುಗ್ರಹಕಾತರಾ ।
ಉವಾಚೇತಿ ವಿಧೇರಗ್ರೇ ಪದ್ಮಯೋನೇ ವರಂ ವೃಣು ॥೧೭॥

ವಿಧಿಸ್ತದ್ವಚನಂ ಶ್ರುತ್ವಾ ಸಂಭ್ರಮಾತ್ತಮುವಾಚ ತಾಂ ।

॥ ಪ್ರಜಾಪತಿರುವಾಚ ॥

ತ್ವಮಗ್ನೇರ್ದಾಹಿಕಾ ಶಕ್ತಿರ್ಭವ ಯೋಷೀವ ಸುಂದರೀ ॥೧೮॥

ದಗ್ಧುಂ ನ ಶಕ್ತಃ ಪ್ರಕೃತೀರ್ಹುತಾಶಶ್ಚ ತ್ವಯಾ ವಿನಾ ।
ತ್ವನ್ನಾಮೋಚ್ಚಾರ್ಯ ಮಂತ್ರಾಂತೇ ಯೋ ದಾಸ್ಯತಿ ಹವಿರ್ನರಃ ॥೧೯॥

ಸುರೇಭ್ಯಸ್ತತ್ಪ್ರಾಪ್ನುವಂತಿ ಸುರಾಃ ಸಾನಂದಪೂರ್ವಕಂ ।
ಅಗ್ನೇಃ ಸಂಪತ್ಸ್ವರೂಪಾ ಚ ಶ್ರೀರೂಪಾ ಸಾ ಮಹೇಶ್ವರೀ ॥೨೦॥

ದೇವಾನಾಂ ಪೂಜಿತಾ ಶಶ್ವನ್ನರಾದೀನಾಂ ಭವಾಂಬಿಕೇ ।
ಬ್ರಹ್ಮಣಶ್ಚ ವಚಃ ಶ್ರುತ್ವಾ ಸಾ ವಿಷಣ್ಣಾ ಬಭೂವ ಹ ॥೨೧॥
ತಮುವಾಚ ತತೋ ದೇವೀ ಸ್ವಾಭಿಪ್ರಾಯಂ ಸ್ವಯಂಭುವಂ ।

---

ಕೊಡುವುದರಲ್ಲಿ ಆಸಕ್ತಳೂ, ಆದ ದೇವಿಯು ಬ್ರಹ್ಮನೆದುರಿಗೆ ಬಂದು, ಬ್ರಹ್ಮನೇ, ವರವನ್ನು ಕೇಳು ಎಂದಳು. ॥೧೬-೧೭॥

ಬ್ರಹ್ಮನು ಆ ದೇವಿಯ ಮಾತನ್ನು ಕೇಳಿ ಸಂಭ್ರಮದಿಂದ ಆ ದೇವಿಯನ್ನು ಕುರಿತು ಮಾತನಾಡಿದನು.

ಬ್ರಹ್ಮನು ಹೇಳಿದನು- - ಓ ದೇವಿಯೇ, ಮಹಾಸುಂದರಿಯಾದ ನೀನು ಅಗ್ನಿಗೆ ಸುಡುವ ಶಕ್ತಿಯಾಗು ಮತ್ತು ಪತ್ನಿಯಾಗು. ನೀನಿಲ್ಲದೆ ಅಗ್ನಿಯು ತನ್ನಲ್ಲಿ ಕೊಟ್ಟ ಹವಿಸ್ಸನ್ನು ಸುಡುವ ಮತ್ತು ಅದನ್ನು ದೇವತೆಗಳಿಗೆ ತಲಪಿಸುವ ಶಕ್ತಿಯನ್ನು ಹೊಂದುವುದಿಲ್ಲ. ॥೧೮॥

ಮಂತ್ರದ ಕೊನೆಯಲ್ಲಿ ನಿನ್ನ ಹೆಸರನ್ನು ಹೇಳಿ ಯಾವ ಮನುಷ್ಯನು ದೇವತೆಗಳಿಗೆ ಹವಿಸ್ಸನ್ನು ಕೊಡುವನೋ ಆ ಹವಿಸ್ಸನ್ನು ದೇವತೆಗಳೂ ಸಂತೋಷದಿಂದ ಹೊಂದುವರು. ॥೧೯॥

ಓ ದೇವಿಯೇ, ನೀನು ಅಗ್ನಿದೇವನಿಗೆ ಸಂಪತ್ತಿನರೂಪಳಾಗಿಯೂ, ಕಾಂತಿರೂಪಳಾಗಿಯೂ, ಗೃಹಾಧಿಪತಿಯಾಗಿಯೂ ಇರು. ಮತ್ತೂ ದೇವತೆಗಳಿಗೂ ಮನುಷ್ಯರೇ ಮೊದಲಾದವರಿಗೂ ಪೂಜ್ಯಳಾಗು. ॥೨೦॥

ಬ್ರಹ್ಮನ ಮಾತನ್ನು ಕೇಳಿ ಸ್ವಾಹಾದೇವಿಯೂ ವಿಷಾದವನ್ನು ಹೊಂದಿದಳು.

|| ಸಾಹೋವಾಚ ||

ಅಹಂ ಕೃಷ್ಣಂ ಭಜಿಷ್ಯಾಮಿ ತಪಸಾ ಸುಚಿರೇಣ ಚ ||೨೨||

ಬ್ರಹ್ಮಂಸ್ತದನ್ಯಂ ಯತ್ಕಿಂಚಿತ್ಸ್ವಪ್ನವದ್ಭ್ರಮಮೇವ ಚ ।
ವಿಧಾತಾ ಜಗತಸ್ತ್ವಂ ಚ ಶಂಭುರ್ಮೃತ್ಯುಂಜಯೋ ವಿಭುಃ ||೨೩||

ಬಿಭರ್ತಿ ಶೇಷೋ ವಿಶ್ವಂ ಚ ಧರ್ಮಃ ಸಾಕ್ಷೀ ಚ ಧರ್ಮಿಣಾಂ ।
ಸರ್ವಾದ್ಯ ಪೂಜ್ಯೋ ದೇವಾನಾಂ ಗಣೇಷು ಚ ಗಣೇಶ್ವರಃ ||೨೪||

ಪ್ರಕೃತಿಃ ಸರ್ವಸಂಪೂಜ್ಯಾ ಯತ್ಪ್ರಸಾದಾತ್ಪುರಾಽಭವತ್ ।
ಋಷಯೋ ಮುನಯಶ್ಚೈವ ಪೂಜಿತಾ ಯನ್ನಿಷೇವಯಾ ||೨೫||

ತತ್ಪಾದಪದ್ಮಂ ನಿಯತಂ ಭಾವೇನ ಚಿಂತಯಾಮ್ಯಹಂ ।
ಪದ್ಮಾಸ್ಯಾ ಪಾದ್ಮಮಿತ್ಯುಕ್ತ್ವಾ ಪದ್ಮನಾಭಾನುಸಾರತಃ ||೨೬||

ಜಗಾಮ ತಪಸೇ ದೇವೀ ಧ್ಯಾತ್ವಾ ಕೃಷ್ಣಂ ನಿರಾಮಯಂ ।
ತಪಸ್ತೇಪೇ ವರ್ಷಲಕ್ಷಮೇಕಪಾದೇನ ಪದ್ಮಜಾ ||೨೭||

---

ಆಮೇಲೆ ಬ್ರಹ್ಮನನ್ನು ಕುರಿತು ತನ್ನ ಅಭಿಪ್ರಾಯವನ್ನು ಹೇಳಿದಳು. ||೨೧||

ಓ ಬ್ರಹ್ಮನೇ, ನಾನು ಬಹಳಕಾಲ ತಪಸ್ಸುಮಾಡಿ ಕೃಷ್ಣನನ್ನು ಪತಿಯನ್ನಾಗಿ ವರಿಸುವೆನು. ಅವನನ್ನು ಬಿಟ್ಟು ಬೇರೊಬ್ಬನನ್ನು ಸ್ವಪ್ನದಂತೆಯೂ, ಭ್ರಾಂತಿಜ್ಞಾನದಂತೆಯೂ, ಮಿಥ್ಯಾವಸ್ತುವನ್ನಾಗಿ ತಿಳಿಯುವೆನು. ||೨೨||

ಯಾರ ಅನುಗ್ರಹದಿಂದ ನೀನು ಜಗತ್ತನ್ನು ಸೃಷ್ಟಿಸುವೆಯೋ, ಶಿವನು ಮೃತ್ಯುವನ್ನು ಜಯಿಸಿದನೋ, ಆದಿಶೇಷನು ಭೂಮಿಯನ್ನು ಧರಿಸಿರುವನೋ, ಧರ್ಮದೇವನು ಧರ್ಮಕಾರ್ಯಮಾಡುವವರಿಗೆ ಸಾಕ್ಷಿಯಾಗಿರುವನೋ, ಗಣೇಶನು ದೇವತೆಗಳೆಲ್ಲರಿಗೂ ಮೊದಲೇ ಪೂಜೆಯನ್ನು ಹೊಂದುವನೋ, ಪ್ರಕೃತಿಗಳು ಸಮಸ್ತರಿಗೂ ಪೂಜ್ಯರಾಗಿರುವರೋ ಯಾರ ಸೇವೆಯಿಂದ ಮುನಿಗಳೂ ಋಷಿಗಳೂ ಪೂಜ್ಯರಾಗಿರುವರೋ ಆ ಕೃಷ್ಣನ ಪಾದಪದ್ಮಗಳನ್ನು ಬಿಡದೆ ಮನಸ್ಸಿನಲ್ಲಿ ಧ್ಯಾನಿಸುತ್ತಿರುವೆನು. ||೨೪-೨೫||

ಕಮಲಮುಖಿಯೂ, ಲಕ್ಷ್ಮ್ಯಂಶಸಂಭೂತಳೂ ಆದ ಸ್ವಾಹಾದೇವಿಯು ಬ್ರಹ್ಮನಿಗೆ ಹೀಗೆಂದು ಹೇಳಿ ಕಮಲನಾಭನಾದ ನಾರಾಯಣನನ್ನುದ್ದೇಶಿಸಿ ತಪಸ್ಸ

ತದಾ ದದರ್ಶ ಶ್ರೀಕೃಷ್ಣಂ ನಿರ್ಗುಣಂ ಪ್ರಕೃತೇಃ ಪರಂ ।
ಅತೀವ ಕಮನೀಯಂ ಚ ರೂಪಂ ದೃಷ್ಟ್ವಾ ಚ ರೂಪಿಣೇ ॥೨೮॥

ಮೂರ್ಚ್ಛಾಂ ಸಂಪ್ರಾಪ ಕಾಲೇನ ಕಾಮೇಶಸ್ಯ ಚ ಕಾಮುಕೀ ।
ವಿಜ್ಞಾಯ ತದಭಿಪ್ರಾಯಂ ಸರ್ವಜ್ಞಸ್ತಾಮುವಾಚ ಹ ॥೨೯॥

ಸಮುತ್ಥಾಪ್ಯ ಚ ತಾಂ ಕ್ರೋಡೇ ಕ್ಷೀಣಾಂಗೀಂ ತಪಸಾ ಚಿರಂ ।

॥ ಶ್ರೀ ಭಗವಾನುವಾಚ ॥

ವಾರಾಹೇ ವೈ ತ್ವಮಂಶೇನ ಮಮ ಪತ್ನೀ ಭವಿಷ್ಯಸಿ ॥೩೦॥

ನಾಮ್ನಾ ನಾಗ್ನಜಿತೀ ಕನ್ಯಾ ಕಾಂತೇ ನಗ್ನಜಿತಸ್ಯ ಚ ।
ಅಧುನಾಽಗ್ನೇರ್ದಾಹಿಕಾ ತ್ವಂ ಭವ ಪತ್ನೀ ಚ ಭಾಮಿನಿ ॥೩೧॥

---

ಮಾಡುವುದಕ್ಕಾಗಿ ಹೋದಳು. ಯಾವ ತೊಂದರೆಯೂ ಇಲ್ಲದೇ ಕೃಷ್ಣನನ್ನು ಮನಸ್ಸಿನಲ್ಲಿ ಧ್ಯಾನಮಾಡುತ್ತಾ, ಒಂದುಲಕ್ಷ ವರ್ಷಗಳ ವರೆಗೆ ಒಂದೇ ಕಾಲಿನಲ್ಲಿ ನಿಂತು ತಪಸ್ಸನ್ನು ಮಾಡಿದಳು. ॥೨೭॥

ಆಗ ಪ್ರಕೃತಿಗಿಂತಲೂ ಶ್ರೇಷ್ಠನಾದ ನಿರ್ಗುಣನಾದ ಶ್ರೀಕೃಷ್ಣರೂಪದಿಂದಿರುವ ಪರಬ್ರಹ್ಮನನ್ನು ನೋಡಿದಳು. ಅತ್ಯಂತ ಮನೋಹರನಾದ ಸಾಕಾರಬ್ರಹ್ಮನಾದ ಕೃಷ್ಣನ ರೂಪವನ್ನು ನೋಡಿ ಇಷ್ಟಾರ್ಥಗಳನ್ನು ಕೊಡಲು ಶಕ್ತನಾದ ಅವನನ್ನು ಕಾಮಿಸುತ್ತ ಮೂರ್ಛೆಯೆಂಬ ಒಂಬತ್ತನೆಯ ಸಾತ್ವಿಕಭಾವವನ್ನು ಹೊಂದಿದಳು.॥೨೮॥

ಸಮಸ್ತವನ್ನೂ ತಿಳಿದವನಾದ ಶ್ರೀಕೃಷ್ಣನು ಅಸ್ವಾಹಾದೇವಿಯ ಅಭಿಪ್ರಾಯವನ್ನು ತಿಳಿದು ತಪಸ್ಸಿನಿಂದ ಕೃಶವಾದ ಅವಯುವಗಳುಳ್ಳ ಆಕೆಯನ್ನು ಮೂರ್ಛೆಯಿಂದೆಬ್ಬಿಸಿ ಅವಳನ್ನು ಕುರಿತು ಹೇಳಿದನು. ॥೨೯॥

ಭಗವಂತನು ಹೇಳಿದನು—ಎಲೈ ಸುಂದರಿಯೇ, ಮುಂದೆ ವರಾಹಕಲ್ಪದಲ್ಲಿ ನಿನ್ನ ಅಂಶದಿಂದ ನಗ್ನಜಿತ್ತೆಂಬ ರಾಜನ ಮಗಳಾಗಿ ನಗ್ನಜಿತೀ ಎಂಬ ಹೆಸರನ್ನು ಪಡೆದು ನನ್ನ ಪತ್ನಿಯಾಗುವೆ. ಈಗ ನೀನು ಅಗ್ನಿಗೆ ಸುಡುವ ಶಕ್ತಿಸ್ವರೂಪಳಾಗಿಯೂ, ಅವನ ಪತ್ನಿಯಾಗಿಯೂ, ಇರು. ॥೩೦-೩೧॥

**ಮಂತ್ರಾಂಗರೂಪಾ ಪೂಜ್ಯಾ ಚ ಮತ್ಪ್ರಸಾದಾದ್ಭವಿಷ್ಯಸಿ ।**
**ವಹ್ನಿಸ್ತ್ವಾಂ ಭಕ್ತಿಭಾವೇನ ಸಂಪೂಜ್ಯ ಚ ಗೃಹೇಶ್ವರೀಂ ॥೩೨॥**

**ರಮಿಷ್ಯತಿ ತ್ವಯಾ ಸಾರ್ಧಂ ರಾಮಯಾ ರಮಣೀಯಯಾ ।**
**ಇತ್ಯುಕ್ತ್ವಾಽಂತರ್ದಧೇ ದೇವೋ ದೇವೀಂ ಸಂಭಾಷ್ಯ ನಾರದ ॥೩೩॥**

**ತತ್ರಾ ಜಗಾಮ ಸಂತ್ರಸ್ತೋ ವಹ್ನಿರ್ಬ್ರಹ್ಮನಿದೇಶತಃ ।**
**ಸಾಮವೇದೋಕ್ತಧ್ಯಾನೇನ ಧ್ಯಾತ್ವಾ ತಾಂ ಜಗದಂಬಿಕಾಂ ॥೩೪॥**

**ಸಂಪೂಜ್ಯ ಪರಿತುಷ್ಟಾವ ಪಾಣಿಂ ಜಗ್ರಾಹ ಮಂತ್ರತಃ ।**
**ತದಾ ದಿವ್ಯಂ ವರ್ಷಶತಂ ಸ ರೇಮೇ ರಾಮಯಾ ಸಹ ॥೩೫॥**

**ಅತೀವ ನಿರ್ಜನೇ ದೇಶೇ ಸಂಭೋಗಸುಖದೇ ಸದಾ ।**
**ಬಭೂವ ಗರ್ಭಸ್ತಸ್ಯಾಂ ಚ ಹುತಾಶಸ್ಯ ಚ ತೇಜಸಾ ॥೩೬॥**

---

ನಿನ್ನ ಹೆಸರನ್ನು ಮಂತ್ರದ ಕೊನೆಯಲ್ಲಿ ಪ್ರಯೋಗಿಸುವುದರಿಂದ ನೀನು ಮಂತ್ರಾಂಗರೂಪಳಾಗಿ, ನನ್ನ ಅನುಗ್ರಹದಿಂದ ಪೂಜ್ಯಳಾಗುವೆ. ತನ್ನ ಮನೆಗೆ ಅಧಿಪತಿಯಾಗಿ ಭಾವಿಸುತ್ತಾ ನಿನ್ನನ್ನು ಅಗ್ನಿಯು ಭಕ್ತಿಯಿಂದ ಪೂಜಿಸುವನು. ॥೩೨॥

ಮತ್ತೂ ಮನೋಹರಳೂ, ಸುಂದರಿಯೂ ಆದ ನಿನ್ನೊಡನೆ ಕ್ರೀಡಿಸುವನು. ಹೀಗೆಂದು ಶ್ರೀಕೃಷ್ಣನು ಸ್ವಾಹಾದೇವಿಗೆ ಹೇಳಿ ಅಂತರ್ಧಾನನಾದನು. ॥೩೩॥

ಈ ಸಂದರ್ಭದಲ್ಲಿ ಬ್ರಹ್ಮನ ಅಪ್ಪಣೆಯಿಂದ ಅಗ್ನಿಯು ನನ್ನನ್ನು ಈ ಸ್ವಾಹಾದೇವಿಯು ವರಿಸುವಳೋ ಇಲ್ಲವೋ ಎಂಬ ಭಯದಿಂದ ಅಲ್ಲಿಗೆ ಬಂದು ಜಗದಂಬೆಯ ಅಂಶಳಾದ ಆ ದೇವಿಯನ್ನು ಸಾಮವೇದದಲ್ಲಿ ಹೇಳಿರುವ ಧ್ಯಾನಮಂತ್ರದಿಂದ ಧ್ಯಾನಿಸಿ, ಪೂಜಿಸಿ ಸ್ತೋತ್ರಮಾಡಿದನು. ಬಳಿಕ ವೇದಮಂತ್ರಪೂರ್ವಕವಾಗಿ ಅವಳ ಕೈಹಿಡಿದನು. ॥೩೪॥

ಆಗ ಅಗ್ನಿದೇವನು ಸ್ವಾಹಾದೇವಿಯೊಡನೆ ಯಾವಾಗಲೂ ಸಂಭೋಗಕ್ಕೆ ಸುಖಕರವಾದ, ನಿರ್ಜನಪ್ರದೇಶದಲ್ಲಿ ದೇವಮಾನದ ನೂರು ವರ್ಷಗಳವರೆಗೆ ವಿಹರಿಸುತ್ತಿದ್ದನು. ಆ ಅಗ್ನಿಯ ತೇಜಸ್ಸಿನಿಂದ ಸ್ವಾಹಾದೇವಿಗೆ ಗರ್ಭವುಂಟಾಯಿತು. ॥೩೫-೩೬॥

ತಂ ದಧಾರ ಚ ಸಾ ದೇವೀ ದಿವ್ಯಂ ದ್ವಾದಶವತ್ಸರಂ ।
ತತಃ ಸುಷಾವ ಪುತ್ರಾಂಶ್ಚ ರಮಣೀಯಾನ್ಮನೋಹರಾನ್ ॥೩೭॥

ದಕ್ಷಿಣಾಗ್ನಿಗಾರ್ಹಪತ್ಯಾಹವನೀಯಾನ್ ಕ್ರಮೇಣ ಚ ।
ಋಷಯೋ ಮುನಯಶ್ಚೈವ ಬ್ರಾಹ್ಮಣಾಃ ಕ್ಷತ್ರಿಯಾದಯಃ ॥೩೮॥

ಸ್ವಾಹಾಂತಂ ಮಂತ್ರಮುಚ್ಚಾರ್ಯ ಹವಿರ್ದಾನಂ ಚ ಚಕ್ರಿರೇ ।
ಸ್ವಾಹಾಯುಕ್ತಂ ಚ ಮಂತ್ರಂ ಚ ಯೋ ಗೃಹ್ಣಾತಿ ಪ್ರಶಸ್ತಕಂ॥೩೯॥

ಸರ್ವಸಿದ್ಧಿರ್ಭವೇತ್ತಸ್ಯ ಮಂತ್ರಗ್ರಹಣಮಾತ್ರತಃ ।
ವಿಷಹೀನೋ ಯಥಾ ಸರ್ಪೋ ವೇದಹೀನೋ ಯಥಾ ದ್ವಿಜಃ ॥೪೦॥

ಪತಿಸೇವಾವಿಹೀನಾ ಸ್ತ್ರೀ ವಿದ್ಯಾಹೀನೋ ಯಥಾ ಪುಮಾನ್ ।
ಫಲಶಾಖಾವಿಹೀನಶ್ಚ ಯಥಾ ವೃಕ್ಷೋ ವಿನಿಂದಿತಃ ॥೪೧॥
ಸ್ವಾಹಾಹೀನಸ್ತಥಾ ಮಂತ್ರೋ ನ ಹುತಃ ಫಲದಾಯಕಃ ।

---

ಆ ಸ್ವಾಹಾದೇವಿಯು ಆ ಗರ್ಭವನ್ನು ದೇವಮಾನದ ಹನ್ನೆರಡು ವರ್ಷಗಳ ವರೆಗೆ ಧರಿಸಿದ್ದಳು. ಆ ಮೇಲೆ ಮನೋಹರರೂ, ಸುಂದರರೂ ಆದ ದಕ್ಷಿಣಾಗ್ನಿ, ಗಾರ್ಹಪತ್ಯ, ಆಹವನೀಯ ಎಂಬ ಮೂರು ಮಕ್ಕಳನ್ನು ಹೆತ್ತಳು. ॥೩೭॥

ಋಷಿಗಳೂ, ಮುನಿಗಳೂ, ಬ್ರಾಹ್ಮಣರೂ, ಕ್ಷತ್ರಿಯರೂ, ಮೊದಲಾದವರೂ ಸ್ವಾಹಾ ಶಬ್ದವು ಕೊನೆಯಲ್ಲಿರುವ ಮಂತ್ರಗಳನ್ನು ಹೇಳಿ ದೇವತೆಗಳಿಗೆ ಹವಿಸ್ಸನ್ನು ಕೊಡುವರು. ॥೩೮॥

ಸ್ವಾಹಾಶಬ್ದದಿಂದ ಕೂಡಿದ ಮಂತ್ರವೇ ಪ್ರಶಸ್ತವಾದುದು ಅಂತಹ ಮಂತ್ರ ಗಳನ್ನು ಯಾರು ಉಪದೇಶ ತೆಗೆದುಕೊಳ್ಳುವರೋ ಅವರಿಗೆ ಮಂತ್ರವನ್ನು ಉಪದೇಶ ತೆಗೆದುಕೊಂಡ ಮಾತ್ರದಿಂದಲೇ ಎಲ್ಲಾ ವಿಧವಾದ ಸಿದ್ಧಿಯೂ ಉಂಟಾಗುವುದು. ॥೩೯॥

ವಿಷವಿಲ್ಲದ ಸರ್ಪದಂತೆಯೂ, ವೇದಾಭ್ಯಾಸವಿಲ್ಲದ ಬ್ರಾಹ್ಮಣನಂತೆಯೂ, ಪತಿಸೇವೆಯಿಲ್ಲದ ಸ್ತ್ರೀಯಂತೆಯೂ, ವಿದ್ಯೆಯಿಲ್ಲದ ಪುರುಷನಂತೆಯೂ, ಕೊಂಬೆ ಗಳೂ, ಹಣ್ಣುಕಾಯಿಗಳಿಲ್ಲದ ಮರದಂತೆಯೂ, ಸ್ವಾಹಾಶಬ್ದವಿಲ್ಲದ ಮಂತ್ರವು ನಿಂದಿತವಾಗಿ, ಆ ಮಂತ್ರದಿಂದ ಹೋಮಮಾಡಿದರೆ ಫಲವಿಲ್ಲದೆ ಹೋಗುವುದು. ॥೪೦-೪೧॥

ಪರಿತುಷ್ಟಾ ದ್ವಿಜಾಃ ಸರ್ವೇ ದೇವಾಃ ಸಂಪ್ರಾಪುರಾಹುತೀಃ ॥೪೨॥

ಸ್ವಾಹಾಂತೇನೈವ ಮಂತ್ರೇಣ ಸಫಲಂ ಸರ್ವಮೇವ ಚ ।
ಇತ್ಯೇವಂ ಕಥಿತಂ ಸರ್ವಂ ಸ್ವಾಹೋಪಾಖ್ಯಾನಮುತ್ತಮಂ ॥೪೩॥

ಸುಖದಂ ಮೋಕ್ಷದಂ ಸಾರಂ ಕಿಂ ಭೂಯಃ ಶ್ರೋತುಮಿಚ್ಛಸಿ ।

॥ ನಾರದ ಉವಾಚ ॥

ಸ್ವಾಹಾಪೂಜಾವಿಧಾನಂ ಚ ಧ್ಯಾನಂ ಶ್ರೋತುಂ ಮುನೀಶ್ವರ ॥೪೪॥

ಸಂಪೂಜ್ಯ ವಹ್ನಿಸ್ತುಷ್ಟಾವ ಯೇನ ತದ್ವದ ಮೇ ಪ್ರಭೋ ।

॥ ಶ್ರೀನಾರಾಯಣ ಉವಾಚ ॥

ಧ್ಯಾನಂ ಚ ಸಾಮವೇದೋಕ್ತಂ ಸ್ತೋತ್ರಂ ಪೂಜಾವಿಧಾನಕಂ॥೪೫॥

ವದಾಮಿ ಶ್ರೂಯತಾಂ ಬ್ರಹ್ಮನ್ ಸಾವಧಾನೋ ಮುನೀಶ್ವರ ।
ಸರ್ವಯಜ್ಞಾರಂಭಕಾಲೇ ಶಾಲಗ್ರಾಮೇ ಘಟೇಽಥವಾ ॥೪೬॥
ಸ್ವಾಹಾಂ ಸಂಪೂಜ್ಯ ಯತ್ನೇನ ಯಜ್ಞಂ ಕುರ್ಯಾತ್ಫಲಾಪ್ತಯೇ ।

---

ಸ್ವಾಹಾಂತವಾದ ಮಂತ್ರದಿಂದ ಬ್ರಾಹ್ಮಣರೆಲ್ಲರೂ, ಸಂತೋಷವನ್ನು ಹೊಂದಿದರು. ದೇವತೆಗಳು ತಮ್ಮ ತಮ್ಮ ಹವಿರ್ಭಾಗಗಳನ್ನು ಹೊಂದಿದರು. ಸಮಸ್ತ ಕರ್ಮಗಳೂ ಇದರಿಂದ ಫಲದಾಯಕಗಳಾದುವು. ॥೪೨॥

ಎಲೈ ನಾರದನೇ, ಸುಖವನ್ನೂ, ಮೋಕ್ಷಫಲವನ್ನೂ ಕೊಡುವ, ಸಾರವಾದ, ಶ್ರೇಷ್ಠವಾದ, ಸ್ವಾಹೋಪಾಖ್ಯಾನವನ್ನು ಹೇಳಿದೆನು. ಇನ್ನೇನನ್ನು ಕೇಳಬೇಕೆಂದು ಬಯಸುವೆ? ಎಂದು ನಾರಾಯಣಮುನಿಯು ಹೇಳಿದನು. ॥೪೩॥

ನಾರದನು ಹೇಳಿದನು—ಎಲೈ ಮುನಿಶ್ರೇಷ್ಠನೇ, ಅಗ್ನಿಯು ಯಾವ ಮಂತ್ರದಿಂದ ಸ್ವಾಹಾದೇವಿಯನ್ನು ಧ್ಯಾನಮಾಡಿ ಪೂಜಿಸಿದನೋ ಅದನ್ನು ನನಗೆ ಹೇಳು. ॥೪೪॥

ನಾರಾಯಣನು ಹೇಳಿದನು— ಬ್ರಹ್ಮಮಾನಸಪುತ್ರನಾದ ಮುನಿಯೇ, ಸಾಮವೇದೋಕ್ತವಾದ ಧ್ಯಾನವನ್ನೂ ಸ್ತೋತ್ರ ಮತ್ತು ಪೂಜಾವಿಧಾನಗಳನ್ನೂ ಹೇಳುತ್ತೇನೆ. ಗಮನವಿಟ್ಟು ಕೇಳು. ॥೪೫॥

ಸಮಸ್ತ ಯಜ್ಞಗಳನ್ನು ಪ್ರಾರಂಭಿಸುವ ಕಾಲದಲ್ಲಿ ಸಾಲಗ್ರಾಮದಲ್ಲಿಯಾಗಲಿ

ಸ್ವಾಹಾಂ ಮಂತ್ರಾಂಗಯುಕ್ತಾಂ ಚ ಮಂತ್ರಸಿದ್ಧಿಸ್ವರೂಪಿಣೀಂ ॥೪೭॥

ಸಿದ್ಧಾಂ ಚ ಸಿದ್ಧಿದಾಂ ನೃಣಾಂ ಕರ್ಮಣಾಂ ಫಲದಾಂ ಶುಭಾಂ ।
ಇತಿ ಧ್ಯಾತ್ವಾ ಚ ಮೂಲೇನ ದತ್ವಾ ಪಾದ್ಯಾದಿಕಂ ನರಃ ॥೪೮॥

ಸರ್ವಸಿದ್ಧಿಂ ಲಭೇತ್ಸ್ತುತ್ವಾ ಮೂಲಮಂತ್ರಂ ಮುನೇ ಶೃಣು ।
ಓಂ ಹ್ರೀಂ ಶ್ರೀಂ ವಹ್ನಿಜಾಯಾಯೈ ದೇವ್ಯೈ ಸ್ವಾಹೇತ್ಯನೇನ ಚ ॥೪೯॥

ಯಃ ಪೂಜಯೇಚ್ಚ ತಾಂ ಭಕ್ತ್ಯಾ ಸರ್ವೇಷ್ಟಂ ಸಂಭವೇದ್ಧ್ರುವಂ ।

॥ ವಹ್ನಿರುವಾಚ ॥

ಸ್ವಾಹಾ ವಹ್ನಿಪ್ರಿಯಾ ವಹ್ನಿಜಾಯಾ ಸಂತೋಷಕಾರಿಣೀ ॥೫೦॥

ಶಕ್ತಿಃ ಕ್ರಿಯಾ ಕಾಲದಾತ್ರೀ ಪರಿಪಾಕಕರೀ ಧ್ರುವಾ ।
ಗತಿಃ ಸದಾ ನರಾಣಾಂ ಚ ದಾಹಿಕಾ ದಹನಕ್ಷಮಾ ॥೫೧॥

---

ಕಲಶದಲ್ಲಿಯಾಗಲೀ, ಸ್ವಾಹಾದೇವಿಯನ್ನು ಪ್ರಯತ್ನಪೂರ್ವಕವಾಗಿ ಪೂಜಿಸಿ ಆಮೇಲೆ ಯಜ್ಞವನ್ನು ಮಾಡಬೇಕು. ಇದರಿಂದ ಫಲಪ್ರಾಪ್ತಿಯಾಗುವುದು. ॥೪೬॥

ಮಂತ್ರದ ಕೊನೆಯಲ್ಲಿ ಸೇರಿ ಮಂತ್ರಸಿದ್ಧಿಯನ್ನುಂಟುಮಾಡತಕ್ಕ, ಮನುಷ್ಯರಿಗೆ ಕರ್ಮಫಲವನ್ನು ಕೊಡುವ, ಮಂಗಳಕರಳಾದ, ಸಕಲ ಇಷ್ಟಾರ್ಥಗಳನ್ನೂ ಕೊಡುವ ಸ್ವಾಹಾದೇವಿಯನ್ನು ಧ್ಯಾನಿಸುವೆನು ಎಂಬ ಈ ಮಂತ್ರದಿಂದ ಧ್ಯಾನ ಮಾಡಿ, ಮೂಲಮಂತ್ರಗಳಿಂದ ಪಾದ್ಯಾದಿಗಳನ್ನು ಸಮರ್ಪಿಸಿ ಸ್ತೋತ್ರಮಾಡಿ ಮನುಷ್ಯನು ತನ್ನ ಸಕಲ ಇಷ್ಟಾರ್ಥಗಳನ್ನೂ ಪಡೆಯುವನು. ಎಲೈ ನಾರದನೇ, ಮೂಲಮಂತ್ರವನ್ನು ಹೇಳುವೆನು. ॥೪೭-೪೮॥

" ಓಂ, ಹ್ರೀಂ, ಶ್ರೀಂ, ವಹ್ನಿಜಾಯಾಯೈ ದೇವ್ಯೈ ಸ್ವಾಹಾ " ಎಂಬುದೇ ಮೂಲಮಂತ್ರ. ಈ ಮಂತ್ರದಿಂದ ಆ ದೇವಿಯನ್ನು ಯಾರು ಪೂಜಿಸುವರೋ ಅವರು ಸಕಲವಾದ ಇಷ್ಟಾರ್ಥಗಳನ್ನೂ ಪಡೆಯುವರು. ॥೪೯॥

ವಹ್ನಿಯು ಹೇಳಿದನು—ಸ್ವಾಹಾ, ವಹ್ನಿಪ್ರಿಯಾ, ವಹ್ನಿಜಾಯಾ, ಸಂತೋಷಕಾರಿಣೀ, ಶಕ್ತಿಃ, ಕ್ರಿಯಾ, ಕಾಲದಾತ್ರೀ, ಪರಿಪಾಕಕರೀ, ಧ್ರುವಾ, ಸದಾ ನರಾಣಾಂಗತಿಃ, ದಾಹಿಕಾ, ದಹನಕ್ಷಮಾ, ಸಂಸಾರರೂಪಾ, ಘೋರಸಂಸಾರತಾರಿಣೀ, ದೇವಜೀವನರೂಪಾ, ದೇವಪೋಷಣಕಾರಿಣೀ, ಇದು ನಾಮರೂಪವಾದ ಸ್ವಾಹಾ

ಸಂಸಾರಸಾರರೂಪಾ ಚ ಘೋರಸಂಸಾರತಾರಿಣೀ ।
ದೇವೀ ಜೀವನರೂಪಾ ಚ ದೇವಪೋಷಣಕಾರಿಣೀ ॥೫೨॥

ಷೋಡಶೈತಾನಿ ನಾಮಾನಿ ಯಃ ಪಠೇದ್ಭಕ್ತಿಸಂಯುತಃ ।
ಸರ್ವಸಿದ್ಧಿರ್ಭವೇತ್ತಸ್ಯ ಇಹಲೋಕೇ ಪರತ್ರ ಚ ॥೫೩॥

ನಾಂಗಹೀನಂ ಭವೇತ್ತಸ್ಯ ಸರ್ವಂ ಕರ್ಮ ಸುಶೋಭನಂ ।
ಅಪುತ್ರೋ ಲಭತೇ ಪುತ್ರಂ ಭಾರ್ಯಾಹೀನೋ ಲಭೇತ್ಪ್ರಿಯಾಂ ॥೫೪॥
ರಂಭೋಪಮಾಂ ಸ್ವಕಾಂತಾಂ ಚ ಸಂಪ್ರಾಪ್ಯ ಸುಖಮಾಪ್ನುಯಾತ್ ।

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ನವಮಸ್ಕಂಧೇ
ತ್ರಿಚತ್ವಾರಿಂಶೋಽಧ್ಯಾಯಃ

---

ದೇವಿಯ ಸ್ತೋತ್ರವು. ಈ ಪದಗಳಿಗೆ ಅರ್ಥವಿದ್ದರೂ, ಪದೋಚ್ಚಾರಣೆಯಿಂದ ಪೂಜಾದಿಗಳಲ್ಲಿ ಉಪಯೋಗಿಸುವುದರಿಂದಲೇ ಫಲದಾಯಕಗಳಾಗಿರುವುವು. ||೫೦-೫೧-೫೨||

ಈ ಹದಿನಾರು ನಾಮಗಳನ್ನು ಯಾರು ಭಕ್ತಿಯಿಂದ ಹೇಳುವರೋ ಅವರಿಗೆ ಇಹಪರಗಳಲ್ಲಿ ಸಕಲ ಇಷ್ಟಾರ್ಥಗಳೂ, ಲಭಿಸುವುವು. ಅವರು ಮಾಡಿದ ಕರ್ಮಗಳೆಲ್ಲವೂ, ಅಂಗಹೀನವಾಗದೆ ಮಂಗಳಕರವಾಗುವುವು. ಪುತ್ರರಿಲ್ಲದವರು ಪುತ್ರರನ್ನು ಪಡೆಯುವರು. ಹೆಂಡಿತಿಯಿಲ್ಲದವನು ರಂಭೆಗೆ ಸಮಾನಳಾದ ಪತ್ನಿಯನ್ನು ಹೊಂದಿ ಸುಖವನ್ನು ಪಡೆಯುವನು. |೫೩-೫೪||

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಒಂಬತ್ತನೆಯ ಸ್ಕಂಧದಲ್ಲಿ
ನಾಲವತ್ತುಮೂರನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ನವಮಸ್ಕಂಧೇ

### || ಚತುಶ್ಚತ್ವಾರಿಂಶೋಽಧ್ಯಾಯಃ ||

### ನಲವತ್ತನಾಲ್ಕನೆಯ ಅಧ್ಯಾಯವು

|| ಶ್ರೀನಾರಾಯಣ ಉವಾಚ ||

**ನಾರದ ಶೃಣು ವಕ್ಷ್ಯಾಮಿ ಸ್ವಧೋಪಾಖ್ಯಾನಮುತ್ತಮಂ ।**
**ಪಿತೄಣಾಂ ಚ ತೃಪ್ತಿಕರಂ ಶ್ರಾದ್ಧಾನ್ನಫಲವರ್ಧನಂ ॥೧॥**

**ಸೃಷ್ಟೇರಾದೌ ಪಿತೃಗಣಾನ್ಸಸರ್ಜ ಜಗತಾಂ ವಿಧಿಃ ।**
**ಚತುರಶ್ಚ ಮೂರ್ತಿಮತಸ್ತ್ರೀಂಶ್ಚ ತೇಜಸ್ಸ್ವರೂಪಿಣಃ ॥೨॥**

**ದೃಷ್ಟ್ವಾ ಸಪ್ತ ಪಿತೃಗಣಾನ್ ಸುಖರೂಪಾನ್ ಮನೋಹರಾನ್ ।**
**ಆಹಾರಂ ಸಸೃಜೇ ತೇಷಾಂ ಶ್ರಾದ್ಧಂ ತರ್ಪಣಪೂರ್ವಕಂ ॥೩॥**

---

ನಾರಾಯಣನು ಹೇಳಿದನು— ನಾರದನೇ ಕೇಳು. ಶ್ರಾದ್ಧದಲ್ಲಿ ಮಾಡಿದ ಅನ್ನದಾನದ ಫಲವನ್ನು ಹೆಚ್ಚಿಸುವ, ಪಿತೃಗಳಿಗೆ ತೃಪ್ತಿಯನ್ನುಂಟುಮಾಡುವ, ಶ್ರೇಷ್ಠವಾದ ಸ್ವಧಾದೇವಿಯ ಉಪಾಖ್ಯಾನವನ್ನು ಹೇಳುವೆನು. ||೧||

ಪ್ರಪಂಚವನ್ನು ಸೃಷ್ಟಿಮಾಡಿದ ಬ್ರಹ್ಮನು ಸೃಷ್ಟಿಯ ಆದಿಯಲ್ಲಿ ತೇಜೋರೂಪರಾಗಿ ಆಕಾರದಿಂದ ಕೂಡಿದ ಏಳು ಪಿತೃಗಣಗಳನ್ನು ಸೃಷ್ಟಿಸಿದನು. ||೨||

ಕವ್ಯವಾಹ, ಸೋಮ, ಯಮ, ಅರ್ಯಮ, ಅಗ್ನಿಷ್ವಾತ್ತ, ಬರ್ಹಿಷದ, ಸೋಮಪ, ಎಂಬ ಸುಖರೂಪರೂ, ಸುಂದರರೂ ಆದ ಏಳು ಪಿತೃಗಣಗಳನ್ನು ನೋಡಿ, ಬ್ರಹ್ಮನು ಅವರಿಗೆ ತರ್ಪಣಪೂರ್ವಕವಾಗಿ ಕೊಡುವ ಶ್ರಾದ್ಧಾನ್ನವನ್ನೇ ಆಹಾರವನ್ನಾಗಿ ಸೃಷ್ಟಿಸಿದನು. ||೩||

ಸ್ನಾನಂ ತರ್ಪಣಪರ್ಯಂತಂ ಶ್ರಾದ್ಧಂ ತು ದೇವಪೂಜನಂ ।
ಆಹ್ನಿಕಂ ಚ ತ್ರಿಸಂಧ್ಯಾಂತಂ ವಿಪ್ರಾಣಾಂ ಚ ಶ್ರುತೌ ಶ್ರುತಂ ॥೪॥

ನಿತ್ಯಂ ನ ಕುರ್ಯಾದ್ಯೋ ವಿಪ್ರಸ್ತ್ರಿಸಂಧ್ಯಂ ಶ್ರಾದ್ಧತರ್ಪಣಂ ।
ಬಲಿಂ ವೇದಧ್ವನಿಂ ಸೋಽಪಿ ವಿಷಹೀನೋ ಯಥೋರಗಃ ॥೫॥

ದೇವೀಸೇವಾವಿಹೀನಶ್ಚ ಶ್ರೀಹರೇರನಿವೇದ್ಯ ಭುಕ್ ।
ಭಸ್ಮಾಂತಂ ಸೂತಕಂ ತಸ್ಯ ನ ಕರ್ಮಾರ್ಹಶ್ಚ ನಾರದ ॥೬॥

ಬ್ರಹ್ಮಾ ಶ್ರಾದ್ಧಾದಿಕಂ ಸೃಷ್ಟ್ವಾ ಜಗಾಮ ಪಿತೃಹೇತವೇ ।
ನ ಪ್ರಾಪ್ನುವಂತಿ ಪಿತರೋ ದದತಿ ಬ್ರಾಹ್ಮಣಾದಯಃ ॥೭॥

ಸರ್ವೇ ಚ ಜಗ್ಮುಃ ಕ್ಷುಧಿತಾಃ ಖಿನ್ನಾಸ್ತು ಬ್ರಹ್ಮಣಃ ಸಭಾಂ ।
ಸರ್ವಂ ನಿವೇದನಂ ಚಕ್ರುಃ ತಮೇವ ಜಗತಾಂ ವಿಧಿಂ ॥೮॥

---

ಸ್ನಾನ, ತರ್ಪಣಪರ್ಯಂತವಾದ ಶ್ರಾದ್ಧ, ಪಂಚಾಯತನಪೂಜೆ, ತ್ರಿಕಾಲಸಂಧ್ಯೆ, ಇವಿಷ್ಟು ಕರ್ಮಗಳು ಬ್ರಾಹ್ಮಣರ ಆಹ್ನಿಕವೆಂದು ವೇದದಲ್ಲಿ ಹೇಳಿರುವುದು. ॥೪॥

ತ್ರಿಕಾಲಸಂಧ್ಯೆ, ಶ್ರಾದ್ಧತರ್ಪಣ ಬಲಿಹರಣವೆಂಬ ನಿತ್ಯಕರ್ಮಗಳನ್ನು ಯಾವ ಬ್ರಾಹ್ಮಣನು ಮಾಡುವುದಿಲ್ಲವೋ ಅವನು ವಿಷವಿಲ್ಲದ ಸರ್ಪದಂತೆ ತಿರಸ್ಕಾರ ಪಾತ್ರನಾಗುವನು. ॥೫॥

ದೇವಿಯ ಪೂಜೆಯನ್ನು ಮಾಡದವನೂ, ಹರಿಯ ನಿವೇದನವನ್ನು ಭೋಜನ ಮಾಡದವನೂ, ಮರಣಪರ್ಯಂತವಾಗಿ ಅಶುಚಿಯಾಗಿರುವನು. ನಾರದನೇ, ಅವನು ಯಾವ ವೇದೋಕ್ತವಾದ ಕರ್ಮಗಳಿಗೂ ಯೋಗ್ಯನಲ್ಲ. ॥೬॥

ಬ್ರಹ್ಮನು ಪಿತೃಗಳಿಗೋಸ್ಕರವಾಗಿ, ಶ್ರಾದ್ಧಾದಿಗಳನ್ನು ಸೃಷ್ಟಿಸಿ, ಹೊರಟು ಹೋದನು. ಬ್ರಾಹ್ಮಣರು ಶ್ರಾದ್ಧಾದಿಗಳಲ್ಲಿ ಅನ್ನದಾನಾದಿಗಳನ್ನು ಮಾಡಿದರೂ, ಅವನ್ನು ಪಿತೃದೇವತೆಗಳು ಪಡೆಯುತ್ತಿರಲಿಲ್ಲ. ॥೭॥

ಆ ಪಿತೃದೇವತೆಗಳೆಲ್ಲರೂ, ಹಸಿವಿನಿಂದ ಕೂಡಿ ದುಃಖಪಡುತ್ತ ಬ್ರಹ್ಮನ ಸಭೆಗೆ ಹೋದರು. ಆ ಸೃಷ್ಟಿಕರ್ತನಿಗೆ ತಮ್ಮ ದುಃಖವನ್ನೆಲ್ಲವನ್ನೂ ಹೇಳಿದರು. ॥೮॥

ಬ್ರಹ್ಮಾ ಚ ಮಾನಸೀಂ ಕನ್ಯಾಂ ಸಸೃಜೇ ಚ ಮನೋಹರಾಂ ।
ರೂಪಯೌವನಸಂಪನ್ನಾಂ ಶತಚಂದ್ರನಿಭಾನನಾಂ ॥೯॥

ವಿದ್ಯಾವತೀಂ ರೂಪವತೀಮತಿರೂಪವತೀಂ ಸತೀಂ ।
ಶ್ವೇತಚಂಪಕವರ್ಣಾಭಾಂ ರತ್ನಭೂಷಣಭೂಷಿತಾಂ ॥೧೦॥

ವಿಶುದ್ಧಾಂ ಪ್ರಕೃತೇರಂಶಾಂ ಸಸ್ಮಿತಾಂ ವರದಾಂ ಶುಭಾಂ ।
ಸ್ವಧಾಽಭಿಧಾಂ ಚ ಸುದತೀಂ ಲಕ್ಷ್ಮೀಲಕ್ಷಣಸಂಯುತಾಂ ॥೧೧॥

ಶತಪದ್ಮ ಪದನ್ಯಸ್ತ ಪಾದಪದ್ಮಂ ಚ ಬಿಭ್ರತೀಂ ।
ಪತ್ನೀಂ ಪಿತೄಣಾಂ ಪದ್ಮಾಸ್ಯಾಂ ಪದ್ಮಜಾಂ ಪದ್ಮಲೋಚನಾಂ ॥೧೨॥

ಪಿತೃಭ್ಯಶ್ಚ ದದೌ ಬ್ರಹ್ಮಾ ತುಷ್ಟೇಭ್ಯಸ್ತುಷ್ಟಿರೂಪಿಣೀಂ ।
ಬ್ರಾಹ್ಮಣಾನಾಂ ಚೋಪದೇಶಂ ಚಕಾರ ಗೋಪನೀಯಕಂ ॥೧೩॥

---

ಬ್ರಹ್ಮನು ತನ್ನ ಮನಸ್ಸಿನಿಂದಲೇ ಮನೋಹರಳೂ, ಸುಂದರವಾದ ರೂಪ ಮತ್ತು ಪ್ರಾಯಗಳಿಂದ ಕೂಡಿದವಳೂ, ನೂರುಚಂದ್ರರ ಸಮಾನವಾದ ಕಾಂತಿಯಿಂದ ಕೂಡಿದ ಮುಖವುಳ್ಳವಳೂ, ಆದ ಕನ್ಯೆಯನ್ನು ಸೃಷ್ಟಿಮಾಡಿದನು. ॥೯॥

ಆ ಕನ್ಯೆಯು ಪ್ರಕೃತಿಯ ಅಂಶದವಳು. ಲಕ್ಷ್ಮಿಯ ಲಕ್ಷಣಗಳಿಂದ ಕೂಡಿದವಳು. ಸ್ವಧಾದೇವೀ ಎಂದು ಹೆಸರನ್ನು ಹೊಂದಿ ವಿದ್ಯಾವತಿಯಾಗಿಯೂ, ಗುಣವತಿಯಾಗಿಯೂ, ಸುಂದರಿಯಾಗಿ ಬಿಳಿಯ ಸಂಪಿಗೆಯ ಬಣ್ಣದಂತೆ ಮೈಬಣ್ಣವುಳ್ಳವಳಾಗಿ, ರತ್ನಾಭರಣಗಳನ್ನು ಧರಿಸಿ, ಮುಗುಳುನಗೆಯಿಂದ ಕೂಡಿ, ಮಂಗಳಕರಳಾಗಿ, ವರವನ್ನು ಕೊಡುವ ಶಕ್ತಿಯುಳ್ಳವಳಾಗಿದ್ದಳು. ॥೧೦-೧೧॥

ನೂರಾರು ಪದ್ಮರೇಖೆಗಳುಳ್ಳ ಕಮಲದಂತಿರುವ ಪಾದವನ್ನು ಹೊಂದಿ, ಕಮಲದಂತಿರುವ ಮುಖ ಮತ್ತು ಕಣ್ಣುಗಳುಳ್ಳವಳಾಗಿ, ಪಿತೃಗಳಿಗೆ ಪತ್ನಿಯಾದ ತೃಪ್ತಿಸ್ವರೂಪಳಾದ ಅವಳನ್ನು ಬ್ರಹ್ಮನೇ ತೃಪ್ತರಾದ ಪಿತೃದೇವತೆಗಳಿಗೆ ಕೊಟ್ಟನು. ॥೧೨॥

ಸ್ವಧಾಂತವಾಗಿ ಮಂತ್ರವನ್ನುಚ್ಚರಿಸಿ ಪಿತೃಗಳಿಗೆ ದಾನಮಾಡಬೇಕೆಂದು ಗುಟ್ಟಾದ ಉಪದೇಶವನ್ನು ಬ್ರಹ್ಮನು ಬ್ರಾಹ್ಮಣರಿಗೆ ಮಾಡಿದನು. ಬ್ರಾಹ್ಮಣರು

**ಸ್ವಧಾಂತಂ ಮಂತ್ರಮುಚ್ಚಾರ್ಯ ಪಿತೃಭ್ಯೋ ದೇಯಮಿತ್ಯಪಿ ।**
**ಕ್ರಮೇಣ ತೇನ ವಿಪ್ರಾಶ್ಚ ಪಿತ್ರೇ ದಾನಂ ದದುಃ ಪುರಾ ॥೧೪॥**

**ಸ್ವಾಹಾ ಶಸ್ತಾ ದೇವದಾನೇ ಪಿತೃದಾನೇ ಸ್ವಧಾಸ್ಮೃತಾ ।**
**ಸರ್ವತ್ರ ದಕ್ಷಿಣಾ ಶಸ್ತಾ ಹತಂ ಯಜ್ಞಮದಕ್ಷಿಣಂ ॥೧೫॥**

**ಪಿತರೋ ದೇವತಾ ವಿಪ್ರಾ ಮುನಯೋ ಮನವಸ್ತಥಾ ।**
**ಪೂಜಾಂ ಚಕ್ರುಃ ಸ್ವಧಾಂ ಶಾಂತಾಂ ತುಷ್ಟುವುಃ ಪರಮಾದರಾತ್ ॥೧೬॥**

**ದೇವಾದಯಶ್ಚ ಸಂತುಷ್ಟಾಃ ಪರಿಪೂರ್ಣ ಮನೋರಥಾಃ ।**
**ವಿಪ್ರಾದಯಶ್ಚ ಪಿತರಃ ಸ್ವಧಾದೇವೀವರೇಣ ಚ ॥೧೭॥**

**ಇತ್ಯೇವಂ ಕಥಿತಂ ಸರ್ವಂ ಸ್ವಧೋಪಾಖ್ಯಾನಮೇವ ಚ ।**
**ಸರ್ವೇಷಾಂ ಚ ತುಷ್ಟಿಕರಂ ಕಿಂ ಭೂಯಃ ಶ್ರೋತುಮಿಚ್ಛಸಿ ॥೧೮॥**

---

ಕ್ರಮವಾಗಿ, ಸ್ವಧಾಂತವಾದ ಮಂತ್ರಗಳಿಂದ ಪಿತೃಗಳಿಗೆ ಶ್ರಾದ್ಧಾದಿಗಳನ್ನು ಮಾಡಿ ದಾನಮಾಡಿದರು. ॥೧೩-೧೪॥

ದೇವತೆಗಳಿಗೆ ಹವಿಸ್ಸನ್ನು ದಾನಮಾಡುವುದರಲ್ಲಿ ಸ್ವಾಹಾಂತವಾದ ಮಂತ್ರಗಳೇ ಪ್ರಶಸ್ತವಾದುವು. ಪಿತೃಗಳಿಗೆ ಕವ್ಯವನ್ನು ದಾನಮಾಡುವುದರಲ್ಲಿ ಸ್ವಾಂಧಾಂತವಾದ ಮಂತ್ರಗಳು ಪ್ರಶಸ್ತವಾದುವುಗಳು. ಎಲ್ಲಾ ಸಂದರ್ಭಗಳಲ್ಲಿಯೂ ದಕ್ಷಿಣಾನಾಮಗ್ರಹಣವು ಪ್ರಶಸ್ತವಾದುದು. ದಕ್ಷಿಣಾಹೀನವಾದ ಯಜ್ಞವು ನಾಶಹೊಂದುವುದು. ॥೧೫॥

ಪಿತೃಗಳೂ, ದೇವತೆಗಳೂ, ಬ್ರಾಹ್ಮಣರೂ, ಮುನಿಗಳೂ, ಮನುಗಳೂ, ಶಾಂತಸ್ವರೂಪಳಾದ ಸ್ವಧಾದೇವಿಯನ್ನು ಪೂಜಿಸಿ ವಿಶೇಷವಾದ ಭಕ್ತಿಯಿಂದ ಸ್ತೋತ್ರಮಾಡಿದರು. ॥೧೬॥

ಸ್ವಧಾದೇವಿಯ ವರದಿಂದ, ದೇವತೆಗಳೂ, ಬ್ರಾಹ್ಮಣರೂ, ಪಿತೃಗಳೂ ಇಷ್ಟಾರ್ಥಗಳನ್ನು ಪಡೆದು ಸಂತೋಷವನ್ನು ಹೊಂದಿದರು. ॥೧೭॥

ಈ ರೀತಿಯಲ್ಲಿ ಸ್ವಧೋಪಾಖ್ಯಾನವನ್ನೆಲ್ಲವನ್ನೂ ಹೇಳಿದೆನು. ಈ ಉಪಾಖ್ಯಾನವು ಎಲ್ಲರಿಗೂ ತೃಪ್ತಿಯನ್ನುಂಟುಮಾಡುವುದು. ಇನ್ನೇನನ್ನು ಕೇಳಬೇಕೆಂದು ಬಯಸುವೆ? ಎಂದು ನಾರಾಯಣಮುನಿಯು ಹೇಳಿದನು. ॥೧೮॥

|| ನಾರದ ಉವಾಚ ||

ಸ್ವಧಾಪೂಜಾವಿಧಾನಂ ಚ ಧ್ಯಾನಂ ಸ್ತೋತ್ರಂ ಮಹಾಮುನೇ ।
ಶ್ರೋತುಮಿಚ್ಛಾಮಿ ಯತ್ನೇನ ವದ ವೇದವಿದಾಂ ವರ ||೧೯||

|| ನಾರಾಯಣ ಉವಾಚ ||

ಧ್ಯಾನಂ ಚ ಸ್ತವನಂ ಬ್ರಹ್ಮನ್ವೇದೋಕ್ತಂ ಸರ್ವಮಂಗಲಂ ।
ಸರ್ವಂ ಜಾನಾಸಿ ಚ ಕಥಂ ಜ್ಞಾತುಮಿಚ್ಛಸಿ ವೃದ್ಧಯೇ ||೨೦||

ಶರತ್ಕೃಷ್ಣತ್ರಯೋದಶ್ಯಾಂ ಮಘಾಯಾಂ ಶ್ರಾದ್ಧವಾಸರೇ ।
ಸ್ವಧಾಂ ಸಂಪೂಜ್ಯ ಯತ್ನೇನ ತತಃ ಶ್ರಾದ್ಧಂ ಸಮಾಚರೇತ್ ||೨೧||

ಸ್ವಧಾಂ ನಾಭ್ಯರ್ಚ್ಯ ಯೋ ವಿಪ್ರಃ ಶ್ರಾದ್ಧಂ ಕುರ್ಯಾದಹಂ ಮತಿಃ ।
ನ ಭವೇತ್ಫಲಭಾಕ್ಸತ್ಯಂ ಶ್ರಾದ್ಧಸ್ಯ ತರ್ಪಣಸ್ಯ ಚ ||೨೨||

---

ನಾರದನು, ಎಲೈ ಮಹಾಮುನಿಯೇ, ಸ್ವಧಾದೇವಿಯ ಪೂಜಾವಿಧಾನವನ್ನೂ, ಧ್ಯಾನ ಮತ್ತು ಸ್ತೋತ್ರಗಳನ್ನು ಕೇಳಬೇಕೆಂದು ಬಯಸುವೆನು. ವೇದವನ್ನು ತಿಳಿದವರಲ್ಲಿ ಶ್ರೇಷ್ಠನಾದ ನೀನು ಹೇಳಬೇಕು, ಎಂದನು. ||೧೯||

ನಾರಾಯಣನು ಹೇಳಿದನು— ಎಲೈ ಬ್ರಹ್ಮಸ್ವರೂಪನಾದ ನಾರದನೇ, ಸ್ವಧಾದೇವಿಯ ಧ್ಯಾನವೂ, ಸ್ತೋತ್ರವೂ ವೇದೋಕ್ತವಾಗಿ, ಸಮಸ್ತ ಮಂಗಳಗಳನ್ನೂ ಕೊಡತಕ್ಕುದಾಗಿರುವುದು. ಎಲ್ಲವನ್ನೂ ನೀನು ತಿಳಿದೇ ಇರುವೆ. ತಿಳಿಯಬೇಕೆಂದು ನೀನು ಅಪೇಕ್ಷೆಪಡುವುದು ಲೋಕದಲ್ಲಿ ಪ್ರಚಾರಪಡಿಸುವುದಕ್ಕೆಂದು ನಾನು ತಿಳಿದಿರುವೆನು. ||೨೦||

ಶರದೃತುವಿನ ಕೃಷ್ಣಪಕ್ಷದ ತ್ರಯೋದಶೀ ದಿನದಲ್ಲಿಯೂ, ಮಘಾನಕ್ಷತ್ರ ದಿನದಲ್ಲಿಯೂ, ಶ್ರಾದ್ಧದಿನಗಳಲ್ಲಿಯೂ, ಪ್ರಯತ್ನಪೂರ್ವಕವಾಗಿ ಸ್ವಧಾದೇವಿಯನ್ನು ಪೂಜಿಸಿ ಆಮೇಲೆ ಶ್ರಾದ್ಧವನ್ನು ಮಾಡಬೇಕು. ||೨೧||

ಯಾವ ಬ್ರಾಹ್ಮಣನು ಸ್ವಧಾದೇವಿಯನ್ನು ಪೂಜಿಸದೇ ಅಹಂಕಾರದಿಂದ ಶ್ರಾದ್ಧವನ್ನು ಮಾಡುವನೋ, ಅವನು ಮಾಡಿದ ಶ್ರಾದ್ಧಕ್ಕೂ ತರ್ಪಣ ಮುಂತಾದ ಕರ್ಮಕ್ಕೂ, ಫಲವನ್ನು ಹೊಂದುವುದಿಲ್ಲ. ||೨೨||

ಬ್ರಹ್ಮಣೋ ಮಾನಸೀಂ ಕನ್ಯಾಂ ಶಶ್ವತ್ಸು ಸ್ಥಿರಯೌವನಾಂ ।
ಪೂಜ್ಯಾಂ ವೈ ಪಿತೃದೇವಾನಾಂ ಶ್ರಾದ್ಧಾನಾಂ ಫಲದಾಂ ಭಜೇ ॥೨೩॥

ಇತಿ ಧ್ಯಾತ್ವಾ ಶಿಲಾಯಾಂ ವಾ ಹ್ಯಥವಾ ಮಂಗಲೇ ಘಟೇ ।
ದದ್ಯಾತ್ಪಾದ್ಯಾದಿಕಂ ತಸ್ಯೈ ಮೂಲೇನೇತಿ ಶ್ರುತೌ ಶ್ರುತಂ ॥೨೪॥

ಓಂ ಹ್ರೀಂ ಶ್ರೀಂ ಕ್ಲೀಂ ಸ್ವಧಾದೇವ್ಯೈ ಸ್ವಾಹೇತಿ ಚ ಮಹಾಮುನೇ ।
ಸಮುಚ್ಚಾರ್ಯ ಚ ಸಂಪೂಜ್ಯ ಸ್ತುತ್ವಾ ತಾಂ ಪ್ರಣಮೇದ್ದ್ವಿಜಃ ॥೨೫॥

ಸ್ತೋತ್ರಂ ಶೃಣು ಮುನಿಶ್ರೇಷ್ಠ ಬ್ರಹ್ಮಪುತ್ರ ವಿಶಾರದ ।
ಸರ್ವವಾಂಛಾ ಪ್ರದಂ ನೃಣಾಂ ಬ್ರಹ್ಮಣಾ ಯತ್ಕೃತಂ ಪುರಾ ॥೨೬॥

|| ನಾರಾಯಣ ಉವಾಚ ||

ಸ್ವಧೋಚ್ಚಾರಣಮಾತ್ರೇಣ ತೀರ್ಥಸ್ನಾಯೀ ಭವೇನ್ನರಃ ।
ಮುಚ್ಯತೇ ಸರ್ವಪಾಪೇಭ್ಯೋ ವಾಜಪೇಯಫಲಂ ಲಭೇತ್ ॥೨೭॥

---

ಬ್ರಹ್ಮನ ಮಾನಸಪುತ್ರಿಯೂ, ಯಾವಾಗಲೂ ಸ್ಥಿರವಾದ ಪ್ರಾಯವುಳ್ಳವಳೂ, ಪಿತೃದೇವತೆಗಳಿಗೆ ಪೂಜ್ಯಳೂ, ಶ್ರಾದ್ಧಗಳಿಗೆ ಫಲಕೊಡತಕ್ಕವಳೂ ಆದ ಸ್ವಧಾದೇವಿ ಯನ್ನು ಪೂಜಿಸುತ್ತೇನೆ. ಎಂಬ ಧ್ಯಾನಮಂತ್ರದಿಂದ ಧ್ಯಾನಿಸಿ ಶಾಲಗ್ರಾಮಶಿಲೆಯ ಲ್ಲಾಗಲೀ, ಮಂಗಲಕರವಾದ ಕಲಶದಲ್ಲಾಗಲೀ ಪೂಜಿಸಿ, ಮೂಲಮಂತ್ರದಿಂದ ಪಾದ್ಯಾದಿಪೂಜೆಗಳನ್ನು ಮಾಡಬೇಕೆಂದು ವೇದದಲ್ಲಿ ಹೇಳಿರುವುದು. ||೨೩-೨೪||

ಬ್ರಾಹ್ಮಣನು, ಓಂ, ಹ್ರೀಂ, ಶ್ರೀಂ, ಕ್ಲೀಂ, ಸ್ವಧಾದೇವ್ಯೈ ಸ್ವಾಹಾ, ಎಂಬ ಹತ್ತು ಅಕ್ಷರದ ಮೂಲಮಂತ್ರದಿಂದ ಪೂಜಿಸಿ ಆ ದೇವಿಗೆ ನಮಸ್ಕಾರಮಾಡಬೇಕು. ||೨೫||

ಬ್ರಹ್ಮನ ಮಾನಸಪುತ್ರನಾದ, ಬುದ್ಧಿವಂತನಾದ, ನಾರದಮುನಿಶ್ರೇಷ್ಠನೇ, ಜನರಿಗೆ ಸಮಸ್ತ ಇಷ್ಟಾರ್ಥಗಳನ್ನೂ ಕೊಡುವ, ಪೂರ್ವದಲ್ಲಿ ಬ್ರಹ್ಮನು ಮಾಡಿದ ಸ್ವಧಾದೇವಿಯ ಸ್ತೋತ್ರವನ್ನು ಹೇಳುತ್ತೇನೆ, ಕೇಳು. ||೨೬||

ನಾರಾಯಣನು ಹೇಳಿದನು—ಸ್ವಧಾ ಎಂಬ ಶಬ್ದವನ್ನು ಹೇಳಿದ ಮಾತ್ರ ದಿಂದಲೇ ಮನುಷ್ಯನಿಗೆ ತೀರ್ಥಸ್ನಾನದ ಫಲವು ಬರುವುದು. ಅವನು ಸಮಸ್ತ ಪಾಪಗಳಿಗಳಿಂದಲೂ ಬಿಡುಗಡೆಯನ್ನು ಹೊಂದಿ ವಾಜಪೇಯವೆಂಬ ಯಜ್ಞವನ್ನು ಮಾಡಿದ ಫಲವನ್ನು ಹೊಂದುವನು. ||೨೭||

ಸ್ವಧಾ ಸ್ವಧಾ ಸ್ವಧೇತ್ಯೇವಂ ಯದಿ ವಾರತ್ರಯಂ ಸ್ಮರೇತ್ ।
ಶ್ರಾದ್ಧಸ್ಯ ಫಲಮಾಪ್ನೋತಿ ಬಲೇಶ್ಚ ತರ್ಪಣಸ್ಯ ಚ ॥೨೮॥

ಶ್ರಾದ್ಧಕಾಲೇ ಸ್ವಧಾಸ್ತೋತ್ರಂ ಯಃ ಶೃಣೋತಿ ಸಮಾಹಿತಃ ।
ಸ ಲಭೇಚ್ಛ್ರಾದ್ಧಸಂಭೂತಂ ಫಲಮೇವ ನ ಸಂಶಯಃ ॥೨೯॥

ಸ್ವಧಾ ಸ್ವಧಾ ಸ್ವಧೇತ್ಯೇವಂ ತ್ರಿಸಂಧ್ಯಂ ಯಃ ಪಠೇನ್ನರಃ ।
ಪ್ರಿಯಾಂ ವಿನೀತಾಂ ಸ ಲಭೇತ್ಸಾಧ್ವೀಂ ಪುತ್ರಗುಣಾನ್ವಿತಾಂ ॥೩೦॥

ಪಿತೃಣಾಂ ಪ್ರಾಣತುಲ್ಯಾ ತ್ವಂ ದ್ವಿಜಜೀವನರೂಪಿಣೀ ।
ಶ್ರಾದ್ಧಾಧಿಷ್ಠಾತೃದೇವೀ ಚ ಶ್ರಾದ್ಧಾದೀನಾಂ ಫಲಪ್ರದಾ ॥೩೧॥

ನಿತ್ಯಾ ತ್ವಂ ಸತ್ಯರೂಪಾಽಸಿ ಪುಣ್ಯರೂಪಾಽಸಿ ಸುವ್ರತೇ ।
ಆವಿರ್ಭಾವತಿರೋಭಾವೌ ಸೃಷ್ಟೌ ಚ ಪ್ರಳಯೇ ತವ ॥೩೨॥

---

ಸ್ವಧಾ ಸ್ವಧಾ ಸ್ವಧಾ ಎಂಬುದಾಗಿ ಮೂರಾವೃತ್ತಿ ಸ್ಮರಣಮಾಡಿದರೇ, ಶ್ರಾದ್ಧ, ಬಲಿಹರಣ, ತರ್ಪಣ ಇವುಗಳನ್ನು ಮಾಡಿದ ಫಲವನ್ನು ಹೊಂದುವನು. ||೨೮||

ಶ್ರಾದ್ಧಕಾಲದಲ್ಲಿ ಸ್ವಧಾದೇವಿಯ ಸ್ತೋತ್ರವನ್ನು ಯಾವನು ಗಮನವಿಟ್ಟು ಕೇಳುವನೋ ಅವನು ಶ್ರಾದ್ಧಮಾಡಿದುದರಿಂದುಂಟಾದ, ಫಲವನ್ನೇ ಹೊಂದುವುದ ರಲ್ಲಿ ಸಂದೇಹವಿಲ್ಲ. ||೨೯||

ಸ್ವಧಾ ಸ್ವಧಾ ಸ್ವಧಾ, ಎಂಬದಾಗಿ ಮೂರು ಸಂಧ್ಯಾಕಾಲಗಳಲ್ಲಿಯೂ, ಯಾವ ಮನುಷ್ಯನು ಹೇಳುವನೋ, ಅವನು ವಿನಯವಂತಳೂ, ಪತಿವ್ರತೆಯೂ, ಗುಣವಂತಳೂ, ಪುತ್ರವತಿಯೂ ಆದ ಪತ್ನಿಯನ್ನು ಪಡೆಯುವನು. ||೩೦||

ಸ್ವಧಾದೇವಿಯೇ, ನೀನು ಪಿತೃದೇವತೆಗಳಿಗೆ ಪ್ರಾಣಸಮಾನಳಾಗಿರುವೆ. ಬ್ರಾಹ್ಮಣರಿಗೆ ಜೀವಸ್ವರೂಪಳು. ಶ್ರಾದ್ಧಗಳಿಗೆ ಆಶ್ರಯದೇವತೆಯಾಗಿ ಶ್ರಾದ್ಧಗಳ ಫಲಗಳನ್ನು ಕೊಡತಕ್ಕವಳಾಗಿರುವೆ. ||೩೧||

ಉತ್ತಮವಾದ ವ್ರತಫಲಗಳುಳ್ಳ ಸ್ವಧಾದೇವಿಯೇ, ನೀನು, ಸತ್ಯಸ್ವರೂಪ ಳಾಗಿ, ನಾಶರಹಿತಳಾಗಿರುವೆ. ಸೃಷ್ಟಿಯಲ್ಲಿ ಪ್ರಕಾಶಕ್ಕೆ ಬಂದು, ಪ್ರಳಯದಲ್ಲಿ ಮರೆ ಯಾಗಿರುವೆ. ||೩೨||

ಓಂ ಸ್ವಸ್ತಿಶ್ಚ ನಮಃ ಸ್ವಾಹಾ ಸ್ವಧಾ ತ್ವಂ ದಕ್ಷಿಣಾ ತಥಾ ।
ನಿರೂಪಿತಾಶ್ಚತುರ್ವೇದೈಃ ಪ್ರಶಸ್ತಾಃ ಕರ್ಮಿಣಾಂ ಪುನಃ ॥೩೩॥

ಕರ್ಮಪೂರ್ತ್ಯರ್ಥಮೇವೈತಾ ಈಶ್ವರೇಣ ವಿನಿರ್ಮಿತಾಃ ।
ಇತ್ಯೇವಮುಕ್ತ್ವಾ ಸ ಬ್ರಹ್ಮಾ ಬ್ರಹ್ಮಲೋಕೇ ಸ್ವಸಂಸದಿ ॥೩೪॥

ತಸ್ಥೌ ಚ ಸಹಸಾ ಸದ್ಯಃ ಸ್ವಧಾ ಸಾಽವಿರ್ಬಭೂವ ಹ ।
ತದಾ ಪಿತೃಭ್ಯಃ ಪ್ರದದೌ ತಾಮೇವ ಕಮಲಾನನಾಂ ।
ತಾಂ ಸಂಪ್ರಾಪ್ಯ ಯಯುಸ್ತೇ ಚ ಪಿತರಶ್ಚ ಪ್ರಹರ್ಷಿತಾಃ ॥೩೫॥

ಸ್ವಧಾಸ್ತೋತ್ರಮಿದಂ ಪುಣ್ಯಂ ಯಃ ಶೃಣೋತಿ ಸಮಾಹಿತಃ ।
ಸ ಸ್ನಾತಃ ಸರ್ವತೀರ್ಥೇಷು ವಾಂಛಿತಂ ಫಲಮಾಪ್ನುಯಾತ್॥೩೬॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ನವಮಸ್ಕಂಧೇ
ಚತುಶ್ಚತ್ವಾರಿಂಶೋಽಧ್ಯಾಯಃ

---

ಸ್ವಧಾದೇವಿಯೇ, ನೀನೂ, ಸ್ವಾಹಾದೇವಿಯೂ, ಸ್ವಧಾದೇವಿಯೂ, ದಕ್ಷಿಣಾ ದೇವಿಯೂ, ನಾಲ್ಕು ವೇದಗಳಲ್ಲಿಯೂ ಪ್ರಸಿದ್ಧಿಹೊಂದಿರುವಿರಿ. ಕರ್ಮಾಸಕ್ತರು ನಿಮ್ಮನ್ನು ಹೊಗಳುವರು. ನಿಮಗೆ ಮಂಗಳವಾಗಲಿ. ನಾನು ನಿಮ್ಮೆಲ್ಲರಿಗೂ ನಮಸ್ಕಾರಮಾಡುವೆನು. ॥೩೩॥

ಕರ್ಮಗಳು ಸಂಪೂರ್ಣವಾಗಿ ಫಲಪ್ರದವಾಗುವುದಕ್ಕಾಗಿ ಪರಬ್ರಹ್ಮನೇ ಈ ದೇವಿಯನ್ನು ನಿರ್ಮಿಸಿದನು. ಹೀಗೆಂದು ಹೇಳಿ ಬ್ರಹ್ಮನು ತನ್ನ ಸಭೆಯಲ್ಲಿ ನಿರೀಕ್ಷಿಸುತ್ತಿದ್ದನು. ಆಕ್ಷಣದಲ್ಲಿಯೇ ಸ್ವಧಾದೇವಿಯು ಅಲ್ಲಿ ಆವಿರ್ಭವಿಸಿದಳು. ॥೩೪॥

ಆಗ ಬ್ರಹ್ಮನು ಕಮಲಮುಖಿಯಾದ ಆ ಸ್ವಧಾದೇವಿಯನ್ನು ಪಿತೃದೇವತೆಗಳಿಗೆ ಕೊಟ್ಟನು. ಆ ಪಿತೃದೇವತೆಗಳು ಆ ದೇವಿಯನ್ನು ಪಡೆದು ಸಂತೋಷದಿಂದ ಹೊರಟುಹೋದರು. ॥೩೫॥

ಯಾವ ಮನುಷ್ಯನು ಏಕಾಗ್ರಚಿತ್ತನಾಗಿ, ಪುಣ್ಯಕರವಾದ ಈ ಸ್ವಧಾದೇವಿಯ ಸ್ತೋತ್ರವನ್ನು ಕೇಳುವನೋ ಅವನು ಸಮಸ್ತ ತೀರ್ಥಗಳಲ್ಲಿಯೂ, ಸ್ನಾನಮಾಡಿದ ಫಲಗಳನ್ನು ಹೊಂದಿ ಇಷ್ಟಾರ್ಥಗಳನ್ನು ಪಡೆಯುವನು. ॥೩೬॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಒಂಬತ್ತನೆಯ ಸ್ಕಂಧದಲ್ಲಿ
ನಲವತ್ತುನಾಲ್ಕನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ನವಮಸ್ಕಂಧೇ

### ॥ ಪಂಚಚತ್ವಾರಿಂಶೋಽಧ್ಯಾಯಃ ॥

### ನಲವತ್ತೈದನೆಯ ಅಧ್ಯಾಯವು

॥ ನಾರಾಯಣ ಉವಾಚ ॥

**ಉಕ್ತಂ ಸ್ವಾಹಾ ಸ್ವಧಾಽಽಖ್ಯಾನಂ ಪ್ರಶಸ್ತಂ ಮಧುರಂ ಪರಂ ।**
**ವಕ್ಷ್ಯಾಮಿ ದಕ್ಷಿಣಾಽಽಖ್ಯಾನಂ ಸಾವಧಾನೋ ನಿಶಾಮಯ ॥೧॥**

**ಗೋಪೀ ಸುಶೀಲಾ ಗೋಲೋಕೇ ಪುರಾಽಽಸೀತ್ಪ್ರೇಯಸೀ ಹರೇಃ ।**
**ರಾಧಾ ಪ್ರಧಾನಾ ಸಧ್ರೀಚೀ ಧನ್ಯಾ ಮಾನ್ಯಾ ಮನೋಹರಾ ॥೨॥**

**ಅತೀವ ಸುಂದರೀ ರಾಮಾ ಸುಭಗಾ ಸುದತೀ ಸತೀ ।**
**ವಿದ್ಯಾವತೀ ಗುಣವತೀ ಚಾತಿರೂಪವತೀ ಸತೀ ॥೩॥**

---

ನಾರಾಯಣನು ಹೇಳಿದನು—ನಾರದನೇ, ಪ್ರಸಿದ್ಧವಾದ ಕೇಳುವುದಕ್ಕೆ ಇಂಪಾದ, ಸ್ವಾಹಾ ಮತ್ತು ಸ್ವಧಾದೇವಿಯರ ಉಪಾಖ್ಯಾನವನ್ನು ಹೇಳಿದೆನು. ಇನ್ನು ದಕ್ಷಿಣಾದೇವಿಯ ಕಥೆಯನ್ನು ಹೇಳುವೆನು. ಗಮನವಿಟ್ಟು ಕೇಳು. ॥೧॥

ಪೂರ್ವಕಾಲದಲ್ಲಿ ಗೋಲೋಕದಲ್ಲಿರುವ ಶ್ರೀಕೃಷ್ಣನಿಗೆ ಸುಶೀಲಾ ಎಂಬ ಹೆಸರಿನ ಗೋಪಿಯು ಪ್ರೀತಿಪಾತ್ರಳಾಗಿದ್ದಳು. ಅವಳು ರಾಧಾದೇವಿಗೆ ಸಮಾನಳಾಗಿ ಪುಣ್ಯವಂತಳೂ, ಪೂಜ್ಯಳೂ, ಸುಂದರಿಯೂ, ಮುಖ್ಯಳೂ ಆಗಿದ್ದಳು. ॥೨॥

ಅವಳು ಮಹಾಸುಂದರಿಯೂ, ಮನೋಹರಳೂ, ಸೌಭಾಗ್ಯವತಿಯೂ, ಒಳ್ಳೆಯ ಹಲ್ಲುಗಳುಳ್ಳವಳೂ, ವಿದ್ಯಾವತಿಯೂ, ಗುಣವತಿಯೂ, ಮಹಾರೂಪ

ಕಲಾವತೀ ಕೋಮಲಾಂಗೀ ಕಾಂತಾ ಕಮಲಲೋಚನಾ ।
ಸುಶ್ರೋಣೀ ಸುಸ್ತನೀ ಶ್ಯಾಮಾ ನ್ಯಗ್ರೋಧಪರಿಮಂಡಿತಾ ॥೪॥

ಈಷದ್ಧಾಸ್ಯಪ್ರಸನ್ನಾಸ್ಯಾ ರತ್ನಾಲಂಕಾರಭೂಷಿತಾ ।
ಶ್ವೇತಚಂಪಕವರ್ಣಾಭಾ ಬಿಂಬೋಷ್ಠೀ ಮೃಗಲೋಚನಾ ॥೫॥

ಕಾಮಶಾಸ್ತ್ರೇಷು ನಿಪುಣಾ ಕಾಮಿನೀ ಹಂಸಗಾಮಿನೀ ।
ಭಾವಾನುರಕ್ತಾ ಭಾವಜ್ಞಾ ಕೃಷ್ಣಸ್ಯ ಪ್ರಿಯಭಾಮಿನೀ ॥೬॥

ರಸಜ್ಞಾ ರಸಿಕಾ ರಾಸೇ ರಾಸೇಶಸ್ಯ ರಸೋತ್ಸುಕಾ ।
ಉವಾಸಾ ದಕ್ಷಿಣೇ ಕ್ರೋಡೇ ರಾಧಾಯಾಃ ಪುರತಃ ಪುರಾ ॥೭॥

ಸಂಬಭೂವಾನಮ್ರಮುಖೋ ಭಯೇನ ಮಧುಸೂದನಃ ।
ದೃಷ್ಟ್ವಾ ರಾಧಾಂ ಚ ಪುರತೋ ಗೋಪೀನಾಂ ಪ್ರವರೋತ್ತಮಾಂ॥೮॥

---

ವತಿಯೂ ಆಗಿದ್ದಳು. ಅವಳಿಗೆ ಅನೇಕ ಕುಶಲ ವಿದ್ಯೆಗಳು ಬರುತ್ತಿದ್ದುವು. ಕಮಲದಂತೆ ಕಣ್ಣುಗಳು ಉತ್ತಮವಾದ ತೊಡೆ ಮತ್ತು ಸ್ತನಗಳುಳ್ಳವಳೂ ಆಲದಮರದಂತೆ ಶರೀರಕಾಂತಿಯಿಂದ ಕೂಡಿದವಳಾಗಿದ್ದಳು. ॥೩-೪॥

ಮುಗುಳಾದ ನಗೆಯಿಂದ ಪ್ರಸನ್ನವಾದ ಮುಖವುಳ್ಳವಳು, ರತ್ನದ ಆಭರಣಗಳನ್ನು ಧರಿಸಿದವಳು, ಬಿಳಿಯ ಸಂಪಿಗೆಯ ಹೂವಿನಂತೆ ಮೈಬಣ್ಣವುಳ್ಳವಳು, ತೊಂಡೆಯ ಹಣ್ಣಿನಂತೆ ತುಟಿಯೂ, ಜಿಂಕೆಯ ಕಣ್ಣಿನಂತೆ ಚಂಚಲವಾದ ಕಣ್ಣುಗಳೂ ಉಳ್ಳವಳು, ಕಾಮಶಾಸ್ತ್ರವನ್ನು ಚನ್ನಾಗಿ ತಿಳಿದವಳು, ಹಂಸದಂತೆ ನಡಿಗೆಯುಳ್ಳವಳು, ಪತಿಯ ಮನಸ್ಸಿನ ಅಭಿಪ್ರಾಯವನ್ನು ತಿಳಿಯುವ ಮತ್ತು ಆ ಅಭಿಪ್ರಾಯವನ್ನು ಅನುಸರಿಸುವ ಶಕ್ತಿಯುಳ್ಳವಳಾದುದರಿಂದ ಶ್ರೀಕೃಷ್ಣನಿಗೆ ಅತ್ಯಂತ ಪ್ರೀತಿಪಾತ್ರಳಾಗಿದ್ದಳು. ॥೫-೬॥

ಶೃಂಗಾರಾದಿ ನವರಸಗಳನ್ನು ಬಲ್ಲವಳೂ ರಾಸಮಂಡಲಕ್ಕೆ ಅಧಿಪತಿಯಾದ ಶ್ರೀಕೃಷ್ಣನ ರಾಸಕ್ರೀಡೆಯಲ್ಲಿ ಆಸಕ್ತಳೂ ಆದ ಆ ಸುಶೀಲೆಯು ಪೂರ್ವದಲ್ಲಿ ಒಂದಾನೊಂದು ದಿನ ಶ್ರೀಕೃಷ್ಣನ ಎಡದ ತೊಡೆಯಲ್ಲಿ ಕುಳಿತಿದ್ದುದನ್ನು ರಾಧಾದೇವಿಯು ನೋಡಿದಳು. ॥೭॥

ಕೃಷ್ಣನು ಎದುರಿಗೆ ಬರುತ್ತಿರುವ ಗೋಪಿಯರಲ್ಲಿ ಮುಖ್ಯಳೂ, ಶ್ರೇಷ್ಠಳೂ ಆದ, ಕೋಪದಿಂದ ಕಣ್ಣನ್ನೂ ಮುಖವನ್ನೂ ಕೆಂಪಗೆ ಮಾಡಿಕೊಂಡು ತುಟಿಗಳನ್ನೂ

ಕಾಮಿನೀಂ ರಕ್ತವದನಾಂ ರಕ್ತಪಂಕಜಲೋಚನಾಂ ।
ಕೋಪೇನ ಕಂಪಿತಾಂಗೀಂ ಚ ಕೋಪೇನ ಸ್ಫುರಿತಾಧರಾಂ ॥೯॥

ವೇಗೇನ ತಾಂತು ಗಚ್ಛಂತೀಂ ವಿಜ್ಞಾಯ ತದನಂತರಂ ।
ವಿರೋಧಭೀತೋ ಭಗವಾನಂತರ್ಧಾನಂ ಚಕಾರ ಸಃ ॥೧೦॥

ಪಲಾಯಂತಂ ಚ ಕಾಂತಂ ಚ ಶಾಂತಂ ಸತ್ವಸುವಿಗ್ರಹಂ ।
ವಿಲೋಕ್ಯ ಕಂಪಿತಾ ಗೋಪ್ಯಃ ಸುಶೀಲಾದ್ಯಾಸ್ತತೋ ಭಿಯಾ ॥೧೧॥

ವಿಲೋಕ್ಯ ಲಂಪಟಂ ತತ್ರ ಗೋಪೀನಾಂ ಲಕ್ಷಕೋಟಯಃ ।
ಪುಟಾಂಜಲಿಯುತಾ ಭೀತಾ ಭಕ್ತಿನಮ್ರಾತ್ಮಕಂಧರಾಃ ॥೧೨॥

ರಕ್ಷ ರಕ್ಷೇತ್ಯುಕ್ತವಂತ್ಯೋ ದೇವೀಮಿತಿ ಪುನಃ ಪುನಃ ।
ಯಯುರ್ಭಯೇನ ಶರಣಂ ತಸ್ಯಾಶ್ಚರಣಪಂಕಜೇ ॥೧೩॥

ತ್ರಿಲಕ್ಷಕೋಟಯೋ ಗೋಪಾಃ ಸುದಾಮಾದಯ ಏವ ಚ ।
ಯಯುರ್ಭಯೇನ ಶರಣಂ ತತ್ಪಾದಾಬ್ಜೇ ಚ ನಾರದ ॥೧೪॥

---

ಅವಯವಗಳನ್ನೂ ನಡುಗಿಸುತ್ತಿರುವ ರಾಧೆಯನ್ನು ನೋಡಿ ಭಯದಿಂದ ಮುಖವನ್ನು ಬಗ್ಗಿಸಿಕೊಂಡನು. ॥೮-೯॥

ಆಮೇಲೆ ಮಹಾಮಹಿಮನಾದ ಶ್ರೀಕೃಷ್ಣನು ವೇಗವಾಗಿ ಹೊರಟುಹೋಗುತ್ತಿರುವ ಆ ರಾಧೆಯನ್ನು ನೋಡಿ ಮುಂದೆ ತನಗೂ ರಾಧೆಗೂ, ವಿರೋಧಬರುವುದೆಂದು ಹೆದರಿ ಅಂತರ್ಧಾನನಾದನು. ॥೧೦॥

ಶಾಂತನೂ, ಬಲಶಾಲಿಯೂ, ಸುಂದರನೂ, ತಮ್ಮ ಪ್ರೀತಿಪಾತ್ರನೂ ಆದ ಶ್ರೀಕೃಷ್ಣನು ಮರೆಯಾಗಿ ಓಡಿಹೋಗುತ್ತಿರುವುದನ್ನು ಕಂಡು, ಸುಶೀಲೆಯೇ ಮೊದಲಾದ ಅನೇಕ ಗೋಪಿಯರು ಭಯದಿಂದ ಕೂಡಿ ಕೈಜೋಡಿಸಿಕೊಂಡು ತಲೆಯನ್ನು ಬಗ್ಗಿಸಿ ಭಕ್ತಿಯಿಂದ ಮತ್ತೆ ಮತ್ತೆ ಕಾಪಾಡು ಎಂದು ಹೇಳುತ್ತಾ, ರಾಧಾದೇವಿಯ ಪಾದಕ್ಕೆ ನಮಸ್ಕರಿಸಿ ಶರಣು ಹೊಂದಿದರು. ॥೧೨-೧೩॥

ಸುದಾಮನೇ ಮೊದಲಾದ ಮೂರುಲಕ್ಷ ಗೋಪರು ಭಯದಿಂದ ರಾಧಾದೇವಿಯ ಪಾದಕಮಲದಲ್ಲಿ ಶರಣುಹೊಂದಿದರು. ॥೧೪॥

ಪಲಾಯಂತಂ ಚ ಕಾಂತಂ ಚ ವಿಜ್ಞಾಯ ಪರಮೇಶ್ವರೀ ।
ಪಲಾಯಂತೀಂ ಸಹಚರೀಂ ಸುಶೀಲಾಂ ಚ ಶಶಾಪ ಸಾ ॥೧೫॥

ಅದ್ಯಪ್ರಭೃತಿ ಗೋಲೋಕಂ ಸಾ ಚೇದಾಯಾತಿ ಗೋಪಿಕಾ ।
ಸದ್ಯೋಗಮನಮಾತ್ರೇಣ ಭಸ್ಮಸಾಚ್ಚ ಭವಿಷ್ಯತಿ ॥೧೬॥

ಇತ್ಯೇವಮುಕ್ತ್ವಾ ತತ್ರೈವ ದೇವದೇವೇಶ್ವರೀ ರುಷಾ ।
ರಾಸೇಶ್ವರೀ ರಾಸಮಧ್ಯೇ ರಾಸೇಶಮಾಜುಹಾವ ಸಾ(ಹ) ॥೧೭॥

ನಾಲೋಕ್ಯ ಪುರತಃ ಕೃಷ್ಣಂ ರಾಧಾ ವಿರಹಕಾತರಾ ।
ಯುಗಕೋಟಿಸಮಂ ಮೇನೇ ಕ್ಷಣಭೇದೇನ ಸುವ್ರತಾ ॥೧೮॥

ಹೇ ಕೃಷ್ಣ ಪ್ರಾಣನಾಥೇಶಾಽಽಗಚ್ಛ ಪ್ರಾಣಾಧಿಕ ಪ್ರಿಯ ।
ಪ್ರಾಣಾಧಿಷ್ಠಾತೃದೇವೇಶ ಪ್ರಾಣಾ ಯಾಂತಿ ತ್ವಯಾ ವಿನಾ ॥೧೯॥

---

ರಾಧಾದೇವಿಯು ಮರೆಯಾಗಿ ಓಡುತ್ತಿರುವ ಶ್ರೀಕೃಷ್ಣನನ್ನೂ ಅವನ ಸಹಚಾರಿಣಿಯಾದ ಓಡಿಹೋಗುತ್ತಿರುವ ಸುಶೀಲೆಯನ್ನೂ ಕಂಡು ಆ ಸುಶೀಲೆಗೆ ಶಾಪವನ್ನು ಕೊಟ್ಟಳು. ॥೧೫॥

ಈದಿನ ಮೊದಲಾಗಿ ಆ ಸುಶೀಲೆ ಎಂಬ ಗೋಪಿಯು ಈ ಗೋಲೋಕಕ್ಕೆ ಬಂದರೆ ಬಂದಮಾತ್ರಕ್ಕೆ ಬೂದಿಯಾಗುವಳು. ಹೀಗೆಂದು ಆ ರಾಧಾದೇವಿಯು ಕೋಪದಿಂದ ಶಾಪವನ್ನು ಕೊಟ್ಟು ರಾಸಮಂಡಲಕ್ಕೆ ಅಧಿಪತಿಯಾದ ಆ ರಾಧೆಯು ರಾಸಕ್ರೀಡೆಗಾಗಿ ಶ್ರೀಕೃಷ್ಣನನ್ನು ಕರೆದಳು. ॥೧೬-೧೭॥

ಕೃಷ್ಣನನ್ನು ಎದುರಿಗೆ ಕಾಣದೆ ರಾಧೆಯು ವಿರಹದುಃಖದಿಂದ ಒಂದು ಕ್ಷಣದ ಅಗಲಿಕೆಯನ್ನು ಒಂದು ಕೋಟಿ ಯುಗಕ್ಕೆ ಸಮಾನವಾಗಿ ಕಷ್ಟದಿಂದ ಕಳೆದಳು.॥೧೮॥

ಓ ಕೃಷ್ಣನೇ, ನನ್ನ ಪ್ರಾಣಕ್ಕೆ ಒಡೆಯನೇ, ಪ್ರಾಣಾಧಿಕನಾದ ಸ್ವಾಮಿಯೇ ನನ್ನ ಪ್ರೀತಿಪಾತ್ರನೇ, ನನ್ನ ಪ್ರಾಣಕ್ಕೆ ಆಶ್ರಯನಾದ ದೇವನೇ, ನೀನಿಲ್ಲದದಿದ್ದರೆ ನನ್ನ ಪ್ರಾಣವೇ ಹೋಗುವುದು. ಆದುದರಿಂದ ನನ್ನ ಸಮೀಪಕ್ಕೆ ಬರುವವನಾಗು. ॥೧೯॥

ಸ್ತ್ರೀಗರ್ವಃ ಪತಿಸೌಭಾಗ್ಯಾದ್ವರ್ಧತೇ ಚ ದಿನೇ ದಿನೇ ।
ಸುಖಂ ಚ ವಿಪುಲಂ ಯಸ್ಮಾತ್ತಂ ಸೇವೇದ್ಧರ್ಮತಃ ಸದಾ ॥೨೦॥

ಪತಿರ್ಬಂಧುಃ ಕುಲಸ್ತ್ರೀಣಾಮಧಿದೇವಃ ಸದಾ ಗತಿಃ ।
ಪರಸಂಪತ್ಸ್ವರೂಪಶ್ಚ ಮೂರ್ತಿಮಾನ್ಭೋಗದಃ ಸದಾ ॥೨೧॥

ಧರ್ಮದಃ ಸುಖದಃ ಶಶ್ವತ್ಪ್ರೀತಿದಃ ಶಾಂತಿದಃ ಸದಾ ।
ಸನ್ಮಾನ್ಯೈರ್ದೀಪ್ಯಮಾನಶ್ಚ ಮಾನದೋ ಮಾನಖಂಡನಃ ॥೨೨॥

ಸಾರಾತ್ಸಾರತರಃ ಸ್ವಾಮೀ ಬಂಧೂನಾಂ ಬಂಧುವರ್ಧನಃ ।
ನ ಚ ಭರ್ತುಃ ಸಮೋ ಬಂಧುರ್ಬಂಧೋರ್ಬಂಧುಷು ದೃಶ್ಯತೇ॥೨೩॥

ಭರಣಾದೇವ ಭರ್ತಾ ಚ ಪಾಲನಾತ್ಪತಿರುಚ್ಯತೇ ।
ಶರೀರೇಶಾಚ್ಚ ಸ ಸ್ವಾಮೀ ಕಾಮದಃ ಕಾಂತ ಉಚ್ಯತೇ ॥೨೪॥

---

ಪತಿಯು ಮಾಡಿದ ಮರ್ಯಾದೆಯ ಭಾಗ್ಯದಿಂದ ಸ್ತ್ರೀಗೆ ಗರ್ವವು ದಿನದಿನಕ್ಕೆ ಹೆಚ್ಚುತ್ತ ಬರುವುದು. ಪತಿಯ ಪ್ರೀತಿಯಿದ್ದರೆ ಗರ್ವದಿಂದ ವಿಶೇಷಸುಖವುಂಟಾಗುವುದು. ಆದುದರಿಂದ ಸ್ತ್ರೀಯರು ಯಾವಾಗಲೂ ಧರ್ಮದಿಂದ ಪತಿಸೇವೆಯನ್ನು ಮಾಡಬೇಕು. ॥೨೦॥

ಒಳ್ಳೆಯ ಕುಲದಲ್ಲಿ ಹುಟ್ಟಿದ ಸ್ತ್ರೀಯರಿಗೆ ಪತಿಯೇ ನಂಟನು ಮತ್ತು ದೇವರು. ಅವನೇ ದಿಕ್ಕಾದವನು, ಆಕಾರವನ್ನು ಧರಿಸಿದ ಸಂಪತ್ತಿನರೂಪವಾದವನು. ಯಾವಾಗಲೂ ಐಹಿಕ ಸುಖವನ್ನು ಕೊಡತಕ್ಕವನು. ॥೨೧॥

ಪತಿಯೇ, ಧರ್ಮವನ್ನೂ ಸದ್ಗತಿಯ ಸುಖವನ್ನೂ ಕೊಡತಕ್ಕವನು. ಗೌರವದಿಂದ ಪ್ರಕಾಶಿಸತಕ್ಕವನು. ಮರ್ಯಾದೆಯನ್ನು ಕೊಡತಕ್ಕವನು. ಅದನ್ನು ನಾಶಮಾಡತಕ್ಕವನೂ ಅವನೇ ಆಗಿರುವನು. ॥೨೨॥

ಸಾರವಾದ ವಸ್ತುಗಳೆಲ್ಲಕ್ಕಿಂತಲೂ ಪತಿಯೇ ಸಾರನಾದವನು. ನಂಟರಲೆಲ್ಲರಲ್ಲೂ ಶ್ರೇಷ್ಠನು. ಸ್ತ್ರೀಯರಿಗೆ ನಂಟರಾದವರಲ್ಲಿ ಪತಿಗೆ ಸಮಾನರಾದ ನಂಟರಾರೂ ಇರುವುದಿಲ್ಲ. ॥೨೩॥

ಪತ್ನಿಗೆ ಆಹಾರಾದಿಗಳನ್ನು ಕೊಟ್ಟು ಕಾಪಾಡುವುದರಿಂದ ಭರ್ತನೆಂದೂ, ಭಯಾದಿಗಳಿಂದ ರಕ್ಷಿಸುವುದರಿಂದ ಪತಿಯೆಂದೂ, ಶರೀರಕ್ಕೆ ಅಧಿಪತಿಯಾದುದರಿಂದ ಸ್ವಾಮೀ ಎಂದೂ, ಎಲ್ಲ ಬಗೆಯ ಇಷ್ಟಾರ್ಥಗಳನ್ನು ಕೊಡುವುದರಿಂದ ಕಾಂತ

ಬಂಧುಶ್ಚ ಸುಖವೃದ್ಧ್ಯಾ ಚ ಪ್ರೀತಿದಾನಾತ್ಪ್ರಿಯಃ ಸ್ಮೃತಃ ।
ಐಶ್ವರ್ಯದಾನಾದೀಶಶ್ಚ ಪ್ರಾಣೇಶಾತ್ಪ್ರಾಣನಾಯಕಃ ॥೨೫॥

ರತಿದಾನಾಚ್ಚ ರಮಣಃ ಪ್ರಿಯೋ ನಾಸ್ತಿ ಪ್ರಿಯಾತ್ಪರಃ ।
ಪುತ್ರಸ್ತು ಸ್ವಾಮಿನಃ ಶುಕ್ರಾಜ್ಜಾಯತೇ ತೇನ ಸ ಪ್ರಿಯಃ ॥೨೬॥

ಶತಪುತ್ರಾತ್ಪರಃ ಸ್ವಾಮೀ ಕುಲಜಾನಾಂ ಪ್ರಿಯಃ ಸದಾ ।
ಅಸತ್ಕುಲಪ್ರಸೂತಾ ಯಾ ಕಾಂತಂ ವಿಜ್ಞಾತುಮಕ್ಷಮಾ ॥೨೭॥

ಸ್ನಾನಂ ಚ ಸರ್ವತೀರ್ಥೇಷು ಸರ್ವಯಜ್ಞೇಷು ದಕ್ಷಿಣಾ ।
ಪ್ರಾದಕ್ಷಿಣ್ಯಂ ಪೃಥಿವ್ಯಾಶ್ಚ ಸರ್ವಾಣಿ ಚ ತಪಾಂಸಿ ಚ ॥೨೮॥

ಸರ್ವಾಣ್ಯೇವ ವ್ರತಾದೀನಿ ಮಹಾದಾನಾನಿ ಯಾನಿ ಚ ।
ಉಪೋಷಣಾನಿ ಪುಣ್ಯಾನಿ ಯಾನಿ ಯಾನಿ ಶ್ರುತಾನಿ ಚ ॥೨೯॥

ಗುರುಸೇವಾ ವಿಪ್ರಸೇವಾ ದೇವಸೇವಾದಿಕಂ ಚ ಯತ್ ।
ಸ್ವಾಮಿನಃ ಪಾದಸೇವಾಯಾಃ ಕಲಾಂ ನಾರ್ಹಂತಿ ಷೋಡಶೀಂ॥೩೦॥

---

ನೆಂದೂ, ಹೆಚ್ಚಾದ ಸುಖವನ್ನು ಕೊಡುವುದರಿಂದ ಬಂಧುವೆಂದೂ, ಪ್ರೀತಿಯನ್ನು ಕೊಡುವವನಾದುದರಿಂದ ಪ್ರಿಯನೆಂದೂ, ಐಶ್ವರ್ಯವನ್ನು ಕೊಡುವುದರಿಂದ ಈಶನೆಂದೂ, ಪ್ರಾಣಕ್ಕೆ ಒಡೆಯನಾದುದರಿಂದ ಪ್ರಾಣನಾಯಕನೆಂದೂ, ರತಿಯ ಸುಖವನ್ನುಂಟುಮಾಡುವುದರಿಂದ ರಮಣನೆಂದೂ, ಹೆಸರಿರುವುದು. ಆದುದರಿಂದ ಪತಿಗಿಂತಲೂ ಪ್ರೀತಿಪಾತ್ರನಾದವನು ಮತ್ತೊಬ್ಬನಿಲ್ಲವು. ॥೨೪-೨೫॥

ಮಗನು ಪತಿಯ ವೀರ್ಯದಿಂದ ಹುಟ್ಟತಕ್ಕವನಾದುದರಿಂದ ಸ್ತ್ರೀಗೆ ಮಗನೂ ಪ್ರೀತಿಪಾತ್ರನಾದವನು. ಪತಿವ್ರತಾ ಸ್ತ್ರೀಯರಿಗೆ ಯಾವಾಗಲೂ ನೂರುಮಂದಿ ಪುತ್ರರಿಗಿಂತಲೂ, ಪತಿಯೇ ಹೆಚ್ಚು ಪ್ರೀತಿಪಾತ್ರನು. ದುಷ್ಟವಂಶದಲ್ಲಿ ಹುಟ್ಟಿದ ಸ್ತ್ರೀಯು (ಅಂದರೆ ಪತಿವ್ರತೆಯಲ್ಲದವಳು) ಪತಿಯನ್ನು ತಿಳಿಯುವುದಕ್ಕೆ ಶಕ್ತಳಲ್ಲ. ಎಂದಮೇಲೆ ಪತಿಸೇವಾದಿ ಸುಕೃತಗಳು ಅವಳಿಗೆ ಇಲ್ಲವೇ ಇಲ್ಲ. ॥೨೬-೨೭॥

ಸಮಸ್ತ ಪುಣ್ಯತೀರ್ಥಗಳ ಸ್ನಾನಗಳೂ, ಸಮಸ್ತ ಯಜ್ಞಗಳಲ್ಲಿ ಕೊಡತಕ್ಕ ದಕ್ಷಿಣೆಗಳೂ, ಭೂಮಿಯ ಪ್ರದಕ್ಷಿಣೆಯೂ, ಸಮಸ್ತ ತಪಸ್ಸುಗಳೂ, ಎಲ್ಲಾ ವ್ರತಗಳೂ, ದೊಡ್ಡ ದಾನಗಳೂ, ಪುಣ್ಯಾದಿಗಳೂ, ಮಾಡಿದ ಉಪವಾಸವ್ರತಗಳೂ,

ಗುರುವಿಪ್ರೇಂದ್ರದೇವೇಷು ಸರ್ವೇಭ್ಯಶ್ಚ ಪತಿರ್ಗುರುಃ ।
ವಿದ್ಯಾದಾತಾ ಯಥಾ ಪುಂಸಾಂ ಕುಲಜಾನಾಂ ತಥಾ ಪ್ರಿಯಃ ॥೩೧॥

ಗೋಪೀನಾಂ ಲಕ್ಷಕೋಟೀನಾಂ ಗೋಪಾನಾಂ ಚ ತಥೈವ ಚ ।
ಬ್ರಹ್ಮಾಂಡಾನಾಮಸಂಖ್ಯಾನಾಂ ತತ್ರಸ್ಥಾನಾಂ ತಥೈವ ಚ ॥೩೨॥

ವಿಶ್ವಾದಿಗೋಲಕಾಂತಾನಾಮೀಶ್ವರೀ ಯತ್ಪ್ರಸಾದತಃ ।
ಅಹಂ ನ ಜಾನೇ ತಂ ಕಾಂತಂ ಸ್ತ್ರೀಸ್ವಭಾವೋ ದುರತ್ಯಯಃ ॥೩೩॥

ಇತ್ಯುಕ್ತ್ವಾ ರಾಧಿಕಾ ಕೃಷ್ಣಂ ತತ್ರ ದಧ್ಯೌ ಸ್ವಭಕ್ತಿತಃ ।
ರುರೋದ ಪ್ರೇಮ್ಣಾ ಸಾ ರಾಧಾ ನಾಥ ನಾಥೇತಿಚಾಬ್ರವೀತ್ ॥೩೪॥

---

ಗುರುಗಳು, ಬ್ರಾಹ್ಮಣರು, ದೇವತೆಗಳೂ ಇವರ ಸೇವೆಗಳೂ, ಇವುಗಳಿಗೆ ಎಷ್ಟು ಫಲಗಳು ಬರುವುವೋ ಅವು ಪತಿಸೇವೆಮಾಡಿದುದರ ಫಲದ ಹದಿನಾರನೆಯ ಒಂದುಭಾಗಕ್ಕೆ ಸಮವಾಗಲಾರವು. ॥೨೮-೨೯-೩೦॥

ಗುರು ಬ್ರಾಹ್ಮಣಶ್ರೇಷ್ಠರು ದೇವತೆಗಳು ಇವರಲ್ಲಿ ಎಲ್ಲರಿಗಿಂತಲೂ ಮನುಷ್ಯನಿಗೆ ವಿದ್ಯೆಯನ್ನು ಹೇಳಿಕೊಟ್ಟವನು ಹೇಗೆ ಶ್ರೇಷ್ಠನೋ ಹಾಗೆ ಪತಿವ್ರತಾಸ್ತ್ರೀಯರಿಗೆ ಪ್ರೀತಿಪಾತ್ರನಾದ ಪತಿಯೇ ಗುರುವಾಗಿ ಶ್ರೇಷ್ಠನಾಗಿ ಇರುವನು. ॥೩೧॥

ಲಕ್ಷಕೋಟಿ ಗೋಪಗೋಪಿಯರಿಗೂ, ಲೆಕ್ಕವಿಲ್ಲದಷ್ಟು ಬ್ರಹ್ಮಾಂಡಗಳಿಗೂ, ಆ ಬ್ರಹ್ಮಾಂಡದಲ್ಲಿರುವ ಸಮಸ್ತ ಪ್ರಾಣಿಗಳಿಗೂ, ಪ್ರಪಂಚವನ್ನು ಮೊದಲುಮಾಡಿ ಕೊಂಡು ಪ್ರಾಣಿಗಳ ಇಂದ್ರಿಯಸ್ಥಾನಗಳ ವರೆಗೆ ಇರುವ ಸಮಸ್ತಕ್ಕೂ, ಆ ಕೃಷ್ಣನ ಅನುಗ್ರಹದಿಂದ ನಾನು ಅಧಿಪತಿಯಾಗಿದ್ದರೂ, ಅತ್ಯಂತ ಶ್ರೇಷ್ಠನೂ, ಸೇವಿಸುವು ದಕ್ಕೆ ಯೋಗ್ಯನೂ ಆದ ಪ್ರೀತಿಪಾತ್ರನಾದ ಪತಿಯನ್ನು ನಾನು ತಿಳಿಯಲಿಲ್ಲವು. ಸ್ತ್ರೀಸ್ವಭಾವವು ತಿದ್ದಲಸಾಧ್ಯವಾದುದು. ಮೀರಲೂ ಆಗುವುದಿಲ್ಲವು. ॥೩೨-೩೩॥

ಹೀಗೆಂದು ಹೇಳಿ ರಾಧಾದೇವಿಯು ಭಕ್ತಿಯಿಂದ ಶ್ರೀಕೃಷ್ಣನನ್ನು ಧ್ಯಾನ ಮಾಡಿ ಪ್ರೀತಿಯಿಂದ, ನನ್ನ ಸ್ವಾಮಿಯೇ, ಎಂದು ಬಾರಿಬಾರಿಗೂ ಹೇಳಿ ಅತ್ತಳು. ॥೩೪॥

ದರ್ಶನಂ ದೇಹಿ ರಮಣ ದೀನಾ ವಿರಹದುಃಖಿತಾ ।
ಅಥ ಸಾ ದಕ್ಷಿಣಾ ದೇವೀ ಧ್ವಸ್ತಾ ಗೋಲೋಕತೋ ಮುನೇ ॥೩೫॥
ಸುಚಿರಂ ಚ ತಪಸ್ತಪ್ತ್ವಾ ವಿವೇಶ ಕಮಲಾತನೌ ।
ಅಥ ದೇವಾದಯಃ ಸರ್ವೇ ಯಜ್ಞಂ ಕೃತ್ವಾ ಸುದುಷ್ಕರಂ ॥೩೬॥
ನಾಲಭಂಸ್ತೇ ಫಲಂ ತೇಷಾಂ ವಿಷಣ್ಣಾಃ ಪ್ರಯಯುರ್ವಿಧಿಂ ।
ವಿಧಿರ್ನಿವೇದನಂ ಶ್ರುತ್ವಾ ದೇವಾದೀನಾಂ ಜಗತ್ಪತಿಂ ॥೩೭॥
ದಧ್ಯೌ ಚ ಸುಚಿರಂ ಭಕ್ತ್ಯಾ ಪ್ರತ್ಯಾದೇಶಮವಾಪ ಸಃ ।
ನಾರಾಯಣಶ್ಚ ಭಗವಾನ್ ಮಹಾಲಕ್ಷ್ಮ್ಯಾಶ್ಚ ದೇಹತಃ ॥೩೮॥
ವಿನಿಷ್ಕೃಷ್ಯ ಮರ್ತ್ಯಲಕ್ಷ್ಮೀಂ ಬ್ರಹ್ಮಣೇ ದಕ್ಷಿಣಾಂ ದದೌ ।
ಬ್ರಹ್ಮಾ ದದೌ ತಾಂ ಯಜ್ಞಾಯ ಪೂರಣಾರ್ಥಂ ಚ ಕರ್ಮಣಾಂ ॥೩೯॥
ಯಜ್ಞಃ ಸಂಪೂಜ್ಯ ವಿಧಿವತ್ತಾಂ ತುಷ್ಟಾವ ತದಾ ಮುದಾ ।

---

ಪ್ರೀತಿಪಾತ್ರನಾದ ಪತಿಯೇ, ವಿರಹದುಃಖದಿಂದ ಕೂಡಿದ ನನಗೆ ದರ್ಶನವನ್ನು ಕೊಡು. ಎಂದು ರಾಧೆಯು ದುಃಖಿಸಿದಳು. ಬಳಿಕ ದಕ್ಷಿಣಾದೇವಿಯಾದ ಆ ಸುಶೀಲೆ ಎಂಬ ಗೋಪಿಯು ಗೋಲೋಕವನ್ನು ಬಿಟ್ಟಳು. ||೩೫||

ನಾರದನೇ ಕೇಳು, ಆ ಸುಶೀಲೆಯು ಬಹಳಕಾಲ ತಪಸ್ಸನ್ನು ಮಾಡಿ ಲಕ್ಷ್ಮಿಯ ಶರೀರದಲ್ಲಿ ಪ್ರವೇಶಮಾಡಿದಳು. ಸುಶೀಲಾದೇವಿಯೇ ದಕ್ಷಿಣಾದೇವಿಯು.

ಅಮೇಲೆ ದೇವತೆಗಳೇ ಮೊದಲಾದವರು ಕಷ್ಟಸಾಧ್ಯಗಳಾದ ಯಜ್ಞಗಳನ್ನು ಮಾಡಿ ಅವುಗಳ ಫಲಗಳನ್ನು ಪಡೆಯದೆ ವಿಷಾದದಿಂದ ಬ್ರಹ್ಮನ ಸಮೀಪಕ್ಕೆ ಹೋದರು. ||೩೬||

ಬ್ರಹ್ಮನು ದೇವತೆಗಳು ಹೇಳಿದುದನ್ನು ಕೇಳಿ ಭಕ್ತಿಯಿಂದ ಜಗತ್ಪತಿಯಾದ ನಾರಾಯಣನನ್ನು ಧ್ಯಾನಮಾಡಿ ತನ್ನ ಕೋರಿಕೆಯನ್ನು ಸಫಲಗೊಳಿಸುವಂತೆ ಪ್ರತ್ಯುತ್ತರವನ್ನು ಪಡೆದನು. ||೩೭||

ಆದರಂತೆ ಮಹಾಮಹಿಮನಾದ ನಾರಾಯಣನು ಮಹಾಲಕ್ಷ್ಮಿಯ ದೇಹದಿಂದ ಮನುಷ್ಯಲೋಕದ ಲಕ್ಷ್ಮಿಯಾದ ದಕ್ಷಿಣಾದೇವಿಯನ್ನು ಆಕರ್ಷಿಸಿ ಬ್ರಹ್ಮನಿಗೆ ಕೊಟ್ಟನು. ||೩೮||

ಬ್ರಹ್ಮನು ಆ ದಕ್ಷಿಣಾದೇವಿಯನ್ನು ಕರ್ಮಗಳ ಸಂಪೂರ್ಣಫಲಪ್ರಾಪ್ತಿಗಾಗಿ

ತಪ್ತಕಾಂಚನವರ್ಣಾಭಾಂ ಚಂದ್ರಕೋಟಿಸಮಪ್ರಭಾಂ ॥೪೦॥

ಅತೀವ ಕಮನೀಯಾಂ ಚ ಸುಂದರೀಂ ಸುಮನೋಹರಾಂ ।
ಕಮಲಾಸ್ಯಾಂ ಕೋಮಲಾಂಗೀಂ ಕಮಲಾಯತಲೋಚನಾಂ ॥೪೧॥

ಕಮಲಾಸನಪೂಜ್ಯಾಂ ಚ ಕಮಲಾಂಗಸಮುದ್ಭವಾಂ ।
ವಹ್ನಿಶುದ್ಧಾಂಶುಕಾಧಾನಾಂ ಬಿಂಬೋಷ್ಠೀಂ ಸುದತೀಂ ಸತೀಂ ॥೪೨॥

ಬಿಭ್ರತೀಂ ಕಬರೀಭಾರಂ ಮಾಲತೀಮಾಲ್ಯಸಂಯುತಂ ।
ಈಷದ್ಧಾಸ್ಯಪ್ರಸನ್ನಾಸ್ಯಾಂ ರತ್ನಭೂಷಣಭೂಷಿತಾಂ ॥೪೩॥

ಸುವೇಷಾಢ್ಯಾಂ ಚ ಸುಸ್ನಾತಾಂ ಮುನಿಮಾನಸಮೋಹಿನೀಂ ।
ಕಸ್ತೂರೀಬಿಂದುಭಿಃ ಸಾರ್ಧಂ ಸುಗಂಧಿ ಚಂದನೇಂದುಭಿಃ ॥೪೪॥

ಸಿಂದೂರಬಿಂದುನಾಲ್ಪೇನಾಪ್ಯಳಿಕಾಧಸ್ಸ್ಥಲೋಜ್ಜ್ವಲಾಂ ।
ಸುಪ್ರಶಸ್ತನಿತಂಬಾಢ್ಯಾಂ ಬೃಹಚ್ಛ್ರೋಣಿ ಪಯೋಧರಾಂ ॥೪೫॥
ಕಾಮದೇವಾಧಾರರೂಪಾಂ ಕಾಮಬಾಣಪ್ರಪೀಡಿತಾಂ ।

---

ಯಜ್ಞದೇವನಿಗೆ ಕೊಟ್ಟನು. ಯಜ್ಞದೇವನು ವೇದವಿಧಿಗನುಸಾರವಾಗಿ ಆ ದಕ್ಷಿಣಾ ದೇವಿಯನ್ನು ಪೂಜಿಸಿ ಸಂತೋಷದಿಂದ ಸ್ತೋತ್ರಮಾಡಿದನು. ॥೩೯॥

ಪುಟವಿಟ್ಟ ಚಿನ್ನದಂತೆ ಹೊಳೆಯುವ ಕೋಟಿಚಂದ್ರರ ಸಮಾನವಾದ ಕಾಂತಿಯಿಂದ ಕೂಡಿದ ಅತ್ಯಂತ ಕೋಮಲಳೂ, ಸುಂದರಿಯೂ, ಮನೋಹರಳೂ ಆದ ಕಮಲಮುಖಿಯೂ, ಕಮಲದಂತೆ ಕಣ್ಣುಗಳುಳ್ಳವಳೂ ಮೃದುವಾದ ಅವಯವಗಳುಳ್ಳವಳೂ ಪರಿಶುದ್ಧವಾದ ವಸ್ತ್ರವನ್ನು ಧರಿಸಿದವಳೂ, ತೊಂಡೆಯ ಹಣ್ಣಿನಂತೆ ತುಟಿಯುಳ್ಳವಳೂ, ಒಳ್ಳೆಯ ಹಲ್ಲುಗಳುಳ್ಳವಳೂ ಆದ, ॥೪೦-೪೧॥

ಇರುವಂತಿಗೆ ಹೂವನ್ನು ಮುಡಿದ ಕೂದಲುಗಳುಳ್ಳ, ರತ್ನಾಭರಣಗಳನ್ನು ಧರಿಸಿ ಮುಗುಳುನಗೆಯನ್ನು ನಗುತ್ತಿರುವ, ಸ್ನಾನಮಾಡಿ ಒಳ್ಳೆಯ ಅಲಂಕಾರವನ್ನು ಮಾಡಿಕೊಂಡು ಮುನಿಗಳ ಮನಸ್ಸನ್ನೂ ಆಕರ್ಷಿಸುವಂತಿರುವ, ಕಸ್ತೂರಿಯಿಂದ ಕೂಡಿದ ಸುವಾಸನೆಯಾದ ಗಂಧವನ್ನು ಹಣೆಯಲ್ಲಿ ಧರಿಸಿ, ಸಿಂದೂರದ ಬಿಂದುವನ್ನು ಮುಂದಲೆಯ ಕೂದಲಿನ ಕೆಳಗೆ ಸಣ್ಣನಾಗಿಟ್ಟುಕೊಂಡು, ಪ್ರಶಸ್ತವಾದ ನಿತಂಬ ಮತ್ತು ತೊಡೆಗಳುಳ್ಳವಳಾಗಿ, ಕಾಮದೇವನಿಗೆ ಆಶ್ರಯಳಾಗಿ ಕಾಮಬಾಣದಿಂದ ಬಾಧೆಪಡುತ್ತಿರುವವಳಾದ, ॥೪೨-೪೩-೪೪॥

ತಾಂ ದೃಷ್ಟ್ವಾ ರಮಣೀಯಾಂ ಚ ಯಜ್ಞೋ ಮೂರ್ಛಾಮವಾಪ ಹ॥೪೬॥

ಪತ್ನೀಂ ತಾಮೇವ ಜಗ್ರಾಹ ವಿಧಿಬೋಧಿತ ಪೂರ್ವಕಂ ।
ದಿವ್ಯಂ ವರ್ಷಶತಂ ಚೈವ ತಾಂ ಗೃಹೀತ್ವಾ ತು ನಿರ್ಜನೇ ॥೪೭॥

ಯಜ್ಞೋ ರೇಮೇ ಮುದಾ ಯುಕ್ತೋ ರಾಮೇಶೋ ರಮಯಾ ಸಹ ।
ಗರ್ಭಂ ದಧಾರ ಸಾ ದೇವೀ ದಿವ್ಯಂ ದ್ವಾದಶವರ್ಷಕಂ ॥೪೮॥

ತತಃ ಸುಷಾವ ಪುತ್ರಂ ಚ ಫಲಂ ವೈ ಸರ್ವಕರ್ಮಣಾಂ ।
ಪರಿಪೂರ್ಣೇ ಕರ್ಮಣಿ ಚ ತತ್ಪುತ್ರಃ ಫಲದಾಯಕಃ ॥೪೯॥

ಯಜ್ಞೋ ದಕ್ಷಿಣಯಾ ಸಾರ್ಧಂ ಪುತ್ರೇಣ ಚ ಫಲೇನ ಚ ।
ಕರ್ಮಿಣಾಂ ಫಲದಾತಾ ಚೆತ್ಯೇವಂ ವೇದವಿದೋ ವಿದುಃ ॥೫೦॥

---

ಆ ದಕ್ಷಿಣಾದೇವಿಯನ್ನು ನೋಡಿ, ಯಜ್ಞದೇವನು ಸಾತ್ವಿಕಭಾವದಿಂದ ಮೂರ್ಛೆಯನ್ನು ಹೊಂದಿದನು. ಬಳಿಕ ಬ್ರಹ್ಮನು ಹೇಳಿದಂತೆ ವೇದವಿಧಿಗನುಸಾರವಾಗಿ ಆ ದೇವಿಯನ್ನೇ ಪತ್ನಿಯನ್ನಾಗಿ ಗ್ರಹಿಸಿದನು. ಯಜ್ಞದೇವನು ಆಕೆಯೆಡನೆ ನಿರ್ಜನವಾದ ಪ್ರದೇಶದಲ್ಲಿ ದೇವಮಾನದ ನೂರುವರ್ಷಗಳ ವರೆಗೆ, ಲಕ್ಷ್ಮೀಪತಿಯಾದ ನಾರಾಯಣನಂತೆ, ಸಂತೋಷದಿಂದ ಕ್ರೀಡಿಸಿದನು. ಬಳಿಕ ಆ ದಕ್ಷಿಣಾದೇವಿಯು ದೇವಮಾನದ ಹನ್ನೆರಡು ವರ್ಷಗಳ ವರೆಗೆ ಗರ್ಭವನ್ನು ಧರಿಸಿದಳು. ॥೪೬-೪೭-೪೮॥

ಆ ಮೇಲೆ ಸರ್ವಕರ್ಮಗಳಿಗೂ ಫಲಸ್ವರೂಪನಾದ ಫಲನೆಂಬ ಪುತ್ರನನ್ನು ಹೆತ್ತಳು. ಯಾವ ಕರ್ಮವಾದರೂ ಪೂರ್ತಿಯಾದಮೇಲೆ ದಕ್ಷಿಣಾದೇವಿಯ ಪುತ್ರನಾದ ಫಲನೇ ಫಲವನ್ನು ಕೊಡತಕ್ಕವನು. (ದಕ್ಷಿಣೆಯನ್ನು ಕೊಟ್ಟ ಮೇಲೆ ಫಲವುಂಟಾಗುವುದರಿಂದ ಫಲನು ದಕ್ಷಿಣಾದೇವಿಯ ಮಗನೆಂದು ಭಾವವು.) ॥೪೯॥

ಯಜ್ಞದೇವನು ಪತ್ನಿಯಾದ ದಕ್ಷಿಣಾದೇವಿಯಿಂದಲೂ, ಮಗನಾದ ಫಲನಿಂದಲೂ ಕೂಡಿ ಕರ್ಮಮಾಡಿದವರಿಗೆ ಫಲವನ್ನು ಕೊಡುವವನೆಂದು ವೇದವನ್ನು ಬಲ್ಲವರು ತಿಳಿದಿರುವರು. ॥೫೦॥

ಯಜ್ಞಶ್ಚ ದಕ್ಷಿಣಾಂ ಪ್ರಾಪ್ಯ ಪುತ್ರಂ ಚ ಫಲದಾಯಕಂ ।
ಫಲಂ ದದೌ ಚ ಸರ್ವೇಭ್ಯಃ ಕರ್ಮಣಾಂ ಚೈವ ನಾರದ ॥೫೧॥

ತದಾ ದೇವಾದಯಸ್ತುಷ್ಟಾಃ ಪರಿಪೂರ್ಣ ಮನೋರಥಾಃ ।
ಸ್ವಸ್ಥಾನೇ ತೇ ಯಯುಃ ಸರ್ವೇ ಧರ್ಮವಕ್ತ್ರಾದಿದಂ ಶ್ರುತಂ ॥೫೨॥

ಕೃತ್ವಾ ಕರ್ಮ ಚ ಕರ್ತಾ ಚ ತೂರ್ಣಂ ದದ್ಯಾಚ್ಚ ದಕ್ಷಿಣಾಂ ।
ತತ್ಕ್ಷಣಂ ಫಲಮಾಪ್ನೋತಿ ವೇದೈರುಕ್ತಮಿದಂ ಮುನೇ ॥೫೩॥

ಕರ್ತಾ ಕರ್ಮಣಿ ಪೂರ್ಣೇ ಚ ತತ್ಕ್ಷಣೇ ಯದಿ ದಕ್ಷಿಣಾಂ ।
ನ ದದ್ಯಾದ್ಬ್ರಾಹ್ಮಣೇಭ್ಯಶ್ಚ ದೈವೇನಾಜ್ಞಾನತೋಽಥವಾ ॥೫೪॥

ಮುಹೂರ್ತೇ ಸಮತೀತೇ ತು ದ್ವಿಗುಣಾ ಸಾ ಭವೇದ್ಧ್ರುವಂ ।
ಏಕರಾತ್ರೇ ವ್ಯತೀತೇ ಚ ಭವೇಚ್ಛತಗುಣಾ ಚ ಸಾ ॥೫೫॥

---

ಯಜ್ಞದೇವನು ಪತ್ನಿಯಾದ ದಕ್ಷಿಣೆಯನ್ನೂ ಫಲವನ್ನೂ ಕೊಡುವ ಪುತ್ರನನ್ನೂ ಪಡೆದು ಕರ್ಮವನ್ನು ಮಾಡುವ ಸಮಸ್ತರಿಗೂ ಫಲವನ್ನು ಕೊಟ್ಟನು. ||೫೧||

ಆಗ ದೇವತೆಗಳೇ ಮೊದಲಾದವರು ಸಂಪೂರ್ಣವಾದ ಇಷ್ಟಾರ್ಥಗಳನ್ನು ಪಡೆದು ತಮ್ಮ ತಮ್ಮ ಸ್ಥಳಗಳಿಗೆ ಹೋದರು. ಓ ನಾರದನೇ, ನಮ್ಮ ತಂದೆಯಾದ ಧರ್ಮದೇವನು ಇದನ್ನು ನನಗೆ ಹೇಳಿದನು. ||೫೨||

ಎಲೈ ನಾರದಮುನಿಯೇ, ಕರ್ಮವನ್ನು ಮಾಡತಕ್ಕವನೂ, ಕರ್ಮವನ್ನು ಮಾಡಿದೊಡನೆಯೇ ಬೇಗನೆ ದಕ್ಷಿಣೆಯನ್ನು ಕೊಡಬೇಕು. ಹಾಗೆ ಕೊಟ್ಟರೆ ಬೇಗನೆ ಫಲವನ್ನು ಹೊಂದುವನು. ಎಂದು ವೇದದಲ್ಲಿ ಹೇಳಿರುವುದು. ||೫೩||

ಕರ್ಮಮಾಡಿದವನು ಕರ್ಮವು ಪೂರ್ತಿಯಾದೊಡನೆಯೇ ಅದೃಷ್ಟದೋಷದಿಂದಾಗಲೀ, ಅಜ್ಞಾನದಿಂದಾಗಲೀ, ಆಕ್ಷಣದಲ್ಲಿಯೇ ದಕ್ಷಿಣೆಯನ್ನು ಕೊಡದಿದ್ದರೆ, ಆ ದೋಷವು ಒಂದು ಗಳಿಗೆ ಕಳೆದರೆ ಎರಡರಷ್ಟಾಗುವುದು. ||೫೪||

ಒಂದು ರಾತ್ರಿಯು ಕಳೆದರೆ ದೋಷವು ನೂರರಷ್ಟಾಗುವುದು. ಮೂರು ರಾತ್ರಿಯು ಕಳೆದರೆ, ಹಿಂದಿನ ದೋಷದ ನೂರರಷ್ಟಾಗುವುದು. ಏಳು ದಿನಗಳಾದರೆ

ತ್ರಿರಾತ್ರೇ ತಚ್ಛತಗುಣಾ ಸಪ್ತಾಹೇ ದ್ವಿಗುಣಾ ತತಃ ।
ಮಾಸೇ ಲಕ್ಷಗುಣಾ ಪ್ರೋಕ್ತಾ ಬ್ರಾಹ್ಮಣಾನಾಂ ಚ ವರ್ಧನೇ ॥೫೬॥

ಸಂವತ್ಸರೇ ವ್ಯತೀತೇ ತು ಸಾ ತ್ರಿಕೋಟಿಗುಣಾ ಭವೇತ್ ।
ಕರ್ಮ ತದ್ಯಜಮಾನಾನಾಂ ಸರ್ವಂ ವೈ ನಿಷ್ಫಲಂ ಭವೇತ್ ॥೫೭॥

ಸ ಚ ಬ್ರಹ್ಮಸ್ವಹಾರೀ ಚ ನ ಕರ್ಮಾರ್ಹೋಽಶುಚಿರ್ನರಃ ।
ದರಿದ್ರೋ ವ್ಯಾಧಿಯುಕ್ತಶ್ಚ ತೇನ ಪಾಪೇನ ಪಾತಕೀ ॥೫೮॥

ತದ್ಗೃಹಾದ್ಯಾತಿ ಲಕ್ಷ್ಮೀಶ್ಚ ಶಾಪಂ ದತ್ವಾ ಸುದಾರುಣಂ ।
ಪಿತರೋ ನೈವ ಗೃಹ್ಣಂತಿ ತದ್ದತ್ತಂ ಶ್ರಾದ್ಧತರ್ಪಣಂ ॥೫೯॥

ಏವಂ ಸುರಾಶ್ಚ ತತ್ಪೂಜಾಂ ತದ್ದತ್ತಾಮಗ್ನಿರಾಹುತಿಂ ।
ದತ್ತಂ ನ ದೀಯತೇ ದಾನಂ ಗ್ರಹೀತಾ ನೈವ ಯಾಚತೇ ॥೬೦॥

ಉಭೌ ತೌ ನರಕೇ ಯಾತಃ ಛಿನ್ನರಜ್ಜ್ವಾ ಯಥಾ ಘಟಃ ।
ನಾರ್ಪಯೇದ್ಯಜಮಾನಶ್ಚೇದ್ಯಾಚಿತಶ್ಚಾಪಿ ದಕ್ಷಿಣಾಂ ॥೬೧॥

---

ಹಿಂದಿನ ಎರಡರಷ್ಟು, ತಿಂಗಳಲ್ಲಿ ಲಕ್ಷಪಾಲು ಹೆಚ್ಚುವುದು. ಒಂದು ವರ್ಷವು ಕಳೆದರೆ ಅದು ಹಿಂದಿನದರ ಮೂರುಕೋಟಿ ಪಾಲು ದೋಷವು ಹೆಚ್ಚಿ ಯಜಮಾನನು ಮಾಡಿದ ಸಮಸ್ತಕರ್ಮವೂ ಫಲವಿಲ್ಲದ್ದಾಗುವುದು. ॥೫೫-೫೬-೫೭॥

ಕರ್ಮವನ್ನು ಮಾಡಿ ದಕ್ಷಿಣೆಯನ್ನು ಕೊಡದವನು ಬ್ರಾಹ್ಮಣನ ದ್ರವ್ಯವನ್ನು ಕದ್ದ ಪಾಪಕ್ಕೆ ಗುರಿಯಾಗಿ ಅಶುದ್ಧನಾಗಿ ಕರ್ಮವನ್ನು ಮಾಡುವುದಕ್ಕೆ ಯೋಗ್ಯನಾಗುವುದಿಲ್ಲ. ಆ ಪಾಪದಿಂದ ದರಿದ್ರನಾಗಿ, ರೋಗಿಯೂ ಆಗುವನು. ॥೫೮॥

ಲಕ್ಷ್ಮೀದೇವಿಯು ಆ ಮನುಷ್ಯನಿಗೆ ಭಯಂಕರವಾದ ಶಾಪವನ್ನು ಕೊಟ್ಟು ಅವನ ಮನೆಯಿಂದ ಹೊರಟು ಹೋಗುವಳು. ಪಿತೃದೇವತೆಗಳು ಅವನು ಕೊಟ್ಟ ಶ್ರಾದ್ಧವನ್ನೂ, ತರ್ಪಣದ ನೀರನ್ನೂ ಮುಟ್ಟುವುದೇ ಇಲ್ಲ. ॥೫೯॥

ಹೀಗೆಯೇ ದೇವತೆಗಳು ಅವನು ಮಾಡಿದ ಪೂಜೆಯನ್ನೂ, ಅಗ್ನಿಯು ಅವನು ಕೊಟ್ಟ ಆಹುತಿಗಳನ್ನೂ ಮುಟ್ಟುವುದಿಲ್ಲ. ಕರ್ಮವನ್ನು ಮಾಡುವಾಗ ಮನಸ್ಸಿನಲ್ಲಿ ಸಂಕಲ್ಪಿಸಿದ ದಕ್ಷಿಣಾರೂಪವಾದ ದಾನವನ್ನು ಕೇಳಿದರೂ, ಕೊಡ

ಭವೇದ್ಬ್ರಹ್ಮಸ್ವಾಪಹಾರೀ ಕುಂಭೀಪಾಕಂ ವ್ರಜೇದ್ಧ್ರುವಂ ।
ವರ್ಷಲಕ್ಷಂ ವಸೇತ್ತತ್ರ ಯಮದೂತೇನ ತಾಡಿತಃ ॥೬೨॥

ತತೋ ಭವೇತ್ಸಚಾಂಡಾಲೋ ವ್ಯಾಧಿಯುಕ್ತೋ ದರಿದ್ರಕಃ ।
ಪಾತಯೇತ್ಪುರುಷಾನ್ಸಪ್ತ ಪೂರ್ವಾಂಶ್ಚ ಸಪ್ತಜನ್ಮತಃ ॥೬೩॥

ಇತ್ಯೇವಂ ಕಥಿತಂ ವಿಪ್ರ ಕಿಂ ಭೂಯಃ ಶ್ರೋತುಮಿಚ್ಛಸಿ ।

॥ ನಾರದ ಉವಾಚ ॥

ಯತ್ಕರ್ಮ ದಕ್ಷಿಣಾಹೀನಂ ಕೋ ಭುಂಕ್ತೇ ತತ್ಫಲಂ ಮುನೇ ॥೬೪॥

ಪೂಜಾವಿಧಿಂ ದಕ್ಷಿಣಾಯಾಃ ಪುರಾ ಯಜ್ಞಕೃತಂ ವದ ।

॥ ನಾರಾಯಣ ಉವಾಚ ॥

ಕರ್ಮಣೋಽದಕ್ಷಿಣಸ್ಯೈವ ಕುತ ಏವ ಫಲಂ ಮುನೇ ॥೬೫॥

---

ದಿದ್ದರೂ, ತೆಗೆದುಕೊಳ್ಳತಕ್ಕ ಬ್ರಾಹ್ಮಣನು ಕೇಳದಿದ್ದರೂ ಈ ಇಬ್ಬರೂ ಹಗ್ಗವು ಕಿತ್ತುಹೋದ ಗಡಿಗೆಯಂತೆ ನರಕಕ್ಕೆ ಹೋಗುವರು. ॥೬೦-೬೧॥

ಕರ್ಮಮಾಡಿದ ಯಜಮಾನನು ಕೇಳಿದರೂ ಸಹ ದಕ್ಷಿಣೆಯನ್ನು ಕೊಡ ದಿದ್ದರೆ ಬ್ರಾಹ್ಮಣನ ದ್ರವ್ಯವನ್ನು ಅಪಹಾರಮಾಡಿದ ಪಾಪಕ್ಕೆ ಗುರಿಯಾಗಿ ಕುಂಭೀ ಪಾಕವೆಂಬ ನರಕಕ್ಕೆ ಹೋಗುವನು. ಅಲ್ಲಿ ಯಮದೂತರಿಂದ ಹಿಂಸೆಯನ್ನು ಅನು ಭವಿಸುತ್ತಾ ಒಂದು ಲಕ್ಷ ವರ್ಷಗಳವರೆಗೆ ಇದ್ದು ಆಮೇಲೆ ರೋಗಿಯೂ, ದರಿದ್ರನೂ ಆದ ಚಂಡಾಲನಾಗಿ ಹುಟ್ಟಿ, ತನ್ನ ಹಿಂದಿನ ಏಳು ತಲೆಯ ಪಿತೃಗಳನ್ನೂ ಮುಂದೆ ಹುಟ್ಟುವ ಏಳು ತಲೆಯ ಜನರನ್ನೂ ನರಕಕ್ಕೆ ಕೆಡುಹುವನು. ॥೬೨-೬೩॥

ಎಲೈ ನಾರದನೇ, ದಕ್ಷಿಣಾ ಮತ್ತು ಫಲದ ವಿಷಯಗಳನ್ನೆಲ್ಲವನ್ನೂ ಹೇಳಿರು ವೆನು. ಇನ್ನೇನನ್ನು ಕೇಳಬೇಕೆಂದಿರುವೆ ?

ಓ ನಾರಾಯಣಮುನಿಯೇ, ದಕ್ಷಿಣೆಯನ್ನು ಕೊಡದಿರುವ ಕರ್ಮದ ಫಲವನ್ನು ಯಾರು ಅನುಭವಿಸುವರು ? ಪೂರ್ವದಲ್ಲಿ ಯಜ್ಞದೇವನು ಮಾಡಿದ ದಕ್ಷಿಣಾದೇವಿಯ ಪೂಜಾವಿಧಾನವನ್ನು ಹೇಳು. ಎಂದು ನಾರದನು ಕೇಳಿದನು.॥೬೪॥

ನಾರಾಯಣನು ಹೇಳಿದನು - ಎಲೈ ನಾರದನೇ, ದಕ್ಷಿಣೆಯಿಲ್ಲದಿರುವ ಆ ಕರ್ಮದ ಫಲವು ಯಾರಿಗೆ ಬರುವುದೆಂಬ ಸಂದೇಹಕ್ಕೆ ಅವಕಾಶವಿಲ್ಲ. ದಕ್ಷಿಣಾ

ಸದಕ್ಷಿಣೇ ಕರ್ಮಣಿ ಚ ಫಲಮೇವ ಪ್ರವರ್ತತೇ ।
ಅದಕ್ಷಿಣಂ ಚ ಯತ್ಕರ್ಮ ತದ್ಭುಂಙ್ತೇ ಚ ಬಲಿರ್ಮುನೇ ॥೬೬॥

ಬಲಯೇ ತತ್ಪ್ರದತ್ತಂ ಚ ವಾಮನೇನ ಪುರಾ ಮುನೇ ।
ಅಶ್ರೋತ್ರಿಯಶ್ರಾದ್ಧ ದ್ರವ್ಯಮಶ್ರದ್ಧಾದಾನಮೇವ ಚ ॥೬೭॥

ವೃಷಲೀಪತಿವಿಪ್ರಾಣಾಂ ಪೂಜಾದ್ರವ್ಯಾದಿಕಂ ಚ ಯತ್ ।
ಅಸದ್ದ್ವಿಜೈಃ ಕೃತಂ ಯಜ್ಞಮಶುಚೇಃ ಪೂಜನಂ ಚ ಯತ್ ॥೬೮॥

ಗುರಾವಭಕ್ತಸ್ಯ ಕರ್ಮ ಬಲಿರ್ಭುಂಙ್ತೇ ನ ಸಂಶಯಃ ।
ದಕ್ಷಿಣಾಯಾಶ್ಚ ಯದ್ಧ್ಯಾನಂ ಸ್ತೋತ್ರಂ ಪೂಜಾವಿಧಿಕ್ರಮಂ ॥೬೯॥

ತತ್ಸರ್ವಂ ಕಣ್ವಶಾಖೋಕ್ತಂ ಪ್ರವಕ್ಷ್ಯಾಮಿ ನಿಶಾಮಯ ।
ಪುರಾ ಸಂಪ್ರಾಪ್ಯ ತಾಂ ಯಜ್ಞಃ ಕರ್ಮದಕ್ಷಾಂ ಚ ದಕ್ಷಿಣಾಂ ॥೭೦॥
ಮುಮೋಹಾಸ್ಯಾಃ ಸ್ವರೂಪೇಣ ತುಷ್ಟಾವ ಕಾಮಕಾತರಃ ।

---

ಸಹಿತವಾದ ಕರ್ಮಕ್ಕೇ ಫಲವು ಬರುವುದು. ಒಂದುವೇಳೆ ದಕ್ಷಿಣೆಯಿಲ್ಲದ ಕರ್ಮಕ್ಕೂ ಫಲವು ಬಂದರೆ ಆ ಫಲವನ್ನು ಬಲಿಚಕ್ರವರ್ತಿಯು ಅನುಭವಿಸುವನು. ॥೬೫-೬೬॥

ನಾರದನೇ, ಪೂರ್ವದಲ್ಲಿ ವಾಮನನು ಬಲಿಚಕ್ರವರ್ತಿಗೆ ದಕ್ಷಿಣಾಹೀನವಾದ ಕರ್ಮಗಳ ಫಲವನ್ನು ಕೊಟ್ಟನಲ್ಲದೇ ವೇದಾಭ್ಯಾಸವಿಲ್ಲದವನು ಮಾಡಿದ ಶ್ರಾದ್ಧದ ಫಲವನ್ನೂ ಶೂದ್ರಸ್ತ್ರೀಯಗಂಡನು ಮಾಡಿದ ಪೂಜಾಫಲವನ್ನೂ, ವ್ಯಭಿಚಾರಾದಿ ದೋಷದುಷ್ಟರಾದ ಬ್ರಾಹ್ಮಣರು ಮಾಡಿದ ಪೂಜಾಫಲವನ್ನೂ, ಅಶುದ್ಧನಾದವನು ಮಾಡಿದ ಪೂಜೆಯ ಫಲವನ್ನೂ ಗುರುಭಕ್ತಿಯಿಲ್ಲದವನು ಮಾಡಿದ ಕರ್ಮಫಲಗಳನ್ನೂ ಕೊಟ್ಟನು. ಆದುದರಿಂದ ಬಲಿಚಕ್ರವರ್ತಿಯೇ ಈ ಫಲಗಳನ್ನು ಅನುಭವಿಸುವನು. ಸಂದೇಹವಿಲ್ಲ. ॥೬೭-೬೮॥

ದಕ್ಷಿಣಾದೇವಿಯ ಧ್ಯಾನವನ್ನೂ ಸ್ತೋತ್ರವನ್ನೂ, ಪೂಜಾವಿಧಿಯನ್ನೂ ಕಣ್ವಶಾಖೆಯಲ್ಲಿ ಹೇಳಿರುವುದು. ಅದನ್ನು ಹೇಳುವೆನು ಕೇಳು. ॥೬೯॥

ಪೂರ್ವದಲ್ಲಿ ಯಜ್ಞದೇವನು ಕರ್ಮಗಳ ಫಲಪ್ರದಳಾದ ದಕ್ಷಿಣಾದೇವಿಯನ್ನು ಪಡೆದು ಅವಳ ರೂಪವನ್ನು ಕಂಡು ಮೋಹಿಸಿ ಕಾಮಾತುರನಾಗಿ ಅವಳನ್ನು ಸ್ತೋತ್ರಮಾಡಿದನು. ॥೭೦॥

|| ಯಜ್ಞಉವಾಚ ||

ಪುರಾ ಗೋಲೋಕೇ ಗೋಪೀ ತ್ವಂ ಗೋಪೀನಾಂ ಪ್ರವರಾ ವರಾ ॥೭೦॥

ರಾಧಾಸಮಾ ತತ್ಸಖೀ ಚ ಶ್ರೀಕೃಷ್ಣಪ್ರೇಯಸೀ ಪ್ರಿಯಾ ।
ಕಾರ್ತಿಕೀ ಪೂರ್ಣಿಮಾಯಾಂ ತು ರಾಸೇ ರಾಧಾ ಮಹೋತ್ಸವೇ ॥೭೨॥

ಆವಿರ್ಭೂತಾ ದಕ್ಷಿಣಾಂಸಾಲ್ಲಕ್ಷ್ಮ್ಯಾಶ್ಚ ತೇನ ದಕ್ಷಿಣಾ ।
ಪುರಾ ತ್ವಂ ಚ ಸುಶೀಲಾಖ್ಯಾ ಖ್ಯಾತಾ ಶೀಲೇನ ಶೋಭನೇ ॥೭೩॥

ಲಕ್ಷ್ಮೀ ದಕ್ಷಾಂಸಭಾಗಾತ್ತ್ವಂ ರಾಧಾಶಾಪಾಚ್ಚ ದಕ್ಷಿಣಾ ।
ಗೋಲೋಕಾತ್ತ್ವಂ ಪರಿಭ್ರಷ್ಟಾ ಮಮ ಭಾಗ್ಯಾದುಪಸ್ಥಿತಾ ॥೭೪॥

ಕೃಪಾಂ ಕುರು ಮಹಾಭಾಗೇ ಮಾಮೇವ ಸ್ವಾಮಿನಂ ಕುರು ।
ಕರ್ಮಿಣಾಂ ಕರ್ಮಣಾಂ ದೇವಿ ತ್ವಮೇವ ಫಲದಾ ಸದಾ ॥೭೫॥

---

ದಕ್ಷಿಣಾದೇವಿಯೇ, ನೀನು ಪೂರ್ವದಲ್ಲಿ ಗೋಲೋಕದಲ್ಲಿ ಗೋಪಿಯರಲ್ಲಿ ಶ್ರೇಷ್ಠಳಾಗಿಯೂ, ರಾಧಾದೇವಿಗೆ ಸಮಾನಳಾಗಿಯೂ, ಅವಳ ಸಖಿಯಾಗಿಯೂ, ಶ್ರೀಕೃಷ್ಣನಿಗೆ ಪ್ರಿಯಳಾಗಿಯೂ, ಇದ್ದವಳು. ರಾಸಮಂಡಲದಲ್ಲಿ ಕಾರ್ತಿಕಮಾಸದ ಪೂರ್ಣಿಮೆಯ ದಿನ ರಾಧಾಮಹೋತ್ಸವ ಕಾಲದಲ್ಲಿ ಲಕ್ಷ್ಮೀದೇವಿಯ ಬಲಭುಜದಿಂದ ನೀನು ಆವಿರ್ಭವಿಸಿದುದರಿಂದ ದಕ್ಷಿಣಾದೇವಿಯೆಂದು ನಿನ್ನ ಹೆಸರಿರುವುದು ||೭೧-೭೨||

ಪೂರ್ವದಲ್ಲಿ ಒಳ್ಳೆಯ ನಡತೆಯಿಂದ ಕೂಡಿದ್ದುದರಿಂದ ಸುಶೀಲೆ ಎಂಬ ಹೆಸರನ್ನು ಹೊಂದಿ ನೀನು ಮಂಗಳಕರಳಾಗಿರುವೆ. ರಾಧಾದೇವಿಯು ಶಾಪದಿಂದ ಗೋಲೋಕವನ್ನು ಬಿಟ್ಟು ಲಕ್ಷ್ಮೀದೇವಿಯನ್ನು ಸೇರಿ, ಅವಳ ಬಲಭಾಗದ ಭುಜದಲ್ಲಿ ಹುಟ್ಟಿ, ದಕ್ಷಿಣಾ ಎಂಬ ಹೆಸರನ್ನು ಪಡೆದು, ನನ್ನ ಪುಣ್ಯದಿಂದ ನನ್ನನ್ನು ಸೇರಿದೆ.||೭೩-೭೪||

ಮಹಾಮಹಿಮಳಾದ ದೇವಿಯೇ, ದಯೆಯನ್ನು ತೋರಿಸಿ ನನ್ನನ್ನೇ ಪತಿಯನ್ನಾಗಿ ವರಿಸು. ಕರ್ಮಗಳನ್ನು ಮಾಡಿದವರಿಗೆ ನೀನೇ ಫಲವನ್ನು ಕೊಡತಕ್ಕವಳು. ||೭೫||

ತ್ವಯಾ ವಿನಾ ಚ ಸರ್ವೇಷಾಂ ಸರ್ವಂ ಕರ್ಮ ಚ ನಿಷ್ಫಲಂ ।
ತ್ವಯಾ ವಿನಾ ತಥಾ ಕರ್ಮ ಕರ್ಮಿಣಾಂ ಚ ನ ಶೋಭತೇ ॥೭೬॥

ಬ್ರಹ್ಮವಿಷ್ಣುಮಹೇಶಾಶ್ಚ ದಿಕ್ಪಾಲಾದಯ ಏವ ಚ ।
ಕರ್ಮಣಶ್ಚ ಫಲಂ ದಾತುಂ ನ ಶಕ್ತಾಶ್ಚ ತ್ವಯಾ ವಿನಾ ॥೭೭॥

ಕರ್ಮರೂಪೀ ಸ್ವಯಂ ಬ್ರಹ್ಮಾ ಫಲರೂಪೀ ಮಹೇಶ್ವರಃ ।
ಯಜ್ಞರೂಪೀ ವಿಷ್ಣುರಹಂ ತ್ವಮೇಷಾಂ ಸಾರರೂಪಿಣೀ ॥೭೮॥

ಫಲದಾತೃ ಪರಂ ಬ್ರಹ್ಮ ನಿರ್ಗುಣಾ ಪ್ರಕೃತಿಃ ಪರಾ ।
ಸ್ವಯಂ ಕೃಷ್ಣಶ್ಚ ಭಗವಾನ್ ಸ ಚ ಶಕ್ತಸ್ತ್ವಯಾ ಸಹ ॥೭೯॥

ತ್ವಮೇವ ಶಕ್ತಿಃ ಕಾಂತೇ ಮೇ ಶಶ್ವಜ್ಜನ್ಮನಿ ಜನ್ಮನಿ ।
ಸರ್ವಕರ್ಮಣಿ ಶಕ್ತೋಽಹಂ ತ್ವಯಾ ಸಹ ವರಾನನೇ ॥೮೦॥

---

ನೀನಿಲ್ಲದಿದ್ದರೆ ಎಲ್ಲರೂ ಮಾಡಿದ ಎಲ್ಲಕರ್ಮಗಳೂ, ಫಲವಿಲ್ಲದೇ ಹೋಗುವುವು. ನೀನಿಲ್ಲದಿದ್ದರೆ ಕರ್ಮಿಗಳು ಮಾಡುವ ಕರ್ಮಗಳು ಶೋಭಿಸುವುದಿಲ್ಲ.॥೭೬॥

ನೀನಿಲ್ಲದಿದ್ದರೆ ಬ್ರಹ್ಮ ವಿಷ್ಣು ಮಹೇಶ್ವರರೂ, ದಿಕ್ಪಾಲಕರೂ, ಕರ್ಮಗಳಿಗೆ ಫಲವನ್ನು ಕೊಡಲು ಶಕ್ತರಾಗುವುದಿಲ್ಲ. ॥೭೭॥

ಬ್ರಹ್ಮನು ಕರ್ಮಸ್ವರೂಪನು, ಮಹೇಶ್ವರನು ಫಲಸ್ವರೂಪನು, ಯಜ್ಞಸ್ವರೂಪನಾದ ವಿಷ್ಣುವೇ ನಾನು. ನೀನು ಈ ನಮ್ಮೆಲ್ಲರಿಗೂ ಸಾರಸ್ವರೂಪಳಾದವಳು. ॥೭೮॥

ಪ್ರಕೃತಿಗಿಂತ ಶ್ರೇಷ್ಠನಾದ ನಿರ್ಗುಣನಾದ ಬ್ರಹ್ಮನೇ ಫಲಕೊಡತಕ್ಕವನು. ಅವನೇ ಮಹಾತ್ಮನಾದ ಶ್ರೀಕೃಷ್ಣನಾಗಿರುವನು. ಅವನು ಪ್ರಕೃತಿಸ್ವರೂಪಳಾದ ನಿನ್ನೊಡನೆ ಕೂಡಿ ಫಲವನ್ನು ಕೊಡಲು ಶಕ್ತನಾಗಿರುವನು. ॥೭೯॥

ಎಲೈ ಪ್ರಿಯಳೇ, ನಾನು ಎಷ್ಟು ಜನ್ಮಗಳನ್ನು ಪಡೆದರೂ, ಆ ಜನ್ಮಗಳಲ್ಲೆಲ್ಲಾ ನೀನೇ ನನ್ನ ಶಕ್ತಿಸ್ವರೂಪಳಾಗಿರುವೆ. ಸುಂದರಮುಖಿಯೇ, ನಿನ್ನೊಡನೆ ಸೇರಿದ ನಾನು ಸಮಸ್ತ ಕರ್ಮಗಳಲ್ಲಿಯೂ ಶಕ್ತನಾಗಿರುವನು. ॥೮೦॥

ಇತ್ಯುಕ್ತ್ವಾ ಚ ಪುರಸ್ತಸ್ಥೌ ಯಜ್ಞಾಧಿಷ್ಠಾತೃದೇವತಾ ।
ತುಷ್ಟಾ ಬಭೂವ ಸಾ ದೇವೀ ಭೇಜೇ ತಾಂ ಕಮಲಾಕಲಾಂ ॥೮೧॥

ಇದಂ ಚ ದಕ್ಷಿಣಾಸ್ತೋತ್ರಂ ಯಜ್ಞಕಾಲೇ ಚ ಯಃ ಪಠೇತ್ ।
ಫಲಂ ಚ ಸರ್ವಯಜ್ಞಾನಾಂ ಪ್ರಾಪ್ನೋತಿ ನಾತ್ರಸಂಶಯಃ ॥೮೨॥

ರಾಜಸೂಯೇ ವಾಜಪೇಯೇ ಗೋಮೇಧೇ ನರಮೇಧಕೇ ।
ಅಶ್ವಮೇಧೇ ಲಾಂಗಲೇ ಚ ವಿಷ್ಣುಯಜ್ಞೇ ಯಶಸ್ಕರೇ ॥೮೩॥

ಧನದೇ ಭೂಮಿದೇ ಪೂರ್ತೇ ಫಲದೇ ಗಜಮೇಧಕೇ ।
ಲೋಹಯಜ್ಞೇ ಸ್ವರ್ಣಯಜ್ಞೇ ರತ್ನಯಜ್ಞೇಽಥ ತಾಮ್ರಕೇ ॥೮೪॥

ಶಿವಯಜ್ಞೇ ರುದ್ರಯಜ್ಞೇ ಶಕ್ರಯಜ್ಞೇ ಚ ಬಂಧುಕೇ ।
ವೃಷ್ಟೌ ವರುಣಯಾಗೇ ಚ ಕಂಡಕೇ ವೈರಿಮರ್ದನೇ ॥೮೫॥

ಶುಚಿಯಜ್ಞೇ ಧರ್ಮಯಜ್ಞೇಽಧ್ವರೇ ಚ ಪಾಪಮೋಚನೇ ।
ಬ್ರಹ್ಮಾಣೀ ಕರ್ಮಯಾಗೇ ಚ ಯೋನಿಯಾಗೇ ಚ ಭದ್ರದೇ ॥೮೬॥

---

ಹೀಗೆಂದು ಹೇಳಿ ಯಜ್ಞಕ್ಕೆ ಆಶ್ರಯದೇವತೆಯಾದ ಯಜ್ಞಪುರುಷನು ಆ ದೇವಿಯ ಮುಂದೆ ಅವಳ ಅಭಿಪ್ರಾಯವನ್ನು ತಿಳಿಯಲು ನಿಂತಿದ್ದನು. ಲಕ್ಷ್ಮಿಯ ಅಂಶಭೂತಳಾದ ಆ ದಕ್ಷಿಣಾದೇವಿಯೂ ಅವನನ್ನು ವರಿಸಿದಳು. ॥೮೧॥

ಈ ದಕ್ಷಿಣಾದೇವಿಯ ಸ್ತೋತ್ರವನ್ನು ಯಜ್ಞಕಾಲದಲ್ಲಿ ಯಾರು ಹೇಳುವರೋ ಅವರು ಸಮಸ್ತ ಯಜ್ಞಗಳ ಫಲಗಳನ್ನು ಯಾವ ಸಂಶಯವೂ ಇಲ್ಲದೆ ಹೊಂದುವರು. ॥೮೨॥

ರಾಜಸೂಯ, ವಾಜಪೇಯ, ಗೋಮೇಧ, ನರಮೇಧ, ಅಶ್ವಮೇಧ, ಲಾಂಗಲ ವಿಷ್ಣುಯಾಗ, ಧನವನ್ನೂ, ಭೂಮಿಯನ್ನೂ, ಕೊಡತಕ್ಕ ಯಾಗ, ಕೆರೆ ತೋಪು ಮುಂತಾದುವುಗಳ ಸಂಬಂಧವಾದ ಪೂರ್ತಯಾಗ, ಗಜಮೇಧ, ಲೋಹ ಚಿನ್ನ ರತ್ನ, ತಾಮ್ರ ಇವುಗಳ ಪ್ರಾಪ್ತಿಯಾಗುವ ಯಾಗಗಳು ಶಿವ, ರುದ್ರ, ಇಂದ್ರ, ವರುಣ ಈ ದೇವತಾಸಂಬಂಧವಾದ ಯಾಗಗಳು, ಬಂಧುಕಯಾಗ ವೃಷ್ಟಿಯಜ್ಞ, ಶತ್ರುಗಳನ್ನು ಸಂಹರಿಸುವ ಕಂಡಕವೆಂಬ ಯಾಗ, ಶುಚಿಯಜ್ಞ, ಧರ್ಮಯಜ್ಞ, ಪಾಪಮೋಚನವೆಂಬ ಯಜ್ಞ, ಬ್ರಹ್ಮಾಣೀ ಎಂಬ ಕರ್ಮಯಾಗ, ಮಂಗಳಕರವಾದ

ಏತೇಷಾಂ ಚ ಸಮಾರಂಭೇ ಇದಂ ಸ್ತೋತ್ರಂ ಚ ಯಃ ಪಠೇತ್ ।
ನಿರ್ವಿಘ್ನೇನ ಚ ತತ್ಕರ್ಮ ಸರ್ವಂ ಭವತಿ ನಿಶ್ಚಿತಂ ॥೮೭॥

ಇದಂ ಸ್ತೋತ್ರಂ ಚ ಕಥಿತಂ ಧ್ಯಾನಂ ಪೂಜಾವಿಧಿಂ ಶೃಣು ।
ಶಾಲಗ್ರಾಮೇ ಘಟೇ ವಾಽಪಿ ದಕ್ಷಿಣಾಂ ಪೂಜಯೇತ್ಸುಧೀಃ ॥೮೮॥

ಲಕ್ಷ್ಮೀದಕ್ಷಾಂಸಸಂಭೂತಾಂ ದಕ್ಷಿಣಾಂ ಕಮಲಾಕಲಾಂ ।
ಸರ್ವಕರ್ಮಸು ದಕ್ಷಾಂ ಚ ಫಲದಾಂ ಸರ್ವಕರ್ಮಣಾಂ ॥೮೯॥

ವಿಷ್ಣೋಃ ಶಕ್ತಿಸ್ವರೂಪಾಂ ಚ ಪೂಜಿತಾಂ ವಂದಿತಾಂ ಶುಭಾಂ ।
ಶುದ್ಧಿದಾಂ ಶುದ್ಧಿರೂಪಾಂ ಚ ಸುಶೀಲಾಂ ಶೋಭನಾಂ ಭಜೇ ॥೯೦॥

---

ಯೋನಿಯಾಗ ಎಂದರೆ ಮೂಲಪ್ರಕೃತಿಯಾಗ, ಅಂಬಾಯಜ್ಞ, ಈ ಯಾಗಗಳಲ್ಲಿ ಕೆಲವನ್ನು ಪ್ರಸಿದ್ಧವಾದ ವೇದಶಾಖೆಗಳಲ್ಲಿ ಹೇಳಿರುವುದು. ಇನ್ನು ಕೆಲವನ್ನು ಅಪ್ರಸಿದ್ಧವಾದುವುಗಳಲ್ಲಿ ಹೇಳಿರಬೇಕು. ||೮೩-೮೪-೮೫-೮೬||

ಈ ಯಾಗಗಳ ಪ್ರಾರಂಭದಲ್ಲಿ ಈ ದಕ್ಷಿಣಾದೇವಿಯ ಸ್ತೋತ್ರವನ್ನು ಯಾರು ಹೇಳುವರೋ ಅವರು ಮಾಡುವ ಕರ್ಮಗಳು ಯಾವ ತೊಂದರೆಯೂ ಆಗದೆ ಪೂರ್ಣವಾಗಿ ನೆರವೇರುವುವು. ||೮೭||

ದಕ್ಷಿಣಾದೇವಿಯ ಸ್ತೋತ್ರವನ್ನು ಹೇಳಿದೆನು. ಇನ್ನು ಧ್ಯಾನವನ್ನೂ ಪೂಜಾ ವಿಧಾನವನ್ನೂ ಹೇಳುವೆನು ಕೇಳು. ಬುದ್ಧಿವಂತನಾದ ಮನುಜನು ಶಾಲಗ್ರಾಮ ದಲ್ಲಾಗಲೀ, ಕಲಶದಲ್ಲಾಗಲೀ, ದಕ್ಷಿಣಾದೇವಿಯನ್ನು ಪೂಜಿಸಬೇಕು. ||೮೮||

ಲಕ್ಷ್ಮೀದೇವಿಯ ಬಲದ ಭುಜದಲ್ಲಿ ಹುಟ್ಟಿದ ಆ ದೇವಿಯ ಅಂಶಭೂತಳಾದ, ಸಮಸ್ತ ಕರ್ಮಗಳ ಫಲವನ್ನು ಕೊಡುವುದರಲ್ಲಿ ಸಮರ್ಥಳಾದ, ವಿಷ್ಣುವಿನ ಶಕ್ತಿಸ್ವರೂಪಳಾದ, ಎಲ್ಲರಿಂದಲೂ ಪೂಜೆಯನ್ನೂ, ನಮಸ್ಕಾರವನ್ನೂ ಪಡೆಯುವ ವಳಾದ, ಪರಿಶುದ್ಧಳೂ, ಮಂಗಳಕರಳೂ ಆಗಿ, ಶುದ್ಧಿಯನ್ನೂ ಮಂಗಳವನ್ನೂ, ಉಂಟುಮಾಡುವ, ಒಳ್ಳೆಯ ನಡತೆಯಿಂದ ಕೂಡಿದ ದಕ್ಷಿಣಾದೇವಿಯನ್ನು ಧ್ಯಾನ ಮಾಡುತ್ತೇನೆ. ||೮೯-೯೦||

ಧ್ಯಾತ್ವಾನೇನೈವ ವರದಾಂ ಮೂಲೇನ ಪೂಜಯೇತ್ಸುಧೀಃ ।
ದತ್ವಾ ಪಾದ್ಯಾದಿಕಂ ದೇವ್ಯೈ ವೇದೋಕ್ತೇನೈವ ನಾರದ ॥೯೦॥

ಓಂ, ಶ್ರೀಂ, ಕ್ಲೀಂ, ಹ್ರೀಂ, ದಕ್ಷಿಣಾಯೈ ಸ್ವಾಹೇತಿ ಚ ವಿಚಕ್ಷಣಃ ।
ಪೂಜಯೇದ್ವಿಧಿವದ್ಭಕ್ತ್ಯಾ ದಕ್ಷಿಣಾಂ ಸರ್ವಪೂಜಿತಾಂ ॥೯೨॥

ಇತ್ಯೇವಂ ಕಥಿತಂ ಬ್ರಹ್ಮನ್ದಕ್ಷಿಣಾಖ್ಯಾನಮೇವ ಚ ।
ಸುಖದಂ ಪ್ರೀತಿದಂ ಚೈವ ಫಲದಂ ಸರ್ವಕರ್ಮಣಾಂ ॥೯೩॥

ಇದಂ ಚ ದಕ್ಷಿಣಾಖ್ಯಾನಂ ಯಃ ಶೃಣೋತಿ ಸಮಾಹಿತಃ ।
ಅಂಗಹೀನಂ ಚ ತತ್ಕರ್ಮ ನ ಭವೇದ್ಭಾರತೇ ಭುವಿ ॥೯೪॥

ಅಪುತ್ರೋ ಲಭತೇ ಪುತ್ರಂ ನಿಶ್ಚಿತಂ ಚ ಗುಣಾನ್ವಿತಂ ।
ಭಾರ್ಯಾಹೀನೋ ಲಭೇದ್ಭಾರ್ಯಾಂ ಸುಶೀಲಾಂ ಸುಂದರೀಂ ಪರಾಂ ॥೯೫॥

---

ಎಲೈ ನಾರದನೇ, ಮೇಲೆ ಹೇಳಿರುವಂತೆ ಮಂತ್ರದಿಂದ ಧ್ಯಾನಮಾಡಿ ವೇದೋಕ್ತವಾದ ಮೂಲಮಂತ್ರದಿಂದ ದೇವಿಗೆ ಪಾದ್ಯಾದಿಗಳನ್ನು ಸಮರ್ಪಿಸಿ ಪೂಜೆಯನ್ನು ಮಾಡಬೇಕು. ॥೯೦॥

ಬುದ್ಧಿವಂತನಾದವನು ಸಮಸ್ತರಿಗೂ ಪೂಜ್ಯಳಾದ ದಕ್ಷಿಣಾದೇವಿಯನ್ನು ಭಕ್ತಿಯಿಂದ, ಓಂ, ಶ್ರೀಂ, ಕ್ಲೀಂ, ಹ್ರೀಂ, ದಕ್ಷಿಣಾಯೈ ಸ್ವಾಹಾ ಎಂಬ ಮೂಲ ಮಂತ್ರದಿಂದ ವೇದವಿಧಿಗನುಸಾರವಾಗಿ ಪೂಜಿಸಬೇಕು. ॥೯೨॥

ಬ್ರಹ್ಮಸ್ವರೂಪನಾದ ನಾರದನೇ, ಸುಖವನ್ನೂ, ಪ್ರೀತಿಯನ್ನೂ, ಸಮಸ್ತ ಕರ್ಮಗಳ ಫಲವನ್ನೂ ಕೊಡತಕ್ಕ ದಕ್ಷಿಣಾದೇವಿಯ ಆಖ್ಯಾನವನ್ನು ಹೇಳಿದೆನು. ॥೯೩॥

ಈ ದಕ್ಷಿಣಾದೇವಿಯ ಕಥೆಯನ್ನು ಏಕಾಗ್ರಚಿತ್ತದಿಂದ ಯಾರು ಕೇಳು ತ್ತಾರೆಯೋ ಭರತಖಂಡದಲ್ಲಿ ಅವರು ಮಾಡಿದ ಕರ್ಮಗಳು ಅಂಗಹೀನವಾಗದೇ ಪೂರ್ಣಫಲವನ್ನು ಕೊಡುವುವು. ॥೯೪॥

ಪುತ್ರರಿಲ್ಲದವರು ಗುಣವಂತರಾದ ಪುತ್ರರನ್ನು ಪಡೆಯುವರು. ಹೆಂಡಿತಿ ಇಲ್ಲದವನು ಒಳ್ಳೆಯ ನಡತೆಯುಳ್ಳವಳೂ, ಸುಂದರಿಯೂ, ವಿನಯವಂತಳೂ,

ವರಾರೋಹಾಂ ಪುತ್ರವತೀಂ ವಿನೀತಾಂ ಪ್ರಿಯವಾದಿನೀಂ ।
ಪತಿವ್ರತಾಂ ಚ ಶುದ್ಧಾಂ ಚ ಕುಲಜಾಂ ಚ ವಧೂಂ ವರಾಂ ॥೯೬॥

ವಿದ್ಯಾಹೀನೋ ಲಭೇದ್ವಿದ್ಯಾಂ ಧನಹೀನೋ ಲಭೇದ್ಧನಂ ।
ಭೂಮಿಹೀನೋ ಲಭೇದ್ಭೂಮಿಂ ಪ್ರಜಾಹೀನೋ ಲಭೇತ್ಪ್ರಜಾಂ ॥೯೭॥

ಸಂಕಟೇ ಬಂಧುವಿಚ್ಛೇದೇ ವಿಪತ್ತೌ ಬಂಧನೇ ತಥಾ ।
ಮಾಸಮೇಕಮಿದಂ ಶ್ರುತ್ವಾ ಮುಚ್ಯತೇ ನಾತ್ರ ಸಂಶಯಃ ॥೯೮॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ನವಮಸ್ಕಂಧೇ
ಪಂಚಚತ್ವಾರಿಂಶೋಽಧ್ಯಾಯಃ

---

ಶ್ರೇಷ್ಠಳೂ, ಸತ್ಕುಲದಲ್ಲಿ ಹುಟ್ಟಿದವಳೂ, ಪತಿವ್ರತೆಯೂ ಪ್ರಿಯವಾದ ಮಾತನಾಡುವವಳೂ, ಪತಿವ್ರತೆಯೂ ಆದ ಪತ್ನಿಯನ್ನು ಪಡೆಯುವನು. ॥೯೫-೯೬॥

ವಿದ್ಯೆಯಿಲ್ಲದವನು ವಿದ್ಯೆಯನ್ನೂ, ಧನವಿಲ್ಲದವನು ಧನವನ್ನೂ, ಭೂಮಿಯಿಲ್ಲದವನು ಭೂಮಿಯನ್ನೂ, ಮಕ್ಕಳಿಲ್ಲದವನು ಮಕ್ಕಳನ್ನೂ, ಪಡೆವನು, ಕಷ್ಟಕಾಲದಲ್ಲಿಯೂ, ನಂಟರನ್ನಗಲಿದಾಗಲೂ, ಆಪತ್ಕಾಲದಲ್ಲಿಯೂ,, ಸೆರೆಸಿಕ್ಕಿದಾಗಲೂ, ಒಂದು ತಿಂಗಳ ವರೆಗೆ ಈ ದಕ್ಷಿಣಾದೇವಿಯ ಕಥೆಯನ್ನು ಕೇಳಿದರೆ ಅವರ ದುಃಖಗಳೆಲ್ಲವೂ ಬಿಡುಗಡೆಯಾಗುವುವು. ಈ ವಿಷಯದಲ್ಲಿ ಸಂದೇಹವಿಲ್ಲ. ॥೯೭-೯೮॥

ಇಲ್ಲಿಗೆ ದೇವೀಭಾಗವತಮಹಾಪುರಾಣದ ಒಂಬತ್ತನೆಯ ಸ್ಕಂಧದಲ್ಲಿ
ನಲವತ್ತೈದನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ನವಮಸ್ಕಂಧೇ

### || ಷಟ್‌ಚತ್ವಾರಿಂಶೋಽಧ್ಯಾಯಃ ||

### ನಲವತ್ತಾರನೆಯ ಅಧ್ಯಾಯವು

|| ನಾರದ ಉವಾಚ ||

**ಅನೇಕಾನಾಂ ಚ ದೇವೀನಾಂ ಶ್ರುತಮಾಖ್ಯಾನಮುತ್ತಮಂ ।**
**ಅನ್ಯಾಸಾಂ ಚರಿತಂ ಬ್ರಹ್ಮನ್ವದ ವೇದವಿದಾಂ ವರ ॥೧॥**

|| ನಾರಾಯಣ ಉವಾಚ ||

**ಸರ್ವಾಸಾಂ ಚರಿತಂ ವಿಪ್ರ ವೇದೇಷು ಚ ಪೃಥಕ್ ಪೃಥಕ್ ।**
**ಪೂರ್ವೋಕ್ತಾನಾಂ ಚ ದೇವೀನಾಂ ಕಾಸಾಂ ಶ್ರೋತುಮಿಹೇಚ್ಛಸಿ ॥೨॥**

---

ವೇದವನ್ನು ತಿಳಿದವರಲ್ಲಿ ಉತ್ತಮನಾದ ಬ್ರಹ್ಮಸ್ವರೂಪನಾದ ನಾರಾಯಣ ಮುನಿಯೇ, ಸರಸ್ವತಿಯೇ ಮೊದಲಾದ ಅನೇಕದೇವಿಯರ ಉತ್ತಮವಾದ ಕಥೆಗಳನ್ನು ಕೇಳಿದೆನು. ಮಿಕ್ಕದೇವಿಯರ ಚರಿತ್ರೆಯನ್ನೂ ನನಗೆ ಹೇಳು ಎಂದು ನಾರದನು ಹೇಳಿದನು. ||೧||

ನಾರಾಯಣನು ಹೇಳಿದನು—ಎಲೈ ನಾರದನೇ, ವೇದದಲ್ಲಿ ಸಮಸ್ತದೇವಿಯರ ಕಥೆಗಳನ್ನೂ ಬೇರೆ ಬೇರೆಯಾಗಿ ಹೇಳಿರುವುದು. ಆ ದೇವಿಯರಲ್ಲಿ ಯಾರ ಚರಿತ್ರೆಯನ್ನು ಕೇಳಬೇಕೆಂದಪೇಕ್ಷಿಸುವೆ? ||೨||

|| ನಾರದ ಉವಾಚ ||

**ಷಷ್ಠೀ ಮಂಗಲಚಂಡೀಚ ಮನಸಾ ಪ್ರಕೃತೇಃ ಕಲಾ ।**
**ಉತ್ಪತ್ತಿಮಾಸಾಂ ಚರಿತಂ ಶ್ರೋತುಮಿಚ್ಛಾಮಿ ತತ್ತ್ವತಃ ॥೩॥**

|| ನಾರಾಯಣ ಉವಾಚ ||

**ಷಷ್ಠಾಂಶಾ ಪ್ರಕೃತೇರ್ಯಾ ಚ ಸಾ ಚ ಷಷ್ಠೀ ಪ್ರಕೀರ್ತಿತಾ ।**
**ಬಾಲಕಾನಾಮಧಿಷ್ಠಾತ್ರೀ ವಿಷ್ಣುಮಾಯಾ ಚ ಬಾಲದಾ ॥೪॥**

**ಮಾತೃಕಾಸು ಚ ವಿಖ್ಯಾತಾ ದೇವಸೇನಾಽಭಿದಾ ಚ ಯಾ ।**
**ಪ್ರಾಣಾಧಿಕಪ್ರಿಯಾ ಸಾಧ್ವೀ ಸ್ಕಂದ ಭಾರ್ಯಾ ಚ ಸುವ್ರತಾ ॥೫॥**

**ಆಯುಃಪ್ರದಾ ಚ ಬಾಲಾನಾಂ ಧಾತ್ರೀ ರಕ್ಷಣಕಾರಿಣೀ ।**
**ಸತತಂ ಶಿಶುಪಾರ್ಶ್ವಸ್ಥಾ ಯೋಗೇನ ಸಿದ್ಧಿಯೋಗಿನೀ ॥೬॥**

---

ಪ್ರಕೃತಿಯ ಅಂಶಭೂತವಾದ ಷಷ್ಠೀ, ಮಂಗಲಚಂಡೀ, ಮನಸಾ ಈ ದೇವಿಯರ ಉತ್ಪತ್ತಿಯನ್ನೂ, ಚರಿತ್ರೆಯನ್ನೂ ಕೇಳಬೇಕೆಂದು ಬಯಸುವೆನು. ॥೩॥

ನಾರಾಯಣನು ಹೇಳಿದನು--ಮೂಲಪ್ರಕೃತಿಯ ಆರನೆಯ ಒಂದುಭಾಗದ ಅವತಾರವಾದುದರಿಂದ ಷಷ್ಠೀದೇವೀ ಎಂದು ಹೆಸರು ಬಂದಿರುವುದು. ಈ ದೇವಿಯು ಬಾಲಕರಿಗೆ ಆಶ್ರಯವಾದವಳು, ಮಾಯಾಸ್ವರೂಪಳು, ಮಕ್ಕಳ ಫಲವನ್ನು ಕೊಡತಕ್ಕವಳು. ॥೪॥

ಸಪ್ತಮಾತೃಕಾದೇವಿಯರಲ್ಲಿ ಪ್ರಸಿದ್ಧಳಾದ ವೈಷ್ಣವೀದೇವಿಯೇ ಇವಳು. ದೇವಸೇನಾ ಎಂಬ ಹೆಸರಿನಿಂದ ಒಳ್ಳೆಯ ವ್ರತನಿಯಮವುಳ್ಳವಳಾಗಿ ಪತಿವ್ರತೆಯಾಗಿ ಕುಮಾರಸ್ವಾಮಿಗೆ ಪ್ರಾಣಕ್ಕಿಂತಲೂ ಹೆಚ್ಚು ಪ್ರೀತಿಪಾತ್ರಳಾದ ಪತ್ನಿಯಾಗಿರುವಳು. ಆಯುಷ್ಯಸೂಕ್ತದಲ್ಲಿ ಇಂದ್ರಸೇನಾ ಎಂಬ ಹೆಸರೂ ಬರುವುದು. ॥೫॥

ಬಾಲಕರಿಗೆ ಆಯುಸ್ಸನ್ನು ಕೊಟ್ಟು ಕಾಪಾಡುವ ತಾಯಿಯಾದವಳು. ಸಿದ್ಧವಾದ ಯೋಗಶಕ್ತಿಯುಳ್ಳವಳಾಗಿ ಆಸಕ್ತಿಯಿಂದ ಯಾವಾಗಲೂ ಮಕ್ಕಳ ರಕ್ಷಣೆಗಾಗಿ ಸಮೀಪದಲ್ಲಿಯೇ ಇರುವಳು. ॥೬॥

ತಸ್ಯಾಃ ಪೂಜಾವಿಧಿಂ ಬ್ರಹ್ಮನ್ನಿತಿಹಾಸಮಿದಂ ಶೃಣು ।
ಯಚ್ಛ್ರುತಂ ಧರ್ಮವಕ್ತ್ರೇಣ ಸುಖದಂ ಪುತ್ರದಂ ಪರಂ ॥೭॥

ರಾಜಾ ಪ್ರಿಯವ್ರತಶ್ಚಾಸೀತ್ಸ್ವಾಯಂಭುವಮನೋಃ ಸುತಃ ।
ಯೋಗೀಂದ್ರೋ ನೋದ್ವಹದ್ಭಾರ್ಯಾಂ ತಪಸ್ಯಾಸು ರತಃ ಸದಾ ॥೮॥

ಬ್ರಹ್ಮಾಜ್ಞಯಾ ಚ ಯತ್ನೇನ ಕೃತದಾರೋ ಬಭೂವ ಹ ।
ಸುಚಿರಂ ಕೃತದಾರಶ್ಚ ನ ಲೇಭೇ ತನಯಂ ಮುನೇ ॥೯॥

ಪುತ್ರೇಷ್ಟಿಯಜ್ಞಂ ತಂ ಚಾಪಿ ಕಾರಯಾಮಾಸ ಕಶ್ಯಪಃ ।
ಮಾಲಿನ್ಯೈ ತಸ್ಯ ಕಾಂತಾಯೈ ಮುನಿರ್ಯಜ್ಞಚರುಂ ದದೌ ॥೧೦॥

ಭುಕ್ತ್ವಾ ಚ ತಂ ಚರುಂ ತಸ್ಯಾಃ ಸದ್ಯೋ ಗರ್ಭೋ ಬಭೂವ ಹ ।
ದಧಾರ ತಂ ಚ ಸಾ ದೇವೀ ದೈವಂ ದ್ವಾದಶವತ್ಸರಂ ॥೧೧॥

---

ಬ್ರಹ್ಮಸ್ವರೂಪನಾದ ನಾರದನೇ, ಆ ದೇವಿಯ ಪೂಜಾವಿಧಾನವನ್ನೂ ಚರಿತ್ರೆಯನ್ನೂ ನಮ್ಮ ತಂದೆಯಾದ ಧರ್ಮದೇವನ ಬಾಯಿಂದ ಕೇಳಿದಂತೆ ಹೇಳುವೆನು. ಅದು ಸುಖವನ್ನೂ, ಪುತ್ರರನ್ನೂ ಕೊಡತಕ್ಕದ್ದಾಗಿರುವುದು. ॥೭॥

ಪೂರ್ವದಲ್ಲಿ ಸ್ವಾಯಂಭುವ ಮನುವಿನ ಮಗನಾದ ಪ್ರಿಯವ್ರತನೆಂಬ ರಾಜನು ಯೋಗಾಭ್ಯಾಸಮಾಡಿ ಮದುವೆಯನ್ನು ಮಾಡಿಕೊಳ್ಳದೆ ಯಾವಾಗಲೂ ತಪಸ್ಸಿನಲ್ಲೇ ಆಸಕ್ತನಾಗಿದ್ದನು. ॥೮॥

ಅವನು ಬ್ರಹ್ಮನ ಅಪ್ಪಣೆಯಿಂದ ಪ್ರಯತ್ನಪೂರ್ವಕವಾಗಿ ಮದುವೆಯನ್ನು ಮಾಡಿಕೊಂಡನು. ಬಹಳಕಾಲವಾದರೂ ಅವನಿಗೆ ಮಕ್ಕಳಾಗಲಿಲ್ಲ. ॥೯॥

ಕಶ್ಯಪಮುನಿಯು ಅವನಿಂದ ಪುತ್ರಕಾಮೇಷ್ಟಿ ಎಂಬ ಯಜ್ಞವನ್ನು ಮಾಡಿಸಿದನು. ಅವನ ಹೆಂಡಿತಿಯಾದ ಮಾಲಿನಿ ಎಂಬವಳಿಗೆ ಆ ಯಜ್ಞದ ಚರುವನ್ನು ಕೊಟ್ಟನು. ॥೧೦॥

ಆ ಚರುವನ್ನು ಭೋಜನಮಾಡುತ್ತಲು ಅವಳಿಗೆ ಆ ಕ್ಷಣದಲ್ಲಿಯೇ ಗರ್ಭವುಂಟಾಯಿತು. ಅವಳು ಆ ಗರ್ಭವನ್ನು ದೇವಮಾನದ ಹನ್ನೆರಡು ವರ್ಷಗಳ ವರೆಗೆ ಧರಿಸಿದಳು. ॥೧೧॥

ತತಃ ಸುಷಾವ ಸಾ ಬ್ರಹ್ಮನ್ ಕುಮಾರಂ ಕನಕಪ್ರಭಂ ।
ಸರ್ವಾವಯವಸಂಪನ್ನಂ ಮೃತಮುತ್ತಾರಲೋಚನಂ ॥೧೨॥

ತಂ ದೃಷ್ಟ್ವಾ ರುರುದುಃ ಸರ್ವಾ ನಾರ್ಯಶ್ಚ ಬಾಂಧವಸ್ತ್ರಿಯಃ ।
ಮೂರ್ಛಾಮವಾಪ ತನ್ಮಾತಾ ಪುತ್ರಶೋಕೇನ ಭೂಯಸಾ ॥೧೩॥

ಸ್ಮಶಾನಂ ಚ ಯಯೌ ರಾಜಾ ಗೃಹೀತ್ವಾ ಬಾಲಕಂ ಮುನೇ ।
ರುರೋದ ತತ್ರ ಕಾಂತಾರೇ ಪುತ್ರಂ ಕೃತ್ವಾ ಸ್ವವಕ್ಷಸಿ ॥೧೪॥

ನೋತ್ಸೃಜದ್ಬಾಲಕಂ ರಾಜಾ ಪ್ರಾಣಾಂಸ್ತ್ಯಕ್ತುಂ ಸಮುದ್ಯತಃ ।
ಜ್ಞಾನಯೋಗಂ ವಿಸಸ್ಮಾರ ಪುತ್ರಶೋಕಾತ್ಸುದಾರುಣಾತ್ ॥೧೫॥

ಏತಸ್ಮಿನ್ನಂತರೇ ತತ್ರ ವಿಮಾನಂ ಚ ದದರ್ಶ ಸಃ ।
ಶುದ್ಧಸ್ಫಟಿಕಸಂಕಾಶಂ ಮಣಿರಾಜವಿನಿರ್ಮಿತಂ ॥೧೬॥

---

ಬ್ರಹ್ಮರ್ಷಿಯಾದ ನಾರದನೇ, ಹನ್ನೆರಡು ವರ್ಷವಾದ ಮೇಲೆ ಆಕೆಯೂ, ಚಿನ್ನದಂತೆ ಕಾಂತಿಯುಕ್ತನೂ, ಸಮಸ್ತ ಅವಯವಗಳಿಂದ ಕೂಡಿದವನೂ, ಆದ ಮಗನನ್ನು ಹೆತ್ತಳು. ಆದರೆ ಆ ಮಗನು ಮೇಲಿನ ದೃಷ್ಟಿಯುಳ್ಳವನಾಗಿ ಪ್ರಾಣವಿಲ್ಲದವನಾಗಿದ್ದನು. ॥೧೨॥

ಅದನ್ನು ನೋಡಿ ಸಮಸ್ತ ಸ್ತ್ರೀಯರೂ, ನಂಟರಾದ ಹೆಂಗುಸರೂ, ಅತ್ತರು. ಆ ಹುಡುಗನ ತಾಯಿಯು ಹೆಚ್ಚಾದ ಪುತ್ರಶೋಕದಿಂದ ಮೂರ್ಛೆಯನ್ನು ಹೊಂದಿದಳು. ॥೧೩॥

ನಾರದಮುನಿಯೇ, ಕೇಳು. ಪ್ರಿಯವ್ರತರಾಜನು ಆ ಹುಡುಗನನ್ನು ಎತ್ತಿಕೊಂಡು ಸ್ಮಶಾನಕ್ಕೆ ಹೋದನು. ಆ ಕಾಡಿನಲ್ಲಿ ಆ ಮಗನನ್ನು ತನ್ನ ಎದೆಗೆ ಅಪ್ಪಿಕೊಂಡು ಅತ್ತನು. ॥೧೪॥

, ರಾಜನು ಬಾಲಕನನ್ನು ಬಿಡದೆ ತಾನೂ ಪ್ರಾಣವನ್ನು ಬಿಡಲು ಪ್ರಯತ್ನಪಟ್ಟನು. ಭಯಂಕರವಾದ ಪುತ್ರಶೋಕದಿಂದ ವಿವೇಕವನ್ನು ಮರೆತುಬಿಟ್ಟನು.॥೧೫॥

ಈ ಸಮಯದಲ್ಲಿ ಸ್ಫಟಿಕದಂತೆ ಬೆಳ್ಳಗಿರುವ, ಶ್ರೇಷ್ಠವಾದ, ರತ್ನಗಳಿಂದ ಮಾಡಿದ ತೇಜಸ್ಸಿನಿಂದ ಪ್ರಕಾಶಿಸುತ್ತಿರುವ ರೇಷ್ಮೆಯ ಬಟ್ಟೆಗಳಿಂದ ಅಲಂಕರಿಸಿದ,

ತೇಜಸಾ ಜ್ವಲಿತಂ ಶಶ್ವಚ್ಛೋಭಿತಂ ಕ್ಷೌಮವಾಸಸಾ ।
ನಾನಾಚಿತ್ರವಿಚಿತ್ರಾಢ್ಯಂ ಪುಷ್ಪಮಾಲಾ ವಿರಾಜಿತಂ ॥೧೭॥

ದದರ್ಶ ತತ್ರ ದೇವೀಂ ಚ ಕಮನೀಯಾಂ ಮನೋಹರಾಂ ।
ಶ್ವೇತಚಂಪಕವರ್ಣಾಭಾಂ ಶಶ್ವತ್ಸುಸ್ಥಿರಯೌವನಾಂ ॥೧೮॥

ಈಷದ್ಧಾಸ್ಯ ಪ್ರಸನ್ನಾಸ್ಯಾಂ ರತ್ನಭೂಷಣಭೂಷಿತಾಂ ।
ಕೃಪಾಮಯೀಂ ಯೋಗಸಿದ್ಧಾಂ ಭಕ್ತಾನುಗ್ರಹಕಾತರಾಂ ॥೧೯॥

ದೃಷ್ಟ್ವಾ ತಾಂ ಪುರತೋ ರಾಜಾ ತುಷ್ಟಾವ ಪರಮಾದರಂ ।
ಚಕಾರ ಪೂಜನಂ ತಸ್ಯಾ ವಿಹಾಯ ಬಾಲಕಂ ಭುವಿ ॥೨೦॥

ಪಪ್ರಚ್ಛ ರಾಜಾ ತಾಂ ತುಷ್ಟಾಂ ಗ್ರೀಷ್ಮಸೂರ್ಯಸಮಪ್ರಭಾಂ ।
ತೇಜಸಾ ಜ್ವಲಿತಾಂ ಶಾಂತಾಂ ಕಾಂತಾಂ ಸ್ಕಂದಸ್ಯ ನಾರದ ॥೨೧॥

---

ಬಗೆಬಗೆಯ ಚಿತ್ರಕೆಲಸಗಳನ್ನು ಮಾಡಿ ಹೂಮಾಲೆಗಳಿಂದ ಶೋಭಿಸುತ್ತಿರುವ ಒಂದು ವಿಮಾನವನ್ನು ಆ ರಾಜನು ನೋಡಿದನು. ||೧೬-೧೭||

ಆ ವಿಮಾನದಲ್ಲಿ ಕೋಮಲವಾದವಳೂ, ಮನೋಹರಳೂ, ಬಿಳಿಯ ಸಂಪಿಗೆಯಂತೆ ಮೈಬಣ್ಣವುಳ್ಳವಳೂ, ಸ್ಥಿರವಾದ ಪ್ರಾಯವುಳ್ಳವಳೂ, ಮುಗುಳುನಗೆಯಿಂದ ಪ್ರಸನ್ನವಾದ ಮುಖವುಳ್ಳವಳೂ, ರತ್ನಾಭರಣಗಳನ್ನು ಧರಿಸಿದವಳೂ, ದಯಾಸ್ವರೂಪಳೂ, ಯೋಗಸಿದ್ಧಿಯುಳ್ಳವಳೂ, ಭಕ್ತರಿಗೆ ಅನುಗ್ರಹ ಮಾಡುವುದರಲ್ಲಿ ಆಸಕ್ತಳಾದವಳೂ ಆದ ದೇವಿಯನ್ನು ಕಂಡನು. ||೧೮-೧೯||

ರಾಜನು ತನ್ನೆದುರಿಗೆ ಆ ದೇವಿಯನ್ನು ನೋಡಿ ಬಹಳ ಪ್ರೀತಿಯಿಂದ ಸ್ತೋತ್ರಮಾಡಿ ಆ ಬಾಲಕನನ್ನು ಭೂಮಿಯಲ್ಲಿ ಬಿಟ್ಟು ಆ ದೇವಿಯನ್ನು ಪೂಜಿಸಿದನು. ||೨೦||

ರಾಜನು ಗ್ರೀಷ್ಮಋತುವಿನ ಸೂರ್ಯನಿಗೆ ಸಮಾನವಾದ ಕಾಂತಿಯಿಂದಲೂ, ತೇಜಸ್ಸಿನಿಂದಲೂ, ಕೂಡಿ ಶಾಂತಳಾಗಿರುವ ಕುಮಾರಸ್ವಾಮಿಯ ಪತ್ನಿಯಾದ ಸಂತೋಷದಿಂದ ಕೂಡಿದ ಆ ದೇವಿಯನ್ನು ಪ್ರಶ್ನೆಮಾಡಿದನು. ||೨೧||

|| ರಾಜೋವಾಚ ||

ಕಾ ತ್ವಂ ಸು ಶೋಭನೇ ಕಾಂತೇ ಕಸ್ಯ ಕಾಂತಾಽಸಿ ಸುವ್ರತೇ ।
ಕಸ್ಯ ಕನ್ಯಾ ವರಾರೋಹೇ ಧನ್ಯಾ ಮಾನ್ಯಾ ಚ ಯೋಷಿತಾಂ ॥೨೨॥

ನೃಪೇಂದ್ರಸ್ಯ ವಚಃ ಶ್ರುತ್ವಾ ಜಗನ್ಮಂಗಲ ಚಂಡಿಕಾ ।
ಉವಾಚ ದೇವಸೇನಾ ಸಾ ದೇವಾನಾಂ ರಣಕಾರಿಣೀ ॥೨೩॥

ದೇವಾನಾಂ ದೈತ್ಯಗ್ರಸ್ತಾನಾಂ ಪುರಾ ಸೇನಾ ಬಭೂವ ಸಾ ।
ಜಯಂ ದದೌ ಸಾ ತೇಭ್ಯಶ್ಚ ದೇವಸೇನಾ ಚ ತೇನ ಸಾ ॥೨೪॥

|| ಶ್ರೀದೇವಸೇನೋವಾಚ ||

ಬ್ರಹ್ಮಣೋ ಮಾನಸೀ ಕನ್ಯಾ ದೇವಸೇನಾಽಹಮೀಶ್ವರೀ ।
ಸೃಷ್ಟ್ವಾ ಮಾಂ ಮನಸಾ ಧಾತಾ ದದೌ ಸ್ಕಂದಾಯ ಭೂಮಿಪ ॥೨೫॥

ಮಾತೃಕಾಸು ಚ ವಿಖ್ಯಾತಾ ಸ್ಕಂದಭಾರ್ಯಾ ಚ ಸುವ್ರತಾ ।
ವಿಶ್ವೇ ಷಷ್ಠೀತಿ ವಿಖ್ಯಾತಾ ಷಷ್ಠಾಂಶಾ ಪ್ರಕೃತೇಃ ಪರಾ ॥೨೬॥

---

ರಾಜನು ಹೇಳಿದನು — ಎಲೈ ಸ್ತ್ರೀಯೇ ನೀನು ಯಾರು ? ಯಾರ ಪತ್ನಿ ಯಾಗಿರುವೆ ? ಯಾರ ಮಗಳು ? ಸ್ತ್ರೀಯರಲ್ಲೆಲ್ಲರಲ್ಲೂ ಒಳ್ಳೆಯ ವ್ರತಗಳ ಫಲ ವುಳ್ಳವಳಾಗಿ ಪೂಜ್ಯಳಾಗಿ ಕಾಣುವೆ. ||೨೨||

ರಾಜಶ್ರೇಷ್ಠನ ಮಾತನ್ನು ಕೇಳಿ ಜಗತ್ತಿಗೆ ಮಂಗಳವನ್ನುಂಟುಮಾಡುವ ದೇವಸೇನಾ ಎಂಬ ದೇವಿಯು ರಾಜನನ್ನು ಕುರಿತು ಹೇಳಿದಳು. ಹಿಂದೆ ದೇವತೆಗಳು ದೈತ್ಯರ ಮುತ್ತಿಗೆಯಲ್ಲಿ ಸಿಕ್ಕಿಕೊಂಡಿದ್ದರು. ಆ ದೇವತೆಗಳಿಗೆ ಈ ದೇವಿಯು ಸೇನಾ ರೂಪವಾಗಿ ಜಯವನ್ನುಂಟುಮಾಡಿದುದರಿಂದ ಈ ದೇವಿಗೆ ದೇವಸೇನಾ ಎಂಬ ಹೆಸರು ಬಂದಿರುವುದು. ||೨೩-೨೪||

ದೇವಸೇನಾದೇವಿಯು ಹೇಳಿದಳು—ಎಲೈ ರಾಜನೇ, ನಾನು ಬ್ರಹ್ಮನ ಮಾನಸಪುತ್ರಿಯಾದ ದೇವಸೇನಾ ಎಂಬ ದೇವಿಯು. ಬ್ರಹ್ಮನು ನನ್ನನ್ನು ಸೃಷ್ಟಿ ಮಾಡಿ ಕುಮಾರಸ್ವಾಮಿಗೆ ಕೊಟ್ಟನು. ನಾನು ಒಳ್ಳೆಯ ವ್ರತಗಳ ಫಲವುಳ್ಳವಳಾಗಿ, ಕುಮಾರಸ್ವಾಮಿಯ ಪತ್ನಿಯಾಗಿ ಮಾತೃಕಾದೇವಿಯರಲ್ಲಿ ಪ್ರಸಿದ್ಧಳಾಗಿ, ಮೂಲ ಪ್ರಕೃತಿಯ ಆರನೆಯ ಒಂದಂಶದಿಂದ ಪ್ರಪಂಚದಲ್ಲಿ ಷಷ್ಠೀದೇವೀ ಎಂದು ಪ್ರಸಿದ್ಧ ಳಾಗಿರುವೆನು. ||೨೫-೨೬||

ಅಪುತ್ರಾಯ ಪುತ್ರದಾಽಹಂ ಪ್ರಿಯಾದಾತ್ರೀ ಪ್ರಿಯಾಯ ಚ ।
ಧನದಾಽಹಂ ದರಿದ್ರೇಭ್ಯಃ ಕರ್ಮಿಭ್ಯಶ್ಚ ಸ್ವಕರ್ಮದಾ ॥೨೭॥

ಸುಖಂ ದುಃಖಂ ಭಯಂ ಶೀಕೋ ಹರ್ಷೋ ಮಂಗಲಮೇವ ಚ ।
ಸಂಪತ್ತಿಶ್ಚ ವಿಪತ್ತಿಶ್ಚ ಸರ್ವಂ ಭವತಿ ಕರ್ಮಿಣಾಂ ॥೨೮॥

ಕರ್ಮಣಾ ಬಹುಪುತ್ರಶ್ಚ ವಂಶಹೀನಃ ಸ್ವಕರ್ಮಣಾ ।
ಕರ್ಮಣಾ ಮೃತಪುತ್ರಶ್ಚ ಕರ್ಮಣಾ ಚಿರಜೀವಿನಃ ॥೨೯॥

ಕರ್ಮಣಾ ಗುಣವಾಂಶ್ಚೈವ ಕರ್ಮಣಾಚಾಂಗಹೀನಕಃ ।
ಕರ್ಮಣಾ ಬಹುಭಾರ್ಯಶ್ಚ ಭಾರ್ಯಾಹೀನಶ್ಚ ಕರ್ಮಣಾ ॥೩೦॥

ಕರ್ಮಣಾ ರೂಪವಾನ್ ಧರ್ಮೀ ರೋಗೀ ಶಶ್ವತ್ಸ್ವಕರ್ಮಣಾ ।
ಕರ್ಮಣಾ ಚ ಭವೇದ್ವ್ಯಾಧಿಃ ಕರ್ಮಣಾಽಽರೋಗ್ಯಮೇವ ಚ ॥೩೧॥

ತಸ್ಮಾತ್ಕರ್ಮ ಪರಂ ರಾಜನ್ ಸರ್ವೇಭ್ಯಶ್ಚ ಶ್ರುತೌ ಶ್ರುತಂ ।
ಇತ್ಯೇವಮುಕ್ತ್ವಾ ಸಾ ದೇವೀ ಗೃಹೀತ್ವಾ ಬಾಲಕಂ ಮುನೇ ॥೩೨॥

---

ನಾನು ಮಕ್ಕಳಿಲ್ಲದವರಿಗೆ ಮಕ್ಕಳನ್ನು ಕೊಡುವೆನು. ನನ್ನ ಪ್ರೀತಿಗೆ ಪಾತ್ರರಾದವರಿಗೆ ಪತ್ನಿಯನ್ನು ಕೊಡುವೆನು. ದರಿದ್ರರಿಗೆ ಧನವನ್ನು ಕೊಡುವೆನು. ಕರ್ಮವನ್ನು ಮಾಡಿದವರಿಗೆ ಅವರ ಕರ್ಮಫಲವನ್ನು ಕೊಡುವೆನು. ॥೨೭॥

ಸುಖವೂ, ದುಃಖವೂ, ಭಯವೂ, ಶೋಕವೂ, ಸಂತೋಷವೂ, ಮಂಗಳವೂ, ಸಂಪತ್ತೂ, ವಿಪತ್ತೂ ಇವುಗಳೆಲ್ಲವೂ, ಕರ್ಮಗಳಿಂದಲೇ ಉಂಟಾಗುವುವು. ॥೨೮॥

ಮಕ್ಕಳುಳ್ಳವನಾಗಬೇಕಾದರೂ, ವಂಶಹೀನನಾಗಬೇಕಾದರೂ, ಮಕ್ಕಳು ಸಾಯಬೇಕಾದರೂ, ದೀರ್ಘಾಯುಗಳಾಗಬೇಕಾದರೂ, ಕರ್ಮವೇ ಕಾರಣವು. ಆ ಕರ್ಮದಿಂದಲೇ ಮನುಷ್ಯನು, ಗುಣವಂತನೂ, ಅಂಗಹೀನನೂ, ಅನೇಕಪತ್ನಿಯುಳ್ಳವನೂ, ಭಾರ್ಯಾಹೀನನೂ, ಆಗುವನು. ಕರ್ಮಫಲದಿಂದಲೇ ರೂಪವಂತನೂ, ಧರ್ಮಾಸಕ್ತನೂ, ರೋಗಿಯೂ ಆಗುವನು. ರೋಗವೂ, ಆರೋಗ್ಯವೂ ಕರ್ಮದಿಂದಲೇ ಉಂಟಾಗುವುದು. ॥೨೯-೩೦-೩೧॥

ಎಲೈ ರಾಜನೇ, ಆ ಕಾರಣದಿಂದಲೇ ಸಮಸ್ತಜನರಿಗೂ ಕರ್ಮವೇ ಶ್ರೇಷ್ಠವಾದುದೆಂದು ವೇದದಲ್ಲಿ ಹೇಳಿರುವುದು. ನಾರದನೇ, ದೇವಿಯು ಹೀಗೆಂದು ಹೇಳಿ

ಮಹಾಜ್ಞಾನೇನ ಸಾ ದೇವೀ ಜೀವಯಾಮಾಸ ಲೀಲಯಾ ।
ರಾಜಾ ದದರ್ಶ ತಂ ಬಾಲಂ ಸಸ್ಮಿತಂ ಕನಕಪ್ರಭಂ ॥೩೩॥

ದೇವಸೇನಾ ಚ ಪಶ್ಯಂತಂ ನೃಪಮಾಪೃಚ್ಛ್ಯ ಸಾ ತದಾ ।
ಗೃಹೀತ್ವಾ ಬಾಲಕಂ ದೇವೀ ಗಗನಂ ಗಂತು ಮುದ್ಯತಾ ॥೩೪॥

ಪುನಸ್ತುಷ್ಟಾವ ತಾಂ ರಾಜಾ ಶುಷ್ಕಕಂಠೋಷ್ಠತಾಲುಕಃ ।
ನೃಪಸ್ತೋತ್ರೇಣ ಸಾ ದೇವೀ ಪರಿತುಷ್ಟಾ ಬಭೂವ ಹ ॥೩೫॥

॥ ದೇವ್ಯುವಾಚ ॥

ಉವಾಚ ತಂ ನೃಪಂ ಬ್ರಹ್ಮನ್ವೇದೋಕ್ತಂ ಕರ್ಮ ನಿರ್ಮಲಂ ।
ತ್ರಿಷು ಲೋಕೇಷು ತ್ವಂ ರಾಜಾ ಸ್ವಾಯಂಭುವಮನೋಃ ಸುತಃ ॥೩೬॥

ಮಮ ಪೂಜಾಂ ಚ ಸರ್ವತ್ರ ಕಾರಯಿತ್ವಾ ಸ್ವಯಂ ಕುರು ।
ತದಾ ದಾಸ್ಯಾಮಿ ಪುತ್ರಂ ತೇ ಕುಲಪದ್ಮಂ ಮನೋಹರಂ ॥೩೭॥

---

ಆ ಬಾಲಕನನ್ನು ಎತ್ತಿಕೊಂಡು ಸುಲಭವಾಗಿ ಮಹಾಜ್ಞಾನದ ಶಕ್ತಿಯಿಂದ ಆ ಬಾಲಕನನ್ನು ಬದುಕಿಸಿದಳು. ರಾಜನು ಚಿನ್ನದ ಕಾಂತಿಯಿಂದ ಹೊಳೆಯುತ್ತ ನಗುತ್ತಿರುವ ಆ ಬಾಲಕನನ್ನು ನೋಡಿದನು. ॥೩೨-೩೩॥

ದೇವಸೇನಾ ದೇವಿಯು ಆಗ ನೋಡುತ್ತಿರುವ ರಾಜನನ್ನು ಕೇಳಿ ಮಗುವನ್ನು ಎತ್ತಿಕೊಂಡು ಆಕಾಶಮಾರ್ಗದಲ್ಲಿ ಪ್ರಯಾಣಮಾಡಲು ಸಿದ್ಧಳಾದಳು.॥೩೪॥

ರಾಜನು ಗಂಟಲು ತುಟಿ ದವಡೆಗಳು ಒಣಗಿದವನಾಗಿ ಮತ್ತೆ ದೇವಿಯನ್ನು ಸ್ತೋತ್ರಮಾಡಿದನು. ರಾಜನ ಸ್ತೋತ್ರದಿಂದ ಆ ದೇವಿಯು ಸಂತೋಷಪಟ್ಟಳು. ಬ್ರಹ್ಮರ್ಷಿಯಾದ ನಾರದನೇ, ಆ ದೇವಿಯು ಆ ರಾಜನನ್ನು ಕುರಿತು ವೇದೋಕ್ತವಾದ ಪರಿಶುದ್ಧವಾದ ಕರ್ಮವನ್ನು ಹೇಳಿದಳು. ॥೩೫॥

ದೇವಿಯು ಎಲೈ ರಾಜನೇ, ಸ್ವಾಯಂಭುವಮನುವಿನ ಪುತ್ರನಾದ ನೀನು ಮೂರು ಲೋಕದಲ್ಲಿಯೂ ನನ್ನ ಪೂಜೆಯನ್ನು ಮಾಡಿಸಿ ನೀನೂ ಪೂಜೆಯನ್ನು ಮಾಡು, ಆಗ ನಿನಗೆ ವಂಶಕ್ಕೆ ಅಲಂಕಾರಪ್ರಾಯನಾದ ಮಗನನ್ನು ಕೊಡುವೆನು. ಎಂದಳು. ॥೩೬-೩೭॥

ಸುವ್ರತಂ ನಾಮ ವಿಖ್ಯಾತಂ ಗುಣವಂತಂ ಸುಪಂಡಿತಂ ।
ಜಾತಿಸ್ಮರಂ ಚ ಯೋಗೀಂದ್ರಂ ನಾರಾಯಣಕಲಾತ್ಮಕಂ ॥೩೮॥

ಶತಕ್ರತುಕರಂ ಶ್ರೇಷ್ಠಂ ಕ್ಷತ್ರಿಯಾಣಾಂ ಚ ಪಂಡಿತಂ ।
ಮತ್ತಮಾತಂಗಲಕ್ಷಾಣಾಂ ಧೃತವಂತಂ ಬಲಂ ಶುಭಂ ॥೩೯॥

ಧನಿನಂ ಗುಣಿನಂ ಶುದ್ಧಂ ವಿದುಷಾಂ ಪ್ರಿಯಮೇವ ಚ ।
ಯೋಗಿನಾಂ ಜ್ಞಾನಿನಾಂ ಚೈವ ಸಿದ್ಧಿರೂಪಂ ತಪಸ್ವಿನಾಂ ॥೪೦॥

ಯಶಸ್ವಿನಂ ಚ ಲೋಕೇಷು ದಾತಾರಂ ಸರ್ವಸಂಪದಾಂ ।
ಇತ್ಯೇವಮುಕ್ತ್ವಾ ಸಾ ದೇವೀ ತಸ್ಮೈ ತದ್ಬಾಲಕಂ ದದೌ ॥೪೧॥

ರಾಜಾ ಚಕಾರ ಸ್ವೀಕಾರಂ ಪೂಜಾರ್ಥಂ ಚ ಪ್ರಿಯವ್ರತಃ ।
ಜಗಾಮ ದೇವೀ ಸ್ವರ್ಗಂ ಚ ದತ್ವಾ ತಸ್ಮೈ ಶುಭಂ ವರಂ ॥೪೨॥

---

ಆ ಮಗನಿಗೆ ಸುವ್ರತನೆಂದು ಹೆಸರು, ಅವನು ಗುಣವಂತನೂ, ರೂಪವಂತನೂ, ಪಂಡಿತನೂ ಆಗಿರುವನು. ಪೂರ್ವಜನ್ಮಗಳ ಸ್ಮರಣೆಯು ಅವನಿಗಿರುವುದು. ಅವನು ನಾರಾಯಣನ ತಲೆಯಿಂದ ಹುಟ್ಟಿದವನಾಗಿ ಯೋಗಿಗಳಲ್ಲಿ ಶ್ರೇಷ್ಠನಾಗಿರುವನು. ನೂರು ಯಜ್ಞಗಳನ್ನು ಮಾಡಿ ಶ್ರೇಷ್ಠನಾದ ಅವನಿಗೆ ಕ್ಷತ್ರಿಯರೆಲ್ಲರೂ ನಮಸ್ಕರಿಸುವರು. ಒಂದುಲಕ್ಷ ಮದಿಸಿದ ಆನೆಗಳ ಬಲವು ಅವನಿಗಿರುವುದು. ॥೩೮-೩೯॥

ಅವನು ಧನವುಳ್ಳವನೂ, ಗುಣವಂತನೂ, ಪರಿಶುದ್ಧನೂ, ವಿದ್ವಾಂಸರಿಗೆ ಪ್ರೀತಿಪಾತ್ರನಾದವನೂ, ಯೋಗಸಿದ್ಧಿಯೂ, ತಪಸ್ಸಿದ್ಧಿಯೂ, ಉಳ್ಳವನೂ, ಲೋಕಗಳಲ್ಲೆಲ್ಲಾ ಕೀರ್ತಿವಂತನೂ, ಸಮಸ್ತ ಸಂಪತ್ತನ್ನೂ ಕೊಡತಕ್ಕವನೂ, ಆಗುವನು. ಹೀಗೆಂದು ಹೇಳಿ ಆ ದೇವಿಯು ರಾಜನಿಗೆ ಆ ಬಾಲಕನನ್ನು ಕೊಟ್ಟಳು. ॥೪೦-೪೧॥

ಪ್ರಿಯವ್ರತರಾಜನು ದೇವಿಯ ಪೂಜಾಪ್ರತಿಜ್ಞೆಯನ್ನೂ, ಬಾಲಕನನ್ನೂ ಸ್ವೀಕಾರಮಾಡಿದನು. ದೇವಿಯು ರಾಜನಿಗೆ ಮಂಗಳಕರವಾದ ವರವನ್ನು ಕೊಟ್ಟು ಸ್ವರ್ಗಕ್ಕೆ ಹೋದಳು. ॥೪೨॥

ಆ ಜಗಾಮ ಸಹಾಮಾತ್ಯೈಃ ಸ್ವಗೃಹಂ ಹೃಷ್ಟಮಾನಸಃ ।
ಆಗತ್ಯ ಕಥಯಾಮಾಸ ವೃತ್ತಾಂತಂ ಪುತ್ರಹೇತುಕಂ ॥೪೩॥

ಶ್ರುತ್ವಾ ಬಭೂವುಃ ಸಂತುಷ್ಟಾ ವರಾ ನಾರ್ಯಶ್ಚ ನಾರದ ।
ಮಂಗಲಂ ಕಾರಯಾಮಾಸ ಸರ್ವತ್ರ ಪುತ್ರಹೇತುಕಂ ॥೪೪॥

ದೇವೀಂ ಚ ಪೂಜಯಾಮಾಸ ಬ್ರಾಹ್ಮಣೇಭ್ಯೋ ಧನಂ ದದೌ ।
ರಾಜಾ ಚ ಪ್ರತಿಮಾಸೇಷು ಶುಕ್ಲಷಷ್ಠ್ಯಾಂ ಮಹೋತ್ಸವಂ ॥೪೫॥

ಷಷ್ಠ್ಯಾ ದೇವ್ಯಾಶ್ಚ ಯತ್ನೇನ ಕಾರಯಾಮಾಸ ಸರ್ವತಃ ।
ಬಾಲಾನಾಂ ಸೂತಿಕಾ(ಗಾರೇ)ಗೇಹೇ ಷಷ್ಠಾಹೇ ಯತ್ನಪೂರ್ವಕಂ ॥೪೬॥

ತತ್ಪೂಜಾಂ ಕಾರಯಾಮಾಸ ಚೈಕವಿಂಶತಿವಾಸರೇ ।
ಬಾಲಾನಾಂ ಶುಭಕಾರ್ಯೇ ಚ ಶುಭಾನ್ನಪ್ರಾಶನೇ ತಥಾ ॥೪೭॥

---

ರಾಜನು ಮಂತ್ರಿಗಳೊಡನೆ ಸಂತೋಷಚಿತ್ತನಾಗಿ ಮನೆಗೆ ಬಂದು ಮಗನ ಸಂಬಂಧವಾದ ವೃತ್ತಾಂತವನ್ನೆಲ್ಲವನ್ನೂ ಹೇಳಿದನು. ॥೪೩॥

ನಾರದನೇ, ಕೇಳು. ರಾಜನ ಅರಮನೆಯಲ್ಲಿದ್ದ ಸ್ತ್ರೀಯರೆಲ್ಲರೂ ಈ ಮಾತನ್ನು ಕೇಳಿ ಸಂತೋಷವನ್ನು ಹೊಂದಿದರು. ರಾಜನು ಮಗನು ಹುಟ್ಟಿದುದಕ್ಕಾಗಿ ಮಂಗಲ ಕಾರ್ಯಗಳನ್ನು ದೇಶದಲ್ಲೆಲ್ಲ ಮಾಡಿಸಿದನು. ॥೪೪॥

ರಾಜನು ದೇವಿಯನ್ನು ಪೂಜೆಮಾಡಿ ಬ್ರಾಹ್ಮಣರಿಗೆ ಧನವನ್ನು ದಾನ ಮಾಡಿದನು. ಮತ್ತು ಪ್ರತಿಮಾಸದಲ್ಲಿಯೂ, ಶುಕ್ಲಷಷ್ಠಿಯ ದಿನ ದೇವಿಯ ಮಹೋತ್ಸವವನ್ನು ತನ್ನ ದೇಶದಲ್ಲೆಲ್ಲ ಪ್ರಯತ್ನಪೂರ್ವಕವಾಗಿ ಮಾಡಿಸಿದನು. ಮತ್ತು ಮಕ್ಕಳು ಹುಟ್ಟಿದ ಆರನೆಯ ದಿನದಲ್ಲಿ ಪ್ರಸವಗೃಹದಲ್ಲಿ ದೇವಿಯ ಪೂಜೆ ಮಾಡಬೇಕೆಂದು ಗೊತ್ತುಮಾಡಿದನು. ॥೪೫-೪೬॥

ಆ ಷಷ್ಠೀದೇವಿಯ ಪೂಜೆಯನ್ನು ಹುಟ್ಟಿದ ಮೇಲೆ ಇಪ್ಪತ್ತೊಂದನೆಯ ದಿನದಲ್ಲಿಯಾಗಲೀ, ಮಕ್ಕಳಿಗೆ ಮಾಡುವ ಮತ್ತಾವ ಶುಭಕಾರ್ಯದಲ್ಲಿ ಯಾಗಲೀ, ಅನ್ನಪ್ರಾಶನ ಸಮಯದಲ್ಲಿಯಾಗಲೀ, ಮಾಡಬೇಕೆಂದು ತನ್ನ ದೇಶದಲ್ಲೆಲ್ಲಾ ಆಜ್ಞೆ ಮಾಡಿದನು. ಮತ್ತೂ ತಾನೂ ಆ ದೇವಿಯ ಪೂಜೆಯನ್ನು ಮಾಡಿದನು. ॥೪೭॥

ಧ್ಯಾನಂ ಪೂಜಾವಿಧಾನಂ ಚ ಸ್ತೋತ್ರಂ ಮತ್ತೋ ನಿಶಾಮಯ ।
ಯಚ್ಛ್ರುತಂ ಧರ್ಮವಕ್ತ್ರೇಣ ಕೌಥುಮೋಕ್ತಂ ಚ ಸುವ್ರತ ॥೪೮॥

ಶಾಲಗ್ರಾಮೇ ಘಟೇ ವಾಽಥ ವಟಮೂಲೇಽಥವಾ ಮುನೇ॥೪೯॥

ಭಿತ್ತ್ಯಾಂ ಪುತ್ತಲಿಕಾಂ ಕೃತ್ವಾ ಪೂಜಯೇದ್ವಾ ವಿಚಕ್ಷಣಃ ।
ಷಷ್ಠಾಂಶಾಂ ಪ್ರಕೃತೇಃ ಶುದ್ಧಾಂ ಪ್ರತಿಷ್ಠಾಪ್ಯ ಚ ಸುಪ್ರಭಾಂ ॥೫೦॥

ಸುಪುತ್ರದಾಂ ಚ ಶುಭದಾಂ ದಯಾರೂಪಾಂ ಜಗತ್ಪ್ರಸೂಂ ।
ಶ್ವೇತಚಂಪಕವರ್ಣಾಭಾಂ ರತ್ನಭೂಷಣಭೂಷಿತಾಂ ॥೫೧॥

ಪವಿತ್ರರೂಪಾಂ ಪರಮಾಂ ದೇವಸೇನಾಂ ಪರಾಂ ಭಜೇ ।
ಇತಿ ಧ್ಯಾತ್ವಾ ಸ್ವ ಶಿರಸಿ ಪುಷ್ಪಂ ದತ್ವಾ ವಿಚಕ್ಷಣಃ ॥೫೨॥

---

ಒಳ್ಳೆಯ ವ್ರತವುಳ್ಳ ನಾರದನೇ, ಷಷ್ಠೀದೇವಿಯ ಧ್ಯಾನವನ್ನೂ ಪೂಜಾವಿಧಾನವನ್ನೂ ಸ್ತೋತ್ರವನ್ನೂ ಕೌಥುಮಸೂತ್ರದಲ್ಲಿ ಹೇಳಿದಂತೆ, ನನ್ನ ತಂದೆಯಾದ ಧರ್ಮದೇವನ ಬಾಯಿಯಿಂದ ಹೇಗೆ ಕೇಳಿದೆನೋ, ಹಾಗೆಯೇ ನಿನಗೆ ಹೇಳುವೆನು ಕೇಳು. ॥೪೮॥

ಮೂಲಪ್ರಕೃತಿಯ ಆರನೆಯ ಒಂದು ಭಾಗವಾದ, ಪರಿಶುದ್ಧಳೂ, ಒಳ್ಳೆಯ ಕಾಂತಿಯಿಂದ ಕೂಡಿದವಳೂ ಆದ, ಷಷ್ಠೀದೇವಿಯನ್ನು ಬುದ್ಧಿವಂತರಾದವರು ಶಾಲಗ್ರಾಮದಲ್ಲಿಯಾಗಲೀ, ಕಲಶದಲ್ಲಿಯಾಗಲೀ, ಆಲದಮರದ ಬುಡದಲ್ಲಿಯಾಗಲೀ, ಗೋಡೆಯಲ್ಲಾಗಲೀ, ಬೊಂಬೆಯನ್ನು ಮಾಡಿಯಾಗಲೀ, ಪೂಜೆಮಾಡಬೇಕು. ॥೪೯-೫೦॥

ಒಳ್ಳೆಯ ಮಕ್ಕಳನ್ನು ಕೊಡತಕ್ಕವಳೂ, ಮಂಗಳಕರಳೂ, ದಯಾಸ್ವರೂಪಳೂ, ಲೋಕಕ್ಕೆ ತಾಯಿಯೂ, ಬಿಳಿಯ ಸಂಪಿಗೆಹೂವಿನ ಕಾಂತಿಯುಳ್ಳವಳೂ, ರತ್ನಾಭರಣಗಳನ್ನು ಧರಿಸಿದವಳೂ, ಪರಿಶುದ್ಧಳೂ, ಶ್ರೇಷ್ಠಳೂ ಆದ ದೇವಸೇನಾದೇವಿಯನ್ನು ಧ್ಯಾನಿಸುತ್ತೇನೆ. ॥೫೧॥

ಹೀಗೆಂದು ಧ್ಯಾನಮಾಡಿ ಬುದ್ಧಿವಂತನಾದವನು ತನ್ನ ತಲೆಯ ಮೇಲೆ ಹೂವನ್ನು ಇಟ್ಟುಕೊಂಡು ಮತ್ತೆ ಮೂಲಮಂತ್ರದಿಂದ ಅದೇ ದೇವಿಯನ್ನು ಧ್ಯಾನಮಾಡಬೇಕು. ॥೫೨॥

ಪುನರ್ಧ್ಯಾತ್ವಾ ಚ ಮೂಲೇನ ಪೂಜಯೇತ್ಸುವ್ರತಾಂ ಸತೀಂ ।
ಪಾದ್ಯಾರ್ಘ್ಯಾಚಮನೀಯೈಶ್ಚ ಗಂಧಪುಷ್ಪಪ್ರದೀಪಕೈಃ ॥೫೩॥

ನೈವೇದ್ಯೈರ್ವಿವಿಧೈಶ್ಚಾಪಿ ಫಲೇನ ಶೋಭನೇನ ಚ ।
ಓಂ ಹ್ರೀಂ ಷಷ್ಠೀದೇವ್ಯೈ ಸ್ವಾಹೇತಿ ವಿಧಿಪೂರ್ವಕಂ ॥೫೪॥

ಅಷ್ಟಾಕ್ಷರಂ ಮಹಾಮಂತ್ರಂ ಯಥಾಶಕ್ತಿ ಜಪೇನ್ನರಃ ।
ತತಃ ಸ್ತುತ್ವಾ ಚ ಪ್ರಣಮೇದ್ಭಕ್ತಿಯುಕ್ತಃ ಸಮಾಹಿತಃ ॥೫೫॥

ಸ್ತೋತ್ರಂ ಚ ಸಾಮವೇದೋಕ್ತಂ ವರಂ ಪುತ್ರಫಲಪ್ರದಂ ।
ಅಷ್ಟಾಕ್ಷರಂ ಮಹಾಮಂತ್ರಂ ಲಕ್ಷಧಾ ಯೋಜಯೇತ್ತತಃ ॥೫೬॥

ಸುಪುತ್ರಂ ಸ ಲಭೇನ್ನೂನಮಿತ್ಯಾಹ ಕಮಲೋದ್ಭವಃ ।
ಸ್ತೋತ್ರಂ ಶೃಣು ಮುನಿಶ್ರೇಷ್ಠ ಸರ್ವಕಾಮ ಶುಭಾವಹಂ ॥೫೭॥
ವಾಂಛಾಪ್ರದಂ ಚ ಸರ್ವೇಷಾಂ ಗೂಢಂ ವೇದೇಷು ನಾರದ ।

---

ಓಂ ಹ್ರೀಂ ಷಷ್ಠೀದೇವ್ಯೈ ಸ್ವಾಹಾ ಎಂಬ ಎಂಟಕ್ಷರದ ಮಂತ್ರದಿಂದ ವಿಧಿಗನುಸಾರವಾಗಿ ಧ್ಯಾನಮಾಡಿದಮೇಲೆ, ಪಾದ್ಯ, ಅರ್ಘ್ಯ, ಆಚಮನೀಯ, ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ, ಮಂಗಲಕರವಾದ, ಫಲಸಮರ್ಪಣ ರೂಪವಾದ ಪೂಜೆಯನ್ನು ಮಾಡಬೇಕು. ॥೫೩-೫೪॥

ದೇವಿಯನ್ನು ಪೂಜೆಮಾಡಿದ ಮೇಲೆ ಭಕ್ತಿಯಿಂದ ಏಕಾಗ್ರಚಿತ್ತನಾಗಿ ಅಷ್ಟಾಕ್ಷರೀಮಹಾಮಂತ್ರವನ್ನು ಶಕ್ತ್ಯನುಸಾರವಾಗಿ ಜಪಮಾಡಿ ಬಳಿಕ ಸ್ತೋತ್ರ ಮಾಡಿ ಭಕ್ತಿಯಿಂದ ನಮಸ್ಕರಿಸಬೇಕು. ॥೫೫॥

ಸಾಮವೇದದಲ್ಲಿ ಹೇಳಿರುವ ಷಷ್ಠೀದೇವಿಯ ಸ್ತೋತ್ರವು ಶ್ರೇಷ್ಠವಾದುದಾಗಿಯೂ, ಫಲವನ್ನು ಕೊಡತಕ್ಕದ್ದಾಗಿಯೂ, ಇರುವುದು. ಅಷ್ಟಾಕ್ಷರರೂಪವಾದ ಮಹಾಮಂತ್ರವನ್ನು ಯಾವನು ಒಂದು ಲಕ್ಷಬಾರಿ ಜಪಮಾಡುವನೋ ಅವನು ಸುಪುತ್ರನನ್ನು ಪಡೆಯುವನು ಎಂದು ಬ್ರಹ್ಮನು ಹೇಳಿರುವನು. ॥೫೬॥

ಮುನಿಶ್ರೇಷ್ಠನಾದ ನಾರದನೇ, ವೇದಗಳಲ್ಲಿ ಗುಟ್ಟಾಗಿರುವ, ಎಲ್ಲರಿಗೂ ಸಮಸ್ತ ಇಷ್ಟಾರ್ಥಗಳನ್ನು ಕೊಡುವ, ಮಂಗಲಕರವಾದ ಸ್ತೋತ್ರವನ್ನು ಕೇಳು. ॥೫೭॥

|| ಪ್ರಿಯವ್ರತ ಉವಾಚ ||

**ನಮೋ ದೇವ್ಯೈ ಮಹಾದೇವ್ಯೈ ಸಿದ್ಧ್ಯೈ ಶಾಂತ್ಯೈ ನಮೋ ನಮಃ ||೫೮||**

**ಶುಭಾಯೈ ದೇವಸೇನಾಯೈ ಷಷ್ಠ್ಯೈ ದೇವ್ಯೈ ನಮೋ ನಮಃ ।**
**ವರದಾಯೈ ಪುತ್ರದಾಯೈ ಧನದಾಯೈ ನಮೋ ನಮಃ ||೫೯||**

**ಸುಖದಾಯೈ ಮೋಕ್ಷದಾಯೈ ಷಷ್ಠ್ಯೈ ದೇವ್ಯೈ ನಮೋ ನಮಃ ।**
**ಸೃಷ್ಟ್ಯೈ ಷಷ್ಠಾಂಶರೂಪಾಯೈ ಸಿದ್ಧಾಯೈ ಚ ನಮೋ ನಮಃ ||೬೦||**

**ಮಾಯಾಯೈ ಸಿದ್ಧಯೋಗಿನ್ಯೈ ಷಷ್ಠೀದೇವ್ಯೈ ನಮೋ ನಮಃ ।**
**ಸಾರಾಯೈ ಶಾರದಾಯೈ ಚ ಪರಾದೇವ್ಯೈ ನಮೋ ನಮಃ ||೬೧||**

**ಬಾಲಾಧಿಷ್ಠಾತೃದೇವ್ಯೈ ಚ ಷಷ್ಠೀದೇವ್ಯೈ ನಮೋ ನಮಃ ।**
**ಕಲ್ಯಾಣದಾಯೈ ಕಲ್ಯಾಯೈ ಫಲದಾಯೈ ಚ ಕರ್ಮಣಾಂ ||೬೨||**

**ಪ್ರತ್ಯಕ್ಷಾಯೈ ಸ್ವಭಕ್ತಾನಾಂ ಷಷ್ಠ್ಯೈ ದೇವ್ಯೈ ನಮೋ ನಮಃ ।**
**ಪೂಜ್ಯಾಯೈ ಸ್ಕಂದಕಾಂತಾಯೈ ಸರ್ವೇಷಾಂ ಸರ್ವಕರ್ಮಸು ||೬೩||**
**ದೇವರಕ್ಷಣಕಾರಿಣ್ಯೈ ಷಷ್ಠೀದೇವ್ಯೈ ನಮೋ ನಮಃ ।**

---

ಪ್ರಿಯವ್ರತನು ಹೇಳಿದನು—ಸಿದ್ಧಿಸ್ವರೂಪಳೂ, ಶಾಂತಿರೂಪಳೂ, ಆದ ದೇವತೆಗಳಿಗೆಲ್ಲರಿಗೂ ದೇವತೆಯಾದ, ಮಂಗಳಸ್ವರೂಪಳೂ, ವರವನ್ನೂ, ಪುತ್ರರನ್ನೂ, ಧನವನ್ನೂ ಕೊಡತಕ್ಕವಳೂ, ಆದ ದೇವಸೇನೆ ಎಂಬ ಷಷ್ಠೀದೇವಿಗೆ ನಮಸ್ಕಾರಮಾಡುತ್ತೇನೆ. ||೫೮-೫೯||

ಸುಖವನ್ನೂ ಮೋಕ್ಷವನ್ನೂ ಕೊಡುವ ಸೃಷ್ಟಿಕಾರ್ಯವನ್ನು ಮಾಡುವ ಮೂಲಪ್ರಕೃತಿಯ ಆರನೆಯ ಒಂದು ಭಾಗರೂಪಳಾದ ಮಾಯಾಸ್ವರೂಪಳೂ, ಸಿದ್ಧಯೋಗಿನಿಯೂ, ಆದ ದೇವತೆಗಳಲ್ಲಿ ಸಾರಸ್ವರೂಪಳಾದ, ಶರದೃತುವಿನಲ್ಲಿ ಪೂಜೆಯನ್ನು ಸ್ವೀಕರಿಸುವ ಶ್ರೇಷ್ಠದೇವತೆಯೂ ಆದ ಷಷ್ಠೀದೇವಿಗೆ ನಮಸ್ಕಾರವು. ||೬೦-೬೧||

ಬಾಲಕರಿಗೆ ಆಶ್ರಯದೇವತೆಯೂ, ಮಂಗಲವನ್ನೂ ಕರ್ಮಗಳ ಫಲವನ್ನೂ ಕೊಡತಕ್ಕವಳೂ, ಭಕ್ತರಿಗೆ ಪ್ರತ್ಯಕ್ಷದರ್ಶನವನ್ನು ಕೊಡತಕ್ಕವಳೂ, ಪೂಜ್ಯಳೂ, ಕುಮಾರಸ್ವಾಮಿಯ ಪತ್ನಿಯೂ, ದೇವತೆಗಳನ್ನು ಕಾಪಾಡತಕ್ಕವಳೂ ಆದ ಷಷ್ಠೀದೇವಿಗೆ ನಮಸ್ಕಾರ ಮಾಡುವೆನು. ||೬೨-೬೩||

**ಶುದ್ಧಸತ್ವಸ್ವರೂಪಾಯೈ ವಂದಿತಾಯೈ ನೃಣಾಂ ಸದಾ ।**
**ಹಿಂಸಾಕ್ರೋಧವರ್ಜಿತಾಯೈ ಷಷ್ಠೀದೇವ್ಯೈ ನಮೋ ನಮಃ ॥೬೪॥**

**ಧನಂ ದೇಹಿ ಪ್ರಿಯಾಂ ದೇಹಿ ಪುತ್ರಂ ದೇಹಿ ಸುರೇಶ್ವರಿ ।**
**ಮಾನಂ ದೇಹಿ ಜಯಂ ದೇಹಿ ದ್ವಿಷೋ ಜಹಿ ಮಹೇಶ್ವರಿ ॥೬೫॥**

**ಧರ್ಮಂ ದೇಹಿ ಯಶೋ ದೇಹಿ ಷಷ್ಠೀದೇವ್ಯೈ ನಮೋ ನಮಃ॥೬೬॥**

**ದೇಹಿ ಭೂಮಿಂ ಪ್ರಜಾಂ ದೇಹಿ ವಿದ್ಯಾಂ ದೇಹಿ ಸುಪೂಜಿತೇ ।**
**ಕಲ್ಯಾಣಂ ಚ ಜಯಂ ದೇಹಿ ಷಷ್ಠೀದೇವ್ಯೈ ನಮೋ ನಮಃ ॥೬೭॥**

**ಇತಿ ದೇವೀಂ ಚ ಸಂಸ್ತೂಯ ಲೇಭೇ ಪುತ್ರಂ ಪ್ರಿಯವ್ರತಃ ।**
**ಯಶಸ್ವಿನಂ ಚ ರಾಜೇಂದ್ರಂ ಷಷ್ಠೀದೇವ್ಯಾಃ ಪ್ರಸಾದತಃ ॥೬೮॥**

**ಷಷ್ಠೀಸ್ತೋತ್ರಮಿದಂ ಬ್ರಹ್ಮನ್ಯಃ ಶೃಣೋತಿ ತು ವತ್ಸರಂ ।**
**ಅಪುತ್ರೋ ಲಭತೇ ಪುತ್ರಂ ವರಂ ಸುಚಿರಜೀವಿನಂ ॥೬೯॥**

---

ಶುದ್ಧವಾದ ಸತ್ವಗುಣಸ್ವರೂಪಳೂ, ಯಾವಾಗಲೂ ಜನರ ನಮಸ್ಕಾರವನ್ನು ಸ್ವೀಕರಿಸುವವಳೂ, ಕೋಪ ಹಿಂಸೆ ಇವುಗಳಿಲ್ಲದವಳೂ ಆದ ಷಷ್ಠೀದೇವಿಗೆ ನಮಸ್ಕರಿಸುವೆನು. ಓ ದೇವಿಯೇ, ನನಗೆ ಧನವನ್ನೂ, ಪತಿವ್ರತೆಯಾದ ಪತ್ನಿಯನ್ನೂ, ಮಗನನ್ನೂ, ಗೌರವವನ್ನೂ, ಜಯವನ್ನೂ, ಧರ್ಮವನ್ನೂ, ಕೀರ್ತಿಯನ್ನೂ, ಕೊಡು. ನನ್ನ ಶತ್ರುಗಳನ್ನು ನಾಶಮಾಡು, ನಿನಗೆ ನಮಸ್ಕಾರ ಮಾಡುತ್ತೇನೆ. ||೬೪-೬೫||

ಉತ್ತಮವಾದ ಪೂಜೆಯನ್ನು ಪಡೆದ ದೇವಿಯೇ, ನನಗೆ ಭೂಮಿಯನ್ನೂ, ಪ್ರಜೆಗಳನ್ನೂ, ವಿದ್ಯೆಯನ್ನೂ ಮಂಗಲವನ್ನೂ, ಇಂದ್ರಿಯಗಳ ಜಯವನ್ನೂ ಕೊಡು, ನಿನಗೆ ನಮಸ್ಕಾರವನ್ನು ಮಾಡುತ್ತೇನೆ. ||೬೭||

ಹೀಗೆಂದು ಪ್ರಿಯವ್ರತರಾಜನು ದೇವಿಯನ್ನು ಸ್ತೋತ್ರಮಾಡಿ, ಕೀರ್ತಿವಂತನೂ, ರಾಜಶ್ರೇಷ್ಠನೂ, ಆದ ಮಗನನ್ನು ಷಷ್ಠೀದೇವಿಯ ಅನುಗ್ರಹದಿಂದ ಪಡೆದನು. ||೬೮||

ಎಲೈ ನಾರದನೇ, ಷಷ್ಠೀದೇವಿಯ ಸ್ತೋತ್ರವನ್ನು ಒಂದು ವರ್ಷದ ವರೆಗೆ ಯಾರು ಭಕ್ತಿಯಿಂದ ಕೇಳುವರೋ, ಅವರು ಪುತ್ರರಿಲ್ಲದವರಾಗಿದ್ದರೆ, ಶ್ರೇಷ್ಠನಾದ,

ವರ್ಷಮೇಕಂ ಚ ಯೋ ಭಕ್ತ್ಯಾ ಸಂಪೂಜ್ಯೇದಂ ಶೃಣೋತಿ ಚ ।
ಸರ್ವಪಾಪಾದ್ವಿನಿರ್ಮುಕ್ತೋ ಮಹಾವಂಧ್ಯಾ ಪ್ರಸೂಯತೇ ॥೨೦॥

ವೀರಂ ಪುತ್ರಂ ಚ ಗುಣಿನಂ ವಿದ್ಯಾವಂತಂ ಯಶಸ್ವಿನಂ ।
ಸುಚಿರಾಯುಷ್ಯವಂತಂ ಚ ಸೂತೇ ದೇವೀ ಪ್ರಸಾದತಃ ॥೨೧॥

ಕಾಕವಂಧ್ಯಾ ಚ ಯಾ ನಾರೀ ಮೃತವತ್ಸಾ ಚ ಯಾ ಭವೇತ್ ।
ವರ್ಷಂ ಶ್ರುತ್ವಾ ಲಭೇತ್ಪುತ್ರಂ ಷಷ್ಠೀದೇವೀಪ್ರಸಾದತಃ ॥೨೨॥

ರೋಗಯುಕ್ತೇ ಚ ಬಾಲೇ ಚ ಪಿತಾ ಮಾತಾ ಶೃಣೋತಿ ಚೇತ್ ।
ಮಾಸೇನ ಮುಚ್ಯತೇ ಬಾಲಃ ಷಷ್ಠೀದೇವೀಪ್ರಸಾದತಃ ॥೨೩॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ನವಮಸ್ಕಂಧೇ
ಷಟ್‌ಚತ್ವಾರಿಂಶೋಽಧ್ಯಾಯಃ

---

ದೀರ್ಘಾಯುವಾದ ಪುತ್ರನನ್ನು ಪಡೆಯುವರು. ದೇವಿಯನ್ನು ಪೂಜೆಮಾಡಿ ಒಂದು ವರ್ಷದ ವರೆಗೆ ಭಕ್ತಿಯಿಂದ ಸ್ತೋತ್ರವನ್ನು ಕೇಳಿದ, ಮಹಾಬಂಜೆಯೂ ಕೂಡ ತನ್ನ ಪಾಪಗಳನ್ನು ಕಳೆದುಕೊಂಡು ಮಗನನ್ನು ಪಡೆಯುವಳು. ॥೬೯-೨೦॥

ದೇವಿಯ ಅನುಗ್ರಹದಿಂದ ಆ ಮಗನು ಶೂರನೂ, ಗುಣವಂತನೂ, ವಿದ್ಯಾವಂತನೂ, ಕೀರ್ತಿವಂತನೂ, ದೀರ್ಘಾಯುವೂ ಆಗುವನು. ॥೨೧॥

ಒಂದೆರಡು ಮಕ್ಕಳಾಗಿ ಮುಂದೆ ಹುಟ್ಟಿದ ಮಕ್ಕಳೆಲ್ಲರೂ, ಪ್ರಸವಗೃಹದಲ್ಲಿಯೇ ಸಾಯುವುದು ಕಾಕೀವಂಧ್ಯಾರೋಗವು. ಹುಟ್ಟಿದ ಮಕ್ಕಳೆಲ್ಲರೂ ಸಾಯುವುದು ಮೃತವಂಧ್ಯಾರೋಗವು. ಈ ರೋಗವುಳ್ಳ ಸ್ತ್ರೀಯರು ಒಂದು ವರ್ಷದ ವರೆಗೆ ಈ ಸ್ತೋತ್ರವನ್ನು ಕೇಳಿದರೆ ಆ ರೋಗ ನಿವಾರಣೆಯಾಗಿ, ದೇವಿಯ ಅನುಗ್ರಹದಿಂದ ಮಕ್ಕಳನ್ನು ಪಡೆಯುವರು. ॥೨೨॥

ಮಕ್ಕಳಿಗೆ ರೋಗವು ಬಂದರೆ ತಾಯಿತಂದೆಗಳು ಒಂದು ತಿಂಗಳ ವರೆಗೆ ಈ ಸ್ತೋತ್ರವನ್ನು ಕೇಳಿದರೆ ದೇವಿಯ ಅನುಗ್ರಹದಿಂದ ಬಾಲಕನ ರೋಗವು ಗುಣವಾಗುವುದು. ॥೨೩॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಒಂಬತ್ತನೆಯ ಸ್ಕಂಧದಲ್ಲಿ
ನಲವತ್ತಾರನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ನವಮಸ್ಕಂಧೇ

### || ಸಪ್ತಚತ್ವಾರಿಂಶೋಽಧ್ಯಾಯಃ ||

### ನಲವತ್ತೇಳನೆಯ ಅಧ್ಯಾಯವು

|| ಶ್ರೀನಾರಾಯಣ ಉವಾಚ ||

**ಕಥಿತಂ ಷಷ್ಠ್ಯುಪಾಖ್ಯಾನಂ ಬ್ರಹ್ಮಪುತ್ರ ಯಥಾಗಮಂ ।**
**ದೇವೀಮಂಗಲಚಂಡೀ ಚ ತದಾಖ್ಯಾನಂ ನಿಶಾಮಯ ॥೧॥**

**ತಸ್ಯಾಃ ಪೂಜಾದಿಕಂ ಸರ್ವಂ ಧರ್ಮವಕ್ತ್ರೇಣ ಯಚ್ಛ್ರುತಂ ।**
**ಶ್ರುತಿಸಮ್ಮತಮೇವೇಷ್ಟಂ ಸರ್ವೇಷಾಂ ವಿದುಷಾಮಪಿ ॥೨॥**

**ದಕ್ಷಾ ಯಾ ವರ್ತತೇ ಚಂಡೀ ಕಲ್ಯಾಣೇಷು ಚ ಮಂಗಲಾ ।**
**ಮಂಗಲೇಷು ಚ ಯಾ ದಕ್ಷಾ ಸಾ ಚ ಮಂಗಲಚಂಡಿಕಾ ॥೩॥**

---

ನಾರಾಯಣಮಹರ್ಷಿಯು ಹೇಳಿದನು— ಬ್ರಹ್ಮಪುತ್ರನಾದ ನಾರದನೇ, ವೇದೋಕ್ತನಾದ ಷಷ್ಠೀದೇವಿಯ ಉಪಾಖ್ಯಾನವನ್ನು ಹೇಳಿದೆನು. ಇನ್ನು ಮಂಗಲ ಚಂಡೀ ಚರಿತ್ರೆಯನ್ನು ಕೇಳು. ||೧||

ಆ ದೇವಿಯ ಪೂಜಾವಿಧಾನವೇ ಮೊದಲಾದುವುಗಳನ್ನು ಧರ್ಮದೇವನಿಂದ ಕೇಳಿರುವೆನು. ವೇದಸಮ್ಮತವಾದ ಆ ಚರಿತ್ರೆಯು ಸಮಸ್ತ ವಿದ್ವಾಂಸರಿಗೂ ಇಷ್ಟ ವಾದುದಾಗಿರುವುದು. ||೨||

ಮಂಗಲವನ್ನುಂಟುಮಾಡುವುದರಲ್ಲಿ ಯಾವ ದೇವಿಯು ಶಕ್ತಳೋ, ಮಂಗಲ ಕರವಾದ ಸಮಸ್ತ ವಸ್ತುಗಳಲ್ಲಿ ಯಾವ ದೇವಿಯು ಅತ್ಯಂತ ಮಂಗಲಸ್ವರೂಪಳೋ, ಅವಳೇ ಮಂಗಲಚಂಡಿಕಾದೇವೀ ಎಂದು ಪ್ರಸಿದ್ಧಿ ಹೊಂದಿರುವಳು. ||೩||

ಪೂಜ್ಯಾ ಯಾ ವರ್ತತೇ ಚಂಡೀ ಮಂಗಲೋಽಪಿ ಮಹೀಸುತಃ ।
ಮಂಗಲಾಭಿಷ್ಟದೇವೀ ಯಾ ಸಾ ವಾ ಮಂಗಲಚಂಡಿಕಾ ॥೪॥

ಮಂಗಲೋ ಮನುವಂಶಶ್ಚ ಸಪ್ತದ್ವೀಪಧರಾಪತಿಃ ।
ತಸ್ಯ ಪೂಜ್ಯಾಽಭೀಷ್ಟದೇವೀ ತೇನ ಮಂಗಲಚಂಡಿಕಾ ॥೫॥

ಮೂರ್ತಿಭೇದೇನ ಸಾ ದುರ್ಗಾ ಮೂಲಪ್ರಕೃತಿರೀಶ್ವರೀ ।
ಕೃಪಾರೂಪಾಽತಿಪ್ರತ್ಯಕ್ಷಾ ಯೋಷಿತಾ ಮಿಷ್ಟದೇವತಾ ॥೬॥

ಪ್ರಥಮೇ ಪೂಜಿತಾ ಸಾ ಚ ಶಂಕರೇಣ ಪರಾತ್ಪರಾ ।
ತ್ರಿಪುರಸ್ಯ ವಧೇ ಘೋರೇ ವಿಷ್ಣುನಾ ಪ್ರೇರಿತೇನ ಚ ॥೭॥

ಬ್ರಹ್ಮನ್ ಬ್ರಹ್ಮೋಪದೇಶೇನ ದುರ್ಗತೇ ನ ಚ ಸಂಕಟೇ ।
ಆಕಾಶಾತ್ಪತಿತೇ ಯಾನೇ ದೈತ್ಯೇನ ಪಾತಿತೇ ರುಷಾ ॥೮॥

---

ಅಥವಾ ಭೂಮಿಯ ಪುತ್ರನಾದ ಮಂಗಲ (ಅಂಗಾರಕ) ನಿಗೆ ಪೂಜ್ಯಳಾಗಿ, ಅವನಿಗೆ ಇಷ್ಟಾರ್ಥಗಳನ್ನು ಕೊಡುವ ದೇವಿಯಾದುದರಿಂದ ಮಂಗಲಚಂಡಿಕಾದೇವಿ ಎಂದು ಹೆಸರು ಬಂದಿರುವುದು. ||೪||

ಸಪ್ತದ್ವೀಪಗಳಿಂದ ಕೂಡಿದ ಭೂಮಿಗೆ ಅಧಿಪತಿಯಾದ, ಮಂಗಲವಂಶದಲ್ಲಿ ಹುಟ್ಟಿದ ಮಂಗಲನೆಂಬ ರಾಜನು ಪೂಜಿಸಿದುದರಿಂದ, ಅವನಿಗೆ ಇಷ್ಟಾರ್ಥಗಳನ್ನು ಕೊಟ್ಟ ದೇವಿಯಾದುದರಿಂದ ಮಂಗಲಚಂಡಿಕಾದೇವಿಯು ಪ್ರಸಿದ್ಧಳಾಗಿರುವಳು.||೫||

ಮೂಲಪ್ರಕೃತಿಯ ಅಂಶಳಾದ, ದುರ್ಗಾದೇವಿಯ ಮೂರ್ತಿಭೇದವೇ ಮಂಗಲ ಚಂಡಿಕಾದೇವಿಯು, ಇವಳು ದಯಾಸ್ವರೂಪಳು, ಸ್ತ್ರೀಯರಿಗೆ ಪ್ರತ್ಯಕ್ಷವಾದ ಇಷ್ಟ ದೇವತಾಸ್ವರೂಪಳು ||೬||

ಭಯಂಕರವಾದ ತ್ರಿಪುರಾಸುರನ ವಧೆಯಕಾಲದಲ್ಲಿ ವಿಷ್ಣುವಿನ ಪ್ರೇರಣೆ ಯಿಂದ ಶಂಕರನು ಪರಬ್ರಹ್ಮಸ್ವರೂಪಳಾದ ಈ ದೇವಿಯನ್ನು ಮೊದಲು ಪೂಜಿಸಿ ದನು. ||೭||

ಬ್ರಹ್ಮರ್ಷಿಯಾದ ನಾರದನೇ, ಯುದ್ಧದಲ್ಲಿ ಒಬ್ಬ ರಾಕ್ಷಸನು ಶಿವನ ವಾಹನ ವನ್ನು ರೋಷದಿಂದ ಕೆಡುಹಲು, ಶಿವನು ಆಕಾಶದಿಂದ ಭೂಮಿಗೆ ಬೀಳುತ್ತಿರುವ ಕಷ್ಟವಾದ ಸಮಯದಲ್ಲಿ ಬ್ರಹ್ಮವಿಷ್ಣುಗಳ ಉಪದೇಶದಿಂದ ದುರ್ಗಾದೇವಿಯನ್ನು

ಬ್ರಹ್ಮವಿಷ್ಣೂಪದಿಷ್ಟಶ್ಚ ದುರ್ಗಾಂ ತುಷ್ಟಾವ ಶಂಕರಃ ।
ಸಾ ಚ ಮಂಗಲಚಂಡೀ ಯಾ ಬಭೂವ ರೂಪಭೇದತಃ ॥೯॥

ಉವಾಚ ಪುರತಃ ಶಂಭೋರ್ಭಯಂ ನಾಸ್ತೀತಿ ತೇ ಪ್ರಭೋ ।
ಭಗವಾನ್ವೃಷರೂಪಸ್ತ್ವ ಸರ್ವೇಶಸ್ತೇ ಭವಿಷ್ಯತಿ ॥೧೦॥

ಯುದ್ಧಶಕ್ತಿಸ್ವರೂಪಾಽಹಂ ಭವಿಷ್ಯಾಮಿ ನ ಸಂಶಯಃ ।
ಮಾಯಾತ್ಮನಾ ಚ ಹರಿಣಾ ಸಹಾಯೇನ ವೃಷಧ್ವಜ ॥೧೧॥

ಜಹಿ ದೈತ್ಯಂ ಸ್ವಶತ್ರುಂ ಚ ಸುರಾಣಾಂ ಪದಘಾತಕಂ ।
ಇತ್ಯುಕ್ತ್ವಾಽಂತರ್ಹಿತಾ ದೇವೀ ಶಂಭೋಃ ಶಕ್ತಿರ್ಬಭೂವ ಸಾ ॥೧೨॥

ವಿಷ್ಣುದತ್ತೇನ ಶಸ್ತ್ರೇಣ ಜಘಾನ ತಮುಮಾಪತಿಃ ।
ಮುನೀಂದ್ರ ಪತಿತೇ ದೈತ್ಯೇ ಸರ್ವೇ ದೇವಾ ಮಹರ್ಷಯಃ ॥೧೩॥

ತುಷ್ಟುವುಃ ಶಂಕರಂ ದೇವಂ ಭಕ್ತಿನಮ್ರಾತ್ಮಕಂಧರಾಃ ।
ಸದ್ಯಃ ಶಿರಸಿ ಶಂಭೋಶ್ಚ ಪುಷ್ಪವೃಷ್ಟಿರ್ಬಭೂವ ಹ ॥೧೪॥

---

ಸ್ತೋತ್ರಮಾಡಿದನು. ಆ ದುರ್ಗಾದೇವಿಯೇ ರೂಪಭೇದದಿಂದ ಮಂಗಲಚಂಡೀ ಎಂಬ ಹೆಸರನ್ನು ಹೊಂದಿ ಪ್ರಸಿದ್ಧಳಾಗಿರುವಳು. ||೮-೯||

ಆ ಮಂಗಲಚಂಡಿಕಾದೇವಿಯು, ಶಿವನೆದುರಿಗೆ ಬಂದು ಎಲೈ ದೇವನೇ, ನಿನಗೆ ಭಯವಿಲ್ಲ. ಸಮಸ್ತಕ್ಕೂ ಅಧಿಪತಿಯಾದ ಮಹಾತ್ಮನಾದ ವಿಷ್ಣುವು, ವೃಷಭನಾಗಿ ವಾಹನವಾಗುವನು. ||೧೦||

ನಾನು ನಿನಗೆ ಯುದ್ಧದಲ್ಲಿ ಶಕ್ತಿಸ್ವರೂಪಳಾಗಿರುವೆನು. ಈ ವಿಷಯದಲ್ಲಿ ಸಂದೇಹವಿಲ್ಲ. ಮೂಲಪ್ರಕೃತಿಯ ಅಂಶಭೂತನಾದ ವಿಷ್ಣುವು ನಿನಗೆ ಸಹಾಯ ಮಾಡುವನು. ನೀನು ದೇವತೆಗಳ ಸ್ಥಾನವನ್ನಪಹರಿಸಿದ ನಿನ್ನ ಶತ್ರುವಾದ ರಾಕ್ಷಸನನ್ನು ಕೊಲ್ಲು. ||೧೧||

ಹೀಗೆಂದು ಹೇಳಿ ದೇವಿಯು ಮರೆಯಾಗಿ ಶಿವನಿಗೆ ಶಕ್ತಿಸ್ವರೂಪಳಾದಳು. ಶಿವನು ವಿಷ್ಣುವು ಕೊಟ್ಟ ಆಯುಧದಿಂದ ಆ ರಾಕ್ಷಸನನ್ನು ಕೊಂದನು. ||೧೨||

ನಾರದಮುನಿಯೇ, ದೈತ್ಯನು ಸತ್ತು ಬೀಳಲು ಸಮಸ್ತದೇವತೆಗಳೂ, ಮಹರ್ಷಿಗಳೂ, ದೇವನಾದ ಶಂಕರನನ್ನು ಭಕ್ತಿಯಿಂದ ತಮ್ಮ ಕುತ್ತಿಗೆಗಳನ್ನು ಬಗ್ಗಿಸಿಕೊಂಡು

ಬ್ರಹ್ಮಾ ವಿಷ್ಣುಶ್ಚ ಸಂತುಷ್ಟೋ ದದೌ ತಸ್ಮೈ ಶುಭಾಶಿಷಂ ।
ಬ್ರಹ್ಮವಿಷ್ಣೂಪದಿಷ್ಟಶ್ಚ ಸುಸ್ನಾತಃ ಶಂಕರಸ್ತಥಾ ॥೧೫॥

ಪೂಜಯಾಮಾಸ ತಾಂ ಭಕ್ತ್ಯಾ ದೇವೀಂ ಮಂಗಲಚಂಡಿಕಾಂ ।
ಪಾದ್ಯಾರ್ಘ್ಯಾಚಮನೀಯೈಶ್ಚ ವಸ್ತ್ರೈಶ್ಚ ವಿವಿಧೈರಪಿ ॥೧೬॥

ಪುಷ್ಪಚಂದನನೈವೇದ್ಯೈರ್ಭಕ್ತ್ಯಾ ನಾನಾವಿಧೈರ್ಮುನೇ ।
ಛಾಗೈರ್ಮೇಷೈಶ್ಚ ಮಹಿಷೈರ್ಗವಯೈಃ ಪಕ್ಷಿಭಿಸ್ತಥಾ ॥೧೭॥

ವಸ್ತ್ರಾಲಂಕಾರಮಾಲ್ಯೈಶ್ಚ ಪಾಯಸೈಃ ಪಿಷ್ಟಕೈರಪಿ ।
ಮಧುಭಿಶ್ಚ ಸುಧಾಭಿಶ್ಚ ಫಲೈರ್ನಾನಾವಿಧೈರಪಿ ॥೧೮॥

ಸಂಗೀತನರ್ತಕೈರ್ವಾದ್ಯೈರುತ್ಸವೈರ್ನಾಮಕೀರ್ತನೈಃ ।
ಧ್ಯಾತ್ವಾ ಮಾಧ್ಯಂದಿನೋಕ್ತೇನ ಧ್ಯಾನೇನ ಭಕ್ತಿಪೂರ್ವಕಂ ॥೧೯॥
ದದೌ ವಸ್ತ್ರಾಣಿ ಮೂಲೇನ ಮಂತ್ರೇಣೈವ ಚ ನಾರದ ।

---

ಸ್ತೋತ್ರಮಾಡಿದರು. ಆಕ್ಷಣದಲ್ಲಿಯೇ ಶಿವನ ತಲೆಯಮೇಲೆ ಪುಷ್ಪವೃಷ್ಟಿಯಾಯಿತು. ||೧೩||

ವಿಷ್ಣು ಬ್ರಹ್ಮರು ಸಂತೋಷದಿಂದ ಶಿವನಿಗೆ ಮಂಗಳಕರವಾದ ಆಶೀರ್ವಾದವನ್ನು ಮಾಡಿದರು. ಶಂಕರನು ವಿಷ್ಣುಬ್ರಹ್ಮರ ಉಪದೇಶದಿಂದ ಮಂಗಲಸ್ನಾನವನ್ನು ಮಾಡಿ ಮಂಗಲಚಂಡಿಕಾದೇವಿಯನ್ನು ಭಕ್ತಿಯಿಂದ ಪೂಜಿಸಿದನು. ||೧೫||

ಪಾದ್ಯ, ಅರ್ಘ್ಯ, ಆಚಮನೀಯ, ಅನೇಕ ಬಗೆಯ ವಸ್ತ್ರಗಳು, ಹೂ, ಗಂಧ, ನಾನಾವಿಧವಾದ ನೈವೇದ್ಯ, ಆಡು, ಕುರಿ, ಕೋಣ, ಕಾಡು ಪಶುಪಕ್ಷಿಗಳು ಇವುಗಳಿಂದಲೂ, (ಇದು ದ್ವಿಜರಿಗೆ ನಿಷಿದ್ಧವಾಗಿರುವುದರಿಂದ ಮಾಂಸಾಹಾರಿಗಳಿಗೆಂದು ತಿಳಿಯಬೇಕು.) ||೧೬-೧೭||

ವಸ್ತ್ರ, ಆಭರಣ, ಹೂಮಾಲೆಗಳು, ಪಾಯಸ, ತಂಬಿಟ್ಟು, ಜೇನು, ಅಮೃತ, ಬಗೆ ಬಗೆಯ ಹಣ್ಣುಗಳು, ಸಂಗೀತ, ನೃತ್ಯ, ವಾದ್ಯ, ಮೆರವಣಿಗೆ, ನಾಮಕೀರ್ತನೆ, ಇವುಗಳಿಂದಲೂ, ಮಾಧ್ಯಂದಿನ ಶಾಖೆಯಲ್ಲಿ ಹೇಳಿದ, ಧ್ಯಾನಮಂತ್ರದಿಂದ ಧ್ಯಾನಮಾಡಿ, ಭಕ್ತಿಯಿಂದ ಮೂಲಮಂತ್ರದಿಂದ ಪ್ರತಿಯೊಂದು ಪೂಜೆಯನ್ನೂ, ದೇವಿಗೆ ಸಮರ್ಪಿಸಿದನು. ಇವುಗಳಲ್ಲಿ ವರ್ಣಾಶ್ರಮಿಗಳಿಗೆ ತಕ್ಕವನ್ನು ಆರಿಸಿಕೊಳ್ಳಬೇಕು. ||೧೮-೧೯||

**ಓಂ ಹ್ರೀಂ ಶ್ರೀಂ ಕ್ಲೀಂ ಸರ್ವಪೂಜ್ಯೇ ದೇವಿ ಮಂಗಲಚಂಡಿಕೇ ॥೨೦॥**

**ಹೂಂ ಹೂಂ ಫಟ್ ಸ್ವಾಹಾಽಪ್ಯೇಕವಿಂಶಾಕ್ಷರೋ ಮನುಃ ।**
**ಪೂಜ್ಯಃ ಕಲ್ಪತರುಶ್ಚೈವ ಭಕ್ತಾನಾಂ ಸರ್ವಕಾಮದಃ ॥೨೧॥**

**ದಶಲಕ್ಷಜಪೇನೈವ ಮಂತ್ರಸಿದ್ಧಿರ್ಭವೇದ್ಧ್ರುವಂ ।**
**ಧ್ಯಾನಂ ಚ ಶ್ರೂಯತಾಂ ಬ್ರಹ್ಮನ್ವೇದೋಕ್ತಂ ಸರ್ವಸಮ್ಮತಂ ॥೨೨॥**

**ದೇವೀಂ ಷೋಡಶವರ್ಷೀಯಾಂ ಶಶ್ವತ್ಸುಸ್ಥಿರಯೌವನಾಂ ।**
**ಬಿಂಬೋಷ್ಠೀಂ ಸುದತೀಂ ಶುದ್ಧಾಂ ಶರತ್ಪದ್ಮನಿಭಾನನಾಂ ॥೨೩॥**

**ಶ್ವೇತಚಂಪಕವರ್ಣಾಭಾಂ ಸುನೀಲೋತ್ಪಲಲೋಚನಾಂ ।**
**ಜಗದ್ಧಾತ್ರೀಂ ಚ ದಾತ್ರೀಂ ಚ ಸರ್ವೇಭ್ಯಃ ಸರ್ವಸಂಪದಾಂ ॥೨೪॥**

**ಸಂಸಾರಸಾಗರೇ ಘೋರೇ ಜ್ಯೋತೀರೂಪಾಂ ಸದಾ ಭಜೇ ।**
**ದೇವ್ಯಾಶ್ಚ ಧ್ಯಾನಮಿತ್ಯೇವಂ ಸ್ತವನಂ ಶ್ರೂಯತಾಂ ಮುನೇ ॥೨೫॥**

---

"ಓಂ, ಹ್ರೀಂ, ಶ್ರೀಂ, ಕ್ಲೀಂ, ಸರ್ವಪೂಜ್ಯೇ ದೇವಿ ಮಂಗಲ ಚಂಡಿಕೇ ಹೂಂ ಹೂಂ ಫಟ್ ಸ್ವಾಹಾ" ಎಂಬ ಇಪ್ಪತ್ತೊಂದಕ್ಷರದ ಮಂತ್ರವು ಪೂಜಾ ಯೋಗ್ಯವಾಗಿಯೂ, ಕಲ್ಪವೃಕ್ಷದಂತೆ ಭಕ್ತರ ಸಮಸ್ತ ಇಷ್ಟಾರ್ಥಗಳನ್ನು ಕೊಡತಕ್ಕು ದಾಗಿಯೂ ಇರುವುದು. ॥೨೦-೨೧॥

ಬ್ರಹ್ಮಪುತ್ರನಾದ ನಾರದನೇ, ಈ ಮಂತ್ರವನ್ನು ಹತ್ತುಲಕ್ಷ ಜಪಮಾಡಿದರೆ ಖಂಡಿತವಾಗಿಯೂ, ಮಂತ್ರಸಿದ್ಧಿಯುಂಟಾಗುವುದು. ಇನ್ನು ಸಮಸ್ತರೂ ಒಪ್ಪಿರುವ ವೇದೋಕ್ತವಾದ ಧ್ಯಾನಕ್ರಮವನ್ನು ಹೇಳುವೆನು ಕೇಳು. ॥೨೨॥

ಹದಿನಾರು ವಯಸ್ಸಿನ ಸ್ಥಿರವಾದ ಪ್ರಾಯವುಳ್ಳ, ತೊಂಡೆಯ ಹಣ್ಣಿನಂತೆ ತುಟಿಯುಳ್ಳ, ಒಳ್ಳೆಯ ಹಲ್ಲುಗಳುಳ್ಳ, ಪರಿಶುದ್ಧವಾದ, ಶರತ್ಕಾಲದ ಕಮಲಕ್ಕೆ ಸಮಾನವಾದ ಮುಖವುಳ್ಳ, ಬಿಳಿಯ ಸಂಪಿಗೆ ಹೂವಿನಂತೆ ಮೈಬಣ್ಣವುಳ್ಳ, ನೀಲಿ ಬಣ್ಣದ ಕಮಲದಂತೆ ಕಣ್ಣುಗಳುಳ್ಳ, ಲೋಕಕ್ಕೆ ತಾಯಿಯಾದ, ಎಲ್ಲ ಭಕ್ತರಿಗೂ ಸಮಸ್ತಸಂಪತ್ತನ್ನು ಕೊಡುವವಳಾದ, ಭಯಂಕರವಾದ ಹುಟ್ಟು ಸಾವುಗಳುಳ್ಳ ಸಂಸಾರವೆಂಬ ಸಾಗರವನ್ನು ದಾಟಲು ದಡವನ್ನು ತೋರಿಸುವ ಪ್ರಕಾಶಸ್ವರೂಪಳಾದ

॥ ಮಹಾದೇವ ಉವಾಚ ॥

**ರಕ್ಷ ರಕ್ಷ ಜಗನ್ಮಾತರ್ದೇವಿ ಮಂಗಲಚಂಡಿಕೇ ।**
**ಹಾರಿಕೇ ವಿಪದಾಂ ರಾಶೇರ್ಹರ್ಷಮಂಗಲಕಾರಿಕೇ ॥೨೬॥**

**ಹರ್ಷಮಂಗಲದಕ್ಷೇ ಚ ಹರ್ಷಮಂಗಲದಾಯಿಕೇ ।**
**ಶುಭೇ ಮಂಗಲದಕ್ಷೇ ಚ ಶುಭೇ ಮಂಗಲಚಂಡಿಕೇ ॥೨೭॥**

**ಮಂಗಲೇ ಮಂಗಲಾರ್ಹೇ ಚ ಸರ್ವಮಂಗಲ ಮಂಗಲೇ ।**
**ಸತಾಂ ಮಂಗಲದೇ ದೇವಿ ಸರ್ವೇಷಾಂ ಮಂಗಲಾಲಯೇ ॥೨೮॥**

**ಪೂಜ್ಯೇ ಮಂಗಲವಾರೇ ಚ ಮಂಗಲಾಭೀಷ್ಟದೇವತೇ ।**
**ಪೂಜ್ಯೇ ಮಂಗಲಭೂಪಸ್ಯ ಮನುವಂಶಸ್ಯ ಸಂತತಂ ॥೨೯॥**

**ಮಂಗಲಾಧಿಷ್ಠಾತೃದೇವಿ ಮಂಗಲಾನಾಂ ಚ ಮಂಗಲೇ ।**
**ಸಂಸಾರಮಂಗಲಾಧಾರೇ ಮೋಕ್ಷಮಂಗಲದಾಯಿನಿ ॥೩೦॥**

---

ದೇವಿಯನ್ನು ಯಾವಾಗಲೂ ಧ್ಯಾನಮಾಡುತ್ತೇನೆ, ಎಂಬುದೇ ದೇವಿಯ ಧ್ಯಾನ ಮಂತ್ರವು. ನಾರದನೇ, ದೇವಿಯಸ್ತೋತ್ರವನ್ನು ಹೇಳುವೆನು ಕೇಳು.॥೨೩-೨೪-೨೫॥

ಮಹಾದೇವನು ಹೇಳಿದನು—ಲೋಕಕ್ಕೆ ತಾಯಿಯಾದವಳೇ, ವಿಪತ್ತಿನ ಸಮೂಹವನ್ನು ನಾಶಮಾಡತಕ್ಕವಳೇ, ಸಂತೋಷವನ್ನೂ, ಶುಭವನ್ನೂ, ಉಂಟು ಮಾಡತಕ್ಕವಳೇ, ನಮ್ಮನ್ನು ಕಾಪಾಡು. ॥೨೬॥

ಸಂತೋಷ ಮತ್ತು ಶುಭ ಶಕ್ತಿಸ್ವರೂಪಳೇ, ಸಂತೋಷವನ್ನೂ, ಶುಭವನ್ನೂ ಕೊಡತಕ್ಕವಳೇ, ಮಂಗಲಕರವಾದ ಕಾರ್ಯಗಳಲ್ಲಿ ಪೂಜಾಯೋಗ್ಯಳಾದವಳೇ, ಶುಭಕರವಾದ ಸಮಸ್ತ ವಸ್ತುಗಳೆಲ್ಲಕ್ಕಿಂತ ಶುಭವಾದವಳೇ, ಸಜ್ಜನರಿಗೆ ಶುಭವನ್ನುಂಟುಮಾಡತಕ್ಕವಳೇ, ಸಮಸ್ತ ಶುಭಗಳಿಗೂ, ಆಶ್ರಯಳಾದವಳೇ, ಮಂಗಲ ಚಂಡಿಕಾದೇವಿಯೇ ಕಾಪಾಡು. ॥೨೭-೨೮॥

ಮಂಗಲವಾರದಲ್ಲಿನ ಪೂಜೆಯನ್ನು ಸ್ವೀಕರಿಸತಕ್ಕವಳೇ, ಮಂಗಲಕ್ಕೆ ಅಭಿಮಾನಿ ದೇವತೆಯಾದವಳೇ, ಮನುವಂಶದಲ್ಲಿ ಹುಟ್ಟಿದ ಮಂಗಲನೆಂಬ ರಾಜನ ಪೂಜೆಯನ್ನು ಯಾವಾಗಲೂ ಸ್ವೀಕರಿಸಿದವಳೇ, ಮಂಗಲಕ್ಕೆ ಆಶ್ರಯಳಾದವಳೇ, ಶುಭವಾದ ವಸ್ತುಗಳಲ್ಲಿ ಅತ್ಯಂತ ಶುಭವಾದವಳೇ, ಸಂಸಾರದಲ್ಲಿ ಉಂಟಾಗುವ ಮಂಗಲಕ್ಕೆ

ಸಾರೇ ಚ ಮಂಗಲಾಧಾರೇ ಸಾರೇ ಚ ಸರ್ವಕರ್ಮಣಾಂ ।
ಪ್ರತಿಮಂಗಲವಾರೇ ಚ ಪೂಜ್ಯೇ ಮಂಗ(ಲ)ಸುಖಪ್ರದೇ ॥೩೦॥

ಸ್ತೋತ್ರೇಣಾನೇನ ಶಂಭುಶ್ಚ ಸ್ತುತ್ವಾ ಮಂಗಲಚಂಡಿಕಾಂ ।
ಪ್ರತಿಮಂಗಲವಾರೇ ಚ ಪೂಜಾಂ ದತ್ವಾ ಗತಃ ಶಿವಃ ॥೩೨॥

ಪ್ರಥಮೇ ಪೂಜಿತಾ ದೇವೀ ಶಿವೇನ ಸರ್ವಮಂಗಲಾ ।
ದ್ವಿತೀಯೇ ಪೂಜಿತಾ ಸಾ ಚ ಮಂಗಲೇನ ಗ್ರಹೇಣ ಚ ॥೩೩॥

ತೃತೀಯೇ ಪೂಜಿತಾ ಭದ್ರಾ ಮಂಗಲೇನ ನೃಪೇಣ ಚ ।
ಚತುರ್ಥೇ ಮಂಗಲೇ ವಾರೇ ಸುಂದರೀಭಿಃ ಪ್ರಪೂಜಿತಾ ॥೩೪॥

ಪಂಚಮೇ ಮಂಗಲಾಕಾಂಕ್ಷಿ ನರೈರ್ಮಂಗಲಚಂಡಿಕಾ ।
ಪೂಜಿತಾ ಪ್ರತಿವಿಶ್ವೇಷು ವಿಶ್ವೇಶಪೂಜಿತಾ ಸದಾ ॥೩೫॥

ತತಃ ಸರ್ವತ್ರ ಸಂಪೂಜ್ಯಾ ಬಭೂವ ಪರಮೇಶ್ವರೀ ।
ದೇವೈಶ್ಚ ಮುನಿಭಿಶ್ಚೈವ ಮಾನವೈರ್ಮನುಭಿರ್ಮುನೇ ॥೩೬॥

---

ಆಶ್ರಯವಾದವಳೇ, ಮೋಕ್ಷರೂಪವಾದ ಮಂಗಲವನ್ನು ಕೊಡತಕ್ಕವಳೇ, ನಮ್ಮನ್ನು ಕಾಪಾಡು. ॥೨೯-೩೦॥

ಮಂಗಲಾಶ್ರಯ ವಸ್ತುಗಳಲ್ಲಿ ಸಾರಸ್ವರೂಪಳೇ, ಪ್ರತಿ ಮಂಗಲವಾರದಲ್ಲಿಯೂ ಪೂಜಿಸಲ್ಪಡತಕ್ಕವಳೇ, ಅತ್ಯುತ್ತಮವಾದ ಸುಖವನ್ನು ಕೊಡತಕ್ಕವಳೇ, ಕಾಪಾಡು. ॥೩೧॥

ಶಿವನು ಈ ಸ್ತೋತ್ರದಿಂದ ಮಂಗಲಚಂಡಿಕಾದೇವಿಯನ್ನು ಸ್ತೋತ್ರಮಾಡಿ ಪ್ರತಿಮಂಗಲವಾರದಲ್ಲಿಯೂ ಪೂಜೆಯನ್ನು ಮಾಡಿದನು. ॥೩೨॥

ಮಂಗಲಚಂಡಿಕಾದೇವಿಯನ್ನು ಕ್ರಮವಾಗಿ ಶಿವನೂ, ಅಂಗಾರಕನೂ, ಮಂಗಲರಾಜನೂ, ಮಂಗಲವಾರದ ದಿನ ಸ್ತ್ರೀಯರೂ, ಮಂಗಲವನ್ನಪೇಕ್ಷಿಸುವ ಜನರೂ. ಪೂಜಿಸಿದರು. ಆ ಮೇಲೆ ಪ್ರತಿಪ್ರಪಂಚದಲ್ಲಿಯೂ, ದೇವಿಯ ಪೂಜೆಯು ಹರಡಿತು ॥೩೩-೩೪-೩೫॥

ಆ ಮೇಲೆ ದೇವತೆಗಳೂ, ಮುನಿಗಳೂ, ಮನುಗಳೂ, ಮನುಷ್ಯರೂ ಎಲ್ಲೆಡೆಗಳಲ್ಲಿಯೂ, ದೇವಿಯನ್ನು ಪೂಜಿಸಿದರು. ॥೩೬॥

ದೇವ್ಯಾಶ್ಚ ಮಂಗಲಸ್ತೋತ್ರಂ ಯಃ ಶೃಣೋತಿ ಸಮಾಹಿತಃ ।
ತನ್ಮಂಗಲಂ ಭವೇತ್ತಸ್ಯ ನ ಭವೇತ್ತದಮಂಗಲಂ ॥೩೭॥

ವರ್ಧತೇ ಪುತ್ರಪೌತ್ರೈಶ್ಚ ಮಂಗಲಂ ಚ ದಿನೇ ದಿನೇ ।

॥ ನಾರಾಯಣ ಉವಾಚ ॥

ಉಕ್ತಂ ದ್ವಯೋರುಪಾಖ್ಯಾನಂ ಬ್ರಹ್ಮಪುತ್ರಂ ಯಥಾಗಮಂ ।
ಶ್ರೂಯತಾಂ ಮನಸಾಽಽಖ್ಯಾನಂ ಯಚ್ಛ್ರುತಂ ಧರ್ಮವಕ್ತ್ರತಃ ॥೩೮॥

ಸಾ ಚ ಕನ್ಯಾ ಭಗವತೀ ಕಾಶ್ಯಪಸ್ಯ ಚ ಮಾನಸೀ ।
ತೇನೈವ ಮನಸಾ ದೇವೀ ಮನಸಾ ಯಾ ಚ ದೀವ್ಯತಿ ॥೩೯॥

ಮನಸಾ ಧ್ಯಾಯತೇ ಯಾ ಚ ಪರಮಾತ್ಮಾನಮೀಶ್ವರಂ ।
ತೇನ ಸಾ ಮನಸಾ ದೇವೀ ತೇನ ಯೋಗೇನ ದೀವ್ಯತಿ ॥೪೦॥

---

ಏಕಾಗ್ರಚಿತ್ತದಿಂದ ಯಾವನು ಮಂಗಲಚಂಡಿಕಾದೇವಿಯ ಸ್ತೋತ್ರವನ್ನು ಕೇಳುವನೋ ಅವನ ಅಮಂಗಳಗಳೆಲ್ಲವೂ, ಮಂಗಲಸ್ವರೂಪವಾಗಿ ದಿನದಿನಕ್ಕೆ ಅವನಿಗೆ ಪುತ್ರಪೌತ್ರಾಭಿವೃದ್ಧಿಯೂ, ಮಂಗಳಗಳ ಅಭಿವೃದ್ಧಿಯೂ ಉಂಟಾಗುವುದು. ॥೩೭॥

ನಾರಾಯಣಮುನಿಯು ಹೇಳಿದನು --ಬ್ರಹ್ಮಪುತ್ರನಾದ ನಾರದನೇ, ಷಷ್ಠೀ ಮತ್ತೂ ಮಂಗಲಚಂಡಿಕಾದೇವಿಯರ ಉಪಾಖ್ಯಾನವನ್ನು ಹೇಳಿಯಾಯಿತು. ಧರ್ಮದೇವನಿಂದ ಕೇಳಿದ ಮನಸಾದೇವಿಯ ಉಪಾಖ್ಯಾನವನ್ನು ವೇದದಲ್ಲಿ ಹೇಳಿರುವಂತೆ ಹೇಳುವೆನು, ಕೇಳು. ॥೩೮॥

ಮನಸಾದೇವಿಯು ಕಶ್ಯಪಋಷಿಯ ಮಾನಸಪುತ್ರಿಯು : ಆದುದರಿಂದ ಮನಸಾ ಎಂಬ ಹೆಸರನ್ನು ಪಡೆದಳು. ಮನಸ್ಸಿನಿಂದ ಧ್ಯಾನಮಾಡಬೇಕಾದವಳಾದುದರಿಂದಲೂ, ಈ ಹೆಸರು ಬಂದಿರುವುದು. ॥೩೯॥

ಯಾವ ದೇವಿಯು ಮನಸ್ಸಿನಿಂದ ಪರಮಾತ್ಮನನ್ನು ಧ್ಯಾನಿಸುತ್ತಾ, ಆ ಪರಮಾತ್ಮಸಂಬಂಧವಾದ ಯೋಗದಿಂದ ವಿನೋದಪಡುವವಳಾದುದರಿಂದ ಮನಸಾದೇವೀ ಎಂದು ಹೆಸರು ಉಂಟಾಗಿರುವುದು. ॥೪೦॥

ಆತ್ಮಾರಾಮಾ ಚ ಸಾ ದೇವೀ ವೈಷ್ಣವೀ ಸಿದ್ಧಯೋಗಿನೀ ।
ತ್ರಿಯುಗಂ ಚ ತಪಸ್ತಪ್ತ್ವಾ ಕೃಷ್ಣಸ್ಯ ಪರಮಾತ್ಮನಃ ॥೪೧॥

ಜರತ್ಕಾರುಶರೀರಂ ಚ ದೃಷ್ಟ್ವಾ ಚ ಕ್ಷೀಣಮೀಶ್ವರಃ ।
ಗೋಪೀಪತಿರ್ನಾಮ ಚಕ್ರೇ ಜರತ್ಕಾರುರಿತಿ ಪ್ರಭುಃ ॥೪೨॥

ವಾಂಛಿತಂ ಚ ದದೌ ತಸ್ಯೈ ಕೃಪಯಾ ಚ ಕೃಪಾನಿಧಿಃ ।
ಪೂಜಾಂ ಚ ಕಾರಯಾಮಾಸ ಚಕಾರ ಚ ಸ್ವಯಂ ಪ್ರಭುಃ ॥೪೩॥

ಸ್ವರ್ಗೇ ಚ ನಾಗಲೋಕೇ ಚ ಪೃಥಿವ್ಯಾಂ ಬ್ರಹ್ಮಲೋಕತಃ ।
ಭೃಶಂ ಜಗತ್ಸು ಗೌರೀ ಸಾ ಸುಂದರೀ ಚ ಮನೋಹರಾ ॥೪೪॥

ಜಗದ್ಗೌರೀತಿ ವಿಖ್ಯಾತಾ ತೇನ ಸಾ ಪೂಜಿತಾ ಸತೀ ।
ಶಿವಶಿಷ್ಯಾ ಚ ಸಾ ದೇವೀ ತೇನ ಶೈವೀ ಪ್ರಕೀರ್ತಿತಾ ॥೪೫॥

---

ಆ ಮನಸಾದೇವಿಯು ಆತ್ಮನಲ್ಲಿ ಮನಸ್ಸನ್ನು ನೆಲೆಗೊಳಿಸಿ, ವಿಷ್ಣುಶಕ್ತಿ ಸ್ವರೂಪಳಾಗಿ, ಸಿದ್ಧಯೋಗಿನಿಯಾಗಿ, ಕೃಷ್ಣನನ್ನು ಕುರಿತು ಮೂರು ಯುಗಗಳವರೆಗೆ ತಪಸ್ಸುಮಾಡಿದಳು. ಗೋಪಿಯರ ಪತಿಯಾದ ಶ್ರೀಕೃಷ್ಣನು ತಪಸ್ಸಿನಿಂದ ಜೀರ್ಣವಾದ ಅವಳ ಶರೀರವನ್ನು ನೋಡಿ ಅವಳಿಗೆ ಜರತ್ಕಾರು ಎಂದು ಹೆಸರನ್ನಿಟ್ಟನು. ಅಥವಾ ಜರತ್ಕಾರುಮುನಿಯಂತೆ ಜೀರ್ಣವಾದ ಶರೀರವನ್ನು ನೋಡಿ ಆ ಹೆಸರನ್ನಿಟ್ಟನು. ॥೪೧-೪೨॥

ದಯೆಯ ಗಣಿಯಾದ ಆ ಶ್ರೀಕೃಷ್ಣನು ಆಕೆಯ ಇಷ್ಟಾರ್ಥವನ್ನು ಕೊಟ್ಟು ತಾನೂ ಆಕೆಯನ್ನು ಪೂಜಿಸಿ ಇತರರಿಂದಲೂ ಪೂಜೆಮಾಡಿಸಿದನು. ॥೪೩॥

ಸ್ವರ್ಗಲೋಕ, ನಾಗಲೋಕ, ಬ್ರಹ್ಮಲೋಕ, ಭೂಲೋಕಗಳಲ್ಲಿ ಸುಂದರಿಯೂ ಮನೋಹರಳೂ, ಗೌರವರ್ಣದ ಶರೀರವುಳ್ಳವಳೂ, ಆದುದರಿಂದ, ಜಗದ್ಗೌರೀ ಎಂಬ ಹೆಸರಿನಿಂದ ಅವಳು ಪ್ರಸಿದ್ಧಳಾಗಿ ಪೂಜೆಯನ್ನು ಪಡೆಯುತ್ತಲಿರುವಳು. ಶಿವನ ಶಿಷ್ಯಳಾದುದರಿಂದ ಶೈವೀ ಎಂದೂ ಆಕೆಗೆ ಹೆಸರು. ॥೪೪-೪೫॥

ವಿಷ್ಣುಭಕ್ತಾಽತೀವ ಶಶ್ವದ್ವೈಷ್ಣವೀ ತೇನ ಕೀರ್ತಿತಾ।
ನಾಗಾನಾಂ ಪ್ರಾಣ ರಕ್ಷಿತ್ರೀ ಯಜ್ಞೇ ಪಾರಿಕ್ಷಿತಸ್ಯ ಚ ॥೪೬॥

ನಾಗೇಶ್ವರೀತಿ ವಿಖ್ಯಾತಾ ಸಾ ನಾಗಭಗಿನೀತಿ ಚ।
ವಿಷಂ ಸಂಹರ್ತುಮೀಶಾ ಯಾ ತೇನ ವಿಷಹರೀ ಸ್ಮೃತಾ ॥೪೭॥

ಸಿದ್ಧಯೋಗಂ ಹರಾತ್ಪ್ರಾಪ ತೇನ ಸಾ ಸಿದ್ಧಯೋಗಿನೀ।
ಮಹಾಜ್ಞಾನಂ ಚ ಯೋಗಂ ಚ ಮೃತಸಂಜೀವಿನೀಂ ಪರಾಂ ॥೪೮॥

ಮಹಾಜ್ಞಾನಯುತಾಂ ತಾಂ ಚ ಪ್ರವದಂತಿ ಮನೀಷಿಣಃ।
ಆಸ್ತೀಕಸ್ಯ ಮುನೀಂದ್ರಸ್ಯ ಮಾತಾ ಸಾಽಪಿ ತಪಸ್ವಿನೀ ॥೪೯॥

ಆಸ್ತೀಕಮಾತಾ ವಿಜ್ಞಾತಾ ಜಗತ್ಯಾಂ ಸುಪ್ರತಿಷ್ಠಿತಾ।
ಪ್ರಿಯಾ ಮುನೇರ್ಜರತ್ಕಾರೋಃ ಮುನೀಂದ್ರಸ್ಯ ಮಹಾತ್ಮನಃ ॥೫೦॥

---

ಆಗಾಗ್ಯೆ ವಿಶೇಷವಾಗಿ ವಿಷ್ಣುಭಕ್ತಿಯುಳ್ಳವಳಾದುದರಿಂದ ವೈಷ್ಣವಿಯಾಗಿರುವಳು. ಪರೀಕ್ಷಿತಮಹಾರಾಜನು ಮಾಡಿದ ಸರ್ಪಯಾಗದಲ್ಲಿ ನಾಗಗಳ ಪ್ರಾಣಗಳನ್ನು ಕಾಪಾಡಿದವಳಾದುದರಿಂದ ನಾಗೇಶ್ವರೀ ಎಂದೂ, ನಾಗಭಗಿನೀ ಎಂದೂ, ಪ್ರಸಿದ್ಧಳಾಗಿರುವಳು. ವಿಷವನ್ನು ನಾಶಮಾಡುವ ಶಕ್ತಿಯುಳ್ಳವಳಾದುದರಿಂದ ವಿಷಹರೀ ಎಂದೂ ಹೆಸರಿರುವುದು. ॥೪೬-೪೭॥

ಮನಸಾದೇವಿಯು ಶಿವನಿಂದ ಸಿದ್ಧಯೋಗವನ್ನು ಪಡೆದುದರಿಂದ ಸಿದ್ಧಯೋಗಿನೀ ಎಂಬ ಹೆಸರನ್ನು ಪಡೆದಳು. ಇದಲ್ಲದೆ ಶಿವನಿಂದ ಮಹಾಜ್ಞಾನವನ್ನೂ, ಶ್ರೇಷ್ಠವಾದ ಮೃತಸಂಜೀವಿನೀ ವಿದ್ಯೆಯನ್ನೂ ಪಡೆದಳು. ॥೪೮॥

ಬುದ್ಧಿವಂತರು ಆ ಮನಸಾದೇವಿಯನ್ನು ಮಹಾಜ್ಞಾನಯುತಳೆಂದು ಹೇಳುವರು. ಅವಳು ಆಸ್ತೀಕನೆಂಬ ಮುನಿಯ ತಾಯಿಯಾದುದರಿಂದ ಆಸ್ತೀಕಮಾತಾ ಎಂದೂ, ಯೋಗಿಯೂ, ಬ್ರಾಹ್ಮಣರಲ್ಲಿ ಪೂಜ್ಯನೂ ಆದ ಜರತ್ಕಾರುವೆಂಬ ಮುನಿಯ ಪತ್ನಿಯಾದುದರಿಂದ ಜರತ್ಕಾರುಪ್ರಿಯೆಯೆಂದೂ, ಹೆಸರನ್ನು ಹೊಂದಿರುವಳು. ॥೪೯-೫೦॥

ಯೋಗಿನೋ ವಿಪ್ರಪೂಜ್ಯಸ್ಯ ಜರತ್ಕಾರುಪ್ರಿಯಾ ತತಃ ।
ಜರತ್ಕಾರುರ್ಜರದ್ಗೌರೀ ಮನಸಾ ಸಿದ್ಧಯೋಗಿನೀ ॥೫೧॥

ವೈಷ್ಣವೀ ನಾಗಭಗಿನೀ ಶೈವೀ ನಾಗೇಶ್ವರೀ ತಥಾ ।
ಜರತ್ಕಾರುಪ್ರಿಯಾಽಸ್ತೀಕಮಾತಾ ವಿಷಹರೇತಿ ಚ ॥೫೨॥

ಮಹಾಜ್ಞಾನಯುತಾ ಚೈವ ಸಾ ದೇವೀ ವಿಶ್ವಪೂಜಿತಾ ।
ದ್ವಾದಶೈತಾನಿ ನಾಮಾನಿ ಪೂಜಾಕಾಲೇ ತು ಯಃ ಪಠೇತ್ ॥೫೩॥

ತಸ್ಯ ನಾಗಭಯಂ ನಾಸ್ತಿ ತಸ್ಯ ವಂಶೋದ್ಭವಸ್ಯ ಚ ।
ನಾಗಭೀತೇ ಚ ಶಯನೇ ನಾಗಗ್ರಸ್ತೇ ಚ ಮಂದಿರೇ ॥೫೪॥

ನಾಗಶೋಭೇ ಮಹಾದುರ್ಗೇ ನಾಗವೇಷ್ಟಿತ ವಿಗ್ರಹೇ ।
ಇದಂ ಸ್ತೋತ್ರಂ ಪಠಿತ್ವಾ ತು ಮುಚ್ಯತೇ ನಾತ್ರ ಸಂಶಯಃ ॥೫೫॥

ನಿತ್ಯಂ ಪಠೇದ್ಯಸ್ತಂ ದೃಷ್ಟ್ವಾ ನಾಗವರ್ಗಃ ಪಲಾಯತೇ ।
ದಶಲಕ್ಷಜಪೇನೈವ ಸ್ತೋತ್ರಸಿದ್ಧಿರ್ಭವೇನ್ನೃಣಾಂ ॥೫೬॥

---

ಜರತ್ಕಾರು, ಜರದ್ಗೌರೀ, ಮನಸಾ, ಸಿದ್ಧಯೋಗಿನೀ, ವೈಷ್ಣವೀ, ನಾಗಭಗಿನೀ, ಶೈವೀ, ನಾಗೇಶ್ವರೀ, ಜರತ್ಕಾರುಪ್ರಿಯಾ, ಅಸ್ತೀಕಮಾತಾ, ವಿಷಹರಾ, ಮಹಾಜ್ಞಾನಯುತಾ, ಎಂಬ ಹನ್ನೆರಡು ನಾಮಗಳನ್ನು ಪೂಜಾಕಾಲದಲ್ಲಿ ಯಾರು ಹೇಳುವರೋ, ಅವರಿಗೆ ಸರ್ಪಗಳ ಭೀತಿಯಿಲ್ಲ, ಅವರ ವಂಶದಲ್ಲಿ ಹುಟ್ಟಿದವರಿಗೂ, ನಾಗಭಯವಿಲ್ಲ. ||೫೧-೫೨-೫೩||

ಹಾವಿನ ಭಯದಿಂದ ಮಲಗಿದಾಗಲೂ, ಹಾವುಗಳಿಂದ ಕೂಡಿದ ಮನೆಯಲ್ಲಿಯೂ, ನಾಗಗಳಿಂದ ತುಂಬಿದ ದುರ್ಗಗಳಲ್ಲಿಯೂ, ನಾಗಗಳು ಸುತ್ತಿಕೊಂಡಿರುವ ದೇವವಿಗ್ರಹಗಳಲ್ಲಿಯೂ, ಅಥವಾ ಶರೀರದಲ್ಲಿಯೂ, ಈ ಸಂದರ್ಭಗಳಲ್ಲೆಲ್ಲಾ ಈ ಸ್ತೋತ್ರವನ್ನು ಹೇಳಿದರೆ ಆ ಹಾವುಗಳ ಬಿಡುಗಡೆಯಾಗುವುದೆಂಬ ವಿಷಯದಲ್ಲಿ ಸಂದೇಹವಿಲ್ಲ. ||೫೪-೫೫||

ಪ್ರತಿದಿನವೂ ಈ ಸ್ತೋತ್ರವನ್ನು ಹೇಳುವವನನ್ನು ನೋಡಿ ನಾಗಗಳು ಓಡಿಹೋಗುವುವು. ಈ ಸ್ತೋತ್ರವನ್ನು ಹತ್ತುಲಕ್ಷ ಜಪಮಾಡಿದರೆ, ಸಿದ್ಧಿಯಾಗು

ಸ್ತೋತ್ರಸಿದ್ಧಿರ್ಭವೇದ್ಯಸ್ಯ ಸ ವಿಷಂ ಭೋಕ್ತುಮೀಶ್ವರಃ ।
ನಾಗೈಶ್ಚ ಭೂಷಣಂ ಕೃತ್ವಾ ಸ ಭವೇನ್ನಾಗವಾಹನಃ ॥೫೮॥

ನಾಗಾಸನೋ ನಾಗತಲ್ಪೋ ಮಹಾಸಿದ್ಧೋ ಭವೇನ್ನರಃ ।
ಅಂತೇ ಚ ವಿಷ್ಣುನಾ ಸಾರ್ಧಂ ಕ್ರೀಡತ್ಯೇವ ದಿವಾನಿಶಂ ॥೫೯॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ನವಮಸ್ಕಂಧೇ
ಸಪ್ತಚತ್ವಾರಿಂಶೋಽಧ್ಯಾಯಃ

---

ವುದು. ಯಾರು ಈ ಸ್ತೋತ್ರಸಿದ್ಧಿಯನ್ನು ಪಡೆದಿರುವರೋ ಅವರು ವಿಷಪಾನ ಮಾಡಲು ಶಕ್ತರಾಗುವರು. ಸರ್ಪಗಳಿಂದ ಅಲಂಕಾರಮಾಡಿಕೊಳ್ಳುವರು. ನಾಗಗಳನ್ನೇ ಆಸನವನ್ನಾಗಿಯೂ, ಹಾಸಿಗೆಯನ್ನಾಗಿಯೂ, ಮಾಡಿಕೊಂಡು ಮಹಾಸಿದ್ಧರಾಗಿ ಕೊನೆಗೆ ವಿಷ್ಣುಲೋಕದಲ್ಲಿ ವಿಷ್ಣುವಿನೊಡನೆ ಹಗಲೂ ರಾತ್ರಿಯೂ ಆಟವಾಡುತ್ತಿರುವರು. ||೫೭-೫೮-೫೯||

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಒಂಬತ್ತನೆಯ ಸ್ಕಂಧದಲ್ಲಿ
ನಲವತ್ತೇಳನೆಯ ಅಧ್ಯಾಯವು ಮುಗಿದುದು.

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ನವಮಸ್ಕಂಧೇ

### ॥ ಅಷ್ಟಚತ್ವಾರಿಂಶೋಽಧ್ಯಾಯಃ ॥

### ನಲವತ್ತೆಂಟನೆಯ ಅಧ್ಯಾಯವು

॥ ಶ್ರೀನಾರಾಯಣ ಉವಾಚ ॥

**ಮತ್ತಃ ಪೂಜಾವಿಧಾನಂ ಚ ಶ್ರೂಯತಾಂ ಮುನಿಪುಂಗವ ।**
**ಧ್ಯಾನಂ ಚ ಸಾಮವೇದೋಕ್ತಂ ಪ್ರೋಕ್ತಂ ದೇವೀ ವಿಧಾನಕಂ ॥೧॥**

**ಶ್ವೇತಚಂಪಕವರ್ಣಾಭಾಂ ರತ್ನಭೂಷಣಭೂಷಿತಾಂ ।**
**ವಹ್ನಿ ಶುದ್ಧಾಂಶುಕಾಧಾನಾಂ ನಾಗಯಜ್ಞೋಪವೀತಿನೀಂ ॥೨॥**

**ಮಹಾಜ್ಞಾನಯುತಾಂ ತಾಂ ಚ ಪ್ರವರಜ್ಞಾನಿನಾಂ ವರಾಂ ।**
**ಸರ್ವಾಧಿಷ್ಠಾತೃದೇವೀಂ ಚ ಸಿದ್ಧಾಂ ಸಿದ್ಧಿಪ್ರದಾಂ ಭಜೇ ॥೩॥**

---

ನಾರಾಯಣನು ಹೇಳಿದನು — ಮುನಿಶ್ರೇಷ್ಠನಾದ ನಾರದನೇ, ಮನಸಾ ದೇವಿಯ ಪೂಜಾವಿಧಾನವನ್ನು ಹೇಳುವೆನು ಕೇಳು. ದೇವಿಯ ಈ ಪೂಜಾವಿಧಾನವೂ, ಧ್ಯಾನವೂ, ಸಾಮವೇದದಲ್ಲಿ ಹೇಳಿರುವುದು. ॥೧॥

ಬಿಳಿಯ ಸಂಪಿಗೆಯ ಬಣ್ಣದ ಕಾಂತಿಯುಳ್ಳ ರತ್ನಾಭರಣಗಳನ್ನು ಧರಿಸಿರುವ ಪರಿಶುದ್ಧವಾದ ವಸ್ತ್ರವನ್ನುಟ್ಟಿರುವ, ಸರ್ಪವನ್ನೇ ಯಜ್ಞೋಪವೀತವಾಗಿ ಧರಿಸಿರುವ ಉತ್ತಮವಾದ ಜ್ಞಾನದಿಂದ ಕೂಡಿದ ಜ್ಞಾನಿಗಳಲ್ಲಿ ಶ್ರೇಷ್ಠಳಾದ, ಸಿದ್ಧರಿಗೆಲ್ಲರಿಗೂ ಆಶ್ರಯಸ್ಥಾನಳಾದ, ಸಮಸ್ತ ಸಿದ್ಧಿಗಳನ್ನೂ ಕೊಡತಕ್ಕ ದೇವಿಯನ್ನು ಧ್ಯಾನ ಮಾಡುವೆನು. ॥೨-೩॥

ಇತಿ ಧ್ಯಾತ್ವಾ ಚ ತಾಂ ದೇವೀಂ ಮೂಲೇನೈವ ಪ್ರಪೂಜಯೇತ್ ।
ನೈವೇದ್ಯೈಃ ವಿವಿಧೈರ್ಧೂಪೈಃ ಪುಷ್ಪಗಂಧಾನುಲೇಪನೈಃ ॥೪॥

ಮೂಲಮಂತ್ರೈಶ್ಚ ವೇದೋಕ್ತೈರ್ಭಕ್ತಾನಾಂ ವಾಂಛಿತಪ್ರದಃ ।
ಮುನೇ ಕಲ್ಪತರುರ್ನಾಮ ಸುಸಿದ್ಧೋ ದ್ವಾದಶಾಕ್ಷರಃ ॥೫॥

ಓಂ ಹ್ರೀಂ ಶ್ರೀಂ ಕ್ಲೀಂ ಐಂ ಮನಸಾದೇವ್ಯೈ ಸ್ವಾಹೇತಿ ಕೀರ್ತಿತಃ ।
ಪಂಚಲಕ್ಷಜಪೇನೈವ ಮಂತ್ರಸಿದ್ಧಿರ್ಭವೇನ್ನೃಣಾಂ ॥೬॥

ಮಂತ್ರಸಿದ್ಧಿರ್ಭವೇದ್ಯಸ್ಯ ಸ ಸಿದ್ಧೋ ಜಗತೀತಲೇ ।
ಸುಧಾಸಮಂ ವಿಷಂ ತಸ್ಯ ಧನ್ವಂತರಿಸಮೋ ಭವೇತ್ ॥೭॥

ಬ್ರಹ್ಮನ್ ಸ್ನಾತ್ವಾ ತು ಸಂಕ್ರಾಂತ್ಯಾಂ ಗೂಢಶಾಲಾಸು ಯತ್ನತಃ ।
ಆವಾಹ್ಯ ದೇವೀಮೀಶಾನಾಂ ಪೂಜಯೇದ್ಯೋಽತಿಭಕ್ತಿತಃ ॥೮॥

---

ಈ ರೀತಿಯಾಗಿ ಆ ದೇವಿಯನ್ನು ಧ್ಯಾನಮಾಡಿ, ಮೂಲಮಂತ್ರಗಳಿಂದಲೂ, ವೇದಮಂತ್ರಗಳಿಂದಲೂ, ನೈವೇದ್ಯ, ಧೂಪ, ಪುಷ್ಪ, ಗಂಧ ಮುಂತಾದ ವಸ್ತುಗಳಿಂದ ಪೂಜಿಸಬೇಕು. ನಾರದನೇ, ಮನಸಾದೇವಿಯ ದ್ವಾದಶಾಕ್ಷರಮಂತ್ರವು ಸಿದ್ಧಿಸಿದರೆ ಭಕ್ತರಿಗೆ ಕಲ್ಪವೃಕ್ಷದಂತೆ ಇಷ್ಟವಾದ ಫಲವನ್ನು ಕೊಡತಕ್ಕುದಾಗುವುದು. ॥೪-೫॥

"ಓಂ ಹ್ರೀಂ, ಶ್ರೀಂ, ಕ್ಲೀಂ, ಐಂ, ಮನಸಾದೇವ್ಯೈ ಸ್ವಾಹಾ" ಎಂಬ ಹನ್ನೆರಡು ಅಕ್ಷರವುಳ್ಳ ಮಂತ್ರವು ಪ್ರಸಿದ್ಧವಾಗಿರುವುದು. ಐದುಲಕ್ಷ ಜಪಮಾಡಿದವರಿಗೆ ಈ ಮಂತ್ರವು ಸಿದ್ಧಿಸುವುದು. ॥೬॥

ಯಾವನಿಗೆ ಈ ಮಂತ್ರವು ಸಿದ್ಧಿಸುವುದೋ, ಅವನು ಭೂಮಂಡಲದಲ್ಲಿ ಪ್ರಸಿದ್ಧನೆನಿಸುವನು. ಅವನಿಗೆ ವಿಷವು ಅಮೃತಕ್ಕೆ ಸಮಾನವಾಗುವುದು. ಅವನು ಧನ್ವಂತರಿಗೆ ಸಮಾನನಾಗಿ ಸಮಸ್ತ ರೋಗಗಳನ್ನೂ ನಾಶಮಾಡುವನು. ॥೭॥

ಬ್ರಹ್ಮರ್ಷಿಯಾದ ನಾರದನೇ, ಸಂಕ್ರಮಣದಿನದಲ್ಲಿ ಸ್ನಾನಮಾಡಿ ಗೋಪ್ಯವಾದ ಪ್ರದೇಶದಲ್ಲಿ ಮನಸಾದೇವಿಯನ್ನು ಯಾವನು ಭಕ್ತಿಯಿಂದ ಪೂಜಿಸುವನೋ ಅಥವಾ ಪಂಚಮಿಯದಿನ ಸ್ನಾನಮಾಡಿ ದೇವಿಗೆ ಯಾವನು ಬಲಿಯನ್ನು ಸಮರ್ಪಿ

ಪಂಚಮ್ಯಾಂ ಮನಸಾ ಧ್ಯಾಯನ್ ದೇವ್ಯೈ ದದ್ಯಾ ಚ್ಚಯೋ ಬಲಿಂ ।
ಧನವಾನ್ ಪುತ್ರವಾಂಶ್ಚೈವ ಕೀರ್ತಿಮಾನ್ಸ ಭವೇದ್ಧ್ರುವಂ ॥೯॥

ಪೂಜಾವಿಧಾನಂ ಕಥಿತಂ ತದಾಖ್ಯಾನಂ ನಿಶಾಮಯ ।
ಕಥಯಾಮಿ ಮಹಾಭಾಗ ಯಚ್ಛ್ರುತಂ ಧರ್ಮವಕ್ತ್ರತಃ ॥೧೦॥

ಪುರಾ ನಾಗಭಯಾಕ್ರಾಂತಾ ಬಭೂವುರ್ಮಾನವಾ ಭುವಿ ।
ಗತಾಸ್ತೇ ಶರಣಂ ಸರ್ವೇ ಕಶ್ಯಪಂ ಮುನಿಪುಂಗವಂ ॥೧೧॥

ಮಂತ್ರಾಂಶ್ಚ ಸಸೃಜೇ ಭೀತಃ ಕಶ್ಯಪೋ ಬ್ರಹ್ಮಣಾಽನ್ವಿತಃ ।
ವೇದಬೀಜಾನುಸಾರೇಣ ಚೋಪದೇಶೇನ ಬ್ರಹ್ಮಣಃ ॥೧೨॥

ಮಂತ್ರಾಧಿಷ್ಠಾತೃದೇವೀಂ ಮನಸಾಂ ಸಸೃಜೇ ತಥಾ ।
ತಪಸಾ ಮನಸಾ ತೇನ ಬಭೂವ ಮನಸಾ ಚ ಸಾ ॥೧೩॥

ಕುಮಾರೀ ಸಾ ಚ ಸಂಭೂತಾ ಜಗಾಮ ಶಂಕರಾಲಯಂ ।
ಭಕ್ತ್ಯಾ ಸಂಪೂಜ್ಯ ಕೈಲಾಸೇ ತುಷ್ಟಾವ ಚಂದ್ರಶೇಖರಂ ॥೧೪॥

---

ಸುವನೋ ಅವನು ಧನವಂತನೂ, ಪುತ್ರವಂತನೂ, ಯಶೋವಂತನೂ, ಆಗುವನು. ಇಲ್ಲಿ ಬಲಿ ಎಂದರೆ ದ್ವಿಜರು ಅನ್ನಗಳನ್ನೂ ಫಲಗಳನ್ನೂ ಸಮರ್ಪಿಸಬೇಕು. ॥೮-೯॥

ಪುಣ್ಯವಂತನಾದ ನಾರದನೇ, ದೇವಿಯ ಪೂಜಾವಿಧಾನವನ್ನು ಹೇಳಿದೆನು. ಇನ್ನು ಧರ್ಮದೇವನಿಂದ ಕೇಳಿದ ಆ ಮನಸಾದೇವಿಯ ಕಥೆಯನ್ನು ಹೇಳುವೆನು ಕೇಳು. ॥೧೦॥

ಪೂರ್ವದಲ್ಲಿ ಭೂಲೋಕದಲ್ಲಿದ್ದ ಮನುಷ್ಯರು ಸರ್ಪಗಳ ಭಯದಿಂದ ಕೂಡಿ ಅವರೆಲ್ಲರೂ ಮುನಿಶ್ರೇಷ್ಠನಾದ ಕಶ್ಯಪನನ್ನು ಶರಣುಹೊಂದಿದರು. ಆ ಕಶ್ಯಪನು ಭಯಪಟ್ಟು ಬ್ರಹ್ಮನೊಡನೆ ಸೇರಿ ಆ ಬ್ರಹ್ಮನ ಉಪದೇಶದಿಂದ ವೇದ ಮತ್ತು ಬೀಜಾಕ್ಷರಗಳನ್ನನುಸರಿಸಿ ಸರ್ಪಾದಿವಿಷಗಳನ್ನು ನಾಶಮಾಡುವ ಮಂತ್ರಗಳನ್ನು ಸೃಷ್ಟಿಮಾಡಿದನು. ॥೧೧-೧೨॥

ಹಾಗೆಯೇ ಸಕಲ ವಿಷಹರಮಂತ್ರಗಳಿಗೂ, ಆಶ್ರಯಭೂತಳಾದ ಮನಸಾ ಎಂಬ ದೇವಿಯನ್ನೂ ಸೃಷ್ಟಿಸಿದನು. ಕಶ್ಯಪನು ತಪಶ್ಶಕ್ತಿಯಿಂದ ತನ್ನ ಮನಸ್ಸಿನಿಂದಲೇ ಆ ದೇವಿಯನ್ನು ಸೃಷ್ಟಿಮಾಡಿದುದರಿಂದ ಮನಸಾದೇವಿ ಎಂದು ಹೆಸರಾ

**ದಿವ್ಯವರ್ಷಸಹಸ್ರಂ ತಂ ಸಿಷೇವೇ ಚ ಮುನೇಃ ಸುತಾ ।**
**ಆಶುತೋಷೋ ಮಹೇಶಶ್ಚ ತಾಂ ಚ ತುಷ್ಟೋ ಬಭೂವ ಹ ॥೧೫॥**

**ಮಹಾಜ್ಞಾನಂ ದದೌ ತಸ್ಯೈ ಪಾಠಯಾಮಾಸ ಸಾಮ ಚ ।**
**ಕೃಷ್ಣಮಂತ್ರಂ ಕಲ್ಪತರುಂ ದದಾವಷ್ಟಾಕ್ಷರಂ ಮುನೇ ॥೧೬॥**

**ಲಕ್ಷ್ಮೀ ಮಾಯಾ ಕಾಮಬೀಜಂ ಙೇಂತಂ ಕೃಷ್ಣಪದಂ ತತಃ ।**
**ತ್ರೈಲೋಕ್ಯಮಂಗಲಂ ನಾಮ ಕವಚಂ ಪೂಜನಕ್ರಮಂ ॥೧೭॥**

**ಪುರಶ್ಚರ್ಯಾಕ್ರಮಂ ಚಾಪಿ ವೇದೋಕ್ತಂ ಸರ್ವಸಮ್ಮತಂ ।**
**ಪ್ರಾಪ್ಯ ಮೃತ್ಯುಂಜಯಾನ್ಮಂತ್ರಂ ಸಾ ಸತೀ ಚ ಮುನೇಃ ಪುರಾ॥೧೮॥**
**ಜಗಾಮ ತಪಸೇ ಸಾಧ್ವೀ ಪುಷ್ಕರಂ ಶಂಕರಾಜ್ಞಯಾ ।**

---

ಯಿತು. ಚಿಕ್ಕವಯಸ್ಸಿನ ಆ ದೇವಿಯು ಹುಟ್ಟಿದೊಡನೆಯೇ ಕೈಲಾಸಕ್ಕೆ ಹೋಗಿ ಭಕ್ತಿಯಿಂದ ಚಂದ್ರಶೇಖರನಾದ ಶಿವನನ್ನು ಪೂಜಿಸಿ ಸ್ತೋತ್ರಮಾಡಿದಳು. ||೧೩-೧೪||

ನಾರದನೇ, ಕಶ್ಯಪನ ಪುತ್ರಿಯಾದ ಮನಸಾದೇವಿಯು ದೇವಮಾನದ ಒಂದುಸಾವಿರ ವರ್ಷಗಳ ವರೆಗೆ ಶಿವನ ಸೇವೆಯನ್ನು ಮಾಡಿದಳು. ಬೇಗನೆ ಸಂತೋಷ ಹೊಂದುವ ಸ್ವಭಾವದ ಶಿವನು ಅವಳ ಸೇವೆಗೆ ಸಂತೋಷಪಟ್ಟು, ಆ ದೇವಿಗೆ ಉತ್ತಮವಾದ ಬ್ರಹ್ಮಜ್ಞಾನವನ್ನು ಕೊಟ್ಟು ಸಾಮವೇದವನ್ನು ಹೇಳಿ ಕೊಟ್ಟನು. ಮತ್ತು ಕಲ್ಪವೃಕ್ಷದಂತೆ ಫಲದಾಯಕವಾದ ಕೃಷ್ಣನ ಅಷ್ಟಾಕ್ಷರೀಮಂತ್ರೋಪದೇಶವನ್ನೂ ಮಾಡಿದನು. ||೧೫-೧೬||

ಲಕ್ಷ್ಮೀ ಮಾಯಾ ಕಾಮಬೀಜಾಕ್ಷರಗಳಿಂದ ಕೂಡಿದ ಚತುರ್ಥೀ ವಿಭಕ್ತ್ಯಂತವಾದ ಕೃಷ್ಣಶಬ್ದವು ನಮಃ ಎಂಬ ಶಬ್ದದಿಂದ ಕೂಡಿ "ಶ್ರೀಂ, ಹ್ರೀಂ, ಕ್ಲೀಂ, ಕೃಷ್ಣಾಯ ನಮಃ" ಎಂದು ಅಷ್ಟಾಕ್ಷರೀಮಂತ್ರವಾಗುವುದು. ತ್ರೈಲೋಕ್ಯಮಂಗಲವೆಂಬ ಹೆಸರಿನ ಕೃಷ್ಣನ ಕವಚವನ್ನೂ, ಪೂಜೆಯನ್ನು ಮಾಡುವ ಕ್ರಮವನ್ನೂ, ವೇದೋಕ್ತವಾಗಿ ಸಕಲ ಶಾಸ್ತ್ರಗಳಿಗೆ ಸಮ್ಮತವಾದ ಮಂತ್ರಜಪಮಾಡುವ ಕ್ರಮವನ್ನೂ, ||೧೭||

ಮೃತ್ಯುವನ್ನು ಜಯಿಸಿದ ಶಿವನಿಂದ ಪಡೆದು ಆ ಮನಸಾದೇವಿಯು ಶಂಕರನ

ತ್ರಿಯುಗಂ ಚ ತಪಸ್ತಪ್ತ್ವಾ ಕೃಷ್ಣಸ್ಯ ಪರಮಾತ್ಮನಃ ॥೧೯॥

ಸಿದ್ಧಾ ಬಭೂವ ಸಾ ದೇವೀ ದದರ್ಶ ಪುರತಃ ಪ್ರಭುಂ ।
ದೃಷ್ಟ್ವಾ ಕೃಶಾಂಗೀಂ ಬಾಲಾಂ ಚ ಕೃಪಯಾ ಚ ಕೃಪಾನಿಧಿಃ ॥೨೦॥

ಪೂಜಾಂ ಚ ಕಾರಯಾಮಾಸ ಚಕಾರ ಚ ಸ್ವಯಂ ಹರಿಃ ।
ವರಂ ಚ ಪ್ರದದೌ ತಸ್ಯೈ ಪೂಜಿತಾ ತ್ವಂ ಭವೇ ಭವ ॥೨೧॥

ವರಂ ದತ್ವಾ ಚ ಕಲ್ಯಾಣ್ಯೈ ತತಶ್ಚಾಂತರ್ದಧೇ ಹರಿಃ ।
ಪ್ರಥಮೇ ಪೂಜಿತಾ ಸಾ ಚ ಕೃಷ್ಣೇನ ಪರಮಾತ್ಮನಾ ॥೨೨॥

ದ್ವಿತೀಯೇ ಶಂಕರೇಣೈವ ಕಶ್ಯಪೇನ ಸುರೇಣ ಚ ।
ಮುನಿನಾ ಮನುನಾ ಚೈವ ನಾಗೇನ ಮಾನವಾದಿಭಿಃ ॥೨೩॥

ಬಭೂವ ಪೂಜಿತಾ ಸಾ ಚ ತ್ರಿಷು ಲೋಕೇಷು ಸುವ್ರತಾ ।
ಜರತ್ಕಾರುಮುನೀಂದ್ರಾಯ ಕಶ್ಯಪಸ್ತಾಂ ದದೌ ಪುರಾ ॥೨೪॥

---

ಅಪ್ಪಣೆಯನ್ನು ಪಡೆದು ತಪಸ್ಸುಮಾಡುವುದಕ್ಕಾಗಿ ಪುಷ್ಕರಕ್ಷೇತ್ರಕ್ಕೆ ಪ್ರಯಾಣ ಮಾಡಿದಳು. ॥೧೮॥

ಆ ದೇವಿಯು ಮೂರು ಯುಗಗಳ ವರೆಗೆ ಕೃಷ್ಣನನ್ನು ಕುರಿತು ತಪಸ್ಸು ಮಾಡಿ ಸಿದ್ಧಿಯನ್ನು ಹೊಂದಿದಳು. ಕೃಷ್ಣನನ್ನು ಎದುರಿಗೆ ಕಂಡಳು. ॥೧೯॥

ದಯಾನಿಧಿಯಾದ ಶ್ರೀಕೃಷ್ಣನು ಕೃಶವಾದ ಅವಯವಗಳುಳ್ಳ ಕನ್ಯೆಯಾದ ಅವಳನ್ನು ನೋಡಿ ದಯೆಯಿಂದ ಅವಳಿಂದ ತನ್ನ ಪೂಜೆಯನ್ನು ಮಾಡಿಸಿಕೊಂಡು ತಾನೂ ಅವಳನ್ನು ಪೂಜಿಸಿದನು. ॥೨೦॥

ಕೃಷ್ಣನು "ನೀನು ಲೋಕದಲ್ಲಿ ಎಲ್ಲರಿಂದಲೂ ಪೂಜೆಯನ್ನು ಹೊಂದು" ಎಂದು ಮಂಗಲಕರವಾದ ಆ ಮನಸಾದೇವಿಗೆ ವರವನ್ನು ಕೊಟ್ಟು ಮರೆಯಾದನು. ॥೨೧॥

ಆ ದೇವಿಯು ಮೊದಲು ಕೃಷ್ಣನಿಂದಲೂ, ಬಳಿಕ ಶಂಕರನಿಂದಲೂ, ಆಮೇಲೆ ಕಶ್ಯಪನಿಂದಲೂ, ತರುವಾಯ ದೇವತೆಗಳು, ಮುನಿಗಳು, ಮನುಗಳು, ನಾಗರು ಮನುಷ್ಯರೇ ಮೊದಲಾದವರಿಂದ ಪೂಜೆಯನ್ನು ಪಡೆದಳು. ॥೨೨-೨೩॥

ಮೂರು ಲೋಕದಲ್ಲಿಯೂ ಜನರು ಆ ಮನಸಾದೇವಿಯನ್ನು ಪೂಜಿಸುತ್ತಿದ್ದರು. ಕಶ್ಯಪನು ಆ ದೇವಿಯನ್ನು ಜರತ್ಕಾರುವೆಂಬ ಮುನಿಶ್ರೇಷ್ಠನಿಗೆ ಕೊಟ್ಟನು.

ಅಯಾಚಿತೋ ಮುನಿಶ್ರೇಷ್ಠೋ ಜಗ್ರಾಹ ಬ್ರಾಹ್ಮಣಾಜ್ಞಯಾ ।
ಕೃತ್ವೋದ್ವಾಹಂ ಮಹಾಯೋಗೀ ವಿಶ್ರಾಂತಸ್ತಪಸಾ ಚಿರಂ ॥೨೫॥

ಸುಷ್ವಾಪ ದೇವ್ಯಾ ಜಘನೇ ವಟಮೂಲೇ ಚ ಪುಷ್ಕರೇ ।
ನಿದ್ರಾಂ ಜಗಾಮ ಸ ಮುನಿಃ ಸ್ಮೃತ್ವಾ ನಿದ್ರೇಶಮೀಶ್ವರಂ ॥೨೬॥

ಜಗಾಮಾಸ್ತಂ ದಿನಕರಃ ಸಾಯಂಕಾಲ ಉಪಸ್ಥಿತೇ ।
ಸಂಚಿಂತ್ಯ ಮನಸಾ ಸಾಧ್ವೀ ಮನಸಾ ಸಾ ಪತಿವ್ರತಾ ॥೨೭॥

ಧರ್ಮಲೋಪಭಯೇನೈವ ಚಕಾರಾಲೋಚನಂ ಸತೀ ।
ಅಕೃತ್ವಾ ಪಶ್ಚಿಮಾಂ ಸಂಧ್ಯಾಂ ನಿತ್ಯಂ ಚೈವ ದ್ವಿಜನ್ಮನಾ ॥೨೮॥

ಬ್ರಹ್ಮಹತ್ಯಾದಿಕಂ ಪಾಪಂ ಲಭಿಷ್ಯತಿ ಪತಿರ್ಮಮ ।
ನೋಪತಿಷ್ಠತಿ ಯಃ ಪೂರ್ವಾಂ ನೋಪಾಸ್ತೇ ಯಸ್ತು ಪಶ್ಚಿಮಾಂ॥ ॥೨೯॥
ಸ ಸರ್ವತ್ರಾಶುಚಿರ್ನಿತ್ಯಂ ಬ್ರಹ್ಮಹತ್ಯಾದಿಕಂ ಲಭೇತ್ ।

---

ಆ ಜರತ್ಕಾರುಮುನಿಯು ವಿವಾಹಾರ್ಥವಾಗಿ ಕನ್ಯೆಯನ್ನು ಯಾಚಿಸದಿದ್ದರೂ, ಬ್ರಾಹ್ಮಣನ ಅಪ್ಪಣೆಯನ್ನು ಮೀರಬಾರದೆಂಬ ಗೌರವಕ್ಕಾಗಿ ಆಕೆಯನ್ನು ವಿವಾಹ ಮಾಡಿಕೊಂಡು ಮಹಾಯೋಗಿಯಾದ ಅವನು ಬಹು ಕಾಲ ತಪಸ್ಸಿನಿಂದ ವಿಶ್ರಾಂತಿಯನ್ನು ಹೊಂದಿದನು. ॥೨೪-೨೫॥

ಆ ಜರತ್ಕಾರುಮುನಿಯು ಒಂದು ದಿನ ಪುಷ್ಕರಕ್ಷೇತ್ರದಲ್ಲಿ ಆಲದಮರದ ಕೆಳಗೆ ಪತ್ನಿಯಾದ ಮನಸಾದೇವಿಯ ತೊಡೆಯ ಮೇಲೆ ತಲೆಯನ್ನಿಟ್ಟು ಯೋಗನಿದ್ರಾಧಿಪತಿಯಾದ ಈಶ್ವರನನ್ನು ಧ್ಯಾನಮಾಡುತ್ತಾ ನಿದ್ರೆಮಾಡುತ್ತಿದ್ದನು. ॥೨೬॥

ಸಾಯಂಕಾಲವಾಗಲು ಸೂರ್ಯನು ಅಸ್ತಮಿಸುತ್ತಿದ್ದನು. ಆಗ ಪತಿವ್ರತೆಯಾದ ಮನಸಾದೇವಿಯು ಧರ್ಮಲೋಪಭಯದಿಂದ ತನ್ನ ಮನಸ್ಸಿನಲ್ಲಿ ಹೀಗೆ ಆಲೋಚಿಸಿದಳು. ॥೨೭॥

ಬ್ರಾಹ್ಮಣರಿಗೆ ನಿತ್ಯವಾದ ಸಾಯಂಸಂಧ್ಯೆಯನ್ನು ಮಾಡದೆಹೋದರೆ ಬ್ರಹ್ಮಹತ್ಯೆಯೇ ಮೊದಲಾದ ಪಾಪವನ್ನು ನನ್ನ ಪತಿಯು ಹೊಂದುವನು. ಯಾವ ಬ್ರಾಹ್ಮಣನಾದರೂ ಪ್ರಾತಃಸಂಧ್ಯೆಯನ್ನೂ ಸಾಯಂಸಂಧ್ಯೆಯನ್ನೂ ಮಾಡದಿದ್ದರೆ ಅವನು ಎಲ್ಲಾ ಸಂದರ್ಭದಲ್ಲಿಯೂ, ಅಶುಚಿಯಾಗಿ ಬ್ರಹ್ಮಹತ್ಯಾದಿ ಪಾಪವನ್ನು

ವೇದೋಕ್ತಮಿತಿ ಸಂಚಿಂತ್ಯ ಬೋಧಯಾಮಾಸ ಸುಂದರೀ । ॥೩೦॥

ಸ ಚ ಬುದ್ಧೋ ಮುನಿಶ್ರೇಷ್ಠಸ್ತಾಂ ಚುಕೋಪ ಭೃಶಂ ಮುನೇ ॥

॥ ಮುನಿರುವಾಚ ॥

ಕಥಂ ಮೇ ಸುಖಿನಃ ಸಾಧ್ವಿ ನಿದ್ರಾಭಂಗಃ ಕೃತಸ್ತ್ವಯಾ ॥೩೧॥

ವ್ಯರ್ಥಂ ವ್ರತಾದಿಕಂ ತಸ್ಯಾ ಯಾ ಭರ್ತುಶ್ಚಾಽಪಕಾರಿಣೀ ।
ತಪಶ್ಚಾಽನಶನಂ ಚೈವ ವ್ರತಂ ದಾನಾದಿಕಂ ಚ ಯತ್ ॥೩೨॥

ಭರ್ತುರಪ್ರಿಯಕಾರಿಣ್ಯಾಃ ಸರ್ವಂ ಭವತಿ ನಿಷ್ಫಲಂ ।
ಯಯಾ ಪ್ರಿಯಃ ಪೂಜಿತಶ್ಚ ಶ್ರೀಕೃಷ್ಣಃ ಪೂಜಿತಸ್ತಯಾ ॥೩೩॥

ಪತಿವ್ರತಾ ವ್ರತಾರ್ಥಂ ಚ ಪತಿರೂಪೋ ಹರಿಃ ಸ್ವಯಂ ।
ಸರ್ವದಾನಂ ಸರ್ವಯಜ್ಞಃ ಸರ್ವತೀರ್ಥನಿಷೇವಣಂ ॥೩೪॥

ಸರ್ವಂ ವ್ರತಂ ತಪಃ ಸರ್ವಮುಪವಾಸಾದಿಕಂ ಚ ಯತ್ ।
ಸರ್ವಧರ್ಮಶ್ಚ ಸತ್ಯಂ ಚ ಸರ್ವದೇವಪ್ರಪೂಜನಂ ॥೩೫॥

---

ಪಡೆಯುವನು. ಎಂದು ವೇದದಲ್ಲಿ ಹೇಳಿರುವುದೆಂದು ಯೋಚಿಸಿ ಸುಂದರಿಯಾದ ಆ ಮನಸಾದೇವಿಯು ತನ್ನ ಪತಿಯನ್ನು ಎಚ್ಚರಗೊಳಿಸಿದಳು. ॥೨೮-೨೯॥

ಎಚ್ಚರಗೊಂಡ ಆ ಮುನಿಶ್ರೇಷ್ಠನಾದ ಜರತ್ಕಾರುವು ಆ ಮನಸಾದೇವಿಯ ಮೇಲೆ ನಿದ್ರಾಸುಖದ ಭಂಗವಾದುದರಿಂದ ಕೋಪಗೊಂಡನು.

ಮುನಿಯು ಪತ್ನಿಯನ್ನು ಕುರಿತು ಎಲೈ ಪತಿವ್ರತೆಯೇ, ನೀನು ಸುಖವಾಗಿ ನಿದ್ರೆಮಾಡುತ್ತಿದ್ದ ನನಗೆ ನಿದ್ರಾಭಂಗವನ್ನೇಕೆ ಮಾಡಿದೆ? ಗಂಡನಿಗೆ ಅಪಕಾರ ಮಾಡುವ ಸ್ತ್ರೀಯು ಮಾಡಿದ ವ್ರತಗಳೂ, ತಪಸ್ಸೂ, ದಾನಾದಿಗಳೂ ನಿಷ್ಫಲವಾಗುವುವು. ॥೩೧-೩೨॥

ಯಾವ ಸ್ತ್ರೀಯಳು ಪತಿಯನ್ನು ಪೂಜಿಸುವಳೋ, ಅವಳು ಕೃಷ್ಣನನ್ನು ಪೂಜಿಸಿದಂತೆಯೇ ಸರಿ. ಕೃಷ್ಣನೇ ಪತಿರೂಪನಾಗಿರುವನು. ಸಮಸ್ತ ದಾನಗಳೂ ಯಜ್ಞಗಳೂ, ತೀರ್ಥಯಾತ್ರೆಗಳೂ, ವ್ರತಗಳೂ, ತಪಸ್ಸುಗಳೂ, ಸತ್ಯಭಾಷಣವೂ, ಸಮಸ್ತದೇವತಾಪೂಜೆಗಳೂ, ಎಲ್ಲವೂ ಸೇರಿ ಪತಿಸೇವೆಯ ಹದಿನಾರನೆಯ ಒಂದು ಭಾಗಕ್ಕೆ ಸಮವಾಗಲಾರದು. ॥೩೪-೩೫॥

ತತ್ಸರ್ವಂ ಸ್ವಾಮಿಸೇವಾಯಾಃ ಕಲಾಂ ನಾರ್ಹಂತಿ ಷೋಡಶೀಂ ।
ಪುಣ್ಯೇ ಚ ಭಾರತೇ ವರ್ಷೇ ಪತಿಸೇವಾಂ ಕರೋತಿ ಯಾ ॥೩೬॥

ವೈಕುಂಠೇ ಸ್ವಾಮಿನಾ ಸಾರ್ಧಂ ಸಾ ಯಾತಿ ಬ್ರಹ್ಮಣಃ ಪದಂ ।
ವಿಪ್ರಿಯಂ ಕುರುತೇ ಭರ್ತುರ್ವಿಪ್ರಿಯಂ ವದತಿ ಪ್ರಿಯಂ ॥೩೭॥

ಅಸತ್ಕುಲೇ ಪ್ರಸೂತಾ ಹಿ ತತ್ಫಲಂ ಶ್ರೂಯತಾಂ ಸತೀ ।
ಕುಂಭೀಪಾಕಂ ವ್ರಜೇತ್ಸಾ ಚ ಯಾವಚ್ಚಂದ್ರದಿವಾಕರೌ ॥೩೮॥

ತತೋ ಭವತಿ ಚಾಂಡಾಲೀ ಪತಿಪುತ್ರವಿವರ್ಜಿತಾ ।
ಇತ್ಯುಕ್ತ್ವಾ ಚ ಮುನಿಶ್ರೇಷ್ಠೋ ಬಭೂವ ಸ್ಫುರಿತಾಧರಃ ॥೩೯॥

ಚಕಂಪೇ ತೇನ ಸಾ ಸಾಧ್ವೀ ಭಯೇನೋವಾಚ ತಂ ಪತಿಂ ।

॥ ಸಾಧ್ವ್ಯುವಾಚ ॥

ಸಂಧ್ಯಾಲೋಪ ಭಯೇನೈವ ನಿದ್ರಾಭಂಗಃ ಕೃತಸ್ತವ ॥೪೦॥
ಕುರು ಶಾಂತಿಂ ಮಹಾಭಾಗ ದುಷ್ಟಾಯಾ ಮಮ ಸುವ್ರತ ।

---

ಪುಣ್ಯಭೂಮಿಯಾದ ಧರ್ಮಭೂಮಿಯಾದ ಭರತಖಂಡದಲ್ಲಿ ಪತಿಸೇವೆಯನ್ನು ಮಾಡುತ್ತಿರುವ ಸ್ತ್ರೀಯು ತನ್ನ ಪತಿಯೊಡನೆ ವೈಕುಂಠಲೋಕಕ್ಕೆ ಹೋಗಿ ಆ ವೈಕುಂಠಾಧಿಪತಿಯಾದ ನಾರಾಯಣನೊಡನೆ ಪರಬ್ರಹ್ಮರೂಪವಾದ ಮೋಕ್ಷವನ್ನು ಪಡೆಯುವಳು. ॥೩೬॥

ಯಾವ ಸ್ತ್ರೀಯು ಪತಿಗೆ ಅಹಿತವನ್ನು ಮಾಡಿ ಕಠಿಣವಾದ ಮಾತನ್ನಾಡುವಳೋ, ಅವಳು ನೀಚಕುಲದಲ್ಲಿ ಹುಟ್ಟಿದವಳೆಂದು ತಿಳಿಯಬೇಕು. ಅವಳಿಗುಂಟಾಗುವ ಫಲವನ್ನು ಕೇಳು, ಆ ದುಷ್ಟೆಯು ಸೂರ್ಯಚಂದ್ರರಿರುವವರೆಗೂ ಕುಂಭೀಪಾಕವೆಂಬ ನರಕದಲ್ಲಿ ದುಃಖವನ್ನನುಭವಿಸಿ ಬಳಿಕ ಗಂಡನೂ, ಮಕ್ಕಳೂ ಇಲ್ಲದ ಚಾಂಡಾಲಿಯಾಗಿ ಹುಟ್ಟುವಳು. ॥೩೭-೩೮॥

ಹೀಗೆಂದು ಜರತ್ಕಾರುಮುನಿಶ್ರೇಷ್ಠನು ಕೋಪದಿಂದ ಹೇಳಿ ತುಟಿಯನ್ನಲುಗಿಸುತ್ತಿರಲು ಪತಿವ್ರತೆಯಾದ ಮನಸಾದೇವಿಯು ಭಯದಿಂದ ನಡುಗುತ್ತ ಪತಿಯನ್ನು ಕುರಿತು ಮಾತನಾಡಿದಳು. ॥೩೯॥

ಒಳ್ಳೆಯವ್ರತವುಳ್ಳ ಮುನಿಯೇ, ಸಂಧ್ಯಾಕರ್ಮಕ್ಕೆ ಲೋಪವುಂಟಾಗುವುದೆಂಬ ಭಯದಿಂದ ನಾನು ನಿನಗೆ ನಿದ್ರಾಭಂಗಮಾಡಿದೆನು. ಮಹಾಮಹಿಮನಾದ ನೀನು

ಶೃಂಗಾರಾಹಾರನಿದ್ರಾಣಾಂ ಯಶ್ಚ ಭಂಗಂ ಕರೋತಿ ವೈ ॥೪೧॥

ಸ ವ್ರಜೇತ್ಕಾಲಸೂತ್ರಂ ವೈ ಯಾವಚ್ಚಂದ್ರದಿವಾಕರೌ ।
ಇತ್ಯುಕ್ತ್ವಾ ಮನಸಾದೇವೀ ಸ್ವಾಮಿನಶ್ಚರಣಾಂಬುಜೇ ॥೪೨॥

ಪಪಾತ ಭಕ್ತ್ಯಾ ಭೀತಾ ಚ ರುರೋದ ಚ ಪುನಃ ಪುನಃ ।
ಕುಪಿತಂ ಚ ಮುನಿಂ ದೃಷ್ಟ್ವಾ ಶ್ರೀಸೂರ್ಯಂ ಶಪ್ತುಮುದ್ಯತಂ ॥೪೩॥

ತತ್ರಾಽಽಜಗಾಮ ಭಗವಾನ್ಸಂಧ್ಯಯಾ ಸಹ ನಾರದ ।
ತತ್ರಾಽಽಗತ್ಯ ಮುನಿಂ ಸಮ್ಯಗುವಾಚ ಭಾಸ್ಕರಃ ಸ್ವಯಂ ॥೪೪॥

ವಿನಯೇನ ಚ ಭೀತಶ್ಚ ತಯಾ ಸಹ ಯಥೋಚಿತಂ ।

॥ ಭಾಸ್ಕರ ಉವಾಚ ॥

ಸೂರ್ಯಾಸ್ತಸಮಯಂ ದೃಷ್ಟ್ವಾ ಸಾಧ್ವೀ ಧರ್ಮಭಯೇನ ಚ ॥೪೫॥

ಬೋಧಯಾಮಾಸ ತ್ವಾಂ ವಿಪ್ರ ಶರಣಂ ತ್ವಾಮಹಂ ಗತಃ ।
ಕ್ಷಮಸ್ವ ಭಗವನ್ಬ್ರಹ್ಮನ್ಮಾಂ ಶಪ್ತುಂ ನೋಚಿತಂ ಮುನೇ ॥೪೬॥

---

ದುಷ್ಟಳಾದ ನನ್ನ ವಿಷಯದಲ್ಲಿ ಶಾಂತನಾಗು, ಸ್ತ್ರೀಪುರುಷರ ಪರಸ್ಪರ ಪ್ರೀತಿಯ ವಿಷಯದಲ್ಲಿಯೂ, ಯಾರು ತಡೆಯನ್ನುಂಟುಮಾಡುವರೋ ಅವರು ಚಂದ್ರಸೂರ್ಯರಿರುವವರೆಗೂ ಕಾಲಸೂತ್ರವೆಂಬ ನರಕದಲ್ಲಿರುವರು. ॥೪೦-೪೧॥

ಹೀಗೆಂದು ಹೇಳಿ ಮನಸಾದೇವಿಯು ಭಯಭಕ್ತಿಗಳಿಂದ ಕೂಡಿ ಪತಿಯ ಪಾದಕಮಲದ ಮೇಲೆ ಬಿದ್ದು ಮತ್ತೆ ಮತ್ತೆ ಅತ್ತಳು. ॥೪೨॥

ತನ್ನ ಅರ್ಘ್ಯವನ್ನು ತೆಗೆದುಕೊಳ್ಳದೆ ಸೂರ್ಯನು ಹೇಗೆ ಅಸ್ತಾಚಲಕ್ಕೆ ಹೋದಾನು ಎಂದು ಕೋಪದಿಂದ ಸೂರ್ಯನಿಗೆ ಶಾಪವನ್ನು ಕೊಡಲು ಪ್ರಯತ್ನಿಸುತ್ತಿರುವ ಜರತ್ಕಾರುಮುನಿಯನ್ನು ನೋಡಿ ಸೂರ್ಯನು ಸಂಧ್ಯಾದೇವಿಯೊಡನೆ ಅಲ್ಲಿಗೆ ಬಂದು ಮುನಿಯನ್ನು ಕುರಿತು ವಿನಯದಿಂದ ಸಮಯೋಚಿತವಾಗಿ ಭಯದಿಂದ ಮಾತನಾಡಿದನು. ॥೪೩-೪೪॥

ಬ್ರಹ್ಮಜ್ಞಾನಸಂಪನ್ನನೂ, ಮಹಾಮಹಿಮನೂ ಆದ ಮುನಿಯೇ, ಸೂರ್ಯಾಸ್ತಮಯಕಾಲವನ್ನು ನೋಡಿ ಪತಿವ್ರತೆಯಾದ ನಿನ್ನ ಪತ್ನಿಯು ಧರ್ಮಲೋಪಭಯದಿಂದ ನಿನ್ನನ್ನೆಚ್ಚರಗೊಳಿಸಿದಳು. ನಾನು ನಿನ್ನನ್ನು ಮರೆಹೊಕ್ಕಿರುವೆನು. ಈ ಸಂದರ್ಭದಲ್ಲಿ ನೀನು ನನ್ನನ್ನು ಶಪಿಸುವುದೂ ಯುಕ್ತವಲ್ಲ. ಕ್ಷಮಿಸು.॥೪೫-೪೬॥

ಬ್ರಾಹ್ಮಣಾನಾಂ ಚ ಹೃದಯಂ ನವನೀತಸಮಂ ಸದಾ ।
ತೇಷಾಂ ಕ್ಷಣಾರ್ಧಂ ಕೋಪಶ್ಚ ಯತೋ ಭಸ್ಮ ಭವೇಜ್ಜಗತ್ ॥೪೭॥

ಪುನಃ ಸ್ರಷ್ಟುಂ ದ್ವಿಜಃ ಶಕ್ತೋ ನ ತೇಜಸ್ವೀ ದ್ವಿಜಾತ್ಪರಃ ।
ಬ್ರಾಹ್ಮಣೋ ಬ್ರಹ್ಮಣೋ ವಂಶಃ ಪ್ರಜ್ವಲನ್ಬ್ರಹ್ಮತೇಜಸಾ ॥೪೮॥

ಶ್ರೀಕೃಷ್ಣಂ ಭಾವಯೇನ್ನಿತ್ಯಂ ಬ್ರಹ್ಮಜ್ಯೋತಿಃ ಸನಾತನಂ ।
ಸೂರ್ಯಸ್ಯ ವಚನಂ ಶ್ರುತ್ವಾ ದ್ವಿಜಸ್ತುಷ್ಟೋ ಬಭೂವ ಹ ॥೪೯॥

ಸೂರ್ಯೋ ಜಗಾಮ ಸ್ವಸ್ಥಾನಂ ಗೃಹೀತ್ವಾ ಬ್ರಾಹ್ಮಣಾಶಿಷಂ ।
ತತ್ಯಾಜ ಮನಸಾಂ ವಿಪ್ರಃ ಪ್ರತಿಜ್ಞಾಪಾಲನಾಯ ಚ ॥೫೦॥
ರುದತೀಂ ಶೋಕಸಂಯುಕ್ತಾಂ ಹೃದಯೇನ ವಿದೂಯತಾ ।

---

ಬ್ರಾಹ್ಮಣರ ಮನಸ್ಸು ಯಾವಾಗಲೂ ಬೆಣ್ಣೆಯಂತೆ ಮೃದುವಾದುದು. ಅವರ ಕೋಪವೂ ಅರ್ಧಕ್ಷಣಮಾತ್ರವಿರುವುದು. ಆ ಕೋಪವು ಹೆಚ್ಚುಕಾಲವಿದ್ದರೆ ಪ್ರಪಂಚವೇ ಬೂದಿಯಾಗುವುದು. ॥೪೭॥

ಬ್ರಾಹ್ಮಣನು ಬ್ರಹ್ಮನ ವಂಶದಲ್ಲಿ ಹುಟ್ಟಿದವನು. ಅವನಿಗಿಂತ ತೇಜಸ್ವಿಗಳಾದವರು ಮತ್ತೊಬ್ಬರಿಲ್ಲ. ಅವನು ನಾಶವಾದ ಜಗತ್ತನ್ನು ಮತ್ತೆ ಸೃಷ್ಟಿಸಲು ಸಮರ್ಥನಾಗಿರುವನು. ಆ ಬ್ರಾಹ್ಮಣನು ಪರಬ್ರಹ್ಮನ ತೇಜಸ್ಸಿನಿಂದ ಪ್ರಕಾಶಮಾನನಾಗಿ ಶಾಶ್ವತನೂ, ಪ್ರಕಾಶಸ್ವರೂಪನೂ, ಆದ ಶ್ರೀಕೃಷ್ಣನನ್ನು ಯಾವಾಗಲೂ ಧ್ಯಾನಿಸುತ್ತಿರುವನು. ॥೪೮॥

ಸೂರ್ಯನ ಮಾತನ್ನು ಕೇಳಿ ಜರತ್ಕಾರುಮುನಿಯು ಸಂತುಷ್ಟನಾದನು. ಬಳಿಕ ಸೂರ್ಯನು ಆ ಬ್ರಾಹ್ಮಣನ ಆಶೀರ್ವಾದವನ್ನು ಪಡೆದು ತನ್ನ ಸ್ಥಾನಕ್ಕೆ ತೆರಳಿದನು. ॥೪೯॥

ಆ ಬ್ರಾಹ್ಮಣನು ವಿವಾಹದ ಸಮಯದಲ್ಲಿ " ನನ್ನ ಆಜ್ಞೆಗೆ ವಿರುದ್ಧವಾಗಿ ನಡೆದರೆ ಇವಳನ್ನು ತ್ಯಾಗಮಾಡುವೆನೆಂದು ಮಾಡಿದ್ದ ಪ್ರತಿಜ್ಞೆಯನ್ನು ನಡೆಯಿಸುವುದಕ್ಕಾಗಿ ಪಶ್ಚಾತ್ತಾಪದಿಂದ ಕೂಡಿದ ಮನಸ್ಸಿನಿಂದ ದುಃಖಿಸುತ್ತಿರುವ ಮನಸಾದೇವಿಯನ್ನು ಬಿಟ್ಟುಬಿಟ್ಟನು. ॥೫೦॥

ಸಾ ಸಸ್ಮಾರ ಗುರುಂ ಶಂಭುಮಿಷ್ಟದೇವಂ ವಿಧಿಂ ಹರಿಂ ॥೫೧॥

ಕಶ್ಯಪಂ ಜನ್ಮದಾತಾರಂ ವಿಪತ್ತೌ ಭಯಕರ್ಶಿತಾ ।
ತತ್ರಾಜಗಾಮ ಗೋಪೀಶೋ ಭಗವಾನ್ ಶಂಭುರೇವ ಚ ॥೫೨॥

ವಿಧಿಶ್ಚ ಕಶ್ಯಪಶ್ಚೈವ ಮನಸಾ ಪರಿಚಿಂತಿತಃ ।
ದೃಷ್ಟ್ವಾ ವಿಪ್ರೋಽಭೀಷ್ಟದೇವಂ ನಿರ್ಗುಣಂ ಪ್ರಕೃತೇಃ ಪರಂ ॥೫೩॥

ತುಷ್ಟಾವ ಪರಯಾ ಭಕ್ತ್ಯಾ ಪ್ರಣನಾಮ ಮುಹುರ್ಮುಹುಃ ।
ನಮಶ್ಚಕಾರ ಶಂಭುಂ ಚ ಬ್ರಹ್ಮಾಣಂ ಕಶ್ಯಪಂ ತಥಾ ॥೫೪॥

ಕಥಮಾಗಮನಂ ದೇವ ಇತಿ ಪ್ರಶ್ನಂ ಚಕಾರ ಸಃ ।
ಬ್ರಹ್ಮಾ ತದ್ವಚನಂ ಶ್ರುತ್ವಾ ಸಹಸಾ ಸಮಯೋಚಿತಂ ॥೫೫॥

ಪ್ರತ್ಯುವಾಚ ನಮಸ್ಕೃತ್ಯ ಹೃಷೀಕೇಶಪದಾಂಬುಜಂ ।
ಯದಿ ತ್ಯಕ್ತಾ ಧರ್ಮಪತ್ನೀ ಧರ್ಮಿಷ್ಠಾ ಮನಸಾ ಸತೀ ॥೫೬॥

---

ಆ ಮನಸಾದೇವಿಯು ಗುರುವಾದ ಶಿವನನ್ನೂ ಇಷ್ಟದೇವತೆಗಳಾದ ವಿಷ್ಣು ಬ್ರಹ್ಮರನ್ನೂ, ತನಗೆ ಜನಕನಾದ ಕಶ್ಯಪಮುನಿಯನ್ನೂ, ಈ ವಿಪತ್ತಿನಲ್ಲಿ ಭಯಾತುರಳಾಗಿ ಸ್ಮರಣೆಮಾಡಿದಳು. ||೫೧||

ಹಾಗೆ ಸ್ಮರಿಸುತ್ತಿರಲು ಗೋಪೀಶನಾದ ಶ್ರೀಕೃಷ್ಣನೂ, ಶಿವನೂ, ಬ್ರಹ್ಮ ಕಶ್ಯಪರೂ, ಅಲ್ಲಿಗೆ ಬಂದರು. ||೫೨||

ಆ ಬ್ರಾಹ್ಮಣನು ತನ್ನ ಇಷ್ಟದೇವತೆಯೂ, ಪ್ರಕೃತಿಗಿಂತ ಶ್ರೇಷ್ಠನೂ ನಿರ್ಗುಣನೂ ಆದ ಶ್ರೀಕೃಷ್ಣನನ್ನು ನೋಡಿ ವಿಶೇಷವಾದ ಭಕ್ತಿಯಿಂದ ಸ್ತೋತ್ರಮಾಡಿ ಮತ್ತೆ ಮತ್ತೆ ನಮಸ್ಕಾರಮಾಡಿ ಬಳಿಕ ಶಿವನಿಗೂ, ಬ್ರಹ್ಮಕಶ್ಯಪರಿಗೂ ನಮಸ್ಕಾರ ಮಾಡಿ ಇಲ್ಲಿಗೆ ಬರಲು ಕಾರಣವೇನೆಂದು ಪ್ರಶ್ನೆಮಾಡಿದನು. ||೫೩-೫೪||

ಬ್ರಹ್ಮನು ಆ ಮಾತನ್ನು ಕೇಳಿ ಅಕ್ಷಣವೇ ಶ್ರೀಕೃಷ್ಣನ ಪಾದಾರವಿಂದಕ್ಕೆ ನಮಸ್ಕರಿಸಿ ಸಮಯೋಚಿತವಾದ ಉತ್ತರವನ್ನು ಆ ಮುನಿಗೆ ಹೇಳಿದನು. ||೫೫||

ಎಲೈ ಮುನಿಯೇ, ಧರ್ಮಮಾರ್ಗದಲ್ಲಿರತಕ್ಕವಳೂ, ಪತಿವ್ರತೆಯೂ ಆದ ನಿನ್ನ ಧರ್ಮಪತ್ನಿಯಾದ ಮನಸಾದೇವಿಯನ್ನು ಪ್ರತಿಜ್ಞಾಪರಿಪಾಲನೆಗೋಸ್ಕರ

ಕುರುಷ್ವಾಸ್ಯಾಂ ಸುತೋತ್ಪತ್ತಿಂ ಸ್ವಧರ್ಮಪಾಲನಾಯ ವೈ ।
ಜಾಯಾಯಾಂ ಚ ಸುತೋತ್ಪತ್ತಿಂ ಕೃತ್ವಾ ಪಶ್ಚಾತ್ತ್ಯಜೇನ್ಮುನೇ॥೫೭॥

ಅಕೃತ್ವಾ ತು ಸುತೋತ್ಪತ್ತಿಂ ವಿರಾಗೀ ಯಸ್ತ್ಯಜೇತ್ಪ್ರಿಯಾಂ ।
ಸ್ರವತೇ ತಸ್ಯ ಪುಣ್ಯಂ ಚ ಚಾಲನ್ಯಾಂ ಚ ಯಥಾ ಜಲಂ ॥೫೮॥

ಬ್ರಹ್ಮಣೋ ವಚನಂ ಶ್ರುತ್ವಾ ಜರತ್ಕಾರುರ್ಮುನೀಶ್ವರಃ ।
ಚಕಾರ ನಾಭಿಸಂಸ್ಪರ್ಶಂ ಯೋಗೇನ ಮಂತ್ರಪೂರ್ವಕಂ ॥೫೯॥

ಮನಸಾಯಾ ಮುನಿಶ್ರೇಷ್ಠ ಮುನಿಶ್ರೇಷ್ಠ ಉವಾಚ ತಾಂ ।
ಗರ್ಭೇಣಾನೇನ ಮನಸೇ ತವ ಪುತ್ರೋ ಭವಿಷ್ಯತಿ ॥೬೦॥

ಜಿತೇಂದ್ರಿಯಾಣಾಂ ಪ್ರವರೋ ಧಾರ್ಮಿಕೋ ಬ್ರಾಹ್ಮಣಾಗ್ರಣೀಃ ।

|| ಜರತ್ಕಾರುರುವಾಚ ||

ತೇಜಸ್ವೀ ಚ ತಪಸ್ವೀ ಚ ಯಶಸ್ವೀ ಚ ಗುಣಾನ್ವಿತಃ ॥೬೧॥

ವರೋ ವೇದವಿದಾಂ ಚೈವ ಜ್ಞಾನಿನಾಂ ಯೋಗಿನಾಂ ತಥಾ ।
ಸ ಚ ಪುತ್ರೋ ವಿಷ್ಣುಭಕ್ತೋ ಧಾರ್ಮಿಕಃ ಕುಲಮುದ್ಧರೇತ್॥೬೨॥

---

ನೀನು ತ್ಯಾಗಮಾಡುವುದಾದರೆ ಧರ್ಮರಕ್ಷಣೆಗೋಸ್ಕರವಾಗಿ ಈಕೆಯಲ್ಲಿ ಪುತ್ರೋತ್ಪತ್ತಿಮಾಡಿದ ಮೇಲೆ ತ್ಯಾಗಮಾಡಬೇಕೆಂದು ಶಾಸ್ತ್ರವಿರುವುದು. ||೫೬-೫೭||

ಧರ್ಮಪತ್ನಿಯಲ್ಲಿ ಪುತ್ರೋತ್ಪತ್ತಿಯನ್ನು ಮಾಡದೆ ವೈರಾಗ್ಯದಿಂದ ಯಾವನು ಪತ್ನಿಯನ್ನು ಬಿಡುತ್ತಾನೆಯೋ ಅವನ ಪುಣ್ಯವು ಒಂದರಿ (ಜರಡಿ, ಸಾರಣಿಗೆ) ಯಲ್ಲಿ ನೀರಿನಂತೆ ಸೋರಿಹೋಗುವುದು. ||೫೮||

ಎಲೈ ನಾರದನೇ, ಬ್ರಹ್ಮನ ಮಾತನ್ನು ಕೇಳಿ ಜರತ್ಕಾರು ಮುನಿಯು ಯೋಗಶಕ್ತಿಯಿಂದ ಮಂತ್ರಪೂರ್ವಕವಾಗಿ ಮನಸಾದೇವಿಯ ಹೊಕ್ಕುಳನ್ನು ಮುಟ್ಟಿ ಆಕೆಯನ್ನು ಕುರಿತು ಹೇಳಿದನು. ||೫೯||

ಜರತ್ಕಾರುಮುನಿಯು ಹೇಳಿದನು—ಎಲೈ ಮನಸಾದೇವಿಯೇ, ಈ ಗರ್ಭದಿಂದ ನಿನಗೊಬ್ಬ ಮಗನಾಗುವನು. ಅವನು ಜಿತೇಂದ್ರಿಯರಲ್ಲಿ ಶ್ರೇಷ್ಠನೂ, ಧರ್ಮಾಸಕ್ತನೂ, ಬ್ರಾಹ್ಮಣಶ್ರೇಷ್ಠನೂ, ತೇಜಸ್ಸು, ತಪಸ್ಸು, ಯಶಸ್ಸುಗಳಿಂದಲೂ ಸದ್ಗುಣಗಳಿಂದಲೂ ಕೂಡಿದವನೂ, ವೇದಗಳನ್ನು ತಿಳಿದವರು, ಜ್ಞಾನಿಗಳು

ನೃತ್ಯಂತಿ ಪಿತರಃ ಸರ್ವೇ ಜನ್ಮಮಾತ್ರೇಣ ವೈ ಮುದಾ ।
ಪತಿವ್ರತಾ ಸುಶೀಲಾ ಯಾ ಸಾ ಪ್ರಿಯಾ ಪ್ರಿಯವಾದಿನೀ ॥೬೩॥

ಧರ್ಮಿಷ್ಠಾ ಪುತ್ರಮಾತಾ ಚ ಕುಲಸ್ತ್ರೀ ಕುಲಪಾಲಿಕಾ ।
ಹರಿಭಕ್ತಿಪ್ರದೋ ಬಂಧುರ್ನಚಾಽಭೀಷ್ಟಸುಖಪ್ರದಃ ॥೬೪॥

ಯೋ ಬಂಧುಶ್ಚೇತ್ಸ ಚ ಪಿತಾ ಹರಿವ(ರ್ತ್ಮ)ರ್ಮ ಪ್ರದರ್ಶಕಃ ।
ಸಾ ಗರ್ಭಧಾರಿಣೀ ಯಾ ಚ ಗರ್ಭಾವಾಸವಿಮೋಚನೀ ॥೬೫॥

ದಯಾರೂಪಾ ಚ ಭಗಿನೀ ಯಮಭೀತಿವಿಮೋಚನೀ ।
ವಿಷ್ಣುಮಂತ್ರಪ್ರದಾತಾ ಚ ಸ ಗುರುರ್ವಿಷ್ಣುಭಕ್ತಿದಃ ॥೬೬॥

---

ಯೋಗಿಗಳು ಇವರಲ್ಲಿ ಶ್ರೇಷ್ಠನೂ, ವಿಷ್ಣುಭಕ್ತನೂ ಆಗುವನು. ಆ ಮಗನು ಧರ್ಮಕಾರ್ಯಗಳನ್ನು ಮಾಡಿ ತಾನು ಹುಟ್ಟಿದ ವಂಶವನ್ನು ಉದ್ಧಾರಮಾಡುವನು. ||೬೦-೬೧-೬೨||

ನಿನಗೆ ಪುತ್ರನು ಹುಟ್ಟಿದ ಮಾತ್ರದಿಂದಲೇ ನಿನ್ನ ವಂಶದ ಪಿತೃಗಳೆಲ್ಲರೂ, ಸಂತೋಷದಿಂದ ಕುಣಿದಾಡುವರು. ಪತಿವ್ರತೆಯೂ, ಒಳ್ಳೆಯ ನಡತೆಯುಳ್ಳವಳೂ, ಧರ್ಮಾಸಕ್ತಳೂ, ಸತ್ಕುಲಪ್ರಸೂತಳೂ, ವಂಶವನ್ನು ಕಾಪಾಡತಕ್ಕವಳೂ, ಮಕ್ಕಳ ತಾಯಿಯೂ ಆದವಳೇ ಪ್ರೀತಿಪಾತ್ರಳಾದ ಪತ್ನಿಯೆನಿಸುವಳು. ||೬೩||

ಇಷ್ಟಾರ್ಥವಾದ ಸುಖಗಳನ್ನು ಕೊಡತಕ್ಕವನು ಬಂಧುವಲ್ಲ. ಹರಿಭಕ್ತಿಯನ್ನು ಕೊಡತಕ್ಕವನೇ ಬಂಧುವು. ಹರಿಯ ಕವಚ (ರಕ್ಷಣೆ)ವನ್ನು ಯಾವ ಬಂಧುವು ತೋರಿಸಿಕೊಡುವನೋ, ಅವನೇ ತಂದೆಯು. ಗರ್ಭದಲ್ಲಿ ವಾಸಮಾಡುವ ಕಷ್ಟದಿಂದ ಯಾವಳು ಬಿಡುಗಡೆಯನ್ನು ಮಾಡುವಳೋ ಅವಳೇ ಗರ್ಭಧಾರಣೆ ಮಾಡಿದ ತಾಯಿಯು. ||೬೪-೬೫||

ಯಮನ ಭಯವನ್ನು ನಿವಾರಣೆಮಾಡುವ ಸಮಸ್ತಪ್ರಾಣಿಗಳ ವಿಷಯವಾದ ದಯೆಯೇ ಸಹೋದರಿಯು. ವಿಷ್ಣುಮಂತ್ರವನ್ನುಪದೇಶಮಾಡಿ ವಿಷ್ಣುಭಕ್ತಿಯನ್ನುಂಟುಮಾಡಿದವನೇ ಗುರುವು. ||೬೬||

**ಗುರುಶ್ಚ ಜ್ಞಾನದೋ ಯೋ ಹಿ ಯಜ್ಞಾನಂ ಕೃಷ್ಣಭಾವನಂ ।**
**ಆಬ್ರಹ್ಮಸ್ತಂಬಪರ್ಯಂತಂ ಯತೋ ವಿಶ್ವಂ ಚರಾಚರಂ ॥೬೭॥**

**ಆವಿರ್ಭೂತಂ ತಿರೋಭೂತಂ ಕಿಂ ವಾ ಜ್ಞಾನಂ ತದನ್ಯತಃ ।**
**ವೇದಜಂ ಯಜ್ಞಜಂ ಯದ್ಯತ್ತತ್ಸಾರಂ ಹರಿಸೇವನಂ ॥೬೮॥**

**ತತ್ವಾನಾಂ ಸಾರಭೂತಂ ಚ ಹರೇರನ್ಯದ್ವಿಡಂಬನಂ ।**
**ದತ್ತಂ ಜ್ಞಾನಂ ಮಯಾ ತುಭ್ಯಂ ಸ ಸ್ವಾಮೀ ಜ್ಞಾನದೋ ಹಿ ಯಃ ॥೬೯॥**

**ಜ್ಞಾನಾತ್ಪ್ರಮುಚ್ಯತೇ ಬಂಧಾತ್ಸರಿಪುರ್ಯೋ ಹಿ ಬಂಧದಃ ।**
**ವಿಷ್ಣುಭಕ್ತಿಯುತಂ ಜ್ಞಾನಂ ನೋ ದದಾತಿ ಹಿ ಯೋ ಗುರುಃ ॥೭೦॥**

**ಸ ರಿಪುಃ ಶಿಷ್ಯಘಾತೀ ಚ ಯತೋ ಬಂಧಾನ್ನ ಮೋಚಯೇತ್ ।**
**ಜನನೀ ಗರ್ಭಜಕ್ಲೇಶಾದ್ಯಮಯಾತನಯಾ ತಥಾ ॥೭೧॥**

---

ಮತ್ತೂ ಜ್ಞಾನವನ್ನುಂಟುಮಾಡಿದವನೇ ಗುರುವು. ಪರಬ್ರಹ್ಮಸ್ವರೂಪನಾದ ಶ್ರೀಕೃಷ್ಣನನ್ನು ಮನದಲ್ಲಿ ಭಾವಿಸುವುದೇ ಜ್ಞಾನವು. ಬ್ರಹ್ಮನು ಮೊದಲುಗೊಂಡು ಸ್ತಂಬವೆಂಬ ಕ್ರಿಮಿಯ ಪರ್ಯಂತವಾಗಿರುವ ಸಮಸ್ತಚರಾಚರಪ್ರಪಂಚವು ಒಂದು ಕಾಲದಲ್ಲಿ ಪ್ರಕಟವಾಗಿ ಮತ್ತೊಂದು ಕಾಲದಲ್ಲಿ ಕಾಣದೆ ಇರುವುದು. ಇದು ಜ್ಞಾನವೇ ? ಜ್ಞಾನವು ಇದಕ್ಕಿಂತಲೂ ಬೇರೆಯಾದುದು. ॥೬೭॥

ವೇದಗಳಿಂದುಂಟಾದ ಮತ್ತೂ ಯಜ್ಞಕರ್ಮಗಳಿಂದುಂಟಾದ ಸಮಸ್ತ ಜ್ಞಾನಗಳಿಗಿಂತಲೂ, ಹರಿಸೇವೆಯೇ ಸಾರವಾದುದು. ಮತ್ತು ತತ್ವಗಳಲ್ಲೆಲ್ಲ ಉತ್ಕೃಷ್ಟವಾದುದು. ಹರಿಸೇವೆಯನ್ನು ಬಿಟ್ಟು ಮಾಡುವ ಸಮಸ್ತ ಕರ್ಮಗಳೂ, ವೇಷವಾಗಿ ಪರಿಣಮಿಸುವುವು. ಮನಸಾದೇವಿಯೇ, ನಿನಗೆ ನಾನು ಜ್ಞಾನವನ್ನುಂಟುಮಾಡಿರುವೆನು. ಜ್ಞಾನವನ್ನುಂಟುಮಾಡಿದವನೇ ನಿನಗೂ ಸ್ವಾಮಿಯು. ॥೬೯॥

ಜ್ಞಾನವು ಪ್ರಾಪ್ತಿಯಾದರೆ ಬಂಧಮೋಚನೆಯಾಗುವುದು. ಸಂಸಾರಬಂಧವನ್ನು ಯಾವನು ಉಂಟುಮಾಡುವನೋ ಅವನು ಶತ್ರುವಾದವನು. ಯಾವ ಗುರುವು ವಿಷ್ಣುಭಕ್ತಿಯಿಂದ ಕೂಡಿದ ಜ್ಞಾನವನ್ನುಂಟುಮಾಡುವುದಿಲ್ಲವೋ ಅವನು ಶತ್ರುರೂಪನಾಗಿ ಶಿಷ್ಯನನ್ನು ನಾಶಮಾಡಿದವನಾಗುವನು. ತಾಯ ಹೊಟ್ಟೆಯಲ್ಲಿ ಹುಟ್ಟುವ ದುಃಖದಿಂದಲೂ, ಯಮಯಾತನೆಯಿಂದಲೂ, ಜನನಮರಣರೂಪವಾದ ಬಂಧದಿಂದಲೂ, ಯಾವನು ಬಿಡಿಸಲಾರನೋ ಅವನು ॥೭೦-೭೧॥

ನ ಮೋಚಯೇದ್ಯಃ ಸ ಕಥಂ ಗುರುಸ್ತಾತೋ ಹಿ ಬಾಂಧವಃ ।
ಪರಮಾನಂದರೂಪಂ ಚ ಕೃಷ್ಣಮಾರ್ಗಮನಶ್ವರಂ ॥೭೨॥

ನ ದರ್ಶಯೇದ್ಯಃ ಸತತಂ ಕೀದೃಶೋ ಬಾಂಧವೋ ನೃಣಾಂ ।
ಭಜ ಸಾಧ್ವಿ ಪರಂ ಬ್ರಹ್ಮಾಚ್ಯುತಂ ಕೃಷ್ಣಂ ಚ ನಿರ್ಗುಣಂ ॥೭೩॥

ನಿರ್ಮೂಲಂ ಚ ಭವೇತ್ಪುಂಸಾಂ ಕರ್ಮ ವೈ ತಸ್ಯ ಸೇವಯಾ ।
ಮಯಾ ಛಲೇನ ತ್ವಂ ತ್ಯಕ್ತಾ ಕ್ಷಮಸ್ವೈವಂ ಮಮ ಪ್ರಿಯೇ ॥೭೪॥

ಕ್ಷಮಾಯುತಾನಾಂ ಸಾಧ್ವೀನಾಂ ಸತ್ವಾತ್ಕ್ರೋಧೋ ನ ವಿದ್ಯತೇ ।
ಪುಷ್ಕರೇ ತಪಸೇ ಯಾಮಿ ಗಚ್ಛ ದೇವಿ ಯಥಾಸುಖಂ ॥೭೫॥

ಶ್ರೀಕೃಷ್ಣಚರಣಾಂಭೋಜೇ ನಿಸ್ಸ್ಪೃಹಾಣಾಂ ಮನೋರಥಾಃ ।
ಜರತ್ಕಾರುವಚಃ ಶ್ರುತ್ವಾ ಮನಸಾ ಶೋಕಕಾತರಾ ॥೭೬॥
ಸಾಶ್ರುನೇತ್ರಾ ಚ ವಿನಯಾದುವಾಚ ಪ್ರಾಣವಲ್ಲಭಂ ।

---

ನಿಜವಾದ ಗುರುವೂ, ತಂದೆಯೂ, ಬಂಧುವೂ, ಹೇಗೆ ಆಗುವನು? ಮನುಜರಿಗೆ ಪರಮಾನಂದರೂಪವಾದ ನಾಶರಹಿತನಾದ ಶ್ರೀಕೃಷ್ಣನ ಮಾರ್ಗವನ್ನು ಯಾವನು ತೋರಿಸುವುದಿಲ್ಲವೋ ಅವನೆಂತಹ ಬಂಧುವು? ಎಲೈ ಪತಿವ್ರತೆಯೇ, ನಿರ್ಗುಣನೂ, ನಾಶರಹಿತನೂ, ಪರಬ್ರಹ್ಮಸ್ವರೂಪನೂ, ಆದ ಕೃಷ್ಣನನ್ನು ಧ್ಯಾನಮಾಡು. ಕೃಷ್ಣನ ಸೇವೆಯಿಂದ ಮನುಷ್ಯರ ಸಮಸ್ತಕರ್ಮಗಳೂ ನಾಶವಾಗುವುವು. ||೭೨-೭೩||

ಪ್ರೀತಿಪಾತ್ರಳಾದ ಮನಸಾದೇವಿಯೇ, ನಾನು ಯಾವುದೋ ಒಂದು ನೆಪದಿಂದ ನಿನ್ನನ್ನು ತ್ಯಾಗಮಾಡಿದೆನು. ಇದಕ್ಕಾಗಿ ಕ್ಷಮಿಸು. ಕ್ಷಮೆಯಿಂದ ಕೂಡಿದ ಪತಿವ್ರತೆಯರು ಸತ್ವಗುಣಪ್ರಧಾನರಾದುದರಿಂದ ಅವರಿಗೆ ಕೋಪವಿರುವುದಿಲ್ಲವು.||೭೪||

ಎಲೈ ದೇವಿಯೇ, ಪುಷ್ಕರಕ್ಷೇತ್ರಕ್ಕೆ ತಪಸ್ಸನ್ನು ಮಾಡಲು ಹೋಗುತ್ತೇನೆ. ನೀನು ಸುಖವಾದೆಡೆಗೆ ಪ್ರಯಾಣಮಾಡು. ಫಲಾಪೇಕ್ಷೆಯಿಲ್ಲದವರ ಇಷ್ಟಾರ್ಥವೆಲ್ಲವೂ ಶ್ರೀಕೃಷ್ಣನ ಪಾದಕಮಲವಾಗಿರುವುದು. ||೭೫||

ಜರತ್ಕಾರುಮುನಿಯ ಮಾತನ್ನು ಕೇಳಿ ಮನಸಾದೇವಿಯು ದುಃಖದಿಂದ ಕಣ್ಣೀರನ್ನು ಸುರಿಸುತ್ತಾ, ನಮ್ರತೆಯಿಂದ ತನ್ನ ಪ್ರಾಣಕಾಂತನನ್ನು ಕುರಿತು ಮಾತನಾಡಿದಳು. ||೭೬||

॥ ಮನಸೋವಾಚ ॥

**ದೋಷೋ ನಾಸ್ತ್ಯೇವ ಮೇ ತ್ಯಕ್ತ್ವಂ ನಿದ್ರಾಭಂಗೇನ ತೇ ಪ್ರಭೋ ॥೭೭॥**

**ಯತ್ರ ಸ್ಮರಾಮಿ ತ್ವಾಂ ನಿತ್ಯಂ ತತ್ರ ಮಾಮಾಗಮಿಷ್ಯಸಿ ।**
**ಬಂಧುಭೇದಃ ಕ್ಲೇಶತಮಃ ಪುತ್ರಭೇದಸ್ತತಃ ಪರಂ ॥೭೮॥**

**ಪ್ರಾಣೇಶಭೇದಃ ಪ್ರಾಣಾನಾಂ ವಿಚ್ಛೇದಾತ್ಸರ್ವತಃ ಪರಃ ।**
**ಪತಿಃ ಪತಿವ್ರತಾನಾಂ ತು ಶತಪುತ್ರಾಧಿಕಂ ಪ್ರಿಯಃ ॥೭೯॥**

**ಸರ್ವಸ್ಮಾತ್ತು ಪ್ರಿಯಃ ಸ್ತ್ರೀಣಾಂ ಪ್ರಿಯಸ್ತೇನೋಚ್ಯತೇ ಬುಧೈಃ ।**
**ಪುತ್ರೇಷು ಚೈಕಪುತ್ರಾಣಾಂ ವೈಷ್ಣವಾನಾಂ ಯಥಾ ಹರೌ ॥೮೦॥**

**ನೇತ್ರೇ ಯಥೈಕ ನೇತ್ರಾಣಾಂ ತೃಷಿತಾನಾಂ ಯಥಾ ಜಲೇ ।**
**ಕ್ಷುಧಿತಾನಾಂ ಯಥಾಽನ್ನೇ ಚ ಕಾಮುಕಾನಾಂ ಚ ಮೈಥುನೇ ॥೮೧॥**

---

ಮನಸಾದೇವಿಯು ಹೇಳಿದಳು—ಓ ಸ್ವಾಮಿಯೇ, ನಿನ್ನ ನಿದ್ರಾಭಂಗವನ್ನು ನಾನು ಮಾಡಿದುದರಿಂದ ನೀನು ನನ್ನನ್ನು ತ್ಯಾಗಮಾಡಿರುವೆ. ಆದುದರಿಂದ ನಿನಗೆ ದೋಷವೇನೂ ಇಲ್ಲವೇ ಇಲ್ಲ. ಆದರೂ ನಾನು ನಿನ್ನನ್ನು ಯಾವಾಗ ಸ್ಮರಿಸುವೆನೋ ಆವಾಗ ನೀನು ನನ್ನ ಸಮೀಪಕ್ಕೆ ಬರಬೇಕು. ॥೭೭॥

ನಂಟರನ್ನಗಲುವುದು ಬಹಳ ಕಷ್ಟವಾದುದು. ಮಗನನ್ನಗಲುವುದು ಅದಕ್ಕಿಂತಲೂ ಕಷ್ಟವಾದುದು. ಪ್ರಾಣಪ್ರಿಯನಾದ ಪತಿಯನ್ನಗಲುವುದು ಪ್ರಾಣತ್ಯಾಗ ಮಾಡಿದಂತೆ ಎಲ್ಲಕ್ಕಿಂತಲೂ ಕಷ್ಟವಾದುದಾಗಿರುವುದು. ॥೭೮॥

ಪತಿವ್ರತೆಯರಿಗೆ ನೂರು ಜನ ಮಕ್ಕಳಿಗಿಂತಲೂ, ಹೆಚ್ಚಾಗಿ ಪತಿಯೇ ಪ್ರೀತಿಪಾತ್ರನಾದವನು. ಸಮಸ್ತವಸ್ತುಗಳಿಗಿಂತಲೂ, ಸ್ತ್ರೀಯರಿಗೆ ಪತಿಯೇ ಪ್ರೀತಿಪಾತ್ರನಾದುದರಿಂದ ಅವನನ್ನು ಪ್ರಿಯನೆಂದು ಕರೆಯುವರು. ॥೭೯॥

ಒಬ್ಬನೇ ಮಗನುಳ್ಳವರಿಗೆ, ಮಕ್ಕಳ ವಿಷಯದಲ್ಲಿಯೂ, ವಿಷ್ಣುಭಕ್ತರಿಗೆ ಹರಿಯ ವಿಷಯದಲ್ಲಿಯೂ, ಒಂದೇ ಕಣ್ಣುಳ್ಳವರಿಗೆ ಕಣ್ಣಿನ ವಿಷಯದಲ್ಲಿಯೂ, ಬಾಯಾರಿದವರಿಗೆ ನೀರಿನಲ್ಲಿಯೂ, ಹಸಿದವರಿಗೆ ಅನ್ನದಲ್ಲಿಯೂ, ಕಾಮುಕರಿಗೆ ಸ್ತ್ರೀಸಂಗದಲ್ಲಿಯೂ, ॥೮೦-೮೧॥

ಯಥಾ ಪರಸ್ವೇ ಚೋರಾಣಾಂ ಯಥಾ ಜಾರೇ ಕುಯೋಷಿತಾಂ ।
ವಿದುಷಾಂ ಚ ಯಥಾ ಶಾಸ್ತ್ರೇ ವಾಣಿಜ್ಯೇ ವಣಿಜಾಂ ಯಥಾ ॥೮೨॥

ತಥಾ ಶಶ್ವನ್ಮನಃ ಕಾಂತೇ ಸಾಧ್ವೀನಾಂ ಯೋಷಿತಾಂ ಪ್ರಭೋ ।
ಇತ್ಯುಕ್ತ್ವಾ ಮನಸಾದೇವೀ ಪಪಾತ ಸ್ವಾಮಿನಃ ಪದೇ ॥೮೩॥

ಕ್ಷಣಂ ಚಕಾರ ಕ್ರೋಡೇ ತಾಂ ಕೃಪಯಾ ಚ ಕೃಪಾನಿಧಿಃ ।
ನೇತ್ರೋದಕೇನ ಮನಸಾಂ ಸ್ನಾಪಯಾಮಾಸ ತಾಂ ಮುನಿಃ ॥೮೪॥

ಸಾಶ್ರುನೇತ್ರಾ ಮುನೇಃ ಕ್ರೋಡಂ ಸಿಷೇಚ ಭೇದಕಾತರಾ ।
ತದಾ ಜ್ಞಾನೇನ ತೌ ದ್ವೌ ಚ ವಿಶೋಕೌ ಸಂಬಭೂವತುಃ ॥೮೫॥

ಸ್ಮಾರಂ ಸ್ಮಾರಂ ಪದಾಂಭೋಜಂ ಕೃಷ್ಣಸ್ಯ ಪರಮಾತ್ಮನಃ ।
ಜಗಾಮ ತಪಸೇ ವಿಪ್ರಃ ಸ್ವಕಾಂತಾಂ ಸಂಪ್ರಬೋಧ್ಯ ಚ ॥೮೬॥

---

ಕಳ್ಳರಿಗೆ ಪರರ ಪದಾರ್ಥಗಳಲ್ಲಿಯೂ, ದುಷ್ಟಸ್ತ್ರೀಯರಿಗೆ ಜಾರರ (ವಿಟ) ವಿಷಯದಲ್ಲಿಯೂ, ವಿದ್ವಾಂಸರಿಗೆ ಶಾಸ್ತ್ರವಿಷಯದಲ್ಲಿಯೂ, ವರ್ತಕರಿಗೆ ವ್ಯಾಪಾರದ ವಿಷಯದಲ್ಲಿಯೂ, ಮನಸ್ಸಿರುವಂತೆ ಪತಿವ್ರತಾಸ್ತ್ರೀಯರಿಗೆ ಪತಿಯಲ್ಲಿಯೇ ಮನಸ್ಸಿರುವುದು. ಹೀಗೆಂದು ಹೇಳಿ ಮನಸಾದೇವಿಯು ಪತಿಯ ಪಾದದ ಮೇಲೆ ನಮಸ್ಕಾರ ಮಾಡಿದಳು. ||೮೨-೮೩||

ದಯಾನಿಧಿಯಾದ ಮುನಿಯು ಆ ಮನಸಾದೇವಿಯನ್ನು ಕ್ಷಣಕಾಲ ತನ್ನ ಎದೆಯ ಮೇಲೆ ಆಲಿಂಗಿಸಿಕೊಂಡು ಕಣ್ಣೀರಿನಿಂದ ಅವಳನ್ನು ಸ್ನಾನಮಾಡಿಸಿದನು.

ಅಗಲಿಕೆಯ ದುಃಖದಿಂದ ಕೂಡಿದ ಮನಸಾದೇವಿಯೂ, ಕಣ್ಣೀರಿನಿಂದ ಮುನಿಯ ಎದೆಯನ್ನು ನೆನೆಯಿಸಿದಳು. ಆಗ ಅವರಿಬ್ಬರೂ ಜ್ಞಾನದಿಂದ ಕೂಡಿದದವರಾಗಿ ದುಃಖವಿಲ್ಲದವರಾದರು. ||೮೫||

ಜರತ್ಕಾರುಮುನಿಯು ಶ್ರೀಕೃಷ್ಣನ ಪಾದಕಮಲಗಳನ್ನು ಧ್ಯಾನಿಸುತ್ತ ತನ್ನ ಪತ್ನಿಯನ್ನೆಚ್ಚರಗೊಳಿಸಿ ತಪಸ್ಸುಮಾಡುವುದಕ್ಕೆ ಹೊರಟುಹೋದನು. ||೮೬||

**ಜಗಾಮ ಮನಸಾ ಶಂಭೋಃ ಕೈಲಾಸಂ ಮಂದಿರಂ ಗುರೋಃ ।**
**ಪಾರ್ವತೀ ಬೋಧಯಾಮಾಸ ಮನಸಾಂ ಶೋಕಕರ್ಷಿತಾಂ ॥೮೭॥**

**ಶಿವಶ್ಚಾತೀವ ಜ್ಞಾನೇನ ಶಿವೇನ ಚ ಶಿವಾಲಯಃ ।**
**ಸುಪ್ರಶಸ್ತೇ ದಿನೇ ಸಾಧ್ವೀ ಸುಷುವೇ ಮಂಗಲೇ ಕ್ಷಣೇ ॥೮೮॥**

**ನಾರಾಯಣಾಂಶಂ ಪುತ್ರಂತಂ ಯೋಗಿನಾಂ ಜ್ಞಾನಿನಾಂ ಗುರುಂ ।**
**ಗರ್ಭಸ್ಥಿತೋ ಮಹಾಜ್ಞಾನಂ ಶ್ರುತ್ವಾ ಶಂಕರವಕ್ತ್ರತಃ ॥೮೯॥**

**ಸಂಬಭೂವ ಚ ಯೋಗೀಂದ್ರೋ ಯೋಗಿನಾಂ ಜ್ಞಾನಿನಾಂ ಗುರುಃ ।**
**ಜಾತಕಂ ಕಾರಯಾಮಾಸ ವಾಚಯಾಮಾಸ ಮಂಗಲಂ ॥೯೦॥**

**ವೇದಾಂಶ್ಚ ಪಾಠಯಾಮಾಸ ಶಿವಾಯ ಚ ಶಿವಃ ಶಿಶೋಃ ।**
**ಮಣಿರತ್ನಕಿರೀಟಾಂಶ್ಚ ಬ್ರಾಹ್ಮಣೇಭ್ಯೋ ದದೌ ಶಿವಃ ॥೯೧॥**

---

ಮನಸಾದೇವಿಯು ಕೈಲಾಸದಲ್ಲಿರುವ ತನ್ನ ಗುರುವಾದ ಶಿವನ ಮನೆಗೆ ಹೋದಳು. ದುಃಖದಿಂದ ಕಷ್ಟಪಡುತ್ತಿರುವ ಆ ಮನಸಾದೇವಿಯನ್ನು ಪಾರ್ವತಿಯು ವಿವೇಕವನ್ನು ಹೇಳಿ ಸಮಾಧಾನಪಡಿಸಿದಳು. ||೮೭||

ಮಂಗಲಗಳಿಗೆ ಮನೆಯಾದ ಶಿವನೂ, ವಿಶೇಷವಾದ ಮಂಗಲಕರವಾದ, ಜ್ಞಾನವನ್ನುಂಟುಮಾಡಿ ಮನಸಾದೇವಿಯನ್ನು ಸಮಾಧಾನಪಡಿಸಿದನು. ಪತಿವ್ರತೆಯಾದ ಮನಸಾದೇವಿಯು ಶುಭದಿನದಲ್ಲಿ ಮಂಗಳಕರವಾದ ಲಗ್ನದಲ್ಲಿ ನಾರಾಯಣನ ಅಂಶಭೂತನೂ, ಯೋಗಿಗಳಿಗೂ, ಜ್ಞಾನಿಗಳಿಗೂ ಗುರುವಾದ ಪುತ್ರನನ್ನು ಹೆತ್ತಳು. ||೮೮||

ಆ ಪುತ್ರನು ತಾಯಿಯ ಗರ್ಭದಲ್ಲಿದ್ದಾಗಲೇ ಶಿವನ ಬಾಯಿಯಿಂದ ಮಹಾಜ್ಞಾನವನ್ನು ಕೇಳಿ, ಯೋಗಿಗಳಲ್ಲಿ ಶ್ರೇಷ್ಠನೂ, ಯೋಗಿಗಳಿಗೂ, ಜ್ಞಾನಿಗಳಿಗೂ, ಗುರುವೂ, ಆಗಿ ಹುಟ್ಟಿದನು. ಹುಟ್ಟಿದೊಡನೆಯೇ ಆ ಮಗುವಿಗೆ ಶಿವನು ಜಾತಕರ್ಮವನ್ನು ಮುಗಿಸಿ ಮಂಗಲ ವೃತ್ತಾಂತವನ್ನು ಪ್ರಸಿದ್ಧಪಡಿಸಿದನು. ||೮೯-೯೦||

ಆ ಶಿಶುವಿಗೆ ಶುಭವಾಗಲೆಂದು ಶಿವನು ವೇದಗಳನ್ನು ಪಾರಾಯಣಮಾಡಿಸಿದನು. ಮತ್ತು ಬ್ರಾಹ್ಮಣರಿಗೆ ರತ್ನಗಳನ್ನೂ, ರತ್ನಗಳಿಂದ ಮಾಡಿದ ಕಿರೀಟಗಳನ್ನೂ ದಾನಮಾಡಿದನು. ||೯೧||

**ಪಾರ್ವತೀ ಚ ಗವಾಂ ಲಕ್ಷಂ ರತ್ನಾನಿ ವಿವಿಧಾನಿ ಚ ।**
**ಶಂಭುಶ್ಚ ಚತುರೋ ವೇದಾನ್ವೇದಾಂಗಾನಿತರಾಂಸ್ತಥಾ ॥೯೨॥**

**ಬಾಲಕಂ ಪಾಠಯಾಮಾಸ ಜ್ಞಾನಂ ಮೃತ್ಯುಂಜಯಂ ಪರಂ ।**
**ಭಕ್ತಿರಸ್ತ್ಯಧಿಕಾ ಕಾಂತೇಽಭೀಷ್ಟದೇವೇ ಗುರೌ ತಥಾ ॥೯೩॥**

**ಯಸ್ಯಾಸ್ತೇನ ಚ ತತ್ಪುತ್ರೋ ಬಭೂವಾಽಽಸ್ತಿ(ೀ)ಕ ಏವ ಚ ।**
**ಜಗಾಮ ತಪಸೇ ವಿಷ್ಣೋಃ ಪುಷ್ಕರಂ ಶಂಕರಾಜ್ಞಯಾ ॥೯೪॥**

**ಸಂಪ್ರಾಪ್ಯಚ ಮಹಾಮಂತ್ರಂ ತತಶ್ಚ ಪರಮಾತ್ಮನಃ ।**
**ದಿವ್ಯಂ ವರ್ಷತ್ರಿಲಕ್ಷಂ ಚ ತಪಸ್ತಪ್ತ್ವಾ ತಪೋಧನಃ ॥೯೫॥**
**ಆಜಗಾಮ ಮಹಾಯೋಗೀ ನಮಸ್ಕರ್ತುಂ ಶಿವಂ ಪ್ರಭುಂ ।**

---

ಪಾರ್ವತಿಯೂ ಸಹ ಒಂದು ಲಕ್ಷ ಗೋವುಗಳನ್ನೂ, ಬಗೆಬಗೆಯ ರತ್ನಗಳನ್ನೂ, ದಾನಮಾಡಿದಳು. ಶಿವನು ನಾಲ್ಕು ವೇದಗಳನ್ನೂ, ವೇದಾಂಗಗಳನ್ನೂ ಇತರ ಶಾಸ್ತ್ರಗಳನ್ನೂ, ಬಾಲಕನಿಗೆ ಹೇಳಿಕೊಟ್ಟನು. ಮೃತ್ಯುವನ್ನು ಜಯಿಸತಕ್ಕ ಶ್ರೇಷ್ಠವಾದ ಜ್ಞಾನವನ್ನೂ ಉಪದೇಶಮಾಡಿದನು. (ಜ್ಞಾನವೆಂಬುದು ಅಪರೋಕ್ಷ ವಿದ್ಯೆ, ಅಥವಾ ಸಂಜೀವಿನೀವಿದ್ಯೆ). ॥೯೨॥

ಮನಸಾದೇವಿಗೆ ಪತಿಯಲ್ಲಿಯೂ, ಇಷ್ಟದೇವತೆಯಾದ ಶ್ರೀಕೃಷ್ಣನಲ್ಲಿಯೂ, ಗುರುವಾದ ಶಿವನಲ್ಲಿಯೂ, ವಿಶೇಷವಾದ ಭಕ್ತಿಯಿದ್ದುದರಿಂದ ಅವಳ ಮಗನಿಗೆ ಆಸ್ತಿಕನೆಂದು ಹೆಸರಾಯಿತು. ॥೯೩॥

ಆಮೇಲೆ ಆಸ್ತಿಕನು ಶಿವನಿಂದ ಮೂಲಪ್ರಕೃತಿಯಾದ ಭುವನೇಶ್ವರಿಯ ಮಹಾಮಂತ್ರವನ್ನು ಪಡೆದು, ಅವನ ಅಪ್ಪಣೆಯಿಂದ ವಿಷ್ಣುವಿನ ಪುಷ್ಕರಕ್ಷೇತ್ರಕ್ಕೆ ತಪಸ್ಸುಮಾಡುವುದಕ್ಕಾಗಿ ಪ್ರಯಾಣಮಾಡಿದನು. ॥೯೪॥

ತಪಸ್ಸೇ ಧನವಾಗಿ ಉಳ್ಳ ಆಸ್ತಿಕನು ದೇವಮಾನದ ಮೂರು ಲಕ್ಷ ವರ್ಷಗಳ ವರೆಗೆ ತಪಸ್ಸನ್ನು ಮಾಡಿ ಮಹಾಯೋಗಿಯಾಗಿ ಗುರುವಾದ ಶಿವನಿಗೆ ನಮಸ್ಕಾರ ಮಾಡುವುದಕ್ಕಾಗಿ ಕೈಲಾಸಕ್ಕೆ ಬಂದನು. ॥೯೫॥

ಶಂಕರಂ ಚ ನಮಸ್ಕೃತ್ಯ ಸ್ಥಿತ್ವಾ ತತ್ರೈವ ಬಾಲಕಃ ॥೯೬॥

ಸಾಚಾಽಽಜಗಾಮ ಮನಸಾ ಕಶ್ಯಪಸ್ಯಾಶ್ರಮಂ ಪಿತುಃ ।
ತಾಂ ಸಪುತ್ರಾಂ ಸುತಾಂದೃಷ್ಟ್ವಾ ಮುದಂ ಪ್ರಾಪ ಪ್ರಜಾಪತಿಃ ॥೯೭॥

ಶತಲಕ್ಷಂ ಚ ರತ್ನಾನಿ ಬ್ರಾಹ್ಮಣೇಭ್ಯೋ ದದೌ ಮುನೇ ।
ಬ್ರಾಹ್ಮಣಾನ್ಭೋಜಯಾಮಾಸ ಸೋಽಸಂಖ್ಯಾನ್ ಶ್ರೇಯಸೇ ಶಿಶೋಃ॥೯೮॥

ಅದಿತಿಶ್ಚ ದಿತಿಶ್ಚಾನ್ಯಾ ಮುದಂ ಪ್ರಾಪ ಪರಂ ತಪ ।
ಸಾ ಸಪುತ್ರಾ ಚ ಸುಚಿರಂ ತಸ್ಥೌ ತಾತಾಲಯೇ ಸದಾ ॥೯೯॥

ತದೀಯಂ ಪುನರಾಖ್ಯಾನಂ ವಕ್ಷ್ಯಾಮಿ ತನ್ನಿಶಾಮಯ ।
ಅಥಾಭಿಮನ್ಯು-ತನಯೇ ಬ್ರಹ್ಮಶಾಪಃ ಪರಿ(ೀ)ಕ್ಷಿತೇ ॥೧೦೦॥
ಬಭೂವ ಸಹಸಾ ಬ್ರಹ್ಮನ್ ದೈವದೋಷೇಣ ಕರ್ಮಣಾಂ ।

---

ಆ ಬಾಲಕನು ಶಿವನಿಗೆ ನಮಸ್ಕಾರವನ್ನು ಮಾಡಿ ಅಲ್ಲಿಯೇ ಇದ್ದನು. ಮನಸಾದೇವಿಯು ಆ ತನ್ನ ಮಗನನ್ನು ಕರೆದುಕೊಂಡು ತಂದೆಯಾದ ಕಶ್ಯಪ ಮುನಿಯ ಆಶ್ರಮಕ್ಕೆ ಬಂದಳು. ಮಗನೊಡನೆ ಬಂದ ತನ್ನ ಮಗಳನ್ನು ನೋಡಿ ಕಶ್ಯಪಪ್ರಜಾಪತಿಯು ಸಂತೋಷಪಟ್ಟನು. ॥೯೬-೯೭॥

ನಾರದಮುನಿಯೇ, ಕೇಳು. ಆ ಕಶ್ಯಪಪ್ರಜಾಪತಿಯು, ಮಗುವಿನ ಶ್ರೇಯಸ್ಸಿಗೋಸ್ಕರವಾಗಿ ನೂರುಲಕ್ಷ ರತ್ನಗಳನ್ನು ಬ್ರಾಹ್ಮಣರಿಗೆ ದಾನಮಾಡಿ ಅನೇಕ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಿದನು. ॥೯೮॥

ಎದುರಾಳಿಯನ್ನು ತಪೋಜ್ಞಾನಗಳಿಂದ ಮೀರುವ ನಾರದನೇ, ಅದಿತಿ ದಿತಿ ಮುಂತಾದ ಕಶ್ಯಪನ ಪತ್ನಿಯರು ಎಲ್ಲರೂ ಸಂತೋಷಪಟ್ಟರು. ಮನಸಾ ದೇವಿಯು ಮಗನೊಡನೆ ತಂದೆಯ ಮನೆಯಲ್ಲಿ ಬಹಳ ಕಾಲವಿದ್ದಳು. ॥೯೯॥

ಬ್ರಹ್ಮಪುತ್ರನಾದ ನಾರದನೇ, ಆ ಮನಸಾದೇವಿಯ ಮತ್ತೂ ಆಸ್ತಿಕನ ಮುಂದಿನ ಕಥೆಯನ್ನು ಹೇಳುವೆನು ಕೇಳು. ಅಭಿಮನ್ಯುವಿನ ಪುತ್ರನಾದ ಪರಿಕ್ಷಿತನಿಗೆ ದುಷ್ಟಕರ್ಮಸಂಬಂಧವಾದ, ಅದೃಷ್ಟಪರಿಪಾಕದಿಂದ ಅಕಸ್ಮಾತ್ತಾಗಿ, ಬ್ರಾಹ್ಮಣನ ಶಾಪವು ಪ್ರಾಪ್ತವಾಯಿತು. ॥೧೦೦॥

ಸಪ್ತಾಹೇ ಸಮತೀತೇ ತು ತಕ್ಷಕಸ್ತ್ವಾಂ ಚ ಧಕ್ಷ್ಯತಿ ॥೧೦೧॥

ಶಶಾಪ ಶೃಂಗೀ ತತ್ರೈವ ಕೌಶಿಕ್ಯಾಶ್ಚ ಜಲೇನ ವೈ ।
ರಾಜಾ ಶ್ರುತ್ವಾ ತತ್ಪ್ರವೃತ್ತಿಂ ನಿರ್ವಾಣಸ್ಥಾನಮಾಗತಃ ॥೧೦೨॥

ತತ್ರ ತಸ್ಥೌ ಚ ಸಪ್ತಾಹಂ ದೇಹರಕ್ಷಣತತ್ಪರಃ ।
ಸಪ್ತಾಹೇ ಸಮತೀತೇ ತು ಗಚ್ಛಂತಂ ತಕ್ಷಕಂ ಪ್ರತಿ ॥೧೦೩॥

ಧನ್ವಂತರಿರ್ನೃಪಂ ಭೋಕ್ತುಂ ದದರ್ಶ ಗಾಮುಕಃ ಪಥಿ ।
ತಯೋರ್ಬಭೂವ ಸಂವಾದಃ ಸುಪ್ರೀತಿಶ್ಚ ಪರಸ್ಪರಂ ॥೧೦೪॥

ಧನ್ವಂತರಿರ್ಮಣಿಂ ಪ್ರಾಪ ತಕ್ಷಕಃ ಸ್ವೇಚ್ಛಯಾ ದದೌ ।
ಸ ಯಯೌ ತಂ ಗೃಹೀತ್ವಾ ತು ಸಂತುಷ್ಟೋ ಹೃಷ್ಟಮಾನಸಃ ॥೧೦೫॥

ತಕ್ಷಕೋ ಭಕ್ಷಯಾಮಾಸ ನೃಪಂ ತಂ ಮಂಚಕೇ ಸ್ಥಿತಂ ।
ರಾಜಾ ಜಗಾಮ ತರಸಾ ದೇಹಂ ತ್ಯಕ್ತ್ವಾ ಪರತ್ರ ಚ ॥೧೦೬॥

---

ಏಳು ದಿನಗಳು ಕಳೆಯುತ್ತಿರಲಾಗಿ ತಕ್ಷಕನೆಂಬ ಸರ್ಪರಾಜನು ನಿನ್ನನ್ನು ವಿಷಜ್ವಾಲೆಯಿಂದ ಸುಟ್ಟುಕೊಲ್ಲುವನು ಎಂದು ಒಬ್ಬ ಮುನಿಯು ಕೌಶಿಕೀನದಿಯ ನೀರಿನಿಂದ ಶಾಪವನ್ನು ಕೊಟ್ಟನು. ರಾಜನು ಈ ವರ್ತಮಾನವನ್ನು ಕೇಳಿ ಏಕಾಂತ ಸ್ಥಾನವನ್ನು ಸೇರಿದನು. ॥೧೦೧-೧೦೨॥

ಅಲ್ಲಿ ತನ್ನ ಶರೀರವನ್ನು ಕಾಪಾಡಿಕೊಳ್ಳುವುದರಲ್ಲಿ ಆಸಕ್ತನಾಗಿ ಏಳುದಿನ ಗಳಿದ್ದನು. ಏಳು ದಿನಗಳು ಕಳೆಯುತ್ತಿರಲು, ರಾಜನ ದೇಹವನ್ನು ತಿನ್ನುವುದಕ್ಕಾಗಿ ಹೋಗುತ್ತಿರುವ ತಕ್ಷಕನನ್ನು ದಾರಿಯಲ್ಲಿ ಹೋಗುತ್ತಿರುವ ಧನ್ವಂತರಿಯು ನೋಡಿದನು. ॥೧೦೩॥

ತಕ್ಷಕನಿಗೂ ಧನ್ವಂತರಿಗೂ ಮಾತುಕಥೆಗಳು ನಡೆದುವು. ಗುಣಗ್ರಾಹಿಯಾದ ತಕ್ಷಕನು ಒಂದು ರತ್ನವನ್ನು ಧನ್ವಂತರಿಗೆ ಕೊಟ್ಟನು. ಧನ್ವಂತರಿಯು ಅದನ್ನು ತೆಗೆದುಕೊಂಡು ಸಂತೋಷದಿಂದ ಹೊರಟುಹೋದನು. ॥೧೦೪-೧೦೫॥

ತಕ್ಷಕನು ಮಂಚದ ಮೇಲೆ ಮಲಗಿದ್ದ ರಾಜನನ್ನು ಕಚ್ಚಿದನು. ಆಕ್ಷಣವೇ ಪರಿಕ್ಷಿತರಾಜನು ತನ್ನ ದೇಹವನ್ನು ಬಿಟ್ಟು ಸ್ವರ್ಗಕ್ಕೆ ಹೋದನು. ಜನಮೇಜಯನು

ಸಂಸ್ಕಾರಂ ಕಾರಯಾಮಾಸ ಪಿತುರ್ನೃ ಜನಮೇಜಯಃ ।
ರಾಜಾ ಚಕಾರ ಯಜ್ಞಂ ಚ ಸರ್ಪಸತ್ರಂ ತತೋ ಮುನೇ ॥೧೦೭॥

ಪ್ರಾಣಾಂಸ್ತ್ಯಕ್ತ್ವಾ ಚ ಸರ್ಪಾಣಾಂ ಸಮೂಹೋ ಬ್ರಹ್ಮತೇಜಸಾ ।
ಸ ತಕ್ಷಕೋ ವೈ ಭೀತಸ್ತು ಮಹೇಂದ್ರಂ ಶರಣಂ ಯಯೌ ॥೧೦೮॥

ಸೇಂದ್ರಂ ಚ ತಕ್ಷಕಂ ಹಂತುಂ ವಿಪ್ರವರ್ಗಃ ಸಮುದ್ಯತಃ ।
ಅಥ ದೇವಾಶ್ಚ ಸೇಂದ್ರಾಶ್ಚ ಸಂಜಗ್ಮುರ್ಮನಸಾಂತಿಕಂ ॥೧೦೯॥

ತಾಂ ತುಷ್ಟಾವ ಮಹೇಂದ್ರಶ್ಚ ಭಯಕಾತರವಿಹ್ವಲಃ ।
ತತ ಆಸ್ತೀಕ ಆಗತ್ಯ ಯಜ್ಞಂ ಚ ಮಾತುರಾಜ್ಞಯಾ ॥೧೧೦॥

ಮಹೇಂದ್ರ ತಕ್ಷಕಪ್ರಾಣಾನ್ಯಯಾಚೇ ಭೂಮಿಪಂ ಪರಂ ।
ದದೌ ವರಂ ನೃಪಶ್ರೇಷ್ಠಃ ಕೃಪಯಾ ಬ್ರಾಹ್ಮಣಾಜ್ಞಯಾ ॥೧೧೧॥

---

ತಂದೆಗೆ ಅಂತ್ಯಸಂಸ್ಕಾರವನ್ನು ಮಾಡಿದನು. ಆಮೇಲೆ ಅವನು ಪಿತೃದ್ರೋಹಿಯ ಮೇಲೆ ಸೇಡನ್ನು ತೀರಿಸಿಕೊಳ್ಳಲು ಸರ್ಪಯಜ್ಞವನ್ನು ಮಾಡಿದನು.॥೧೦೬-೧೦೭॥

ಆ ಸರ್ಪಯಜ್ಞದಲ್ಲಿ ಬ್ರಾಹ್ಮಣರ ತೇಜಸ್ಸಿನಿಂದ ಸರ್ಪಗಳ ಸಮೂಹಗಳು ಪ್ರಾಣಗಳನ್ನು ಕಳೆದುಕೊಂಡುವು. ತಕ್ಷಕನು ಭಯದಿಂದ ದೇವೇಂದ್ರನನ್ನು ಮರೆಹೊಕ್ಕನು. ॥೧೦೮॥

ಇಂದ್ರನೊಡನೆ ಕೂಡಿದ ತಕ್ಷಕನನ್ನು ಕೊಲ್ಲುವುದಕ್ಕಾಗಿ ದೊರೆಯ ಋತ್ವಿಜರು ಪ್ರಯತ್ನಮಾಡಿದರು. ಬಳಿಕ ದೇವತೆಗಳು ದೇವೇಂದ್ರನೊಡನೆ ಮನಸಾ ದೇವಿಯ ಸಮೀಪಕ್ಕೆ ಹೋದರು. ॥೧೦೯॥

ದೇವೇಂದ್ರನು ಭಯಭ್ರಾಂತನಾಗಿ ಆ ಮನಸಾದೇವಿಯನ್ನು ಸ್ತೋತ್ರಮಾಡಿದನು. ಆಮೇಲೆ ಆಸ್ತಿಕನು ತಾಯಿಯ ಅಪ್ಪಣೆಯಿಂದ ಜನಮೇಜಯನ ಯಜ್ಞಶಾಲೆಗೆ ಬಂದು ದೇವೇಂದ್ರನ ಮತ್ತು ತಕ್ಷಕನ ಪ್ರಾಣಗಳನ್ನು ಕೊಡಬೇಕೆಂದು ಮಹಾರಾಜನನ್ನು ಕೇಳಿದನು. ಬ್ರಾಹ್ಮಣರ ಅಪ್ಪಣೆಯಿಂದ ಧಾರ್ಮಿಕನಾದ ರಾಜನು ಆಸ್ತೀಕನು ಕೇಳಿದ ವರವನ್ನು ದಯೆಯಿಂದ ಕೊಟ್ಟನು. ॥೧೧೦-೧೧೧॥

**ಯಜ್ಞಂ ಸಮಾಪ್ಯ ವಿಪ್ರೇಭ್ಯೋ ದಕ್ಷಿಣಾಂ ಚ ದದೌ ಮುದಾ ।**
**ವಿಪ್ರಾಶ್ಚ ಮುನಯೋ ದೇವಾ ಗತ್ವಾ ಚ ಮನಸಾಂತಿಕಂ ॥೧೧೨॥**

**ಮನಸಾಂ ಪೂಜಯಾಮಾಸುಸ್ತುಷ್ಟುವುಶ್ಚ ಪೃಥಕ್ ಪೃಥಕ್ ॥**
**ಶಕ್ರಃ ಸಂಭೃತಸಂಭಾರೋ ಭಕ್ತಿಯುಕ್ತಃ ಸದಾ ಶುಚಿಃ ॥೧೧೩॥**

**ಮನಸಾಂ ಪೂಜಯಾಮಾಸ ತುಷ್ಟಾವ ಪರಮಾದರಂ(ರಾತ್) ।**
**ನತ್ವಾ ಷೋಡಶೋಪಚಾರಂ ಬಲಿಂ ಚ ತತ್ಪ್ರಿಯಂ ತದಾ ॥೧೧೪॥**

**ಪ್ರದದೌ ಪರಿತುಷ್ಟಶ್ಚ ಬ್ರಹ್ಮವಿಷ್ಣುಶಿವಾಜ್ಞಯಾ ।**
**ಸಂಪೂಜ್ಯ ಮನಸಾಂ ದೇವೀಂ ಪ್ರಯಯುಃ ಸ್ವಾಲಯಂ ಚ ತೇ॥೧೧೫॥**

**ಇತ್ಯೇವಂ ಕಥಿತಂ ಸರ್ವಂ ಕಿಂ ಭೂಯಃ ಶ್ರೋತುಮಿಚ್ಛಸಿ ।**

॥ ನಾರದ ಉವಾಚ ॥

**ಕೇನ ಸ್ತೋತ್ರೇಣ ತುಷ್ಟಾವ ಮಹೇಂದ್ರೋ ಮನಸಾಂ ಸತೀಂ ॥೧೧೬॥**
**ಪೂಜಾವಿಧಿಕ್ರಮಂ ತಸ್ಯಾಃ ಶ್ರೋತುಮಿಚ್ಛಾಮಿ ತತ್ತ್ವತಃ ।**

---

ರಾಜನು ಸಂತೋಷದಿಂದ ಯಜ್ಞವನ್ನು ಪೂರ್ತಿಯಾಗಿ ಮಾಡಿ ಬ್ರಾಹ್ಮಣರಿಗೆ ದಕ್ಷಿಣೆಯನ್ನು ಕೊಟ್ಟನು. ಬ್ರಾಹ್ಮಣರೂ, ಮುನಿಗಳೂ, ದೇವತೆಗಳೂ, ಮನಸಾದೇವಿಯ ಸಮೀಪಕ್ಕೆ ಹೋಗಿ, ಆಕೆಯನ್ನು ಪೂಜಿಸಿ ಬೇರೆ ಬೇರೆಯಾಗಿ ಸ್ತೋತ್ರಮಾಡಿದರು. ॥೧೧೨॥

ದೇವೇಂದ್ರನು ಪರಿಶುದ್ಧನಾಗಿ ಭಕ್ತಿಯಿಂದ ಪೂಜಾದ್ರವ್ಯಗಳನ್ನು ಸಿದ್ಧ ಮಾಡಿಕೊಂಡು ಮನಸಾದೇವಿಯನ್ನು ಷೋಡಶೋಪಚಾರಗಳಿಂದ ಪೂಜಿಸಿ ನಮಸ್ಕಾರಮಾಡಿ, ಬ್ರಹ್ಮವಿಷ್ಣುಶಿವರ ಅಪ್ಪಣೆಯಿಂದ, ದೇವಿಗೆ ಇಷ್ಟವಾದ ಬಲಿಯನ್ನು ಕೊಟ್ಟು ದೇವಿಯನ್ನು ಚನ್ನಾಗಿ ಆರಾಧಿಸಿ ತನ್ನ ಮನೆಗೆ ಹೋದನು. ॥೧೧೩-೧೧೪-೧೧೫॥

ನಾರದನೇ, ಮನಸಾದೇವಿಯ ಎಲ್ಲಾ ಚರಿತ್ರೆಯನ್ನೂ ಹೇಳಿದೆನು. ಇನ್ನೇ ನನ್ನು ಕೇಳಬೇಕೆಂದಿರುವೆ?

ನಾರದನು ಹೇಳಿದನು—ನಾರಾಯಣಮುನಿಯೇ, ದೇವೇಂದ್ರನು ಮನಸಾದೇವಿಯನ್ನು ಯಾವ ಸ್ತೋತ್ರದಿಂದ ಸ್ತುತಿಸಿದನು? ಆ ದೇವಿಯ ಪೂಜಾವಿಧಾನವನ್ನೂ ಕೇಳಬೇಕೆಂದು ಅಪೇಕ್ಷಿಸುವೆನು. ॥೧೧೬॥

|| ನಾರಾಯಣ ಉವಾಚ ||

**ಸುಸ್ನಾತಃ ಶುಚಿರಾಚಾಂತೋ ಧೃತ್ವಾ ಧೌತೇ ಚ ವಾಸಸೀ ||೧೧೭||**

**ರತ್ನಸಿಂಹಾಸನೇ ದೇವೀಂ ವಾಸಯಾಮಾಸ ಭಕ್ತಿತಃ ।**
**ಸ್ವರ್ಗಂಗಾಯಾ ಜಲೇನೈವ ರತ್ನಕುಂಭಸ್ಥಿತೇನ ಚ ||೧೧೮||**

**ಸ್ನಾಪಯಾಮಾಸ ಮನಸಾಂ ಮಹೇಂದ್ರೋ ವೇದಮಂತ್ರತಃ ।**
**ವಾಸಸೀ ವಾಸಯಾಮಾಸ ವಹ್ನಿಶುದ್ಧೇ ಮನೋಹರೇ ||೧೧೯||**

**ಸರ್ವಾಂಗೇ ಚಂದನಂ ಕೃತ್ವಾ ಪಾದ್ಯಾರ್ಘ್ಯಂ ಭಕ್ತಿಸಂಯುತಃ ।**
**ಗಣೇಶಂ ಚ ದಿನೇಶಂ ಚ ವಹ್ನಿಂ ವಿಷ್ಣುಂ ಶಿವಂ ಶಿವಾಂ ||೧೨೦||**

**ಸಂಪೂಜ್ಯಾದೌ ದೇವಷಟ್ಕಂ ಪೂಜಯಾಮಾಸ ತಾಂ ಸತೀಂ ।**
**ಓಂ ಹ್ರೀಂ ಶ್ರೀಂ ಮನಸಾದೇವ್ಯೈಸ್ವಾಹೇತ್ಯೇವಂ ಚ ಮಂತ್ರತಃ ||೧೨೧||**

**ದಶಾಕ್ಷರೇಣ ಮೂಲೇನ ದದೌ ಸರ್ವಂ ಯಥೋಚಿತಂ ।**
**ದತ್ವಾ ಷೋಡಶೋಪಚಾರಾನ್ದುರ್ಲಭಾನ್ದೇವನಾಯಕಃ ||೧೨೨||**

---

ನಾರಾಯಣಮುನಿಯು ಹೇಳಿದನು— ದೇವೇಂದ್ರನು ಮಂಗಳಸ್ನಾನವನ್ನು ಮಾಡಿ ಪರಿಶುದ್ಧನಾಗಿ ಆಚಮನವನ್ನು ಮಾಡಿದಮೇಲೆ ಮಡಿಬಟ್ಟೆಗಳನ್ನು ಧರಿಸಿ ಭಕ್ತಿಯಿಂದ ದೇವಿಯನ್ನು ರತ್ನಸಿಂಹಾಸನದ ಮೇಲೆ ಕೂಡಿಸಿದನು. ||೧೧೭||

ರತ್ನಖಚಿತವಾದ ಕಲಶದಲ್ಲಿರುವ ದೇವಗಂಗೆಯ ನೀರಿನಿಂದ ದೇವೇಂದ್ರನು ಆ ಮನಸಾದೇವಿಯನ್ನು ವೇದಮಂತ್ರಗಳಿಂದ ಸ್ನಾನಮಾಡಿಸಿದನು. ||೧೧೮||

ಅಗ್ನಿಯಂತೆ ಪರಿಶುದ್ಧವಾದ ಮನೋಹರವಾದ ವಸ್ತ್ರಗಳನ್ನುಡಿಸಿದನು. ಸಮಸ್ತ ಅಂಗಗಳಿಗೂ ಶ್ರೀಗಂಧವನ್ನು ಬಳಿದು ಪಾದ್ಯವನ್ನೂ, ಅರ್ಘ್ಯವನ್ನೂ ಭಕ್ತಿಯಿಂದ ಸಮರ್ಪಿಸಿದನು. ||೧೧೯||

ದೇವತೆಗಳಿಗೆ ಒಡೆಯನಾದ ದೇವೇಂದ್ರನು ಮೊದಲು ಗಣೇಶ, ಸೂರ್ಯ, ಅಗ್ನಿ, ವಿಷ್ಣು, ಶಿವ, ದೇವಿ ಈ ಆರು ದೇವತೆಗಳನ್ನು ಪೂಜಿಸಿ ಆ ಮೇಲೆ ಆ ಮನಸಾದೇವಿಯನ್ನು “ ಓಂ, ಹ್ರೀಂ, ಶ್ರೀಂ ಮನಸಾದೇವ್ಯೈಸ್ವಾಹಾ” ಎಂಬ ಹತ್ತು ಅಕ್ಷರದ ಮಂತ್ರದಿಂದ ಯಥಾಯೋಗ್ಯವಾದ, ದುರ್ಲಭವಾದ ಷೋಡಶೋಪಚಾರಗಳನ್ನು ಸಮರ್ಪಿಸಿದನು. ||೧೨೦-೧೨೧-೧೨೨||

**ಪೂಜಯಾಮಾಸ ಭಕ್ತ್ಯಾ ಚ ವಿಷ್ಣುನಾ ಪ್ರೇರಿತೋ ಮುದಾ ।**
**ವಾದ್ಯಂ ನಾನಾಪ್ರಕಾರಂ ಚ ವಾದಯಾಮಾಸ ತತ್ರ ವೈ ॥೧೨೩॥**

**ಬಭೂವ ಪುಷ್ಪವೃಷ್ಟಿಶ್ಚ ನಭಸೋ ಮನಸೋಪರಿ ।**
**ದೇವಪ್ರಿಯಾಜ್ಞಯಾ ತತ್ರ ಬ್ರಹ್ಮವಿಷ್ಣುಶಿವಾಜ್ಞಯಾ ॥೧೨೪॥**

**ತುಷ್ಟಾವ ಸಾಶ್ರುನೇತ್ರಶ್ಚ ಪುಲಕಾಂಕಿತ ವಿಗ್ರಹಃ ।**

॥ ಪುರಂದರ ಉವಾಚ ॥

**ದೇವಿ ತ್ವಾಂ ಸ್ತೋತುಮಿಚ್ಛಾಮಿ ಸಾಧ್ವೀನಾಂ ಪ್ರವರಾಂ ವರಾಂ ॥೧೨೫॥**

**ಪರಾತ್ಪರಾಂ ಚ ಪರಮಾಂ ನ ಹಿ ಸ್ತೋತುಂ ಕ್ಷಮೋಽಧುನಾ ।**
**ಸ್ತೋತ್ರಾಣಾಂ ಲಕ್ಷಣಂ ವೇದೇ ಸ್ವಭಾವಾಖ್ಯಾನತತ್ಪರಂ ॥೧೨೬॥**
**ನ ಕ್ಷಮಃ ಪ್ರಕೃತೇ ವಕ್ತುಂ ಗುಣಾನಾಂ ಗಣನಾಂ ತವ ।**

---

ದೇವೇಂದ್ರನು ವಿಷ್ಣುವಿನಿಂದ ಪ್ರೇರಿತನಾಗಿ ಸಂತೋಷದಿಂದಲೂ, ಭಕ್ತಿಯಿಂದಲೂ, ದೇವಿಯನ್ನು ಪೂಜಿಸಿ ಬಗೆಬಗೆಯ ಮಂಗಲವಾದ್ಯಗಳನ್ನು ಮಾಡಿಸಿ ಆರಾಧಿಸಿದನು. ॥೧೨೩॥

ಬ್ರಹ್ಮ ವಿಷ್ಣು ಶಿವ ಮತ್ತು ದೇವೇಂದ್ರ ಇವರ ಅಪ್ಪಣೆಯಿಂದ ಅಲ್ಲಿ ಮನಸಾದೇವಿಯ ಮೇಲೆ ಆಕಾಶದಿಂದ ಹೂವುಗಳುಗರೆಯಿತು. ದೇವೇಂದ್ರನು ಭಕ್ತಿಯಿಂದ ಮೈ ರೋಮಾಂಚವಾಗಿ ಕಣ್ಣಿನಲ್ಲಿ ನೀರು ಸುರಿಸುತ್ತಿರಲು ದೇವಿಯನ್ನು ಸ್ತೋತ್ರ ಮಾಡಿದನು. ॥೧೨೪॥

ಪುರಂದರನು ಹೇಳಿದನು---ಓ ಮನಸಾದೇವಿಯೇ, ಪತಿವ್ರತೆಯರಲ್ಲಿ ಶ್ರೇಷ್ಠಳಾದ ನಿನ್ನನ್ನು ಸ್ತೋತ್ರಮಾಡಬೇಕೆಂದು ಅಪೇಕ್ಷಿಸುತ್ತೇನೆ. ಈಗ ಪರಬ್ರಹ್ಮಸ್ವರೂಪಳಾದ ನಿನ್ನನ್ನು ಸ್ತೋತ್ರಮಾಡಲು ನಾನು ಶಕ್ತನಲ್ಲ. ॥೧೨೫॥

ವೇದಗಳಲ್ಲಿ ಸ್ತೋತ್ರಗಳ ಲಕ್ಷಣವು ವಸ್ತುಸ್ವಭಾವವನ್ನು ಹೇಳುವುದೇ ಮುಖ್ಯೋದ್ದೇಶವುಳ್ಳದ್ದಾಗಿರುವುದು. ಪ್ರಕೃತದಲ್ಲಿ ನಿನ್ನ ಗುಣಗಳ ಲೆಕ್ಕವನ್ನು ಮಾಡುವುದಕ್ಕೂ ನನಗೆ ಶಕ್ತಿಸಾಲದು. ॥೧೨೬॥

ಶುದ್ಧಸತ್ವಸ್ವರೂಪಾ ತ್ವಂ ಕೋಪಹಿಂಸಾ ವಿವರ್ಜಿತಾ ॥೧೨೭॥

ನ ಚ ಶಕ್ತೋ ಮುನಿಸ್ತೇನ ತ್ಯಕ್ತುಂ ಯಾಚ್ಞಾ ಕೃತಾ ಯತಃ ।
ತ್ವಂ ಮಯಾ ಪೂಜಿತಾ ಸಾಧ್ವೀ ಜನನೀ ಮೇ ಯಥಾಽದಿತಿಃ ॥೧೨೮॥

ದಯಾರೂಪಾ ಚ ಭಗಿನೀ ಕ್ಷಮಾರೂಪಾ ಯಥಾ ಪ್ರಸೂಃ ।
ತ್ವಯಾ ಮೇ ರಕ್ಷಿತಾಃ ಪ್ರಾಣಾಃ ಪುತ್ರದಾರಾಃ ಸುರೇಶ್ವರಿ ॥೧೨೯॥

ಅಹಂ ಕರೋಮಿ ತ್ವತ್ಪೂಜಾಂ ಪ್ರೀತಿಶ್ಚ ವರ್ಧತಾಂ ಸದಾ ।
ನಿತ್ಯಾ ಯದ್ಯಪಿ ಪೂಜ್ಯಾ ತ್ವಂ ಸರ್ವತ್ರ ಜಗದಂಬಿಕೇ ॥೧೩೦॥

ತಥಾಽಪಿ ತವ ಪೂಜಾಂ ಚ ವರ್ಧಯಾಮಿ ಸುರೇಶ್ವರಿ ।
ಯೇ ತ್ವಾಮಾಷಾಢಸಂಕ್ರಾಂತ್ಯಾಂ ಪೂಜಯಿಷ್ಯಂತಿ ಭಕ್ತಿತಃ ॥೧೩೧॥

ಪಂಚಮ್ಯಾಂ ಮನಸಾಽಖ್ಯಾಯಾಂ ಮಾಸಾಂತೇ ವಾ ದಿನೇ ದಿನೇ ।
ಪುತ್ರಪೌತ್ರಾದಯಸ್ತೇಷಾಂ ವರ್ಧಂತೇ ಚ ಧನಾನಿ ವೈ ॥೧೩೨॥

---

ನೀನು ಶುದ್ಧಸತ್ವಸ್ವರೂಪಳಾಗಿ, ಕೋಪ ಹಿಂಸೆ ಇವುಗಳಿಲ್ಲದವಳಾದುದರಿಂದ ಉತ್ತಮಸ್ವಭಾವದವಳಾದ ನಿನ್ನನ್ನು ಜರತ್ಕಾರುಮುನಿಯು ತ್ಯಾಗಮಾಡಲು ಶಕ್ತನಾಗದೆ ಇದ್ದುದರಿಂದ ತಾನು ತಪಸ್ಸಿಗೆ ಹೋಗುವುದಕ್ಕೆ ನಿನ್ನನ್ನು ಯಾಚಿಸಿದನು. ॥೧೨೭-೧೨೮॥

ನೀನು ದಯಾಸ್ವರೂಪಳಾಗಿ ಸಹೋದರಿಯಾಗಿರುವೆ. ದೇವದೇವಿಯೇ, ನಿನ್ನಿಂದ ನಾನೂ, ನನ್ನ ಹೆಂಡತಿಮಕ್ಕಳೂ ಸಹ ಬದುಕಿದೆವು. ॥೧೨೯॥

ಲೋಕಕ್ಕೆ ತಾಯಿಯಾದ ದೇವಿಯೇ, ನೀನು ಯಾವಾಗಲೂ, ಎಲ್ಲೆಡೆಯಲ್ಲಿಯೂ ಪೂಜ್ಯಳಾಗಿದ್ದರೂ, ನಾನು ನಿನ್ನ ಪೂಜೆಯನ್ನು ಇಲ್ಲಿ ಮಾಡುತ್ತೇನೆ. ಯಾವಾಗಲೂ ನಿನ್ನಲ್ಲಿ ನನ್ನ ಪ್ರೀತಿಯು ಹೆಚ್ಚುತ್ತಿರಲಿ. ॥೧೩೦॥

ದೇವದೇವಿಯೇ, ನಿನ್ನ ಪೂಜೆಯನ್ನು ನಾನು ಲೋಕದಲ್ಲೆಲ್ಲ ಹರಡುವೆನು. ಯಾರು ನಿನ್ನನ್ನು ಆಷಾಢಮಾಸದಲ್ಲಿ ಸಂಕ್ರಮಣ ದಿನದಲ್ಲಿ ಭಕ್ತಿಯಿಂದ ಪೂಜಿಸುವರೋ, ಅಥವಾ ಮನಸಾ ಪಂಚಮೀ ಎಂಬ ನಾಗಸಂಚಮಿಯ ದಿನದಲ್ಲಿ, ಮಾಸದ ಕೊನೆಯಲ್ಲಿ ಅಮಾವಾಸ್ಯಾ ದಿನದಲ್ಲಾಗಲೀ, ಪೂಜಿಸುವರೋ ಅವರಿಗೆ ಪುತ್ರ ಪೌತ್ರಾದಿಗಳ ವೃದ್ಧಿಯೂ, ಧನಾಭಿವೃದ್ಧಿಯೂ ಉಂಟಾಗುವುದು. ॥೧೩೧-೧೩೨॥

ಯಶಸ್ವಿನಃ ಕೀರ್ತಿಮಂತೋ ವಿದ್ಯಾವಂತೋ ಗುಣಾನ್ವಿತಾಃ ।
ಯೇ ತ್ವಾಂ ನ ಪೂಜಯಿಷ್ಯಂತಿ ನಿಂದಂತ್ಯಜ್ಞಾನತೋ ಜನಾಃ ॥೧೩೩॥

ಲಕ್ಷ್ಮೀಹೀನಾ ಭವಿಷ್ಯಂತಿ ತೇಷಾಂ ನಾಗಭಯಂ ಸದಾ ।
ತ್ವಂ ಸ್ವಯಂ ಸರ್ವಲಕ್ಷ್ಮೀಶ್ಚ ವೈಕುಂಠೇ ಕಮಲಾಲಯಾ ॥೧೩೪॥

ನಾರಾಯಣಾಂಶೋ ಭಗವಾನ್ ಜರತ್ಕಾರುರ್ಮುನೀಶ್ವರಃ ।
ತಪಸಾ ತೇಜಸಾ ತ್ವಾಂ ಚ ಮನಸಾ ಸಸೃಜೇ ಪಿತಾ ॥೧೩೫॥

ಅಸ್ಮಾಕಂ ರಕ್ಷಣಾಯೈವ ತೇನ ತ್ವಂ ಮನಸಾಽಭಿಧಾ ।
ಮನಸಾ ದೇವಿ ಶಕ್ತ್ಯಾ ತ್ವಂ ಸ್ವಾತ್ಮನಾ ಸಿದ್ಧಯೋಗಿನೀ ॥೧೩೬॥

ತೇನ ತ್ವಂ ಮನಸಾದೇವೀ ಪೂಜಿತಾ ವಂದಿತಾ ಸದಾ ।
ಸತ್ಯಸ್ವರೂಪಾ ದೇವಿ ತ್ವಂ ಶಶ್ವತ್ಸತ್ಯನಿಷೇವಣಾತ್ ॥೧೩೭॥
ಯೋ ಹಿ ತ್ವಾಂ ಭಾವಯೇನ್ನಿತ್ಯಂ ಸ ತ್ವಾಂ ಪ್ರಾಪ್ನೋತಿ ತತ್ಪರಃ ।

---

ನಿನ್ನನ್ನು ಪೂಜಿಸಿದ ಮನುಜರು ಲೋಕದಲ್ಲಿ ಯಶಶ್ಶಾಲಿಗಳಾಗಿಯೂ, ಕೀರ್ತಿವಂತರೂ, ವಿದ್ಯಾವಂತರೂ, ವಿಶೇಷ ಗುಣವಂತರೂ ಆಗುವರು. ಯಾವ ಜನರು ನಿನ್ನನ್ನು ಪೂಜಿಸದೆ ಅಜ್ಞಾನದಿಂದ ನಿಂದಿಸುವರೋ ಅವರು ಸಂಪತ್ತಿಲ್ಲದವರಾಗುವರು. ಅವರಿಗೆ ಯಾವಾಗಲೂ ಸರ್ಪಗಳ ಬಾಧೆಯಿರುವುದು. ॥೧೩೩॥

ನೀನು ವೈಕುಂಠದಲ್ಲಿ ಲಕ್ಷ್ಮಿಯಾಗಿದ್ದವಳು. ಇಲ್ಲಿಯೂ ಲಕ್ಷ್ಮೀಸ್ವರೂಪಳಾಗಿಯೇ ಇರುತ್ತೀಯೆ. ಜರತ್ಕಾರುಮುನಿಯು ನಾರಾಯಣನ ಅಂಶಭೂತನಾಗಿರುತ್ತಾನೆ. ನನ್ನ ತಂದೆಯಾದ ಕಶ್ಯಪಪ್ರಜಾಪತಿಯು ತನ್ನ ಮನಸ್ಸಿನಿಂದಲೂ, ಬ್ರಹ್ಮತೇಜಸ್ಸಿನಿಂದಲೂ, ನಿನ್ನನ್ನು ನಮ್ಮ ರಕ್ಷಣೆಗಾಗಿಯೇ ಮನಸ್ಸಿನಿಂದ ಸೃಷ್ಟಿಮಾಡಿದನು. ಆದುದರಿಂದಲೇ ಮನಸಾದೇವಿ ಎಂದು ಹೆಸರು ಬಂದಿರುವುದು. ॥೧೩೪-೧೩೫॥

ಮನಸಾದೇವಿಯೇ, ನಿನ್ನನ್ನು ಭಕ್ತಿಯಿಂದ ಯಾವಾಗಲೂ, ವಿಶೇಷವಾಗಿ, ತಮ್ಮ ಮನಸ್ಸಿನಲ್ಲಿಯೇ ಪೂಜಿಸುವುದರಿಂದ ನಿನ್ನನ್ನು ಮನಸಾದೇವಿಯೆಂದು ವಿದ್ವಾಂಸರು ಕರೆಯುವರು. ॥೧೩೬॥

ಓ ದೇವಿಯೇ, ನೀನು ಯಾವಾಗಲೂ ನಿತ್ಯಸ್ವರೂಪವಾದ ಬ್ರಹ್ಮಸ್ವರೂಪವನ್ನು ಧ್ಯಾನಮಾಡುತ್ತ ಆ ಪರಬ್ರಹ್ಮವೇ ಆಗಿರುವೆ. ಯಾರು ನಿನ್ನನ್ನು ಯಾವಾ

ಇಂದ್ರಶ್ಚ ಮನಸಾಂ ಸ್ತುತ್ವಾ ಗೃಹಿತ್ವಾ ಭಗಿನೀವರಂ ॥೧೩೯॥

ಪ್ರಜಗಾಮ ಸ್ವಭವನಂ ಭೂಷಯಾ ಸಪರಿಚ್ಛದಂ ।
ಪುತ್ರೇಣ ಸಾರ್ಧಂ ಸಾ ದೇವೀ ಚಿರಂ ತಸ್ಥೌ ಪಿತುರ್ಗೃಹೇ ॥೧೪೦॥

ಭ್ರಾತೃಭಿಃ ಪೂಜಿತಾ ಶಶ್ವನ್ಮಾನ್ಯಾ ವಂದ್ಯಾ ಚ ಸರ್ವತಃ ।
ಗೋಲೋಕಾತ್ಸುರಭಿರ್ಬ್ರಹ್ಮನ್ ತತ್ರಾಗತ್ಯ ಸುಪೂಜಿತಾಂ ॥೧೪೧॥

ತಾಂ ಸ್ನಾಪಯಿತ್ವಾ ಕ್ಷೀರೇಣ ಪೂಜಯಾಮಾಸ ಸಾದರಂ ।
ಜ್ಞಾನಂ ಚ ಕಥಯಾಮಾಸ ಗೋಪ್ಯಂ ಸರ್ವಸುದುರ್ಲಭಂ ॥೧೪೨॥

ತಯಾ ದೇವೈಃ ಪೂಜಿತಾ ಸಾ ಸ್ವರ್ಲೋಕಂ ಚ ಪುನರ್ಯಯೌ ।
ಇದಂ ಸ್ತೋತ್ರಂ ಪುಣ್ಯಬೀಜಂ ಮನಸಾಂ ಪೂಜಯೇತ್ಪಠೇತ್ ॥೧೪೩॥

ತಸ್ಯ ನಾಗಭಯಂ ನಾಸ್ತಿ ತಸ್ಯ ವಂಶೋದ್ಭವಸ್ಯ ಚ ।
ವಿಷಂ ಭವೇತ್ಸುಧಾತುಲ್ಯಂ ಸಿದ್ಧಸ್ತೋತ್ರೇ ಯದಾ ಭವೇತ್ ॥೧೪೪॥

---

ಗಲೂ. ಧ್ಯಾನಮಾಡುವರೋ ಅವರು ಅದೇ ಧ್ಯಾನದಿಂದ ನಿನ್ನ ಸ್ವರೂಪವನ್ನೇ ಹೊಂದುವರು. ||೧೩೮||

ದೇವೇಂದ್ರನು ಮನಸಾದೇವಿಯನ್ನು ಸ್ತೋತ್ರಮಾಡಿ ಸಹೋದರಿಯಾದ ಆಕೆಯ ವರನ್ನು ಪಡೆದು ಅಲಂಕೃತನಾಗಿ ತನ್ನ ಪರಿವಾರದೊಡನೆ ತಿರುಗಿ ಮನೆಗೆ ಹೋದನು. ||೧೩೯||

ಆ ಮನಸಾದೇವಿಯು ಮಗನಾದ ಆಸ್ತಿಕನೊಡನೆ ಬಹಳಕಾಲ ತಂದೆಯ ಮನೆಯಲ್ಲಿ ಸಹೋದರರ ಪೂಜೆಯನ್ನೂ, ಎಲ್ಲರಿಂದ ಗೌರವವನ್ನೂ ಪಡೆಯುತ್ತಿದ್ದಳು. ಗೋಲೋಕದಿಂದ ಕಾಮಧೇನುವು ಅಲ್ಲಿಗೆ ಬಂದು ತನ್ನ ಹಾಲಿನಿಂದ ಮನಸಾದೇವಿಯನ್ನು ಸ್ನಾನಮಾಡಿಸಿ ಪ್ರೀತಿಯಿಂದ ಪೂಜಿಸಿ, ಗೋಪ್ಯವಾದ ಸಾಮಾನ್ಯರಿಗೆ ದೊರೆಯದೇ ಇರುವ ಜ್ಞಾನಸ್ವರೂಪವನ್ನು ಹೇಳಿ, ಆ ಮನಸಾದೇವಿಯ ಮತ್ತು ದೇವತೆಗಳ ಪೂಜೆಯನ್ನು ಪಡೆದು ಮತ್ತೆ ಸ್ವರ್ಗಲೋಕಕ್ಕೆ ಪ್ರಯಾಣಮಾಡಿತು. ||೧೪೦-೧೪೧-೧೪೨||

ಪುಣ್ಯಕ್ಕೆ ಕಾರಣವಾದ ದೇವೇಂದ್ರನ ಸ್ತೋತ್ರವನ್ನು ಮನಸಾದೇವಿಯ ಪೂಜೆಯನ್ನು ಮಾಡಿ ಹೇಳಬೇಕು. ಹಾಗೆ ಈ ಸ್ತೋತ್ರವನ್ನು ಹೇಳುವವವರಿಗೂ,

**ಪಂಚಲಕ್ಷಜಪೇನೈವ ಸಿದ್ಧಸ್ತೋತ್ರೋ ಭವೇನ್ನರಃ ।**
**ಸರ್ಪಶಾಯಿಪಾ ಭವೇತ್ಸೋಽಪಿ ನಿಶ್ಚಿತಂ ಸರ್ಪವಾಹನಃ ॥೧೪೫॥**

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ನವಮಸ್ಕಂಧೇ**
**ಅಷ್ಟಚತ್ವಾರಿಂಶೋಽಧ್ಯಾಯಃ**

---

ಅವಗ ವಂಶದಲ್ಲಿ ಹುಟ್ಟಿದವರಿಗೂ ಸರ್ಪಭಯವಿರುವುದಿಲ್ಲವು. ವಿಷವು ಅಮೃತವಾಗುವುದು. ॥೧೪೩-೧೪೪॥

ಈ ಸ್ತೋತ್ರವನ್ನು ಐದುಲಕ್ಷಸಾರಿ ಜಪಿಸಿದರೆ ಆ ಮನುಷ್ಯನು ಸಿದ್ಧಸ್ತೋತ್ರನಾಗಿ ಸರ್ಪಶಯನನಾದ ವಿಷ್ಣುಸ್ವರೂಪನಾಗುವನು. ಸರ್ಪಗಳು ಅವನ ಆಜ್ಞೆಯನ್ನು ನಡೆಯಿಸುವುವು. ॥೧೪೫॥

ಇಲ್ಲಿಗೆ ದೇವೀಭಾಗವತಮಹಾಪುರಾಣದ ಒಂಬತ್ತನೆಯ ಸ್ಕಂಧದಲ್ಲಿ
ನಲವತ್ತೆಂಟನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ನವಮಸ್ಕಂಧೇ

### || ಏಕೋನಪಂಚಾಶತ್ತಮೋಽಧ್ಯಾಯಃ ||

### ನಲವತ್ತೊಂಬತ್ತನೆಯ ಅಧ್ಯಾಯವು

|| ನಾರದ ಉವಾಚ ||

**ಕಾ ವಾ ಸಾ ಸುರಭಿರ್ದೇವೀ ಗೋಲೋಕಾದಾಗತಾ ಚ ಯಾ ।**
**ತಜ್ಜನ್ಮಚರಿತಂ ಬ್ರಹ್ಮನ್ ಶ್ರೋತುಮಿಚ್ಛಾಮಿ ಯತ್ನತಃ ॥೧॥**

|| ನಾರಾಯಣ ಉವಾಚ ||

**ಗವಾಮಧಿಷ್ಠಾತೃದೇವೀ ಗವಾಮಾದ್ಯಾ ಗವಾಂ ಪ್ರಸೂಃ ।**
**ಗವಾಂ ಪ್ರಧಾನಾ ಸುರಭಿರ್ಗೋಲೋಕೇ ಸಾ ಸಮುದ್ಭವಾ ॥೨॥**

**ಸರ್ವಾದಿಸೃಷ್ಟೇಶ್ಚರಿತಂ ಕಥಯಾಮಿ ನಿಶಾಮಯ ।**
**ಬಭೂವ ತೇನ ತಜ್ಜನ್ಮ ಪುರಾ ವೃಂದಾವನೇ ವನೇ ॥೩॥**

---

ನಾರದನು ಹೇಳಿದನು – ಎಲೈ ನಾರಾಯಣಮುನಿಯೇ, ಗೋಲೋಕದಿಂದ ಬಂದ ಸುರಭಿದೇವಿಯು ಯಾರು ? ಆ ಸುರಭಿದೇವಿಯ ಉತ್ಪತ್ತಿಯ ಚರಿತ್ರೆಯನ್ನು ಕೇಳಬೇಕೆಂದು ಅಪೇಕ್ಷಿಸುತ್ತೇನೆ. ॥೧॥

ನಾರಾಯಣನು ಹೇಳಿದನು—ಸುರಭಿಯು ಗೋವುಗಳಿಗೆಲ್ಲಕ್ಕೂ ಆಶ್ರಯ ಸ್ವರೂಪಳು. ಮತ್ತು ಗೋವುಗಳಲ್ಲಿ ಮುಖ್ಯಳು, ಗೋವುಗಳನ್ನು ಹೆತ್ತವಳು, ಆ ದೇವಿಯು ಗೋವುಗಳಿಗೆಲ್ಲಕ್ಕೂ ಮೊದಲನೆಯವಳಾಗಿ ಗೋಕುಲದಲ್ಲಿ ಹುಟ್ಟಿದಳು.॥೨॥

ಸಮಸ್ತ ಗೋವುಗಳಿಗಿಂತಲೂ ಮೊದಲು ಹುಟ್ಟಿದ ಆ ಸುರಭಿಯ ಚರಿತ್ರೆಯನ್ನು ಹೇಳುತ್ತೇನೆ ಕೇಳು. ಆ ಸುರಭಿಯು ಪೂರ್ವಕಾಲದಲ್ಲಿ ಗೋಲೋಕದಲ್ಲಿರುವ ವೃಂದಾವನವೆಂಬ ವನದಲ್ಲಿ ಹುಟ್ಟಿದಳು. ॥೩॥

ಏಕದಾ ರಾಧಿಕಾನಾಥೋ ರಾಧಯಾ ಸಹ ಕಾಮುಕಃ ।
ಗೋಪಾಂಗನಾಪರಿವೃತಃ ಪುಣ್ಯಂ ವೃಂದಾವನಂ ಯಯೌ ॥೪॥

ಸಹಸಾ ತತ್ರ ರಹಸಿ ವಿಜಹಾರ ಸ ಕೌತುಕಾತ್ ।
ಬಭೂವ ಕ್ಷೀರಪಾನೇಚ್ಛಾ ತಸ್ಯ ಸ್ವೇಚ್ಛಾಮಯಸ್ಯ ಚ ॥೫॥

ಸಸೃಜೇ ಸುರಭಿಂ ದೇವೀಂ ಲೀಲಯಾ ವಾಮಪಾರ್ಶ್ವತಃ ।
ವತ್ಸಯುಕ್ತಾಂ ದುಗ್ಧವತೀಂ ವತ್ಸೋ ನಾಮ ಮನೋರಥಃ ॥೬॥

ದೃಷ್ಟ್ವಾ ಸವತ್ಸಾಂ ಶ್ರೀದಾಮಾ ನವಭಾಂಡೇ ದುದೋಹ ಚ ।
ಕ್ಷೀರಂ ಸುಧಾತಿರಿಕ್ತಂ ಚ ಜನ್ಮಮೃತ್ಯುಜರಾಹರಂ ॥೭॥

ತದುತ್ಥಂ ಚ ಪಯಃ ಸ್ವಾದು ಪಪೌ ಗೋಪೀಪತಿಃ ಸ್ವಯಂ ।
ಸರೋ ಬಭೂವ ಪಯಸಾಂ ಭಾಂಡವಿಸ್ರಂಸನೇನ ಚ ॥೮॥

---

ಒಂದಾನೊಂದು ದಿನ ರಾಧಾಪತಿಯಾದ ಶ್ರೀಕೃಷ್ಣನು, ರಾಧೆಯೊಡನೆ ಕುತೂಹಲದಿಂದ ಕೂಡಿದವನಾಗಿ, ಗೋಪಸ್ತ್ರೀಯರ ಪರಿವಾರಗಳಿಂದ ಕೂಡಿ ಪುಣ್ಯಕರವಾದ ವೃಂದಾವನವೆಂಬ ಸ್ಥಳಕ್ಕೆ ಹೋದನು. ॥೪॥

ಅಲ್ಲಿ ಏಕಾಂತವಾಗಿ ರಾಧೆಯೊಡನೆ ವಿಹರಿಸುತ್ತಿದ್ದನು. ಸಂಕಲ್ಪಮಾತ್ರದಿಂದಲೇ ಸಮಸ್ತಕಾರ್ಯಗಳನ್ನು ಮಾಡತಕ್ಕ ಶ್ರೀಕೃಷ್ಣನಿಗೆ ಹಾಲನ್ನು ಕುಡಿಯಬೇಕೆಂಬ ಆಸೆಯುಂಟಾಯಿತು. ॥೫॥

ಆ ಸಮಯದಲ್ಲಿ ಶ್ರೀಕೃಷ್ಣನು ತನ್ನ ಎಡಭಾಗದಿಂದ ಸುರಭಿದೇವಿ ಎಂದರೆ ಕಾಮಧೇನುವನ್ನು ಸೃಷ್ಟಿಸಿದನು. ಆ ಧೇನುವು ಇಷ್ಟಾರ್ಥವೆಂಬ ಕರುವುಳ್ಳದ್ದಾಗಿಯೂ, ವಿಶೇಷವಾದ ಹಾಲುಳ್ಳದ್ದಾಗಿಯೂ ಇದ್ದಿತು. ॥೬॥

ಕರುವಿನೊಡನೆ ಕೂಡಿದ ಆ ಕಾಮಧೇನುವನ್ನು ನೋಡಿ ಶ್ರೀದಾಮನೆಂಬ ಗೊಲ್ಲನು ಹೊಸಪಾತ್ರೆಯಲ್ಲಿ ಅಮೃತಕ್ಕಿಂತಲೂ ಹೆಚ್ಚು ಗುಣವುಳ್ಳ, ಹುಟ್ಟು ಸಾವು ಮುಪ್ಪುಗಳನ್ನು ನಾಶಮಾಡುವ ಹಾಲನ್ನು ಕರೆದನು. ಕಾಮಧೇನುವು ಕೊಟ್ಟ ರುಚಿಕರವಾದ ಹಾಲನ್ನು ಶ್ರೀಕೃಷ್ಣನು ಕುಡಿದನು. ಪಾತ್ರೆಯು ಜಾರಿ ಕೈಯಿಂದ ಬಿದ್ದುದರಿಂದ ಚೆಲ್ಲಿದ ಹಾಲು ಅಲ್ಲಿ ಒಂದು ಹಾಲಿನ ಸರೋವರವಾಯಿತು. ॥೭-೮॥

ದೀರ್ಘಂ ಚ ವಿಸ್ತೃತಂ ಚೈವ ಪರಿತಃ ಶತಯೋಜನಂ ।
ಗೋಲೋಕೇಽಯಂ ಪ್ರಸಿದ್ಧಶ್ಚ ಸೋಽಪಿ ಕ್ಷೀರಸರೋವರಃ ॥೯॥

ಗೋಪಿಕಾನಾಂ ಚ ರಾಧಾಯಾಃ ಕ್ರೀಡಾವಾಪೀ ಬಭೂವ ಸಾ ।
ರತ್ನೇಂದ್ರರಚಿತಾಪೂರ್ಣಂ ಭೂತಾ ಚಾಪೀಶ್ವರೇಚ್ಛಯಾ ॥೧೦॥

ಬಭೂವ ಕಾಮಧೇನೂನಾಂ ಸಹಸಾ ಲಕ್ಷಕೋಟಯಃ ।
ಯಾವಂತಸ್ತತ್ರ ಗೋಪಾಶ್ಚ ಸುರಭ್ಯಾ ಲೋಮಕೂಪತಃ ॥೧೧॥

ತಾಸಾಂ ಪುತ್ರಾಶ್ಚ ಬಹವಃ ಸಂಬಭೂವುರಸಂಖ್ಯಕಾಃ ।
ಕಥಿತಾ ಚ ಗವಾಂ ಸೃಷ್ಟಿಸ್ತಯಾ ಚ ಪೂರಿತಂ ಜಗತ್ ॥೧೨॥

ಪೂಜಾಂ ಚಕಾರ ಭಗವಾನ್ ಸುರಭ್ಯಾಶ್ಚ ಪುರಾ ಮುನೇ ।
ತತೋ ಬಭೂವ ತತ್ಪೂಜಾ ತ್ರಿಷು ಲೋಕೇಷು ದುರ್ಲಭಾ ॥೧೩॥

---

ಗೋಲೋಕದಲ್ಲಿ ಪ್ರಸಿದ್ಧವಾದ ಆ ಕ್ಷೀರಸರೋವರವು ಉದ್ದವಾಗಿಯೂ, ಅಗಲವಾಗಿಯೂ, ಒಂದು ನೂರುಗಾವುದ ಸುತ್ತಳತೆವುಳ್ಳದಾಗಿಯೂ, ಇದ್ದು ಗೋಪಿಯರಿಗೂ, ರಾಧೆಗೂ ಜಲಕ್ರೀಡೆಗೆ ಆಶ್ರಯವಾಗಿದ್ದಿತು. ॥೯॥

ಆ ಕ್ಷೀರಸರೋವರವು ಉತ್ತಮವಾದ ರತ್ನಗಳ ಮೆಟ್ಟಿಲುಗಳಿಂದ ತುಂಬಿ ಈಶ್ವರನ ಇಚ್ಛೆಗನುಸಾರವಾಗಿ ಸಂಕಲಸಂಪತ್ತಿನಿಂದ ತುಂಬಿದ್ದಿತು. ॥೧೦॥

ಆ ಗೋಲೋಕದಲ್ಲಿ ಎಷ್ಟುಜನ ಗೋಪರಿದ್ದರೋ ಅವರ ಮನೆಗಳಲ್ಲಿ ಮನೆಗೊಂದರಂತೆ ಕಾಮಧೇನುಗಳಿರುವಂತೆ ಆ ಸುರಭಿಯ ರೋಮಕೂಪಗಳಿಂದ ಅನೇಕ ಕೋಟಿ ಕಾಮಧೇನುಗಳು ಹುಟ್ಟಿದುವು. ॥೧೧॥

ಆ ಕಾಮಧೇನುಗಳ ಕರುಗಳು ಲೆಕ್ಕವಿಲ್ಲದಷ್ಟು ಹುಟ್ಟಿದುವು. ಹೀಗೆ ಗೋಸೃಷ್ಟಿಯ ವಿಚಾರವನ್ನು ಹೇಳಿದೆನು. ಆ ಗೋವುಗಳಿಂದ ಸಮಸ್ತ ಜಗತ್ತೂ ತುಂಬಿಕೊಂಡಿತು. ॥೧೨॥

ನಾರದಮುನಿಯೇ ಕೇಳು, ಆ ಮಹಾಮಹಿಮನಾದ ಶ್ರೀಕೃಷ್ಣನು ಮೊದಲು ಆ ಸುರಭಿಯ ಪೂಜೆಯನ್ನು ಮಾಡಿದನು. ಅಮೇಲೆ ಶ್ರೇಷ್ಠವಾದ ಆ ದೇವಿಯ ಪೂಜೆಯು ಮೂರು ಲೋಕದಲ್ಲಿಯೂ ಹರಡಿತು. ॥೧೩॥

ದೀಪಾನ್ವಿತಾ ಪರದಿನೇ ಶ್ರೀಕೃಷ್ಣಸ್ಯಾಜ್ಞಯಾ ಹರೇಃ ।
ಬಭೂವ ಸುರಭಿಃ ಪೂಜ್ಯಾ ಧರ್ಮವಕ್ತ್ರಾದಿದಂ ಶ್ರುತಂ ॥೧೪॥

ಧ್ಯಾನಂ ಸ್ತೋತ್ರಂ ಮೂಲಮಂತ್ರಂ ಯದ್ಯತ್ಪೂಜಾವಿಧಿಕ್ರಮಂ ।
ವೇದೋಕ್ತಂ ಚ ಮಹಾಭಾಗ ನಿಬೋಧ ಕಥಯಾಮಿ ತೇ ॥೧೫॥

ಓಂ ಸುರಭ್ಯೈ ನಮ ಇತಿ ಮಂತ್ರಸ್ತಸ್ಯಾಃ ಷಡಕ್ಷರಃ ।
ಸಿದ್ಧೋ ಲಕ್ಷಜಪೇನೈವ ಭಕ್ತಾನಾಂ ಕಲ್ಪಪಾದಪಃ ॥೧೬॥

ಧ್ಯಾನಂ ಯಜುರ್ವೇದ ಗತಂ ತಸ್ಯಾಃ ಪೂಜಾ ಚ ಸರ್ವತಃ ।
ಬುದ್ಧಿದಾ ವೃದ್ಧಿದಾ ಚೈವ ಮುಕ್ತಿದಾ ಸರ್ವಕಾಮದಾ ॥೧೭॥

ಲಕ್ಷ್ಮೀಸ್ವರೂಪಾಂ ಪರಮಾಂ ರಾಧಾಂ ಸಹಚರೀಂ ಪರಾಂ ।
ಗವಾಮಧಿಷ್ಠಾತೃದೇವೀಂ ಗವಾಮಾದ್ಯಾಂ ಗವಾಂ ಪ್ರಸೂಂ ॥೧೮॥

---

ಆಶ್ವಯುಜ ಕೃಷ್ಣ ಅಮಾವಾಸ್ಯಾದಿನ ದೀಪಾವಳಿಯು. ಅದರ ಮಾರನೆಯ ದಿನದಲ್ಲಿ ಶ್ರೀಕೃಷ್ಣನ ಅಪ್ಪಣೆಯಿಂದ ಸುರಭಿಪೂಜೆಯನ್ನು ಮಾಡಬೇಕೆಂಬ ವಿಧಿಯು ಮೂರು ಲೋಕದಲ್ಲಿಯೂ ಹರಡಿತೆಂದು ನನ್ನ ತಂದೆಯಾದ ಧರ್ಮದೇವನು ಹೇಳಿದನು. ॥೧೪॥

ಪುಣ್ಯವಂತನಾದ ನಾರದನೇ, ವೇದೋಕ್ತವಾದ ಸುರಭಿದೇವಿಯ ಧ್ಯಾನವನ್ನೂ, ಸ್ತೋತ್ರವನ್ನೂ, ಮೂಲಮಂತ್ರವನ್ನೂ, ಪೂಜಾವಿಧಿಯನ್ನೂ, ನಿನಗೆ ಹೇಳುವೆನು ಕೇಳು. ॥೧೫॥

ಓಂ ಸುರಭ್ಯೈ ನಮಃ ಎಂಬ ಆರು ಅಕ್ಷರದ ಮಂತ್ರವು ಭಕ್ತರಿಗೆ ಕಲ್ಪವೃಕ್ಷ ಸ್ವರೂಪವಾದುದು. ಒಂದುಲಕ್ಷ ಜಪಮಾಡಿದರೆ ಈ ಮಂತ್ರಸಿದ್ಧಿಯಾಗುವುದು.॥೧೬॥

ಆ ದೇವಿಯ ಧ್ಯಾನವೂ, ಪೂಜೆಯೂ, ಯಜುರ್ವೇದದಲ್ಲಿ ಹೇಳಿರುವುದು. ಅದು ಒಳ್ಳೆಯಬುದ್ಧಿಯನ್ನೂ, ಸಂಪತ್ಸಮೃದ್ಧಿಯನ್ನೂ, ಶ್ರೇಯೋಽಭಿವೃದ್ಧಿಯನ್ನೂ, ಮೋಕ್ಷವನ್ನೂ ಸಕಲ ಇಷ್ಟಾರ್ಥಗಳನ್ನೂ ಕೊಡತಕ್ಕುದು. ॥೧೭॥

ಸಂಪತ್ತಿನ ಸ್ವರೂಪಳಾದ, ಮೂಲಪ್ರಕೃತಿಯ ಸ್ವರೂಪಳಾದ, ರಾಧಾದೇವಿಯ ಸಖಿಯಾದ, ಗೋವುಗಳಿಗೆಲ್ಲಕ್ಕೂ ಆಶ್ರಯದೇವತೆಯೂ, ಗೋವುಗಳಿಗೆ ತಾಯಿಯೂ ಆದ, ತಾನೂ ಪರಿಶುದ್ಧವಾಗಿ ಇತರ ವಸ್ತುಗಳನ್ನೂ ಶುದ್ಧಿಮಾಡತಕ್ಕವಳಾಗಿ,

ಪವಿತ್ರರೂಪಾಂ ಪೂತಾಂ ಚ ಭಕ್ತಾನಾಂ ಸರ್ವಕಾಮದಾಂ ।
ಯಯಾ ಪೂತಂ ಸರ್ವವಿಶ್ವಂ ತಾಂ ದೇವೀಂ ಸುರಭಿಂ ಭಜೇ ॥೧೯॥

ಘಟೇ ವಾ ಧೇನುಶಿರಸಿ ಬಂಧಸ್ತಂಭೇ ಗವಾಮಪಿ ।
ಶಾಲಗ್ರಾಮೇ ಜಲಾಗ್ನೌ ವಾ ಸುರಭಿಂ ಪೂಜಯೇದ್ದ್ವಿಜಃ ॥೨೦॥

ದೀಪಾನ್ವಿತಾ ಪರದಿನೇ ಪೂರ್ವಾಹ್ಣೇ ಭಕ್ತಿಸಂಯುತಃ ।
ಯಃ ಪೂಜಯೇಚ್ಚ ಸುರಭಿಂ ಸ ಚ ಪೂಜ್ಯೋ ಭವೇದ್ಭುವಿ ॥೨೧॥

ಏಕದಾ ತ್ರಿಷು ಲೋಕೇಷು ವಾರಾಹೇ ವಿಷ್ಣುಮಾಯಯಾ ।
ಕ್ಷೀರಂ ಜಹಾರ ಸುರಭಿಶ್ಚಿಂತಿತಾಶ್ಚ ಸುರಾದಯಃ ॥೨೨॥

ತೇ ಗತ್ವಾ ಬ್ರಹ್ಮಲೋಕೇ ಚ ಬ್ರಹ್ಮಾಣಂ ತುಷ್ಟುವುಸ್ತದಾ ।
ತದಾಜ್ಞಯಾ ಚ ಸುರಭಿಂ ತುಷ್ಟಾವ ಪಾಕಶಾಸನಃ ॥೨೩॥

---

ಭಕ್ತರ ಸಮಸ್ತ ಇಷ್ಟಾರ್ಥಗಳನ್ನು ಕೊಡುವ ಪ್ರಪಂಚವನ್ನೇ ಪಾವನಮಾಡುವ, ಸುರಭಿದೇವಿಯನ್ನು ಧ್ಯಾನಮಾಡುವೆನು. ಇದು ಧ್ಯಾನಮಂತ್ರವಾಗಿರುವುದು. ॥೧೪-೧೯॥

ಕಲಶದಲ್ಲಿಯಾಗಲೀ, ಹಸುವಿನ ತಲೆಯಮೇಲಾಗಲೀ, ಹಸುವನ್ನು ಕಟ್ಟುವ ಕಂಬದಲ್ಲಿಯಾಗಲೀ, ಶಾಲಗ್ರಾಮ, ನೀರು, ಅಗ್ನಿ ಇವುಗಳಲ್ಲಾಗಲೀ, ಬ್ರಾಹ್ಮಣನಾದವನು ಸುರಭಿದೇವಿಯನ್ನು ಪೂಜಿಸಬೇಕು. ॥೨೦॥

ದೀಪಾವಳಿಯ ಮಾರನೇ ದಿನ ಮಧ್ಯಾಹ್ನಕ್ಕೆ ಮುಂಚಿತವಾಗಿಯೇ ಭಕ್ತಿಯಿಂದ ಸುರಭಿಯನ್ನು ಯಾರು ಪೂಜಿಸುವರೋ ಅವರು ಭೂಮಂಡಲದಲ್ಲಿ ಪೂಜ್ಯರಾಗುವರು. ॥೨೧॥

ವರಾಹಕಲ್ಪದಲ್ಲಿ ಒಂದು ದಿನ ವಿಷ್ಣುಮಾಯೆಯಿಂದ ಸುರಭಿಯು ಹಾಲನ್ನು ಕೊಡಲಿಲ್ಲ. ದೇವತೆಗಳೇ ಮೊದಲಾದವರೆಲ್ಲರೂ ಚಿಂತೆಯಿಂದ ಕೂಡಿದರು. ॥೨೨॥

ಆ ದೇವತೆಗಳೆಲ್ಲರೂ ಬ್ರಹ್ಮಲೋಕಕ್ಕೆ ಹೋಗಿ ಬ್ರಹ್ಮನನ್ನು ಸ್ತೋತ್ರ ಮಾಡಿದರು. ಆ ಬ್ರಹ್ಮನ ಅಪ್ಪಣೆಯಿಂದ ದೇವೇಂದ್ರನು ಸುರಭಿಯನ್ನು ಸ್ತೋತ್ರ ಮಾಡಿದನು ॥೨೩॥

॥ ಪುರಂದರ ಉವಾಚ ॥

**ನಮೋ ದೇವ್ಯೈ ಮಹಾದೇವ್ಯೈ ಸುರಭ್ಯೈ ಚ ನಮೋ ನಮಃ ।**
**ಗವಾಂ ಬೀಜಸ್ವರೂಪಾಯೈ ನಮಸ್ತೇ ಜಗದಂಬಿಕೇ ॥೨೪॥**

**ನಮೋ ರಾಧಾಪ್ರಿಯಾಯೈ ಚ ಪದ್ಮಾಂಶಾಯೈ ನಮೋ ನಮಃ ।**
**ನಮಃ ಕೃಷ್ಣಪ್ರಿಯಾಯೈ ಚ ಗವಾಂ ಮಾತ್ರೇ ನಮೋ ನಮಃ ॥೨೫॥**

**ಕಲ್ಪವೃಕ್ಷಸ್ವರೂಪಾಯೈ ಸರ್ವೇಷಾಂ ಸತತಂ ಪರೇ ।**
**ಕ್ಷೀರದಾಯೈ ಧನದಾಯೈ ಬುದ್ಧಿದಾಯೈ ನಮೋ ನಮಃ ॥೨೬॥**

**ಶುಭಾಯೈ ಚ ಸುಭದ್ರಾಯೈ ಗೋಪ್ರದಾಯೈ ನಮೋ ನಮಃ ।**
**ಯಶೋದಾಯೈ ಕೀರ್ತಿದಾಯೈ ಧರ್ಮದಾಯೈ ನಮೋ ನಮಃ॥೨೭॥**

**ಸ್ತೋತ್ರಶ್ರವಣಮಾತ್ರೇಣ ತುಷ್ಟಾ ಹೃಷ್ಟಾ ಜಗತ್ಪ್ರಸೂಃ ।**
**ಆವಿರ್ಬಭೂವ ತತ್ರೈವ ಬ್ರಹ್ಮಲೋಕೇ ಸನಾತನೀ ॥೨೮॥**

---

ಇಂದ್ರನು ಹೇಳಿದನು - ಮೂಲಪ್ರಕೃತಿಯ ಅಂಶಭೂತಳೇ, ಗೋವುಗಳಿಗೆಲ್ಲಕ್ಕೂ ಕಾರಣಸ್ವರೂಪಳೇ, ಲೋಕಕ್ಕೆ ತಾಯಿಯಾದವಳೇ, ಸುರಭಿದೇವಿಯೇ, ನಿನಗೆ ನಮಸ್ಕಾರ ಮಾಡುವೆನು. ॥೨೪॥

ರಾಧಾದೇವಿಗೆ ಪ್ರೀತಿಪಾತ್ರಳಾದವಳೇ, ಲಕ್ಷ್ಮಿಯ ಅಂಶಸ್ವರೂಪಳೇ, ಕೃಷ್ಣನಿಗೆ ಪ್ರೀತಿಪಾತ್ರಳಾದವಳೇ, ಗೋವುಗಳಿಗೆಲ್ಲಕ್ಕೂ ತಾಯಿಯಾದವಳೇ, ನಿನಗೆ ನಮಸ್ಕಾರಮಾಡುವೆನು. ॥೨೫॥

ಕಲ್ಪವೃಕ್ಷಸ್ವರೂಪಳಾದವಳೇ, ಸಮಸ್ತ ವಸ್ತುಗಳಿಗಿಂತಲೂ ಶ್ರೇಷ್ಠಳೇ, ಹಾಲನ್ನೂ, ಹಣವನ್ನೂ, ಬುದ್ಧಿಯನ್ನೂ, ಕೊಡತಕ್ಕವಳೇ, ನಿನಗೆ ನಮಸ್ಕಾರ ಮಾಡುವೆನು. ॥೨೬॥

ಶುಭವನ್ನೂ, ಅತ್ಯಧಿಕವಾದ ಮಂಗಳವನ್ನೂ, ಗೋವುಗಳನ್ನೂ, ಪ್ರಸಿದ್ಧಿಯನ್ನೂ, ಕೀರ್ತಿಯನ್ನೂ, ಧರ್ಮವನ್ನೂ, ಕೊಡತಕ್ಕವಳಾದ ನಿನಗೆ ನಮಸ್ಕಾರ ಮಾಡುವೆನು. ॥೨೭॥

ಲೋಕಕ್ಕೆ ತಾಯಿಯಾದ ಆ ಸುರಭಿದೇವಿಯು ದೇವೇಂದ್ರನು ಮಾಡಿದ ಸ್ತೋತ್ರವನ್ನು ಕೇಳಿದ ಮಾತ್ರಕ್ಕೆ ತೃಪ್ತಳಾಗಿ ಸಂತೋಷವನ್ನು ಹೊಂದಿದಳು.

**ಮಹೇಂದ್ರಾಯ ವರಂ ದತ್ವಾ ವಾಂಛಿತಂ ಚಾಪಿ ದುರ್ಲಭಂ ।**
**ಜಗಾಮ ಸಾ ಚ ಗೋಲೋಕಂ ಯಯುರ್ದೇವಾದಯೋ ಗೃಹಂ ॥೨೯॥**

**ಬಭೂವ ವಿಶ್ವಂ ಸಹಸಾ ದುಗ್ಧಪೂರ್ಣಂ ಚ ನಾರದ ।**
**ದುಗ್ಧಂ ಘೃತಂ ತತೋ ಯಜ್ಞಸ್ತತಃ ಪ್ರೀತಿಃ ಸುರಸ್ಯ ಚ ॥೩೦॥**

**ಇದಂ ಸ್ತೋತ್ರಂ ಮಹಾಪುಣ್ಯಂ ಭಕ್ತಿಯುಕ್ತಶ್ಚ ಯಃ ಪಠೇತ್ ।**
**ಸ ಗೋಮಾನ್ ಧನವಾಂಶ್ಚೈವ ಕೀರ್ತಿಮಾನ್ಪುತ್ರವಾಂ ಸ್ತಥಾ ॥೩೧॥**

**ಸ ಸ್ನಾತಃ ಸರ್ವತೀರ್ಥೇಷು ಸರ್ವಯಜ್ಞೇಷು ದೀಕ್ಷಿತಃ ।**
**ಇಹ ಲೋಕೇ ಸುಖಂ ಭುಕ್ತ್ವಾ ಯಾತ್ಯಂತೇ ಕೃಷ್ಣಮಂದಿರೇ ॥೩೨॥**

---

ಮೂಲಪ್ರಕೃತಿಸ್ವರೂಪಳಾದ ಆ ದೇವಿಯು ಆಗಲೇ ಆ ಬ್ರಹ್ಮಲೋಕದಲ್ಲಿ ಎಲ್ಲರಿಗೂ ಪ್ರತ್ಯಕ್ಷಳಾದಳು. ॥೨೮॥

ಆ ದೇವಿಯು ದೇವೇಂದ್ರನಿಗೆ ಇತರರಿಂದ ಪಡೆಯಲಸಾಧ್ಯವಾದ ವರವನ್ನು ಕೊಟ್ಟು ಗೋಲೋಕಕ್ಕೆ ಪ್ರಯಾಣಮಾಡಿದಳು. ದೇವತೆಗಳೇ ಮೊದಲಾದವರು ತಮ್ಮ ತಮ್ಮ ಮನೆಗಳಿಗೆ ಹೋದರು. ॥೨೯॥

ನಾರದನೇ, ಒಡನೆಯೇ ಪ್ರಪಂಚದಲ್ಲಿ ಹಾಲು ಸಂಪೂರ್ಣವಾಗಿ ದೊರೆಯಿತು. ಹಾಲಿನಿಂದ ತುಪ್ಪ, ಅದರಿಂದ ಯಜ್ಞ, ಅದರಿಂದ ದೇವತೆಗಳಿಗೆ ಪ್ರೀತಿಯುಂಟಾಗ ಬೇಕಾಗಿರುವುದು. ಆದುದರಿಂದ ದೇವತೆಗಳಿಗೆ ಪ್ರೀತಿಯುಂಟಾಯಿತು. ॥೩೦॥

ಮಹಾಪುಣ್ಯಕರವಾದ ಈ ಸ್ತೋತ್ರವನ್ನು ಭಕ್ತಿಯಿಂದ ಯಾರು ಹೇಳುವರೋ, ಅವರು ಗೋವುಗಳುಳ್ಳವರಾಗಿಯೂ, ಧನವಂತರೂ, ಕೀರ್ತಿವಂತರೂ, ಪುತ್ರವಂತರೂ ಆಗಿ, ಇರುವರು. ॥೩೧॥

ಅವರಿಗೆ ಸಮಸ್ತ ತೀರ್ಥಸ್ನಾನಗಳನ್ನು ಮಾಡಿದ ಫಲವೂ, ಸಕಲ ಯಜ್ಞಗಳನ್ನೂ ನೆರವೇರಿಸಿದ ಫಲವೂ ಬಂದು, ಶರೀರತ್ಯಾಗಮಾಡಿದಮೇಲೆ ಅವರು ಗೋಲೋಕದಲ್ಲಿ ಶ್ರೀಕೃಷ್ಣನ ಸಮೀಪದಲ್ಲಿ ವಾಸಮಾಡುವರು. ॥೩೨॥

**ಸುಚಿರಂ ನಿವಸೇತ್ತತ್ರ ಕರೋತಿ ಕೃಷ್ಣಸೇವನಂ ।**
**ನ ಪುನರ್ಭವನಂ ತತ್ರ ಬ್ರಹ್ಮಪುತ್ರೋ ಭವೇತ್ತತಃ** ॥೩೩॥

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ನವಮಸ್ಕಂಧೇ**
**ಏಕೋನಪಂಚಾಶತ್ತಮೋಽಧ್ಯಾಯಃ**

---

ಅಲ್ಲಿ ಬಹಳಕಾಲ ಕೃಷ್ಣನ ಸೇವೆಯನ್ನು ಮಾಡಿಕೊಂಡಿರುವರು. ಇಂತಹರಿಗೆ ಪುನರ್ಜನ್ಮವಿಲ್ಲ. ಬ್ರಹ್ಮಪುತ್ರನಂತೆ ದಿವ್ಯಜ್ಞಾನಿಯಾಗಿ ಬಳಿಕ ಮೋಕ್ಷವನ್ನು ಪಡೆಯುವರು. ॥೩೩॥

ಇಲ್ಲಿಗೆ ದೇವೀಭಾಗವತಮಹಾಪುರಾಣದ ಒಂಬತ್ತನೆಯ ಸ್ಕಂಧದಲ್ಲಿ
ನಲವತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ನವಮಸ್ಕಂಧೇ

### ॥ ಪಂಚಾಶತ್ತಮೋಽಧ್ಯಾಯಃ ॥

### ಐವತ್ತನೆಯ ಅಧ್ಯಾಯವು

॥ ನಾರದ ಉವಾಚ ॥

**ಶ್ರುತಂ ಸರ್ವಮುಪಾಖ್ಯಾನಂ ಪ್ರಕೃತೀನಾಂ ಯಥಾ ತಥಂ ।**
**ಯಚ್ಛ್ರುತ್ವಾ ಮುಚ್ಯತೇ ಜಂತುರ್ಜನ್ಮಸಂಸಾರಬಂಧನಾತ್ ॥೧॥**

**ಅಧುನಾ ಶ್ರೋತುಮಿಚ್ಛಾಮಿ ರಹಸ್ಯಂ ವೇದಗೋಪಿತಂ ।**
**ರಾಧಾಯಾಶ್ಚೈವ ದುರ್ಗಾಯಾ ವಿಧಾನಂ ಶ್ರುತಿಚೋದಿತಂ ॥೨॥**

**ಮಹಿಮಾ ವರ್ಣಿತೋಽತೀವ ಭವತಾ ಪರಯೋರ್ದ್ವಯೋಃ ।**
**ಶ್ರುತ್ವಾ ತಂ ತದ್ಗತಂ ಚೇತೋ ನ ಕಸ್ಯ ಸ್ಯಾನ್ಮುನೀಶ್ವರ ॥೩॥**

---

ನಾರದನು ಹೇಳಿದನು --- ಮೂಲಪ್ರಕೃತಿಯ ಅಂಶಭೂತರಾದ ದೇವಿಯರ ಎಲ್ಲ ಚರಿತ್ರೆಯನ್ನೂ ಕೇಳಿದೆನು. ಈ ಚರಿತ್ರೆಯನ್ನು ಕೇಳಿದ ಪ್ರಾಣಿಯು ಜನನ ಮರಣರೂಪವಾದ ಸಂಸಾರಬಂಧನವನ್ನು ಕಳೆದುಕೊಳ್ಳುವುದು. ॥೧॥

ಈಗ ವೇದದಲ್ಲಿ ಗೋಪ್ಯವಾಗಿರುವ ರಾಧಾ ಮತ್ತು ದುರ್ಗಾದೇವಿಯರ, ವೇದೋಕ್ತವಾದ ಪೂಜಾವಿಧಾನವೇ ಮೊದಲಾದುವುಗಳನ್ನು ಕೇಳಬೇಕೆಂದು ಅಪೇಕ್ಷಿಸುವೆನು. ॥೨॥

ಎಲೈ ನಾರಾಯಣಮುನಿಯೇ, ಪರಾಪ್ರಕೃತಿಸ್ವರೂಪರಾದ ರಾಧಾ ಮತ್ತು ದುರ್ಗಾದೇವಿಯರ ಮಹಿಮೆಯನ್ನು ನೀನು ವಿಶೇಷವಾಗಿ ವರ್ಣಿಸಿರುವೆ. ಅದನ್ನು ಕೇಳಿದ ಮೇಲೆ ಯಾವನ ಮನಸ್ಸುತಾನೇ ಆ ದೇವಿಯಲ್ಲಿ ಭಕ್ತಿಯಿಂದ ಆಸಕ್ತವಾಗದೇ ಇದ್ದೀತು ? ॥೩॥

ಯಯೋರಂಶಂ ಜಗತ್ಸರ್ವಂ ಯನ್ನಿಯಮ್ಯಂ ಚರಾಚರಂ ।
ಯಯೋರ್ಭಕ್ತ್ಯಾ ಭವೇನ್ಮುಕ್ತಿಸ್ತದ್ವಿಧಾನಂ ವದಾಧುನಾ ॥೪॥

॥ ನಾರಾಯಣ ಉವಾಚ ॥

ಶೃಣು ನಾರದ ವಕ್ಷ್ಯಾಮಿ ರಹಸ್ಯಂ ಶ್ರುತಿನೋದಿತಂ ।
ಯನ್ನ ಕಸ್ಯಾಪಿ ಚಾಖ್ಯಾತಂ ಸಾರಾತ್ಸಾರಂ ಪರಾತ್ಪರಂ ॥೫॥

ಶ್ರುತ್ವಾ ಪರಸ್ಮೈ ನೋ ವಾಚ್ಯಂ ಯತೋಽತೀವ ರಹಸ್ಯಕಂ ।
ಮೂಲಪ್ರಕೃತಿರೂಪಿಣ್ಯಾಃ ಸಂವಿದೋ ಜಗದುದ್ಭವೇ ॥೬॥

ಪ್ರಾದುರ್ಭೂತಂ ಶಕ್ತಿಯುಗ್ಮಂ ಪ್ರಾಣಬುದ್ಧ್ಯಧಿದೈವತಂ ।
ಜೀವಾನಾಂ ಚೈವ ಸರ್ವೇಷಾಂ ನಿಯಂತೃ ಪ್ರೇರಕಂ ಸದಾ ॥೭॥

ತದಧೀನಂ ಜಗತ್ಸರ್ವಂ ವಿರಾಡಾದಿ ಚರಾಚರಂ ।
ಯಾವತ್ತಯೋಃ ಪ್ರಸಾದೇನ ತಾವನ್ಮೋಕ್ಷೋ ಹಿ ದುರ್ಲಭಃ ॥೮॥

---

ಈ ಸಮಸ್ತ ಜಗತ್ತೂ ಯಾವ ರಾಧಾ ದುರ್ಗಾದೇವಿಯರ ಅಂಶಭೂತವಾದುದೋ, ಈ ಎಲ್ಲಾ ಪ್ರಪಂಚವೂ ಯಾರ ಆಜ್ಞೆಗೆ ಒಳಗಾಗಿರುವುದೋ, ಯಾವ ದೇವಿಯರಲ್ಲಿ ಭಕ್ತಿಯನ್ನು ಇಡುವುದರಿಂದ ಮೋಕ್ಷವುಂಟಾಗುವುದೋ, ಆ ದೇವಿಯರ ಮಂತ್ರಾನುಷ್ಠಾನರೂಪವಾದ ವಿಧಿಯನ್ನು ಈಗ ಹೇಳು. ॥೪॥

ನಾರಾಯಣಮುನಿಯು ಹೇಳಿದನು—ಎಲೈ ನಾರದನೇ, ವೇದದಲ್ಲಿ ಹೇಳಿದ ಅಂಶವನ್ನೇ ಹೇಳುವೆನು ಕೇಳು. ಈ ಅಂಶವನ್ನು ಯಾರಿಗೂ ಹೇಳಲಿಲ್ಲ. ಇದು ಅತ್ಯಂತ ಸಾರವಾದುದು ಮತ್ತು ಶ್ರೇಷ್ಠವಾದುದು. ॥೫॥

ಇದು ಅತ್ಯಂತ ಗುಟ್ಟಾದುದರಿಂದ ಇದನ್ನು ನೀನು ಕೇಳಿ ಇತರರಿಗೆ ಹೇಳಬಾರದು. ಮೂಲಪ್ರಕೃತಿಯೂ, ಶ್ರೇಷ್ಠವಾದ ಜ್ಞಾನಸ್ವರೂಪಳೂ, ಆದ ಭುವನೇಶ್ವರಿಯ ದೆಸೆಯಿಂದ ಪ್ರಪಂಚವು ಉತ್ಪತ್ತಿಯಾಗಲಾಗಿ ಸಮಷ್ಟಿವ್ಯಷ್ಟಿಪ್ರಾಣಗಳಿಗೆ ಅಧಿದೇವತೆಯಾದ ರಾಧಾಶಕ್ತಿರೂಪವೂ ಹಾಗೆಯೇ ಸಮಷ್ಟಿವ್ಯಷ್ಟಿಬುದ್ಧಿಗಳಿಗೆ ಅಧಿದೇವತೆಯಾದ ದುರ್ಗಾಶಕ್ತಿರೂಪವೂ ಎಂಬೆರಡು ಶಕ್ತಿಗಳು ವ್ಯಕ್ತವಾದವು. ॥೬॥

ಈ ಎರಡು ಶಕ್ತಿಗಳೂ, ಯಾವಾಗಲೂ, ಜೀವರುಗಳನ್ನು ನಿಯಮನ ಮಾಡಿ ಅವರನ್ನು ಕಾರ್ಯದಲ್ಲಿ ಪ್ರೇರಿಸುವುವು. ವಿರಾಟ್ಪುರುಷನೇ ಮೊದಲಾದ ಸಮಸ್ತ

ತತಸ್ತಯೋಃ ಪ್ರಸಾದಾರ್ಥಂ ನಿತ್ಯಂ ಸೇವೇತ ತದ್ದ್ವಯಂ ।
ತತ್ರಾದೌ ರಾಧಿಕಾಮಂತ್ರಂ ಶೃಣು ನಾರದ ಭಕ್ತಿತಃ ॥೯॥

ಬ್ರಹ್ಮವಿಷ್ಣ್ವಾದಿಭಿರ್ನಿತ್ಯಂ ಸೇವಿತೋ ಯಃ ಪರಾತ್ಪರಃ ।
ಶ್ರೀರಾಧೇತಿ ಚತುರ್ಥ್ಯಂತಂ ವಹ್ನಿಜಾಯಾ ತತಃ ಪರಂ ॥೧೦॥

ಷಡಕ್ಷರೋ ಮಹಾಮಂತ್ರೋ ಧರ್ಮಾದ್ಯರ್ಥಪ್ರಕಾಶಕಃ ।
ಮಾಯಾಬೀಜಾದಿಕಶ್ಚಾಯಂ ವಾಂಛಾಚಿಂತಾಮಣಿಃ ಸ್ಮೃತಃ ॥೧೧॥

ವಕ್ತ್ರಕೋಟಿಸಹಸ್ರೈಸ್ತು ಜಿಹ್ವಾಕೋಟಿಶತೈರಪಿ ।
ಏತನ್ಮಂತ್ರಸ್ಯ ಮಾಹಾತ್ಮ್ಯಂ ವರ್ಣಿತುಂ ನೈವ ಶಕ್ಯತೇ ॥೧೨॥

---

ಚರಾಚರಪ್ರಪಂಚವೂ ಆ ಎರಡು ಶಕ್ತಿಗಳ ಅಧೀನವಾಗಿರುವುದು. ಯೋಗವು ಬುದ್ಧಿ ಮತ್ತು ಪ್ರಾಣ ಇವುಗಳ ಸಂಯಮನಕ್ಕೆ ಒಳಗಾದುದು. ಮೋಕ್ಷವು ಯೋಗಕ್ಕೆ, ವಿಚಾರಕ್ಕೆ, ಅಧೀನವಾದುದು. ಆದುದರಿಂದ ಬುದ್ಧಿ ಪ್ರಾಣಾಧಿದೇವತೆಗಳ ಅನುಗ್ರಹ ವಿಲ್ಲದೆ ಮೋಕ್ಷವು ದೊರೆಯಲಾರದೆಂದು ಮುಖ್ಯಾಭಿಪ್ರಾಯವು. ॥೭-೮॥

ಆದುದರಿಂದ ಆ ಇಬ್ಬರು ಶಕ್ತಿದೇವಿಯರ ಅನುಗ್ರಹಕ್ಕಾಗಿ ಪ್ರತಿದಿನವೂ ಅವರಿಬ್ಬರನ್ನೂ ಸೇವಿಸಬೇಕು. ನಾರದನೇ, ಮೊದಲು ರಾಧಾದೇವಿಯ ಮಂತ್ರವನ್ನು ಹೇಳುವೆನು. ಭಕ್ತಿಯಿಂದ ಕೇಳು. ॥೯॥

ಅತ್ಯಂತ ಶ್ರೇಷ್ಠವಾದ ಆ ಮಹಾಮಂತ್ರವನ್ನು ಬ್ರಹ್ಮ ವಿಷ್ಣು ಮೊದಲಾದ ದೇವತೆಗಳು ಪ್ರತಿದಿನವೂ ಜಪಿಸುವರು, "ಶ್ರೀ ರಾಧಾಯೈ ಸ್ವಾಹಾ" ಎಂದು ಆರು ಅಕ್ಷರವುಳ್ಳ ಈ ಮಹಾಮಂತ್ರವು ಧರ್ಮಾದಿ ನಾಲ್ಕು ಪುರುಷಾರ್ಥಗಳನ್ನುಂಟು ಮಾಡುವುದು. ಈ ಮಂತ್ರದ ಆದಿಯಲ್ಲಿ ಮಾಯಾಬೀಜವಾದ ಹ್ರೀಂಕಾರವನ್ನು ಸೇರಿಸಿ ಜಪಮಾಡಬೇಕು. ಹಾಗೆ ಜಪಮಾಡಿದರೆ ಚಿಂತಾಮಣಿಯಂತೆ ಅದು ಸಮಸ್ತ ಇಷ್ಟಾರ್ಥಗಳನ್ನೂ ಕೊಡುವುದು. ॥೧೦-೧೧॥

ಸಾವಿರಕೋಟಿ ಬಾಯಿಗಳಿಂದಲೂ, ನೂರುಕೋಟಿ ನಾಲಿಗೆಗಳಿಂದಲೂ, ಈ ಮಂತ್ರದ ಮಹಿಮೆಯನ್ನು ವರ್ಣಿಸಲು ಸಾಧ್ಯವಾಗುವುದಿಲ್ಲ. ॥೧೨॥

ಜಗ್ರಾಹ ಪ್ರಥಮೋ ಮಂತ್ರಂ ಶ್ರೀಕೃಷ್ಣೋ ಭಕ್ತಿತತ್ಪರಃ ।
ಉಪದೇಶಾನ್ಮೂಲದೇವ್ಯಾ ಗೋಲೋಕೇ ರಾಸಮಂಡಲೇ ॥೧೩॥

ವಿಷ್ಣುಸ್ತೇನೋಪದಿಷ್ಟಸ್ತು ತೇನ ಬ್ರಹ್ಮಾ ವಿರಾಟ್ತಥಾ ।
ತೇನ ಧರ್ಮಸ್ತೇನ ಚಾಪ ಮಿತ್ಯೇಷಾ ಹಿ ಪರಂಪರಾ ॥೧೪॥

ಅಹಂ ಜಾನಾಮಿ ತಂ ಮಂತ್ರಂ ತೇನಾಹಮ್ಮೃಷಿರೀರಿತಃ ।
ಬ್ರಹ್ಮಾದ್ಯಾಃ ಸಕಲಾ ದೇವಾ ನಿತ್ಯಂ ಧ್ಯಾಯಂತಿ ತಾಂ ಮುದಾ॥೧೫॥

ಕೃಷ್ಣಾರ್ಚಾಯಾಂ ನಾಧಿಕಾರೋ ಯತೋ ರಾಧಾರ್ಚನಂ ವಿನಾ ।
ವೈಷ್ಣವೈಃ ಸಕಲೈಸ್ತಸ್ಮಾತ್ಕರ್ತವ್ಯಂ ರಾಧಿಕಾರ್ಚನಂ ॥೧೬॥

ಕೃಷ್ಣಪ್ರಾಣಾಧಿದೇವೀ ಸಾ ತದಧೀನೋ ವಿಭುರ್ಯತಃ ।
ರಾಸೇಶ್ವರೀ ತಸ್ಯ ನಿತ್ಯಂ ತಯಾ ಹೀನೋ ನ ತಿಷ್ಠತಿ ॥೧೭॥

---

ಗೋಲೋಕದಲ್ಲಿ ರಾಸಮಂಡಲದಲ್ಲಿ ಮೂಲಪ್ರಕೃತಿಯಾದ ಭುವನೇಶ್ವರೀ ದೇವಿಯು ಆಕಾಶವಾಣಿಯಿಂದ ಈ ಮಂತ್ರವನ್ನು ಶ್ರೀಕೃಷ್ಣನಿಗೆ ಮೊದಲು ಉಪದೇಶಿಸಿದಳು. ಆ ಶ್ರೀಕೃಷ್ಣನು ಭಕ್ತಿಯಿಂದ ಕೂಡಿ ಮೊದಲು ಮಂತ್ರದ ಉಪದೇಶವನ್ನು ಸ್ವೀಕರಿಸಿದನು. ||೧೩||

ಆ ಕೃಷ್ಣನು ವಿಷ್ಣುವಿಗೂ, ವಿಷ್ಣುವು ಬ್ರಹ್ಮನಿಗೂ, ಬ್ರಹ್ಮನು ವಿರಾಟ್ಪುರುಷನಿಗೂ, ಆ ವಿರಾಟ್ಪುರುಷನಿಂದ ಧರ್ಮನಿಗೂ, ಧರ್ಮನು ನನಗೂ, ಪರಂಪರೆಯಾಗಿ ಈ ಮಂತ್ರೋಪದೇಶವನ್ನು ಮಾಡಿರುವರು. ||೧೪||

ಆ ಮಂತ್ರವನ್ನು ನಾನು ಜಪಮಾಡುತ್ತೇನೆ. ಆದುದರಿಂದಲೇ ನನಗೆ ಋಷಿ ಎಂದು ಹೆಸರು ಬಂದಿರುವುದು. ಬ್ರಹ್ಮನೇ ಮೊದಲಾದ ಸಮಸ್ತ ದೇವತೆಗಳೂ, ಆ ಮಂತ್ರವನ್ನು ಸಂತೋಷದಿಂದ ಜಪಿಸುವರು. ||೧೫||

ರಾಧಾದೇವಿಯ ಪೂಜೆಯಿಲ್ಲದೆ ಕೃಷ್ಣನ ಪೂಜೆಗೆ ಅಧಿಕಾರವು ಒರುವುದಿಲ್ಲವಾದುದರಿಂದ ಸಮಸ್ತವೈಷ್ಣವರೂ, ರಾಧಾದೇವಿಯ ಪೂಜೆಯನ್ನು ಮಾಡಬೇಕು. ||೧೬||

ರಾಧೆಯು ಕೃಷ್ಣನ ಪ್ರಾಣಾಧಿದೇವತೆಯಾಗಿರುವಳು. ಆ ಕೃಷ್ಣನು ರಾಧೆಯ ಅಧೀನವಾಗಿರುವನು. ಆದುದರಿಂದ ಯಾವಾಗಲೂ ಆ ಕೃಷ್ಣನಿಗೆ **ರಾಧೆಯು**

ರಾಧ್ನೋತಿ ಸಕಲಾನ್ಕಾಮಾಂಸ್ತಸ್ಮಾದ್ರಾಧೇತಿ ಕೀರ್ತಿತಾ ।
ಅತ್ರೋಕ್ತಾನಾಂ ಮನೂನಾಂ ಚ ಋಷಿರಸ್ಮ್ಯಹಮೇವ ಚ ॥೧೮॥

ಛಂದಶ್ಚ ದೇವೀ ಗಾಯತ್ರೀ ದೇವತಾತ್ರ ಚ ರಾಧಿಕಾ ।
ತಾರೋ ಬೀಜಂ ಶಕ್ತಿಬೀಜಂ ಶಕ್ತಿಸ್ತು ಪರಿಕೀರ್ತಿತಾ ॥೧೯॥

ಮೂಲಾವೃತ್ತ್ಯಾ ಷಡಂಗಾನಿ ಕರ್ತವ್ಯಾ ನೀತಿರತ್ರ ಚ ।
ಅಥ ಧ್ಯಾಯೇನ್ಮಹಾದೇವೀಂ ರಾಧಿಕಾಂ ರಾಸನಾಯಿಕಾಂ ॥೨೦॥

ಪೂರ್ವೋಕ್ತರೀತ್ಯಾ ತು ಮುನೇ ಸಾಮವೇದನಿಗೀತಯಾ ।
ಶ್ವೇತಚಂಪಕವರ್ಣಾಭಾಂ ಶರದಿಂದುಸಮಾನನಾಂ ॥೨೧॥

ಕೋಟಿಚಂದ್ರಪ್ರತೀಕಾಶಾಂ ಶರದಂಭೋಜಲೋಚನಾಂ ।
ಬಿಂಬಾಧರಾಂ ಪೃಥುಶ್ರೋಣೀಂ ಕಾಂಚೀಯುತನಿತಂಬಿನೀಂ ॥೨೨॥

---

ರಾಸಕ್ರೀಡೆಯಲ್ಲಿ ಮುಖ್ಯಳಾಗಿರುವುದರಿಂದ, ಅವನು ಅವಳನ್ನು ಯಾವಾಗಲೂ ಬಿಟ್ಟು ಇರುವುದಿಲ್ಲ. ॥೧೭॥

ಸಮಸ್ತ ಇಷ್ಟಾರ್ಥಗಳನ್ನೂ ಸಾಧನೆಮಾಡಿಕೊಡತಕ್ಕವಳಾದುದರಿಂದ ರಾಧೆ ಎಂಬ ಹೆಸರು ಬಂದಿರುವುದು. ಈ ನವಮಸ್ಕಂಧದಲ್ಲಿ ಹೇಳಿರುವ ದುರ್ಗಾಮಂತ್ರವನ್ನು ಬಿಟ್ಟು ಮಿಕ್ಕ ಸಮಸ್ತ ಮಂತ್ರಗಳಿಗೂ, ನಾರಾಯಣನೆಂಬ ಹೆಸರುಳ್ಳ ನಾನೇ ಋಷಿಯು. ॥೧೮॥

ಈ ಮಂತ್ರಕ್ಕೆ ದೇವೀಗಾಯತ್ರಿಯೇ ಛಂದಸ್ಸು, ರಾಧೆಯೇ ದೇವತೆಯು. ಓಂಕಾರವೇ ಬೀಜವು. ಭುವನೇಶ್ವರಿಯೇ ಶಕ್ತಿಯು. ಮೂಲಮಂತ್ರವನ್ನು ಆರಾವೃತ್ತಿ ಜಪಮಾಡಿ, ಆರು ಅಂಗನ್ಯಾಸಗಳನ್ನು ಮಾಡಬೇಕು. ಆಮೇಲೆ ರಾಸಮಂಡಲಕ್ಕೆ ದೇವತೆಯಾದ ರಾಧಾದೇವಿಯನ್ನು, ಹಿಂದೆ ಹೇಳಿದ ರೀತಿಯಿಂದ ಸಾಮವೇದದಲ್ಲಿ ಹೇಳದಂತೆ ಧ್ಯಾನಮಾಡಬೇಕು. ॥೧೯-೨೦॥

ಬಿಳಿಯ ಸಂಪಿಗೆಯ ಬಣ್ಣದಂತೆ ಮೈಬಣ್ಣವುಳ್ಳ, ಶರತ್ಕಾಲದ ಚಂದ್ರನಿಗೆ ಸಮಾನವಾದ ಮುಖವುಳ್ಳ, ಅನೇಕ ಚಂದ್ರರಿಗೆ ಸಮಾನವಾದ ಕಾಂತಿಯುಳ್ಳ, ಶರತ್ಕಾಲದ ಕಮಲದಂತೆ ಕಣ್ಣುಗಳುಳ್ಳ, ತೊಂಡೆಯಹಣ್ಣಿನಂತೆ ತುಟಿಗಳುಳ್ಳ,

ಕುಂದಪಂಕ್ತಿಸಮಾನಾಭ ದಂತಪಂಕ್ತಿವಿರಾಜಿತಾಂ ।
ಕ್ಷೌಮಾಂಬರಪರೀಧಾನಾಂ ವಹ್ನಿಶುದ್ಧಾಂಶುಕಾನ್ವಿತಾಂ ॥೨೩॥

ಈಷದ್ಧಾಸ್ಯಪ್ರಸನ್ನಾಸ್ಯಾಂ ಕರಿಕುಂಭಯುಗಸ್ತನೀಂ ।
ಸದಾ ದ್ವಾದಶವರ್ಷೀಯಾಂ ರತ್ನಭೂಷಣಭೂಷಿತಾಂ ॥೨೪॥

ಶೃಂಗಾರಸಿಂಧುಲಹರೀಂ ಭಕ್ತಾನುಗ್ರಹಕಾತರಾಂ ।
ಮಲ್ಲಿಕಾಮಾಲತೀಮಾಲಾ ಕೇಶಪಾಶವಿರಾಜಿತಾಂ ॥೨೫॥

ಸುಕುಮಾರಾಂಗಲತಿಕಾಂ ರಾಸಮಂಡಲಮಧ್ಯಗಾಂ ।
ವರಾಭಯಕರಾಂ ಶಾಂತಾಂ ಶಶ್ವತ್ಸುಸ್ಥಿರಯೌವನಾಂ ॥೨೬॥

ರತ್ನಸಿಂಹಾಸನಾಸೀನಾಂ ಗೋಪೀಮಂಡಲನಾಯಿಕಾಂ ।
ಕೃಷ್ಣಪ್ರಾಣಾಧಿಕಾಂ ವೇದಬೋಧಿತಾಂ ಪರಮೇಶ್ವರೀಂ ॥೨೭॥

---

ಪುಷ್ಟವಾದ ಪೃಷ್ಠದೇಶವುಳ್ಳ, ಒಡ್ಯಾಣದಿಂದ ಕೂಡಿದ ಸೊಂಟವುಳ್ಳ, ಮಲ್ಲಿಗೆಯ ಮೊಗ್ಗಿನ ಸಾಲಿನಂತಿರುವ ಹಲ್ಲಿನ ಸಾಲಿನಿಂದ ಶೋಭಿಸುತ್ತಿರುವ, ಅಗ್ನಿಯಂತೆ ಪರಿಶುದ್ಧವಾದ ರೇಷ್ಮೆಯ ವಸ್ತ್ರವನ್ನುಟ್ಟಿರುವ, ॥೨೧-೨೨-೨೩॥

ಮುಗುಳುನಗೆಯಿಂದ ಪ್ರಸನ್ನವಾದ ಮುಖವುಳ್ಳ, ಆನೆಯ ಕುಂಭಸ್ಥಳದಂತಿರುವ ಸ್ತನಗಳುಳ್ಳ, ಯಾವಾಗಲೂ ಹನ್ನೆರಡುವರ್ಷದವಳಂತೆ ಕಾಣುತ್ತಿರುವ, ರತ್ನಾಭರಣಗಳನ್ನಲಂಕರಿಸಿಕೊಂಡಿರುವ, ಶೃಂಗಾರವೆಂಬ ನದಿಯ ಪ್ರವಾಹಸ್ವರೂಪಳಾದ, ಭಕ್ತರಿಗೆ ಅನುಗ್ರಹಮಾಡುವುದರಲ್ಲಿ ಆಸಕ್ತಳಾದ, ಮಲ್ಲಿಗೆ, ಇರುವಂತಿಗೆ ಹೂಗಳ ಸರಗಳನ್ನು ತಲೆಯಲ್ಲಿ ಮುಡಿದಿರುವ, ॥೨೪-೨೫॥

ಕೋಮಲವಾದ ಲತೆಯಂತೆ ಇರುವ ಶರೀರವುಳ್ಳ, ರಾಸಮಂಡಲದ ಮಧ್ಯದಲ್ಲಿರುವ, ವರದ, ಮತ್ತು, ಅಭಯಹಸ್ತವುಳ್ಳ, ಶಾಂತಸ್ವರೂಪಳಾದ, ಶಾಶ್ವತವಾದ ಪ್ರಾಯವುಳ್ಳ, ಗೋಪಿಯರ ಸಮೂಹಕ್ಕೆ ಅಧಿಪತಿಯಾದ, ಕೃಷ್ಣನಿಗೆ ಪ್ರಾಣಕ್ಕಿಂತಲೂ, ಹೆಚ್ಚು ಪ್ರೀತಿಪಾತ್ರಳಾದ, ರತ್ನಖಚಿತವಾದ ಸಿಂಹಾಸನದಲ್ಲಿ ಕುಳಿತಿರುವ, ವೇದದಲ್ಲಿ ವರ್ಣಿಸಿರುವ ಬ್ರಹ್ಮಸ್ವರೂಪಳಾದ ದೇವಿಯನ್ನು ಧ್ಯಾನಿಸುತ್ತೇನೆ. ॥೨೬-೨೭॥

ಏವಂ ಧ್ಯಾತ್ವಾ ತತೋ ಬಾಹ್ಯೇ ಶಾಲಗ್ರಾಮೇ ಘಟೇಽಥವಾ ।
ಯಂತ್ರೇ ವಾಽಷ್ಟದಲೇ ದೇವೀಂ ಪೂಜಯೇತ್ತು ವಿಧಾನತಃ ॥೨೮॥

ಆವಾಹ್ಯ ದೇವೀಂ ತತ್ಪಶ್ಚಾದಾಸನಾದಿ ಪ್ರದೀಯತಾಂ ।
ಮೂಲಮಂತ್ರಂ ಸಮುಚ್ಚಾರ್ಯ ಚಾಸನಾದೀನಿ ಕಲ್ಪಯೇತ್॥೨೯॥

ಪಾದ್ಯಂ ತು ಪಾದಯೋರ್ದದ್ಯಾನ್ಮಸ್ತಕೇಽರ್ಘ್ಯಂ ಸಮೀರಿತಂ ।
ಮುಖೇ ತ್ವಾಚಮನೀಯಂ ಸ್ಯಾತ್ರಿವಾರಂ ಮೂಲವಿದ್ಯಯಾ ॥೩೦॥

ಮಧುಪರ್ಕಂ ತತೋ ದದ್ಯಾದೇಕಾಂ ಗಾಂ ಚ ಪಯಸ್ವಿನೀಂ ।
ತತೋ ನಯೇತ್ಸ್ನಾನಶಾಲಾಂ ತಾಂ ಚ ತತ್ರೈವ ಭಾವಯೇತ್॥೩೧॥

---

ಈ ರೀತಿಯಾಗಿ ದೇವಿಯನ್ನು ಮನದಲ್ಲಿ ಧ್ಯಾನಿಸಿ ತರುವಾಯ ಬಾಹ್ಯದಲ್ಲಿ ಸಾಲಗ್ರಾಮದಲ್ಲಿಯಾಗಲೀ, ಕಲಶದಲ್ಲಿಯಾಗಲೀ, ಅಷ್ಟದಳಗಳಿಂದ ಕೂಡಿದ ಯಂತ್ರದಲ್ಲಿಯಾಗಲೀ, ವಿಧಿಗನುಸಾರವಾಗಿ ರಾಧಾದೇವಿಯನ್ನು ಪೂಜಿಸಬೇಕು. ||೨೮||

ಆಮೇಲೆ ದೇವಿಯನ್ನು ಆವಾಹನ ಮಾಡಿ ಆಸನಾದಿಗಳನ್ನು ಸಮರ್ಪಿಸಬೇಕು. ಮೂಲಮಂತ್ರವನ್ನುಚ್ಚರಿಸಿ ಆಸನಾದಿಉಪಚಾರಗಳನ್ನು ಕಲ್ಪಿಸಬೇಕು ||೨೯||

ಪಾದ್ಯವನ್ನು ಪಾದಗಳಲ್ಲಿ ಸಮರ್ಪಿಸಬೇಕು. ಅರ್ಘ್ಯವನ್ನು ತಲೆಯ ಮೇಲೆಯೂ, ಮೂಲಮಂತ್ರದಿಂದ ಮೂರಾವೃತ್ತಿ ಆಚಮನೀಯವನ್ನು ಬಾಯಿಯ ಸಮೀಪದಲ್ಲಿಯೂ ಸಮರ್ಪಿಸಬೇಕು. ||೩೦||

ಆಮೇಲೆ ಮಧುಪರ್ಕವನ್ನು ಸಮರ್ಪಿಸಿ ಮಧುಪರ್ಕದ ಅಂಗವಾಗಿ ಒಂದು ಕರೆಯುವ ಹಸುವನ್ನು ದಾನಮಾಡಬೇಕು. ಆಮೇಲೆ ದೇವಿಯನ್ನು ಸ್ನಾನಶಾಲೆಗೆ ಕರೆದುಕೊಂಡುಹೋಗಬೇಕು. ಎಂದರೆ ಆ ಯಂತ್ರದಲ್ಲಿಯೇ ಆ ದೇವಿಯನ್ನು ಸ್ನಾನಶಾಲೆಯಲ್ಲಿದ್ದಂತೆ ಭಾವಿಸಬೇಕು. ||೩೧||

**ಅಭ್ಯಂಗಾದಿಸ್ನಾನವಿಧಿಂ ಕಲ್ಪಯಿತ್ವಾಽಥ ವಾಸಸೀ ।**
**ತತಶ್ಚ ಚಂದನಂ ದದ್ಯಾನ್ನಾನಾಲಂಕಾರಪೂರ್ವಕಂ ॥೩೨॥**

**ಪುಷ್ಪಮಾಲಾ ಬಹುವಿಧಾ ತುಲಸೀಮಂಜರೀಯುತಾಃ ।**
**ಪಾರಿಜಾತಪ್ರಸೂನಾನಿ ಶತಪತ್ರಾದಿಕಾನಿ ಚ ॥೩೩॥**

**ತತಃ ಕುರ್ಯಾತ್ಪವಿತ್ರಂ ತತ್ಪರಿವಾರಾರ್ಚನಂ ವಿಭೋಃ ।**
**ಅಗ್ನೀಶಾಸುರವಾಯವ್ಯ ಮಧ್ಯೇ ದಿಕ್ಷ್ವಂಗಪೂಜನಂ ॥೩೪॥**

**ಕೃತ್ವಾ ಪಶ್ಚಾದಷ್ಟದಲೇ ದಕ್ಷಿಣಾವರ್ತತೋಽಗ್ರತಃ ।**
**ಮಾಲಾವತೀಮಗ್ರದಲೇ ವಹ್ನಿ ಕೋಣೇ ಚ ಮಾಧವೀಂ ॥೩೫॥**

**ರತ್ನಮಾಲಾಂ ದಕ್ಷಿಣೇ ಚ ನೈರೃತ್ಯೇ ತು ಸುಶೀಲಕಾಂ ।**
**ಪಶ್ಚಾದ್ದಲೇ ಶಶಿಕಲಾಂ ಪೂಜಯೇನ್ಮತಿಮಾನ್ನರಃ ॥೩೬॥**

**ಮಾರುತೇ ಪಾರಿಜಾತಾಂ ಚಾಪ್ಯುತ್ತರೇ ಚ ಪರಾವತೀಂ ।**
**ಈಶಾನಕೋಣೇ ಸಂಪೂಜ್ಯಾ ಸುಂದರೀ ಪ್ರಿಯಕಾರಿಣೀ ॥೩೭॥**

---

ಬಳಿಕ ಅಭ್ಯಂಗಸ್ನಾನಾದಿಗಳನ್ನು ಕಲ್ಪಿಸಿ ವಸ್ತ್ರಗಳನ್ನು ಸಮರ್ಪಿಸಿ ಬಗೆಬಗೆಯಾದ ಅಲಂಕಾರಗಳೊಡನೆ ಶ್ರೀಗಂಧವನ್ನು ಸಮರ್ಪಿಸಬೇಕು. ॥೩೨॥

ತುಲಸಿಯ ಗೊಂಚಲುಗಳಿಂದ ಕೂಡಿದ ಅನೇಕಬಗೆಯಾದ ಹೂಮಾಲೆಗಳನ್ನೂ, ಪಾರಿಜಾತ ಮತ್ತೂ ಕಮಲಹೂವುಗಳನ್ನೂ ಸಮರ್ಪಿಸಬೇಕು. ॥೩೩॥

ಆ ಮೇಲೆ ದೇವಿಗೆ ಪರಿಶುದ್ಧವಾದ ಪರಿವಾರಾರ್ಚನೆಯನ್ನು ಮಾಡಬೇಕು. ಆಗ್ನೇಯ, ಈಶಾನ್ಯ, ನೈರೃತ್ಯ, ವಾಯುವ್ಯ, ಮಧ್ಯಪ್ರದೇಶ ಇವುಗಳಲ್ಲಿ ಅಂಗಪೂಜೆಯನ್ನು ಮಾಡಬೇಕು. ॥೩೪॥

ಆ ಮೇಲೆ ಅಷ್ಟದಲಪದ್ಮದಲ್ಲಿ ದೇವಿಯ ಮುಂಭಾಗದಿಂದ ಪ್ರದಕ್ಷಿಣಾಕಾರವಾಗಿ ಪೂರ್ವದಲ್ಲಿ ಮಾಲಾವತಿಯನ್ನೂ, ಆಗ್ನೇಯದಲ್ಲಿ ಮಾಧವಿಯನ್ನೂ ದಕ್ಷಿಣದಲ್ಲಿ ರತ್ನಮಾಲೆಯನ್ನೂ, ನೈರೃತ್ಯದಲ್ಲಿ ಸುಶೀಲೆಯನ್ನೂ ಪಶ್ಚಿಮದಲ್ಲಿ ಶಶಿಕಲೆಯನ್ನೂ ಪೂಜಿಸಬೇಕು. ॥೩೫-೩೬॥

ವಾಯುವ್ಯದಲ್ಲಿ ಪಾರಿಜಾತೆಯನ್ನೂ, ಉತ್ತರದಲ್ಲಿ ಪರಾವತೆಯನ್ನೂ, ಈಶಾನ್ಯದಲ್ಲಿ ಸುಂದರಿಯನ್ನೂ ಪೂಜಿಸಬೇಕು. ॥೩೭॥

ಬ್ರಾಹ್ಮ್ಯಾದಯಸ್ತು ತದ್ಬಾಹ್ಯೇಽಪ್ಯಾಶಾಪಾಲಾಂಸ್ತು ಭೂಪುರೇ ।
ವಜ್ರಾದಿಕಾನ್ಯಾಯುಧಾನಿ ದೇವೀಮಿತ್ಥಂ ಪ್ರಪೂಜಯೇತ್ ॥೩೮॥

ತತೋ ದೇವೀಂ ಸಾವರಣಾಂ ಗಂಧಾದ್ಯೈರುಪಚಾರಕೈಃ ।
ರಾಜೋಪಚಾರಸಹಿತೈಃ ಪೂಜಯೇನ್ಮತಿಮಾನ್ನರಃ ॥೩೯॥

ತತಸ್ತು ವೀತ ದೇವೇಶೀಂ ಸ್ತೋತ್ರೈರ್ನಾಮಸಹಸ್ರಕೈಃ ।
ಸಹಸ್ರಸಂಖ್ಯಂ ಚ ಜಪಂ ನಿತ್ಯಂ ಕುರ್ಯಾತ್ಪ್ರಯತ್ನತಃ ॥೪೦॥

ಯ ಏವಂ ಪೂಜಯೇದ್ದೇವೀಂ ರಾಧಾಂ ರಾಸೇಶ್ವರೀಂ ಪರಾಂ ।
ಸ ಭವೇದ್ವಿಷ್ಣುತುಲ್ಯಸ್ತು ಗೋಲೋಕಂ ಯಾತಿ ಸಂತತಂ ॥೪೧॥

ಯಃ ಕಾರ್ತಿಕ್ಯಾಂ ಪೌರ್ಣಮಾಸ್ಯಾಂ ರಾಧಾಜನ್ಮೋತ್ಸವಂ ಬುಧಃ ।
ಕುರುತೇ ತಸ್ಯ ಸಾನ್ನಿಧ್ಯಂ ದದ್ಯಾದ್ರಾಸೇಶ್ವರೀ ಪರಾ ॥೪೨॥

---

ಅಷ್ಟದಳಪದ್ಮದಿಂದ ಹೊರಗೆ ಬ್ರಾಹ್ಮ್ಯಾದಿಸಪ್ತಮಾತೃಕೆಗಳನ್ನೂ ಅಷ್ಟ ಕೋಣಗಳಲ್ಲಿ ದಿಕ್ಪಾಲಕರನ್ನೂ, ವಜ್ರಾದಿದಶಾಯುಧಗಳನ್ನೂ, ಆವಾಹಿಸಿ ದೇವಿಯನ್ನು ಹೀಗೆ ಪೂಜಿಸಬೇಕು. ॥೩೮॥

ಬುದ್ಧಿವಂತನಾದ ಮನುಜನು ಆವರಣಪೂಜಾಸಹಿತವಾಗಿ ದೇವಿಯನ್ನು ಗಂಧಾದಿಗಳಿಂದ ರಾಜೋಪಚಾರಸಹಿತವಾಗಿ ಪೂಜಿಸಬೇಕು. ॥೩೯॥

ಆಮೇಲೆ ದೇವಿಯನ್ನು ಸಹಸ್ರನಾಮಗಳಿಂದ ಸ್ತೋತ್ರಮಾಡಬೇಕು. ಪ್ರತಿ ದಿನವೂ ದೇವಿಯ ಮೂಲಮಂತ್ರವನ್ನು ಸಹಸ್ರಸಂಖ್ಯೆಯಷ್ಟು ಜಪಮಾಡಬೇಕು. ॥೪೦॥

ಈ ರೀತಿಯಾಗಿ ರಾಸಮಂಡಲಕ್ಕೆ ಅಧಿಪತಿಯಾದ, ಮೂಲಪ್ರಕೃತಿಯ ಅಂಶಭೂತಳಾದ, ರಾಧಾದೇವಿಯನ್ನು ಯಾವನು ಪೂಜಿಸುವನೋ, ಅವನು ವಿಷ್ಣು ಸಮಾನನಾಗಿ, ಶರೀರತ್ಯಾಗಮಾಡಿದ ಮೇಲೆ ಗೋಲೋಕಕ್ಕೆ ಹೋಗುವನು. ॥೪೧॥

ಯಾವನು ಕಾರ್ತಿಕಮಾಸದ ಪೂರ್ಣಿಮೆಯ ದಿನ ರಾಧಾದೇವಿಯ ಜನ್ಮೋತ್ಸವವನ್ನು ಮಾಡುವನೋ ಅವನಿಗೆ ಆ ದೇವಿಯು ಪ್ರತ್ಯಕ್ಷಳಾಗುವಳು. ॥೪೨॥

**ಕೇನಚಿತ್ಕಾರಣೇನೈವ ರಾಧಾ ವೃಂದಾವನೇ ವನೇ ।**
**ವೃಷಭಾನುಸುತಾ ಜಾತಾ ಗೋಲೋಕಸ್ಥಾಯಿನೀ ಸದಾ ॥೪೩॥**

**ಅತ್ರೋಕ್ತಾನಾಂ ತು ಮಂತ್ರಾಣಾಂ ವರ್ಣಸಂಖ್ಯಾವಿಧಾನತಃ ।**
**ಪುರಶ್ಚರಣಕರ್ಮೋಕ್ತಂ ದಶಾಂಶಂ ಹೋಮಮಾಚರೇತ್ ॥೪೪॥**

**ತಿಲೈಸ್ತ್ರಿಸ್ವಾದುಸಂಯುಕ್ತೈರ್ಜುಹುಯಾದ್ಭಕ್ತಿಭಾವತಃ ।**

॥ ನಾರದ ಉವಾಚ ॥

**ಸ್ತೋತ್ರಂ ವದ ಮುನೇ ಸಮ್ಯಕ್ ಯೇನ ದೇವೀ ಪ್ರಸೀದತಿ ॥೪೫॥**

॥ ನಾರಾಯಣ ಉವಾಚ ॥

**ನಮಸ್ತೇ ಪರಮೇಶಾನಿ ರಾಸಮಂಡಲವಾಸಿನಿ**
**ರಾಸೇಶ್ವರಿ ನಮಸ್ತೇಽಸ್ತು ಕೃಷ್ಣಪ್ರಾಣಾಧಿಕಪ್ರಿಯೇ ॥೪೬॥**

---

ಯಾವಾಗಲೂ ಗೋಲೋಕದಲ್ಲಿಯೇ ನೆಲೆಯಾಗಿರುವ ರಾಧಾದೇವಿಯು ಯಾವುದೋ ಕಾರಣದಿಂದ ವೃಂದಾವನದಲ್ಲಿರುವ ವೃಷಭಾನುವೆಂಬ ಗೊಲ್ಲನ ಮಗಳಾಗಿ ಜನಿಸಿದಳು. ॥೪೩॥

ಈ ನವಮಸ್ಕಂಧದಲ್ಲಿ ಹೇಳಿರುವ ಮಂತ್ರಗಳಿಗೆ ವರ್ಣಸಂಖ್ಯಾವಿಧಿಗನುಸಾರವಾಗಿ, ಇಷ್ಟೇ ಪುರಶ್ಚರಣಮಾಡಬೇಕೆಂದು ಹಿಂದೆಯೇ ಹೇಳಿರುತ್ತದೆ. ಎಷ್ಟು ಸಂಖ್ಯೆ ಜಪವೋ, ಅದರ ಹತ್ತನೆಯ ಒಂದುಭಾಗ ಹೋಮವನ್ನು ಎಳ್ಳು ಮತ್ತು ತ್ರಿಸ್ವಾದು ಎಂದರೆ ಹಾಲು ಜೇನುತುಪ್ಪ, ತುಪ್ಪ, ಇವುಗಳಿಂದ ಕೂಡಿ ಭಕ್ತಿಯಿಂದ ಮಾಡಬೇಕು. ॥೪೪॥

ನಾರದನು ಹೇಳಿದನು– ನಾರಾಯಣಮುನಿಯೇ, ಯಾವ ಸ್ತೋತ್ರದಿಂದ ರಾಧಾದೇವಿಯು ಪ್ರಸನ್ನಳಾಗುವಳೋ ಆ ಸ್ತೋತ್ರವನ್ನು ಹೇಳು. ॥೪೫॥

ನಾರಾಯಣನು ಹೇಳಿದನು--ಮೂಲಪ್ರಕೃತಿಸ್ವರೂಪಳೂ, ರಾಸಮಂಡಲದಲ್ಲಿ ರಾಸೇಶ್ವರಿಯಾಗಿರತಕ್ಕವಳಾಗಿ ಕೃಷ್ಣನಿಗೆ ಪ್ರಾಣಕ್ಕಿಂತಲೂ ಹೆಚ್ಚು ಪ್ರೀತಿಪಾತ್ರಳೂ, ಆದ ದೇವಿಯೇ, ನಿನಗೆ ನಮಸ್ಕಾರಮಾಡುವೆನು. ॥೪೬॥

**ನಮಸ್ತ್ರೈಲೋಕ್ಯಜನನಿ ಪ್ರಸೀದ ಕರುಣಾರ್ಣವೇ ।**
**ಬ್ರಹ್ಮವಿಷ್ಣ್ವಾದಿಭಿರ್ದೇವೈರ್ವಂದ್ಯಮಾನಪದಾಂಬುಜೇ ॥೪೭॥**

**ನಮಃ ಸರಸ್ವತೀರೂಪೇ ನಮಃ ಸಾವಿತ್ರಿ ಶಂಕರಿ ।**
**ಗಂಗಾಪದ್ಮಾವತೀರೂಪೇ ಷಷ್ಠೀ ಮಂಗಲಚಂಡಿಕೇ ॥೪೮॥**

**ನಮಸ್ತೇ ತುಲಸೀರೂಪೇ ನಮೋ ಲಕ್ಷ್ಮೀಸ್ವರೂಪಿಣಿ ।**
**ನಮೋ ದುರ್ಗೇ ಭಗವತಿ ನಮಸ್ತೇ ಸರ್ವರೂಪಿಣಿ ॥೪೯॥**

**ಮೂಲಪ್ರಕೃತಿರೂಪಾಂ ತ್ವಾಂ ಭಜಾಮಃ ಕರುಣಾರ್ಣವಾಂ ।**
**ಸಂಸಾರಸಾಗರಾದಸ್ಮಾನುದ್ಧರಾಂಬ ದಯಾಂ ಕುರು ॥೫೦॥**

**ಇದಂ ಸ್ತೋತ್ರಂ ತ್ರಿಸಂಧ್ಯಂ ಯಃ ಪಠೇದ್ರಾಧಾಂ ಸ್ಮರನ್ ನರಃ ।**
**ನ ತಸ್ಯ ದುರ್ಲಭಂ ಕಿಂಚಿತ್ಕದಾಚಿಚ್ಚ ಭವಿಷ್ಯತಿ ॥೫೧॥**

**ದೇಹಾಂತೇ ಚ ವಸೇನ್ನಿತ್ಯಂ ಗೋಲೋಕೇ ರಾಸಮಂಡಲೇ ।**
**ಇದಂ ರಹಸ್ಯಂ ಪರಮಂ ನ ಚಾಖ್ಯೇಯಂ ತು ಕಸ್ಯಚಿತ್ ॥೫೨॥**

---

ಮೂರು ಲೋಕಕ್ಕೂ ತಾಯಿಯಾದವಳೇ, ಬ್ರಹ್ಮ ವಿಷ್ಣು ಮೊದಲಾದ ದೇವತೆಗಳು ನಮಸ್ಕಾರ ಮಾಡತಕ್ಕ ಪಾದಪದ್ಮ ಉಳ್ಳವಳೇ, ಕರುಣಾಸಮುದ್ರ ಸ್ವರೂಪಳೇ, ನಮಗೆ ನೀನು ಪ್ರಸನ್ನಳಾಗು. ॥೪೭॥

ಸರಸ್ವತೀರೂಪಳೇ, ಸಾವಿತ್ರಿ, ಶಂಕರಿ, ಗಂಗಾ, ಪದ್ಮಾವತೀ, ಷಷ್ಠೀದೇವೀ, ಮಂಗಲಚಂಡಿಕಾದೇವೀ, ತುಲಸೀ, ಲಕ್ಷ್ಮೀ, ದುರ್ಗಾಸ್ವರೂಪಳಾಗಿ, ಸಕಲ ದೇವತಾ ಸ್ವರೂಪಳಾಗಿರುವ ರಾಧಾದೇವಿಯೇ, ನಿನಗೆ ನಮಸ್ಕಾರಮಾಡುವೆನು. ॥೪೮-೪೯॥

ಮೂಲಪ್ರಕೃತಿಯಾದ ಭುವನೇಶ್ವರಿಸ್ವರೂಪಳೂ, ಆದ ನಿನ್ನನ್ನು ಸ್ತೋತ್ರ ಮಾಡುತ್ತೇವೆ. ಓ ತಾಯಿಯೇ, ದಯೆಯಿಂದ ನಮ್ಮನ್ನು ಜನನಮರಣರೂಪವಾದ ಈ ಸಂಸಾರವೆಂಬ ಸಾಗರದಿಂದ ಉದ್ಧಾರಮಾಡು. ॥೫೦॥

ಈ ಸ್ತೋತ್ರವನ್ನು ಮೂರು ಸಂಧ್ಯಾಕಾಲಗಳಲ್ಲಿಯೂ, ರಾಧಾದೇವಿಯನ್ನು ಸ್ಮರಣಮಾಡುತ್ತ ಯಾವನು ಹೇಳುತ್ತಾನೆಯೋ ಅವನಿಗೆ ದುರ್ಲಭವಾದುದು ಯಾವುದೂ ಇರುವುದಿಲ್ಲ. ಅವನು ಈ ಮನುಷ್ಯದೇಹವನ್ನು ಬಿಟ್ಟಮೇಲೆ ಗೋಲೋಕದಲ್ಲಿ ರಾಸಮಂಡಲದಲ್ಲಿ ವಾಸಮಾಡುವನು. ಗುಟ್ಟಾದ ಶ್ರೇಷ್ಠವಾದ ಈ

ಅಧುನಾ ಶೃಣು ವಿಪ್ರೇಂದ್ರ ದುರ್ಗಾದೇವ್ಯಾ ವಿಧಾನಕಂ ।
ಯಸ್ಯಾಃ ಸ್ಮರಣಮಾತ್ರೇಣ ಪಲಾಯಂತೇ ಮಹಾಪದಃ ॥೫೩॥

ಏನಾಂ ನ ಭಜತೇ ಯೋ ಹಿ ತಾದೃಙ್ನಾಸ್ತ್ಯೇವ ಕುತ್ರಚಿತ್ ।
ಸರ್ವೋಽಪಾಸ್ಯಾ ಸರ್ವಮಾತಾ ಶೈವೀ ಶಕ್ತಿರ್ಮಹಾದ್ಭುತಾ ॥೫೪॥

ಸರ್ವಬುದ್ಧ್ಯಧಿದೇವೀಯಮಂತರ್ಯಾಮಿಸ್ವರೂಪಿಣೀ ।
ದುರ್ಗಸಂಕಟಹಂತ್ರೀತಿ ದುರ್ಗೇತಿ ಪ್ರಥಿತಾ ಭುವಿ ॥೫೫॥

ವೈಷ್ಣವಾನಾಂ ಚ ಶೈವಾನಾಮುಪಾಸ್ಯೇಯಂ ಚ ನಿತ್ಯಶಃ ।
ಮೂಲಪ್ರಕೃತಿರೂಪಾ ಸಾ ಸೃಷ್ಟಿಸ್ಥಿತ್ಯಂತಕಾರಿಣೀ ॥೫೬॥

---

ಸ್ತೋತ್ರವನ್ನು ಯಾರಿಗೂ ಹೇಳಬಾರದು. ಎಂದರೆ ಭಕ್ತರುವಿನಾ ಇತರರಿಗೆ ಹೇಳಬಾರದೆಂದು ತಾತ್ಪರ್ಯವು. ॥೫೧-೫೨॥

ಎಲೈ ಬ್ರಾಹ್ಮಣಶ್ರೇಷ್ಠನಾದ ನಾರದನೇ, ಯಾವ ದೇವಿಯನ್ನು ಸ್ಮರಣೆ ಮಾಡುವ ಮಾತ್ರದಿಂದಲೇ ಸಕಲವಿಧವಾದ ದೊಡ್ಡ ದೊಡ್ಡ ವಿಪತ್ತುಗಳೂ ಓಡಿ ಹೋಗುವುವೋ ಆ ದುರ್ಗಾದೇವಿಯ ಮಂತ್ರ ಪೂಜಾವಿಧಾನಗಳನ್ನು ಈಗ ಹೇಳು ವೆನು ಕೇಳು. ॥೫೩॥

ಈ ದುರ್ಗಾದೇವಿಯನ್ನು ಪೂಜಿಸದೇ ಇರತಕ್ಕವರು ಯಾರೂ ಎಲ್ಲಿಯೂ ಇಲ್ಲ. ಸಮಸ್ತರೂ ಈ ದೇವಿಯನ್ನು ಪೂಜಿಸುವರು. ಎಲ್ಲರಿಗೂ ತಾಯಿಯಾದ ಈ ದೇವಿಯು ಆಶ್ಚರ್ಯಕರವಾದ ಶಿವಶಕ್ತಿಸ್ವರೂಪಳಾಗಿರುವಳು. ॥೫೪॥

ಈ ದೇವಿಯು ಸಮಸ್ತ ಬುದ್ಧಿಗೂ, ಅಭಿಮಾನಿದೇವತೆಯಾಗಿ, ಸಮಸ್ತ ಜೀವರ ಅಂತರ್ಯಾಮಿಸ್ವರೂಪಿಣಿಯಾಗಿ, ಜೀವರ ಕ್ರೂರವಾದ ಸಂಕಟವನ್ನು ನಾಶ ಮಾಡುವುದರಿಂದ ದುರ್ಗಾ ಎಂಬ ಹೆಸರಿನಿಂದ ಲೋಕದಲ್ಲಿ ಪ್ರಸಿದ್ಧಳಾಗಿರುವಳು. ॥೫೫॥

ಈ ದೇವಿಯು ವೈಷ್ಣವರಿಗೂ, ಶೈವರಿಗೂ, ಉಪಾಸ್ಯದೇವತೆಯಾಗಿರುವಳು. ಮೂಲಪ್ರಕೃತಿಯಾದ ಭುವನೇಶ್ವರಿಯ ಸ್ವರೂಪಳು. ಸೃಷ್ಟಿ ಸ್ಥಿತಿ ಸಂಹಾರಗಳನ್ನು ಮಾಡತಕ್ಕವಳು. ॥೫೬॥

ತಸ್ಯಾ ನವಾಕ್ಷರಂ ಮಂತ್ರಂ ವಕ್ಷ್ಯೇ ಮಂತ್ರೋತ್ತಮೋತ್ತಮಂ ।
ವಾಗ್ಭವಂ ಶಂಭುವನಿತಾ ಕಾಮಬೀಜಂ ತತಃ ಪರಂ ॥೫೭॥

ಚಾಮುಂಡಾಯೈ ಪದಂ ಪಶ್ಚಾದ್ವಿಚ್ಚೇ ಇತ್ಯಕ್ಷರದ್ವಯಂ ।
ನವಾಕ್ಷರೋ ಮನುಃ ಪ್ರೋಕ್ತೋ ಭಜತಾಂ ಕಲ್ಪಪಾದಪಃ ॥೫೮॥

ಬ್ರಹ್ಮವಿಷ್ಣುಮಹೇಶಾನಾ ಋಷಯೋಽಸ್ಯ ಪ್ರಕೀರ್ತಿತಾಃ ॥
ಛಂದಾಂಸ್ಯುಕ್ತಾನಿ ಸತತಂ ಗಾಯತ್ರ್ಯುಷ್ಣಿಗನುಷ್ಟುಭಃ ॥೫೯॥

ಮಹಾಕಾಲೀ ಮಹಾಲಕ್ಷ್ಮೀಃ ಸರಸ್ವತ್ಯಪಿ ದೇವತಾ ।
ಸ್ಯಾದ್ರಕ್ತದಂತಿಕಾ ಬೀಜಂ ದುರ್ಗಾ ಚ ಭ್ರಮರೀ ತಥಾ ॥೬೦॥

ನಂದಾ ಶಾಕಂಭರೀದೇವ್ಯೌ ಭೀಮಾ ಚ ಶಕ್ತಯಃ ಸ್ಮೃತಾಃ ।
ಧರ್ಮಾರ್ಥಕಾಮಮೋಕ್ಷೇಷು ವಿನಿಯೋಗ ಉದಾಹೃತಃ ॥೬೧॥

ಋಷಿಛಂದೋ ದೈವತಾನಿ ಮೌಲೌ ವಕ್ತ್ರೇ ಹೃದಿ ನ್ಯಸೇತ್ ।
ಸ್ತನಯೋಃ ಶಕ್ತಿಬೀಜಾನಿ ನ್ಯಸೇತ್ಸರ್ವಾರ್ಥಸಿದ್ಧಯೇ ॥೬೨॥

ಆ ದುರ್ಗಾದೇವಿಯ ಮಂತ್ರಗಳಲ್ಲೆಲ್ಲ ಉತ್ತಮವಾದ ನವಾಕ್ಷರಮಂತ್ರವನ್ನು ಹೇಳುವೆನು. ಮೊದಲು ವಾಗ್ಭವ, ಭುವನೇಶ್ವರೀ ಕಾಮಬೀಜಾಕ್ಷರಗಳು ಮೂರು ಆಮೇಲೆ " ಚಾಮುಂಡಾಯೈ ವಿಚ್ಚೇ " ಎಂಬ ಆರು ಅಕ್ಷರಗಳು. ಹೀಗೆ ಒಂಬತ್ತು ಅಕ್ಷರದ ಈ ಮಂತ್ರವನ್ನು ಜಪಮಾಡತಕ್ಕವರಿಗೆ ಇದು ಕಲ್ಪವೃಕ್ಷದಂತೆ ಸಕಲ ಇಷ್ಟಾರ್ಥಗಳನ್ನೂ, ಕೊಡುವುದು. ॥೫೭-೫೮॥

ಈ ಮಂತ್ರಕ್ಕೆ ಬ್ರಹ್ಮ ವಿಷ್ಣು ಮಹೇಶ್ವರರೇ ಋಷಿಗಳು. ಗಾಯಿತ್ರೀ, ಉಷ್ಣಿಕ್, ಅನುಷ್ಟುಪ್, ಛಂದಸ್ಸುಗಳು. ಮಹಾಕಾಲೀ, ಮಹಾಲಕ್ಷ್ಮೀ, ಮಹಾ ಸರಸ್ವತಿಯರೇ ದೇವತೆಗಳು. ರಕ್ತದಂತಿಕಾ, ದುರ್ಗಾ, ಭ್ರಮರೀದೇವಿಯರೇ ಬೀಜಸ್ವರೂಪರು. ನಂದಾ, ಶಾಕಂಭರೀ, ಭೀಮಾದೇವಿಯರೇ ಶಕ್ತಿಸ್ವರೂಪರು. ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಪುರುಷಾರ್ಥಗಳೇ ಫಲವು. ॥೫೯-೬೦-೬೧॥

ಮಂತ್ರೋಪಾಸಕರು ಋಷಿಯನ್ನು ಶಿರಸ್ಸಿನಲ್ಲಿಯೂ, ಛಂದಸ್ಸನ್ನು ಮುಖ ದಲ್ಲಿಯೂ, ದೇವತೆಯನ್ನು ಹೃದಯದಲ್ಲಿಯೂ, ಶಕ್ತಿ ಬೀಜಗಳನ್ನು ಸ್ತನಗಳ ಲ್ಲಿಯೂ, ಎಂದರೆ ಬೀಜತ್ರಯವನ್ನು ಬಲದ ಸ್ತನದಲ್ಲಿಯೂ, ಶಕ್ತಿತ್ರಯವನ್ನು

ಬೀಜತ್ರಯೈಶ್ಚತುರ್ಭಿಶ್ಚ ದ್ವಾಭ್ಯಾಂ ಸರ್ವೇಣ ಚೈವ ಹಿ ।
ಷಡಂಗಾನಿ ಮನೋಃ ಕುರ್ಯಾಜ್ಜಾತಿಯುಕ್ತಾನಿ ದೇಶಿಕಃ ॥೬೩॥

ಶಿಖಾಯಾಂ ಲೋಚನದ್ವಂದ್ವ ಶ್ರುತಿನಾಸಾನನೇಷು ಚ ।
ಗುದೇ ನ್ಯಸೇನ್ಮಂತ್ರವರ್ಣಾನ್ಸರ್ವೇಣ ವ್ಯಾಪಕಂ,ಚರೇತ್ ॥೬೪॥

ಖಡ್ಗಚಕ್ರಗದಾ ಬಾಣಚಾಪಾನಿ ಪರಿಘಂ ತಥಾ ।
ಶೂಲಂ ಭ್ರುಶುಂಡೀಂ ಚ ಶಿರಃ ಶಂಖಂ ಸಂದಧತೀಂ ಕರೈಃ ॥೬೫॥

ಮಹಾಕಾಲೀಂ ತ್ರಿನಯನಾಂ ನಾನಾಭೂಷಣಭೂಷಿತಾಂ ।
ನೀಲಾಂಜನಸಮಪ್ರಖ್ಯಾಂ ದಶಪಾದಾನನಾಂ ಭಜೇ ॥೬೬॥

ಮಧುಕೈಟಭನಾಶಾರ್ಥಂ ಯಾಂ ತುಷ್ಟಾವಾಂಬುಜಾಸನಃ ।
ಏವಂ ಧ್ಯಾಯೇನ್ಮಹಾಕಾಲೀಂ ಕಾಮಬೀಜಸ್ವರೂಪಿಣೀಂ ॥೬೭॥

---

ಎಡದ ಸ್ತನದಲ್ಲಿಯೂ, ನ್ಯಾಸಮಾಡಿಕೊಳ್ಳಬೇಕು. ಇದರಿಂದ ಶೀಘ್ರವಾಗಿ ಫಲಸಿದ್ಧಿಯಾಗುವುದು. ||೬೨||

"ಐಂ, ಹ್ರೀಂ, ಕ್ಲೀಂ, ಚಾಮುಂಡಾಯೈವಿಚ್ಚೇ" ಎಂಬ ಒಂಭತ್ತು ಅಕ್ಷರದ ಮಂತ್ರದಿಂದ ಆರು ಅಂಗಗಳನ್ನು ನಮಃ, ಸ್ವಾಹಾ, ವಷಟ್, ಹುಂ, ವೌಷಟ್, ಫಟ್ ಎಂಬವುಗಳಿಂದ ಕೂಡಿ ಗುರುವು ಕರಾಂಗನ್ಯಾಸಗಳನ್ನು ಮಾಡಬೇಕು. ||೬೩||

ಬಳಿಕ ಮಂತ್ರದ ಒಂದೊಂದು ವರ್ಣಗಳನ್ನು ಕ್ರಮವಾಗಿ ಶಿಖೆ, ಕಣ್ಣುಗಳು, ಕಿವಿಗಳು, ಮೂಗು, ಬಾಯಿ, ಗುದಪ್ರದೇಶಗಳಲ್ಲಿ ನ್ಯಾಸಮಾಡಿ ಸರ್ವಮಂತ್ರದಿಂದ ವ್ಯಾಪಕನ್ಯಾಸವನ್ನು ಮಾಡಬೇಕು. ||೬೪||

ಕತ್ತಿ, ಚಕ್ರ, ಬಾಣ, ಗದೆ, ಬಿಲ್ಲು, ಪರಿಘಾಯುಧ, ಶೂಲ, ಭ್ರುಶುಂಡಿ ಎಂಬ ಆಯುಧ ಶಿರಸ್ಸು, ಶಂಖ, ಈ ಹತ್ತು ಪದಾರ್ಥಗಳನ್ನು ಹತ್ತು ಕೈಗಳಲ್ಲಿ ಧರಿಸಿರುವ ಮೂರು ಕಣ್ಣುಗಳುಳ್ಳ, ನಾನಾವಿಧವಾದ ಆಭರಣಗಳನ್ನು ಧರಿಸಿರುವ, ನೀಲವಾದ ಅಂಜನಪರ್ವತಕ್ಕೆ ಸಮಾನವಾದ ಕಾಂತಿಯುಳ್ಳ, ಹತ್ತು ಕಾಲುಗಳೂ, ಮತ್ತು ಹತ್ತು ಮುಖಗಳೂ ಉಳ್ಳ ದೇವಿಯನ್ನು ಧ್ಯಾನಮಾಡುತ್ತೇನೆ. ಮಧುಕೈಟಭರೆಂಬ ರಾಕ್ಷಸರನ್ನು ನಾಶಮಾಡುವುದಕ್ಕಾಗಿ ಬ್ರಹ್ಮನು ಯಾವ ದೇವಿಯನ್ನು ಸ್ತೋತ್ರಮಾಡಿದನೋ, ಆ ದೇವಿಯೇ ಕಾಮಬೀಜಸ್ವರೂಪಳಾದ ಮಹಾಕಾಳಿಯು, ಆ ದೇವಿಯನ್ನು ಹೀಗೆ ಧ್ಯಾನಮಾಡಬೇಕು. ||೬೫-೬೬-೬೭||

*

ಅಕ್ಷಮಾಲಾಂ ಚ ಪರಶುಂ ಗದೇಷುಕುಲಿಶಾನಿ ಚ ।
ಪದ್ಮಂ ಧನುಷ್ಕುಂಡಿಕಾಂ ಚ ದಂಡಂ ಶಕ್ತಿಮಸಿಂ ತಥಾ ॥೬೮॥

ಚರ್ಮಾಂಬುಜಂ ತಥಾ ಘಂಟಾಂ ಸುರಾಪಾತ್ರಂ ಚ ಶೂಲಕಂ ।
ಪಾಶಂ ಸುದರ್ಶನಂ ಚೈವ ದಧತೀಮರುಣಪ್ರಭಾಂ ॥೬೯॥

ರಕ್ತಾಂಬುಜಾಸನಗತಾಂ ಮಾಯಾಬೀಜಸ್ವರೂಪಿಣೀಂ ।
ಮಹಾಲಕ್ಷ್ಮೀಂ ಭಜೇ ದೇವೀಂ ಮಹಿಷಾಸುರಮರ್ದಿನೀಂ ॥೭೦॥

ಘಂಟಾಶೂಲೇ ಹಲಂ ಶಂಖಂ ಮುಸಲಂ ಚ ಸುದರ್ಶನಂ ।
ಧನುರ್ಬಾಣಾನ್ ಹಸ್ತಪದ್ಮೈರ್ದಧಾನಾಂ ಕುಂದಸನ್ನಿಭಾಂ ॥೭೧॥

ಶುಂಭಾದಿದೈತ್ಯಸಂಹರ್ತ್ರೀಂ ವಾಣೀ ಬೀಜಸ್ವರೂಪಿಣೀಂ ।
ಮಹಾಸರಸ್ವತೀಂ ಧ್ಯಾಯೇತ್ಸಚ್ಚಿದಾನಂದ ವಿಗ್ರಹಾಂ ॥೭೨॥

ಯಂತ್ರಮಸ್ಯಾಃ ಶೃಣು ಪ್ರಾಜ್ಞ ತ್ರ್ಯಸ್ರಂ ಷಟ್ಕೋಣಸಂಯುತಂ ।
ತತೋಽಷ್ಟದಳಪದ್ಮಂ ಚ ಚತುರ್ವಿಂಶತಿಪತ್ರಕಂ ॥೭೩॥

---

ರುದ್ರಾಕ್ಷಿಯ ಜಪಮಾಲೆ, ಕೊಡಲಿ, ಗದೆ, ಬಾಣ, ವಜ್ರಾಯುಧ, ಕಮಲ, ಧನುಸ್ಸು, ಕಮಂಡಲು, ದಂಡ, ಶಕ್ತಿ, ಕತ್ತಿ, ಗುರಾಣಿ, ಕಮಲ, ಘಂಟೆ, ಸುರಾಪಾತ್ರೆ, ಶೂಲಾಯುಧ, ಪಾಶಾಯುಧ, ಚಕ್ರ ಈ ಆಯುಧಗಳನ್ನು ಧರಿಸಿರುವ, ಕೆಂಪಾದ ಕಾಂತಿಯುಳ್ಳ, ಕೆಂದಾವರೆಯ ಪೀಠದಲ್ಲಿರುವ ಮಾಯಾಬೀಜಸ್ವರೂಪಳಾದ, ಮಹಿಷಾಸುರನನ್ನು ಕೊಂದ ಮಹಾಲಕ್ಷ್ಮೀದೇವಿಯನ್ನು ಈ ರೀತಿ ಧ್ಯಾನ ಮಾಡಬೇಕು. ||೬೮-೬೯-೭೦||

ಘಂಟೆ, ತ್ರಿಶೂಲ, ನೇಗಿಲು, ಶಂಖ, ಮುಸಲ, ಚಕ್ರ, ಬಿಲ್ಲು, ಬಾಣ ಇವುಗಳನ್ನು ಕಮಲಗಳಂತಿರುವ ಹಸ್ತಗಳಲ್ಲಿ ಧರಿಸಿರುವ, ಮಲ್ಲಿಗೆಯ ಹೂವಿನ ಕಾಂತಿಯುಳ್ಳ, ಶುಂಭಾದಿದೈತ್ಯರನ್ನು ಕೊಂದ ವಾಗ್ಬೀಜಸ್ವರೂಪಳಾದ, ಶಾಶ್ವತಳೂ, ಜ್ಞಾನಾನಂದರೂಪಳೂ, ಆದ ಮಹಾಸರಸ್ವತಿಯನ್ನು ಧ್ಯಾನಮಾಡಬೇಕು. ಹೀಗೆ ಧ್ಯಾನವಿಶೇಷಗಳು ಸಪ್ತಶತೀ ರಹಸ್ಯತ್ರಯವೆಂಬ ಗ್ರಂಥದಲ್ಲಿರುವುದು. ಅದರ ವ್ಯಾಖ್ಯಾನದಲ್ಲಿ ಸ್ಪಷ್ಟವಾಗಿರುವುದರಿಂದ ಅಲ್ಲಿಯೇ ಈ ವಿಷಯವನ್ನು ವಿಸ್ತಾರವಾಗಿ ತಿಳಿಯಬಹುದು. ||೭೧-೭೨||

ಎಲೈ ಬುದ್ಧಿವಂತನಾದ ನಾರದನೇ, ದುರ್ಗಾದೇವಿಯ ಯಂತ್ರವನ್ನು

ಭೂಗೃಹೇಣ ಸಮಾಯುಕ್ತಂ ಯಂತ್ರಮೇವಂ ವಿಚಿಂತಯೇತ್ ।
ಶಾಲಗ್ರಾಮೇ ಘಟೇ ವಾಽಪಿ ಯಂತ್ರೇ ವಾ ಪ್ರತಿಮಾಸು ವಾ ॥೭೪॥

ಬಾಣಲಿಂಗೇಽಥವಾ ಸೂರ್ಯೇ ಯಜೇದ್ದೇವೀ ಮನನ್ಯಧೀಃ ।
ಜಯಾದಿ ಶಕ್ತಿಸಂಯುಕ್ತೇ ಪೀಠೇ ದೇವೀಂ ಪ್ರಪೂಜಯೇತ್॥೭೫॥

ಪೂರ್ವಕೋಣೇ ಸರಸ್ವತ್ಯಾ ಸಹಿತಂ ಪದ್ಮಜಂ ಯಜೇತ್ ।
ಶ್ರಿಯಾ ಸಹ ಹರಿಂ ತತ್ರ ನೈಋರ್ತೇ ಕೋಣಕೇ ಯಜೇತ್ ॥೭೬॥

ಪಾರ್ವತ್ಯಾ ಸಹಿತಂ ಶಂಭುಂ ವಾಯುಕೋಣೇ ಸಮರ್ಚಯೇತ್ ।
ದೇವ್ಯಾ ಉತ್ತರತಃ ಪೂಜ್ಯಃ ಸಿಂಹೋ ವಾಮೇ ಮಹಾಸುರಂ ॥೭೭॥

ಮಹಿಷಂ ಪೂಜಯೇದಂತೇ ಷಟ್ಕೋಣೇಷು ಯಜೇತ್ಕ್ರಮಾತ್ ।
ನಂದಜಾಂ ರಕ್ತದಂತಾಂ ಚ ತಥಾ ಶಾಕಂಭರೀಂ ಶಿವಾಂ ॥೭೮॥

---

ಹೇಳುವೆನು ಕೇಳು. ಮೊದಲು ತ್ರಿಕೋಣ ಆಮೇಲೆ ಷಟ್ಕೋಣ, ಬಳಿಕ ಅಷ್ಟದಳ ಪದ್ಮ, ಬಳಿಕ, ಇಪ್ಪತ್ತನಾಲ್ಕುದಳದ ಪದ್ಮ ಅದರ ಹೊರಗಡೆಯದು ಭೂಗೃಹ ಇದೇ ಯಂತ್ರದ ಲಕ್ಷಣವು. ॥೭೩॥

ಸಾಲಿಗ್ರಾಮದಲ್ಲಿಯಾಗಲೀ, ಕಲಶದಲ್ಲಿಯಾಗಲೀ, ಯಂತ್ರ ಅಥವಾ ಪ್ರತಿಮೆ, ಬಾಣ ಲಿಂಗ ಅಥವಾ ಸೂರ್ಯ ಈ ವಸ್ತುಗಳಲ್ಲಿ ದೇವಿಯನ್ನು ಏಕಾಗ್ರ ಚಿತ್ತದಿಂದ ಪೂಜಿಸಬೇಕು. ಆ ದೇವಿಯನ್ನು ಜಯಾದಿಶಕ್ತಿದೇವತೆಯರಿಂದ ಕೂಡಿದ ಪೀಠದಲ್ಲಿ ಪೂಜಿಸಬೇಕು. ಎಂದರೆ ಪೀಠದಲ್ಲಿ " ಜಯಾಯೈ ನಮಃ, ವಿಜಯಾಯೈ ನಮಃ, ಅಜಿತಾಯೈ ನಮಃ, ಅಪರಾಜಿತಾಯೈ ನಮಃ, ನಿತ್ಯಾಯೈ ನಮಃ, ವಿಲಾಸಿನ್ಯೈ ನಮಃ, ದೋಗ್ಧ್ರ್ಯೈ ನಮಃ, ಅಘೋರಾಯೈ ನಮಃ, ಮಂಗಲಾಯೈ ನಮಃ, ಎಂದು ಈ ಪೀಠಶಕ್ತಿಗಳು. ಈ ನವಮಸ್ಕಂಧದಲ್ಲಿ ಹೇಳಿದ ಸಕಲದೇವತೆಗಳೂ ಹೇಳಿದುವೆಂದು ತಿಳಿಯಬೇಕು. ॥೭೪-೭೫॥

ಆವರಣದೇವತಾಪೂಜೆಯನ್ನು ಹೇಳುತ್ತ ಯಂತ್ರದ ತ್ರಿಕೋಣಗಳಲ್ಲಿ ದೇವಿಯ ಮುಂಭಾಗದಲ್ಲಿರುವ ಪೂರ್ವಭಾಗದಲ್ಲಿ ಸರಸ್ವತೀ ಸಹಿತನಾದ ಬ್ರಹ್ಮನನ್ನೂ, ನೈಋತ್ಯಕೋಣದಲ್ಲಿ ಮಹಾಲಕ್ಷ್ಮೀಸಹಿತನಾದ ಹರಿಯನ್ನೂ, ವಾಯವ್ಯಕೋಣದಲ್ಲಿ ಪಾರ್ವತೀಸಹಿತನಾದ ಶಿವನನ್ನೂ ಪೂಜಿಸಬೇಕು. ॥೭೬॥

ದೇವಿಯ ಉತ್ತರಭಾಗದಲ್ಲಿ ಸಿಂಹವನ್ನೂ, ಎಡಭಾಗದಲ್ಲಿ ಮಹಿಷಾಸುರ

ದುರ್ಗಾಂ ಭೀಮಾಂ ಭ್ರಾಮರೀಂ ಚ ತತೋ ವಸುದಲೇಷು ಚ ।
ಬ್ರಾಹ್ಮೀಂ ಮಾಹೇಶ್ವರೀಂ ಚೈವ ಕೌಮಾರೀಂ ವೈಷ್ಣವೀಂ ತಥಾ ॥೭೯॥

ವಾರಾಹೀಂ ನಾರಸಿಂಹೀಂ ಚ ಐಂದ್ರೀಂ ಚಾಮುಂಡಕಾಂ ತಥಾ ।
ಪೂಜಯೇಚ್ಚ ತತಃ ಪಶ್ಚಾತ್ತತ್ತತ್ಪತ್ರೇಷು ಪೂರ್ವತಃ ॥೮೦॥

ವಿಷ್ಣುಮಾಯಾಂ ಚೇತನಾಂ ಚ ಬುದ್ಧಿಂ ನಿದ್ರಾಂ ಕ್ಷುಧಾಂ ತಥಾ ।
ಛಾಯಾಶಕ್ತಿಂ ಪರಾಂ ತೃಷ್ಣಾಂ ಕ್ಷಾಂತಿಂ ಜಾತಿಂ ಚ ಲಜ್ಜಯಾ ॥೮೧॥

ಶಾಂತಿಂ ಶ್ರದ್ಧಾಂ ಕೀರ್ತಿಲಕ್ಷ್ಮ್ಯೌ ಧೃತಿಂ ವೃತ್ತಿಂ ಶ್ರುತಿಂ ಸ್ಮೃತಿಂ ।
ದಯಾಂ ತುಷ್ಟಿಂ ತತಃ ಪುಷ್ಟಿಂ ಮಾತೃಭ್ರಾಂತೀ ಇತಿ ಕ್ರಮಾತ್ ॥೮೨॥

ತತೋ ಭೂಪುರಕೋಣೇಷು ಗಣೇಶಂ ಕ್ಷೇತ್ರಪಾಲಕಂ ।
ವಟುಕಂ ಯೋಗಿನೀಶ್ಚಾಪಿ ಪೂಜಯೇನ್ಮತಿಮಾನ್ನರಃ ॥೮೩॥

---

ನನ್ನೂ, ಪೂಜಿಸಬೇಕು. ಬಳಿಕ ಷಟ್ಕೋಣದಲ್ಲಿ ಕ್ರಮವಾಗಿ, ನಂದಾ, ರಕ್ತದಂತಾ, ಶಾಕಂಭರೀ, ದುರ್ಗಾ, ಭೀಮಾ, ಭ್ರಮರಿಯರನ್ನು ಪೂಜಿಸಬೇಕು. ॥೭೭-೭೮॥

ಆಮೇಲೆ ಅಷ್ಟದಳದಲ್ಲಿ, ಬ್ರಾಹ್ಮೀ, ಮಾಹೇಶ್ವರೀ, ಕೌಮಾರೀ, ವೈಷ್ಣವೀ, ವಾರಾಹೀ, ನಾರಸಿಂಹೀ, ಐಂದ್ರೀ, ಚಾಮುಂಡೀ ಎಂಬ ದೇವಿಯರನ್ನು ಪೂಜಿಸಬೇಕು. ॥೭೯॥

ತರುವಾಯ ಇಪ್ಪತ್ತುನಾಲ್ಕು ದಳಗಳಲ್ಲಿ ಪೂರ್ವಾದಿಯಾಗಿ, ವಿಷ್ಣುಮಾಯಾ, ಚೇತನಾ, ಬುದ್ಧಿ, ನಿದ್ರಾ, ಕ್ಷುಧಾ, ಛಾಯಾ, ಪರಾಶಕ್ತಿ, ತೃಷ್ಣಾ, ಕ್ಷಾಂತಿ, ಜಾತಿ, ಲಜ್ಜಾ, ಶಾಂತಿ, ಶ್ರದ್ಧಾ, ಕೀರ್ತಿ, ಲಕ್ಷ್ಮೀ, ಧೃತಿ, ವೃತ್ತಿ, ಶ್ರುತಿ, ಸ್ಮೃತಿ, ದಯಾ, ತುಷ್ಟಿ, ಪುಷ್ಟಿ, ಮಾತೃ, ಭ್ರಾಂತಿ, ಈ ದೇವಿಯರನ್ನು ಪೂಜಿಸಬೇಕು. ॥೮೦-೮೧-೮೨॥

ಹೊರಗಡೆಯ ಭೂಪುರಕೋಣಗಳಲ್ಲಿ, ಗಣೇಶ, ಕ್ಷೇತ್ರಪಾಲಕ, ವಟುಕ, ಯೋಗಿನಿ, ಇವರನ್ನು ಪೂಜಿಸಬೇಕು. ॥೮೩॥

**ಇಂದ್ರಾದ್ಯಾನಪಿ ತದ್ಬಾಹ್ಯೇ ವಜ್ರಾದ್ಯಾಯುಧಸಂಯುತಾನ್ ।**
**ಪೂಜಯೇದನಯಾ ರೀತ್ಯಾ ದೇವೀಂ ಸಾವರಣಾಂ ತತಃ ॥೮೪॥**

**ರಾಜೋಪಚಾರಾನ್ವಿವಿಧಾನ್ ದದ್ಯಾದಂಬಾಪ್ರತುಷ್ಟಯೇ ।**
**ತತೋ ಜಪೇನ್ನವಾರ್ಣಂ ಚ ಮಂತ್ರಂ ಮಂತ್ರಾರ್ಥಪೂರ್ವಕಂ ॥೮೫॥**

**ತತಃ ಸಪ್ತಶತೀಸ್ತೋತ್ರಂ ದೇವ್ಯಾ ಅಗ್ರೇ ತು ಸಂಪಠೇತ್ ।**
**ನಾನೇನ ಸದೃಶಂ ಸ್ತೋತ್ರಂ ವಿದ್ಯತೇ ಭುವನತ್ರಯೇ ॥೮೬॥**

---

ಭೂಪುರಕೋಣಗಳಿಂದ ಹೊರಗೆ ವಜ್ರಾದಿ ಆಯುಧಗಳಿಂದ ಕೂಡಿದ ಇಂದ್ರಾದಿ ಲೋಕಪಾಲಕರನ್ನು ಪೂಜಿಸಿ, ಈ ರೀತಿಯಲ್ಲಿ ಆವರಣದೇವತಾ ಸಹಿತಳಾದ ದೇವಿಯನ್ನು ಪೂಜಿಸಿದ ಬಳಿಕ, ಆ ಜಗದಂಬೆಯ ಸಂತೋಷಕ್ಕೋಸ್ಕರವಾಗಿ ಬಗೆಬಗೆಯಾದ ರಾಜೋಪಚಾರಗಳನ್ನು ಸಮರ್ಪಿಸಿ ತರುವಾಯ ನವಾಕ್ಷರೀಮಂತ್ರವನ್ನು ಮಂತ್ರಾರ್ಥವನ್ನು ಅನುಸಂಧಾನ ಮಾಡುತ್ತ ಜಪಿಸಬೇಕು. ಮಂತ್ರಾರ್ಥ– ಈ ಮಂತ್ರದಲ್ಲಿ ಕ್ರಮವಾಗಿ, ಮಹಾಸರಸ್ವತೀ, ಮಹಾಲಕ್ಷ್ಮೀ ಮಹಾಕಾಲೀ ದೇವಿಯರನ್ನು ಸೂಚಿಸುವ, ಐಂ, ಹ್ರೀಂ, ಕ್ಲೀಂ ಎಂಬ ಮೂರು ಬೀಜಾಕ್ಷರಗಳಿರುವುವು. ವಿಚ್ಚೇ ಎಂಬಲ್ಲಿ ವಿತ್, ಚ, ಇ, ಎಂಬ ಮೂರು ಪದಗಳು ಕ್ರಮವಾಗಿ, ಚಿತ್, ಸತ್, ಆನಂದ, ಎಂಬ ಅರ್ಥಗಳನ್ನು ಕೊಡುವುವು. ಇವು ಸಂಬೋಧನ ವಿಭಕ್ತ್ಯಂತವಾಗಿರುವುವು. ಇವು ಮೂರು ಕ್ರಮವಾಗಿ, ಮೂರು ಬೀಜಾಕ್ಷರಗಳಿಗೆ ವಿಶೇಷಣವಾಗಿರುವುವು. ಚಾಮುಂಡಾ ಪದವು ಬ್ರಹ್ಮವಿದ್ಯಾವಾಚಕವಾದುದು. ಚತುರ್ಥೀವಿಭಕ್ತಿಯು ತಾದರ್ಥ್ಯದಲ್ಲಿ ಬಂದಿರುವುದು. ಅನುಸಂದಧ್ಮಹೆ ಎಂಬ ಕ್ರಿಯಾಪದವನ್ನು ಅಧ್ಯಾಹಾರಮಾಡಿಕೊಂಡು ಅರ್ಥವನ್ನು ಪೂರ್ಣಮಾಡಿಕೊಳ್ಳಬೇಕು. ಒಟ್ಟಿನಲ್ಲಿ, ಓ ಚಿದ್ರೂಪಿಣಿಯಾದ ಮಹಾಸರಸ್ವತಿಯೇ, ಸದ್ರೂಪಿಣಿಯಾದ ಮಹಾಲಕ್ಷ್ಮಿಯೇ, ಆನಂದರೂಪಿಣಿಯಾದ ಮಹಾಕಾಳಿಯೇ, ನಿನ್ನನ್ನು ಬ್ರಹ್ಮವಿದ್ಯಾಪ್ರಾಪ್ತಿಗಾಗಿ ಧ್ಯಾನಮಾಡುತ್ತೇನೆ. ಎಂದು ಅರ್ಥವಾಗುವುದು. ಈ ಅರ್ಥವನ್ನು ಸಪ್ತಶತಿಯ ಗುಪ್ತಟೀಕೆಯಲ್ಲಿ ಭಾಸ್ಕರಾಚಾರ್ಯರು ಪ್ರಕಾಶಪಡಿಸಿರುವರು. ಪದಪ್ರಯೋಜನಗಳನ್ನು ಅಲ್ಲಿಯೇ ತಿಳಿಯಬೇಕು. ||೮೪-೮೫||

ಆಮೇಲೆ ದೇವಿಯ ಮುಂದೆ ಸಪ್ತಶತೀಸ್ತೋತ್ರವನ್ನು ಪಾರಾಯಣಮಾಡಬೇಕು. ಮೂರು ಲೋಕಗಳಲ್ಲಿಯೂ ಇದಕ್ಕೆ ಸಮಾನವಾದ ಸ್ತೋತ್ರವಿರುವುದಿಲ್ಲ. ||೮೬||

ತತಶ್ಚಾನೇನ ದೇವೇಶೀಂ ತೋಷಯೇತ್ಪ್ರತ್ಯಹಂ ನರಃ ।
ಧರ್ಮಾರ್ಥಕಾಮಮೋಕ್ಷಾಣಾಮಾಲಯಂ ಜಾಯತೇ ನರಃ ॥೮೭॥

ಇತಿ ತೇ ಕಥಿತಂ ವಿಪ್ರ ಶ್ರೀದುರ್ಗಾಯಾ ವಿಧಾನಕಂ ।
ಕೃತಾರ್ಥತಾ ಯೇನ ಭವೇತ್ತದೇತತ್ಕಥಿತಂ ತವ ॥೮೮॥

ಸರ್ವೇ ದೇವಾ ಹರಿಬ್ರಹ್ಮಪ್ರಮುಖಾ ಮನವಸ್ತಥಾ ।
ಮುನಯೋ ಜ್ಞಾನನಿಷ್ಠಾಶ್ಚ ಯೋಗಿನಶ್ಚಾಽಽಶ್ರಮಾಸ್ತಥಾ ॥೮೯॥

ಲಕ್ಷ್ಮ್ಯಾದಯಸ್ತಥಾ ದೇವ್ಯಃ ಸರ್ವೇ ಧ್ಯಾಯಂತಿ ತಾಂ ಶಿವಾಂ ।
ತದೈವ ಜನ್ಮಸಾಫಲ್ಯಂ ದುರ್ಗಾಸ್ಮರಣಮಸ್ತಿ ಚೇತ್ ॥೯೦॥

ಚತುರ್ದಶಾಽಪಿ ಮನವೋ ಧ್ಯಾತ್ವಾ ಚರಣಪಂಕಜಂ ।
ಮನುತ್ವಂ ಪ್ರಾಪ್ತವಂತಶ್ಚ ದೇವಾಃ ಸ್ವಂ ಸ್ವಂ ಪದಂ ತಥಾ ॥೯೧॥

---

ಮನುಷ್ಯನು ಈ ಸ್ತೋತ್ರದಿಂದ ದೇವಿಯನ್ನು ಪ್ರತಿದಿನವೂ ಸಂತೋಷಪಡಿಸಿದರೆ ಅವನು ಧರ್ಮಾರ್ಥಕಾಮಮೋಕ್ಷಗಳನ್ನು ಪಡೆಯುವನು. ಈ ಮಂತ್ರವನ್ನು ನಾಲ್ಕುಲಕ್ಷ ಜಪಮಾಡಿದರೆ ಸಿದ್ಧಿಯಾಗುವುದು. ಜಪದ ಹತ್ತನೆಯ ಒಂದುಭಾಗ ಸಂಖ್ಯೆಯು ಹೋಮವನ್ನು ಪಾಯಸಾನ್ನದಿಂದ ಮಾಡಬೇಕೆಂದು ಕಾತ್ಯಾಯನೀ ತಂತ್ರದಲ್ಲಿ ಹೇಳಿರುವುದು. ॥೮೭॥

ಎಲೈ ಬ್ರಹ್ಮರ್ಷಿಯೇ, ಶ್ರೀದುರ್ಗಾದೇವಿಯ ಉಪಾಸನಾವಿಧಿಯನ್ನು ನಿನಗೆ ಹೇಳಿರುವೆನು. ಇದರಿಂದ ನೀನು ಕೃತಾರ್ಥನಾಗುವೆ. ॥೮೮॥

ಹರಿಬ್ರಹ್ಮರೇ ಮೊದಲಾದ ದೇವತೆಗಳೂ, ಮನುಗಳೂ, ಜ್ಞಾನನಿಷ್ಠರಾದ ಮುನಿಗಳೂ, ಯೋಗಿಗಳೂ, ಬ್ರಹ್ಮಚರ್ಯಾದಿ ಸಮಸ್ತ ಆಶ್ರಮದವರೂ, ಲಕ್ಷ್ಮಿಯೇ ಮೊದಲಾದ ಸಮಸ್ತ ದೇವಿಯರೂ, ಆ ದುರ್ಗಾದೇವಿಯನ್ನು ಧ್ಯಾನ ಮಾಡುವರು. ದುರ್ಗಾಸ್ಮರಣೆಯುಂಟಾದರೆ ಆಗಲೇ ಜನ್ಮವನ್ನು ಪಡೆದುದು ಸಾರ್ಥಕ ವಾಗುವುದು. ॥೮೯-೯೦॥

ಹದಿನಾಲ್ಕು ಮನುಗಳೂ ದೇವಿಯಪಾದಪದ್ಮವನ್ನು ಧ್ಯಾನಿಸಿ ಫಲರೂಪವಾಗಿ ಮನುಗಳ ಅಧಿಕಾರವನ್ನು ಪಡೆದರು. ದೇವತೆಗಳೂ ಕೂಡ ತಮ್ಮ ತಮ್ಮ ಸ್ಥಾನಗಳನ್ನು ಈ ಮಂತ್ರಜಪ ಅರ್ಥಧ್ಯಾನಗಳಿಂದ ಪಡೆದರು. ॥೯೧॥

ತದೇತತ್ಸರ್ವಮಾಖ್ಯಾತಂ ರಹಸ್ಯಾತಿರಹಸ್ಯಕಂ ।
ಪ್ರಕೃತೀನಾಂ ಪಂಚಕಸ್ಯ ತದಂ ಶಾನಾಂ ಚ ವರ್ಣನಂ ॥೯೨॥

ಶ್ರುತ್ವೈತನ್ಮನುಜೋ ನಿತ್ಯಂ ಪುರುಷಾರ್ಥಚತುಷ್ಟಯಂ ।
ಲಭತೇ ನಾತ್ರ ಸಂದೇಹಃ ಸತ್ಯಂ ಸತ್ಯಂ ಮಯೋದಿತಂ ॥೯೩॥

ಅಪುತ್ರೋ ಲಭತೇ ಪುತ್ರಂ ವಿದ್ಯಾರ್ಥೀ ಪ್ರಾಪ್ನುಯಾ ಚ್ಚ ತಾಂ ।
ಯಂ ಯಂ ಕಾಮಂ ಸ್ಮರೇದ್ಯಾಽಪಿ ತಂ ತಂ ಶ್ರುತ್ವಾ ಸಮಾಪ್ನುಯಾತ್॥೯೪॥

ನವರಾತ್ರೇ ಪಠೇದೇತದ್ದೇವ್ಯಗ್ರೇ ತು ಸಮಾಹಿತಃ ।
ಪರಿತುಷ್ಟಾ ಜಗದ್ಧಾತ್ರೀ ಭವತ್ಯೇವ ಹಿ ನಿಶ್ಚಿತಂ ॥೯೫॥

ನಿತ್ಯಮೇಕೈಕಮಧ್ಯಾಯಂ ಪಠೇದ್ಯಃ ಪ್ರತ್ಯಹಂ ನರಃ ।
ತಸ್ಯ ವಶ್ಯಾ ಭವೇದ್ದೇವೀ ದೇವೀಪ್ರಿಯಕರೋ ಹಿ ಸಃ ॥೯೬॥

---

ಅತ್ಯಂತ ಗೋಪ್ಯವಾದ ಪಂಚಪ್ರಕೃತಿದೇವಿಯರ ಮತ್ತು ಪ್ರಕೃತಿಯ ಅಂಶರಾದ ದೇವಿಯರ ವರ್ಣನೆಯ ರೂಪವಾದ ಈ ಸಮಸ್ತ ಕಥೆಯನ್ನೂ ಹೇಳಿರುವೆನು. ॥೯೨॥

ಈ ಕಥೆಯನ್ನು ಪ್ರತಿದಿನವೂ ಕೇಳಿದ ಮನುಷ್ಯನು ನಾಲ್ಕು ಪುರುಷಾರ್ಥಗಳನ್ನು ಪಡೆಯುವುದರಲ್ಲಿ ಸಂದೇಹವಿಲ್ಲ. ಪುತ್ರರಿಲ್ಲದವರು ಪುತ್ರರನ್ನೂ ವಿದ್ಯಾರ್ಥಿಯು ವಿದ್ಯೆಯನ್ನೂ ಪಡೆಯುವರು. ಇದನ್ನು ಕೇಳುವಾಗ ಯಾರು ಯಾವ ಇಷ್ಟಾರ್ಥಗಳನ್ನು ಆಶಿಸಿ ಸ್ಮರಿಸುವರೋ ಅವರು ಅವುಗಳನ್ನೆಲ್ಲವನ್ನೂ ಪಡೆಯುವರು. ॥೯೩-೯೪॥

ನವರಾತ್ರಿಯ ಸಮಯದಲ್ಲಿ ಇದನ್ನು ದೇವಿಯ ಎದುರಿಗೆ ಏಕಾಗ್ರಚಿತ್ತದಿಂದ ಪಾರಾಯಣಮಾಡಿದರೆ ಜಗದಂಬೆಯು ಸಂತೋಷ ಹೊಂದುವಳು. ॥೯೫॥

ಈ ನವಮಸ್ಕಂಧದಲ್ಲಿ ಪ್ರತಿದಿನವೂ ಒಂದೊಂದು ಅಧ್ಯಾಯದಂತೆ ಪಾರಾಯಣ ಮಾಡಿದರೆ ಅವನಿಗೆ ದೇವಿಯು ವಶಳಾಗುವಳು. ಏಕೆಂದರೆ ಅವನು ದೇವೀಗೆಸಂತೋಷವನ್ನುಂಟುಮಾಡಿದವನಾಗುವನು. ॥೯೬॥

**ಶಕುನಾಂಶ್ಚ ಪರೀಕ್ಷೇತ ನಿತ್ಯಮಸ್ಮಿನ್ಯಥಾವಿಧಿ ।**
**ಕುಮಾರೀದಿವ್ಯಹಸ್ತೇನ ಯದ್ವಾ ವಟುಕರಾಂಬುಜಾತ್ ॥೯೭॥**

**ಮನೋರಥಂ ತು ಸಂಕಲ್ಪ್ಯ ಪುಸ್ತಕಂ ಪೂಜಯೇತ್ತತಃ ।**
**ದೇವೀಂ ಚ ಜಗದೀಶಾನೀಂ ಪ್ರಣಮೇಚ್ಚ ಪುನಃ ಪುನಃ ॥೯೮॥**

**ಸುಸ್ನಾತಾಂ ಕನ್ಯಕಾಂ ತತ್ರಾಽಽನೀಯಾಭ್ಯರ್ಚ್ಯ ಯಥಾವಿಧಿ ।**
**ಶಲಾಕಾಂ ರೋಪಯೇನ್ಮಧ್ಯೇ ತಯಾ ಸ್ವರ್ಣೇನ ನಿರ್ಮಿತಾಂ ॥೯೯॥**

**ಶುಭಂ ವಾಪ್ಯಶುಭಂ ತತ್ರ ಯದಾ ಯಾತಿ ಚ ತದ್ಭವೇತ್ ।**
**ಉದಾಸೀನೇಽಪ್ಯುದಾಸೀನಂ ಕಾರ್ಯಂ ಭವತಿ ನಿಶ್ಚಿತಂ ॥೧೦೦॥**

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ನವಮಸ್ಕಂಧೇ**
**ಪಂಚಾಶತ್ತಮೋಽಧ್ಯಾಯಃ**

## ನವಮಸ್ಕಂಧಃ ಸಮಾಪ್ತಃ

---

ಈ ನವಮಸ್ಕಂಧದಲ್ಲಿ ಕನ್ಯೆಯರಿಂದಾಗಲಿ, ಬ್ರಹ್ಮಚಾರಿಗಳಿಂದಲಾಗಲಿ, ಶಕುನ ಪರೀಕ್ಷೆಯನ್ನು ಮಾಡಿಸಬಹುದು. ಅದರ ವಿಧಿಯೇನೆಂದರೆ --ತಮ್ಮ ಇಷ್ಟಾರ್ಥವನ್ನು ನೆನೆಸಿಕೊಂಡು ಪುಸ್ತಕವನ್ನು ಪೂಜಿಸಬೇಕು. ಬಳಿಕ ಜಗದಂಬೆಯಾದ ದೇವಿಗೆ ಅನೇಕ ನಮಸ್ಕಾರಗಳನ್ನು ಮಾಡಬೇಕು. ||೯೭-೯೮||

ಮಂಗಲಸ್ನಾನಮಾಡಿದ ಕನ್ಯೆಯನ್ನು ಕರೆದುಕೊಂಡು ಬಂದು ಆಕೆಯನ್ನು ಪೂಜಿಸಿ, ಅವಳ ಕೈಯಿಂದ ಚಿನ್ನದಿಂದ ಮಾಡಿದ (ಕಡ್ಡಿ) ಸಲಿಗೆಯನ್ನು ಪುಸ್ತಕದಲ್ಲಿ ಗುರುತುಮಾಡಿಸುವುದು. ಆ ಸ್ಥಳವನ್ನು ತೆಗೆದು ನೋಡಿದಲ್ಲಿ ಶುಭವೋ, ಅಶುಭವೋ, ಯಾವುದು ಬರುವುದೋ ಅದೇ ಆಗುವುದು. ಉದಾಸೀನವಾಗಿದ್ದರೆ ಕಾರ್ಯವು ಉದಾಸೀನವಾಗುವುದು. ಇದು ನಿಶ್ಚಿತವಾದುದು. ||೯೯-೧೦೦||

**ಮಹೀಶೂರಾಧಿಪ ಜಯಚಾಮರಾಜೇಂದ್ರಶಾಸನಾತ್ ।**
**ದೇವೀಭಾಗವತಸ್ಯಾನುವಾದಂ ಕನ್ನಡಭಾಷಯಾ ॥**
**ಸುಬ್ಬಮ್ಮಾಂಬಾದೇವಯಜ್ವ ತನಯಃ ಚಂದ್ರಶೇಖರಃ**
**ಜನಾನಾಮುಪಕಾರಾಯ ರಚಯಾಮಾಸ ಸಾದರಂ ॥**

ಈಶಸೇವಾಂ ದೇಶಸೇವಾಂ ಭಾಷಾಸೇವಾಂ ಮಯಾ ಕೃತಾಂ ।
ಸ್ವೀಕೃತ್ಯ ತುಷ್ಯತು ಗುರುಃ ದೇವೋ ರಾಜಾ ಚ ಭಾರತೀ ॥
ಸೇವಿತಾಽವತು ಸಾ ದೇವೀ ಸರ್ವಶಕ್ತಿಸ್ವರೂಪಿಣೀ ।
ಪ್ರಾಣಿಕರ್ಮವಶಾತ್ ಬ್ರಹ್ಮಣೀಚ್ಛಾಜ್ಞಾನಕ್ರಿಯಾಽತ್ಮಿಕಾ ॥

ಜಿತ್ವಾ ಕಾಮಾದಿಶತ್ರೂನ್ ಜಯತು ಜಯಲಸಚ್ಚಾಮರಾಜೇಂದ್ರದೇವಃ
ಸಿದ್ಧ್ಯಾ ಕಾರ್ಯಸ್ಯ ಕೀರ್ತ್ಯಾ ಸಮಧಿಕಗುಣವಾನ್ ಭಕ್ತಿಯೋಗಪ್ರವೀಣಃ ।
ಯಸ್ಸೋಮಂ ಜಾತಿಶೀತೇ ಯದುಕುಲತಿಲಕೋ ರಾಜಕೀಯೋ ಯಶಸ್ವೀ
ಐಶ್ವರ್ಯಾದಾರ್ಯಧೈರ್ಯೈರಧಿಗತಬಿರುದಂ ಭೂಷಯನ್ ಭಾತುನಿತ್ಯಂ ॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಒಂಬತ್ತನೆಯ ಸ್ಕಂಧದಲ್ಲಿ
ಐವತ್ತನೆಯ ಅಧ್ಯಾಯವು ಮುಗಿದುದು.

## ಒಂಬತ್ತನೆಯ ಸ್ಕಂಧವು ಮುಗಿದುದು.

॥ ಶ್ರೀರಸ್ತು ॥

